

ಹಾರ್ದಿಕ ಶುಭಾಶಯಗಳೊಂದಿಗೆ





# ಮಲಪ್ರಭಾ ಗ್ರಾಮೀಣ ಬ್ಯಾಂಕ

(ಸಂಪೂರ್ಣ ಸರಕಾರಿ ಸ್ವಾಮಿತ್ವದ ಶೆಡ್ಯೂಲ್ಡ ಬ್ಯಾಂಕ)

ಪ್ರವರ್ತಕರು : ಸಿಂಡಿಕೇಟ ಬ್ಯಾಂಕ

ಬ್ಯಾಂಕಿನ ಆಕರ್ಷಕ ಠೇವಣಿ ಯೋಜನೆಗಳು :

- ಉಳಿತಾಯ ಖಾತೆ
- ಮುದ್ದತಿ ಠೇವಣಿ
- ಸಂಚಿತ ಠೇವಣಿ
- ಪ್ರಭಾ ಕ್ಯಾಶ್ ಸರ್ಟಿಫಿಕೇಟ
- ಸಮೃದ್ಧಿ ಕ್ಯಾಶ್ ಸರ್ಟಿಫಿಕೇಟ
- ಕಲ್ಪತರು ಠೇವಣಿ

೩೬ ತಿಂಗಳವರೆಗಿನ ಎಲ್ಲ ಮುದ್ದತಿ ಠೇವುಗಳ ಮೇಲೆ ಪ್ರತಿಶತ ಅರ್ಧದಷ್ಟು ಬಡ್ಡಿಯನ್ನು ಇತರ ವಾಣಿಜ್ಯ ಬ್ಯಾಂಕುಗಳಿಗಿಂತಲೂ ಹೆಚ್ಚಿಗೆ ನೀಡುತ್ತೇವೆ. ವಿವರಗಳಿಗಾಗಿ ನಿಮ್ಮ ಹತ್ತಿರದ ಯಾವದೇ ಶಾಖೆಯನ್ನು ಸಂಪರ್ಕಿಸಿರಿ.

---

ಗ್ರಾಮೀಣ ಚಟುವಟಿಕೆಗಳ ಮೂಲಕ ಉತ್ಪಾದಕತೆಯ ಹೆಚ್ಚಳ

---

ಪ್ರಧಾನ ಕಚೇರಿ<br>ಧಾರವಾಡ

ಚೇರಮನ್<br>ಪಿ. ಬಿ. ಆರ್. ಹೆಗ್ಡೆ

# ಪರಿವಿಡಿ

## ವಿಶೇಷ ಲೇಖನಗಳು – ಸಂದರ್ಶನಗಳು



## ಕವಿತೆಗಳು



## ಕಥೆಗಳು



## ನಾಟಕ



## ವ್ಯಂಗ್ಯ ವಿನೋದ



## ಬಾಲ ವಿಹಾರ



## ಚಿತ್ರಪ್ರಪಂಚ



## ಛಾಯಾ ಚಿತ್ರಗಳು—ವ್ಯಂಗ್ಯಚಿತ್ರಗಳು

ಕೆ. ಆರ್. ಸ್ವಾಮಿ, ಪ್ರೇಮಕುಮಾರ, ನೀರ್ನಳ್ಳಿ ಗಣಪತಿ, ವ್ಹಿ. ಜಿ. ನರೇಂದ್ರ, ಅನಿಲ ಬೆಟಗೇರಿ, ಶ್ರೀಧರ, ಎಚ್.ಬಿ. ಮಂಜುನಾಥ, ಸುಶೀಲ ಕೆ. ಅಂಬೇಕರ, ವಿ.ಆರ್.ಸಿ. ಶೇಖರ, ವಿ. ಗೋಪಾಲ, ಸತೀಶ ಯಲ್ಲಾಪುರ

**ಚುಟುಕುಗಳು :** ಶ್ಯಾಮ ಹುದ್ದಾರ, ಪ್ರಾ। ದೊಡ್ಡರಂಗೇಗೌಡ,

**ಕಲಾವಿದರು :** ಕೆ.ಬಿ. ಕುಲಕರ್ಣಿ ಪಿ.ಆರ್. ಪಾಟೀಲ ವ್ಹಿ.ಜಿ. ನರೇಂದ್ರ ಶಶಿಧರ, ಹೇಮಾ ಕಣಗಿನಹಾಳ





# ಕರ್ಮವೀರ

**ದೀಪಾವಳಿ ವಿಶೇಷಾಂಕ**

**೧೯೮೬**

**ಲೋಕ ಶಿಕ್ಷಣ ಟ್ರಸ್ಟಿನ ಪ್ರಕಟನೆ**

ವ್ಯವಸ್ಥಾಪಕ ಸಂಪಾದಕರು
**ಕೆ. ಶಾಮರಾವ್**

ಸಂಪಾದಕ
**ಆರ್. ಎ. ಉಪಾಧ್ಯ**

ಜಾಹೀರಾತು
**ಎಸ್. ಜಿ. ಕಾಶೀಕರ**
**ಎಸ್. ಆರ್ ಗುರುರಾಜರಾವ್**

ಪ್ರಸಾರಾಂಗ
**ಎಸ್. ಕೆ. ಕಾಟೋಟಿ**

ಮುದ್ರಕ ಹಾಗೂ ಪ್ರಕಾಶಕ
**ವ್ಹಿ. ಜಿ. ವೈದ್ಯ**
**ಸಂಯುಕ್ತ ಕರ್ನಾಟಕ**
**ಹುಬ್ಬಳ್ಳಿ – ಬೆಂಗಳೂರು**




ಮುಖಚಿತ್ರ
**"ಸ್ವರ್ಣಾಲಂಕೃತೆ"–ಪ್ರತಿಮಾ ಆಚಾರ್ಯ**
**ಫೋಟೋ : ಶಶಿ ಸಾಲಿ**

# ನಿವೇದನೆ

ಬದುಕಿಗೆ ಎರಡು ದೃಷ್ಟಿ. "ಪರಮಾತ್ಮನ ಈ ಸೃಷ್ಟಿ ಬಲುಸುಂದರ. ಅತ್ಯಂತ ರಮಣೀಯ. ಜೀವನದುದ್ದಕ್ಕೂ ನೋಡಿ ಅಚ್ಚರಿಪಡಬೇಕಾದ, ಅನುಭವಿಸಿ ಆನಂದಪಡಬೇಕಾದ ಸಂಗತಿಗಳು ಎಷ್ಟೋ ಇವೆ. ಅನ್ಯಾಯ, ಹಿಂಸೆ ನಡೆಯುತ್ತಿದ್ದರೂ ಕೊನೆಗೆ ಸತ್ಯಕ್ಕೇ ಜಯ ಖಂಡಿತ" ಎಂಬ ಆಶಾವಾದ ಒಂದು ದೃಷ್ಟಿ. "ಜೀವನ ನಿಸ್ಸಾರವಾದುದು. ಸಂಸಾರವೆಂದರೆ ಮಹಾಕೂಪ. ಮೂಳೆ-ಮಾಂಸಗಳ ಈ ದೇಹ ಅಸ್ಥಿರ. ಜೀವನದಲ್ಲಿ, ಒಳಿತು ಎಂಬುದೇ ಇಲ್ಲ" ಎಂಬ ನಿರಾಶಾವಾದ ಇನ್ನೊಂದು ದೃಷ್ಟಿ. ಈ ಎರಡನೇ ದೃಷ್ಟಿಯಿಂದ ಬದುಕನ್ನು ನೋಡುವವರೇ ಹೆಚ್ಚಾಗುತ್ತಿದ್ದಾರೆ. "ಕಾಲಕೆಟ್ಟುಹೋಯಿತು" ಎಂಬ ಮಾತನ್ನು ೫೦ ವರ್ಷ ಹಿಂದೆ ಕೇಳಿದ್ದೆವು. ೨೫ ವರ್ಷಗಳ ಹಿಂದೆಯೂ ಕೇಳುತ್ತಿದ್ದೆವು. ಈಗಂತೂ ಬಹುಜನರ ಬಾಯಿಯಲ್ಲಿ ಅದೇ ಮಾತು. ಪರಮಾಣು ಬಾಂಬುಗಳಿಂದ ಅಗ್ನಿಪ್ರಳಯ ಸನ್ನಿಹಿತವಾಗಿದೆ; ಮಾನವಕುಲ ವಿನಾಶದ ಅಂಚಿನಲ್ಲಿದೆ ಎಂಬುದು ಎಲ್ಲೆಡೆ ಕೇಳಿಬರುವ ಉದ್ಗಾರ. ನಿಜವೇ? ಹಿಂಸೆ, ಪೀಡನೆ, ಅನ್ಯಾಯ, ವಂಚನೆ ಹಿಂದಿನ ಕಾಲದಲ್ಲಿ ಇದ್ದಿಲ್ಲವೇ? ಖಂಡಿತವಾಗಿಯೂ ಇದ್ದವು. ಮಧು–ಕೈಟಭ, ಹಿರಣ್ಯಾಕ್ಷರಿಂದ ಪಂಜಾಬದ ಭಯೋತ್ಪಾದಕರವರೆಗೆ ಜನ ಪೀಡಕರು ಎಲ್ಲ ಕಾಲದಲ್ಲಿಯೂ ಎಲ್ಲ ಲೋಕಗಳಲ್ಲಿಯೂ ಇದ್ದರು. ದೇವತೆ-ದಸ್ಯುಗಳ ಯುದ್ಧಕ್ಕೆ ಕೊನೆಯೇ ಇರಲಿಲ್ಲ. ಪರಶುರಾಮ ಕ್ಷತ್ರಿಯ ಕುಲಸಂಹಾರಕನೆನಿಸಿದ. ಋಷಿಮುನಿಗಳನ್ನು ಪೀಡಿಸುತ್ತಿದ್ದ ರಾಕ್ಷಸರ ವಧೆಗಾಗಿಯೇ ರಾಮನ ಅವತಾರ ಆಯಿತು. ರಾಮ-ರಾವಣರ ಯುದ್ಧದಲ್ಲಿ ಹರಿದ ರಕ್ತ ಅನೇಕ ಕೊಳಗಳನ್ನು ತುಂಬಿತ್ತಂತೆ. ಮಹಾಭಾರತ ದುಷ್ಟಸಂಹಾರದ ಗಾಥೆ. ಇಂದು ಕಾಣುವ, ಕೇಳುವ ಮೋಸ, ವಂಚನೆ, ವಧೆಗಳ ವರ್ಣನೆಗಳಿಂದಲೇ ಅದು ತುಂಬಿ ಹೋಗಿದೆ. ಅಷ್ಟೊಂದು ದುಷ್ಟರು ಆ ಕಾಲದಲ್ಲಿದ್ದರು. ಚಕ್ರವರ್ತಿ ಅಶೋಕನಿಂದ ಫೀಲ್ಡ್ ಮಾರ್ಶಲ್ ಮಾಣಿಕ್‌ಶಾರ ಕಾಲದವರೆಗೆ ನಡೆದ ಯುದ್ಧಗಳ ಲೆಕ್ಕವಿಡಲು ಸಾಧ್ಯವಿಲ್ಲ. ವೀರಸ್ವರ್ಗ ಸೇರಿದವರನ್ನು ಕೋಟಿ ಸಂಖ್ಯೆಯಲ್ಲಿ ಎಣಿಸಬೇಕು. ಭಾರತದ ಇತಿಹಾಸವೆಂದರೆ ಅರಸರ ದಂಡಯಾತ್ರೆಯ, ರಾಜ್ಯವಿಸ್ತಾರದ ಇತಿಹಾಸವೆಂದೇ ಭಾವಿಸಲಾಗಿತ್ತು. ಆದರೆ ಕಳೆದ ಆ ಯುಗಗಳಲ್ಲಿ, ಆ ಕಾಲದಲ್ಲಿ ಶಾಂತಿ ಸುಭಿಕ್ಷೆ ಇದ್ದಿಲ್ಲವೆಂದು ನಾವು ಭಾವಿಸುವದಿಲ್ಲ. "ಸ್ವರ್ಗ ಸುಖ" ಎನ್ನುತ್ತೇವೆ. ರಾಮರಾಜ್ಯವನ್ನು ನೆನಪಿಸುತ್ತೇವೆ. ಕೃಷ್ಣನ ಲೀಲೆಯನ್ನು ಕೊಂಡಾಡುತ್ತೇವೆ. ಕೆಟ್ಟದ್ದನ್ನು ಕಡೆಗಣಿಸಿ ಒಳ್ಳೆಯದನ್ನೇ ನೆನೆಯುವ ಪ್ರವೃತ್ತಿ ನಮ್ಮಲ್ಲಿದೆ ಎಂದಾಯಿತು. ಸಿದ್ಧಾರ್ಥ ಒಂದು ಹೆಣವನ್ನು, ಒಬ್ಬ ಮುದುಕನನ್ನು, ಒಬ್ಬ ರೋಗಿಯನ್ನು ನೋಡಿ ವೈರಾಗ್ಯ ತಾಳಿದನಂತೆ. ರಾಹುಲನ ಮುದ್ದು ಮುಖ, ಯಶೋಧರೆಯ ಪ್ರೇಮ ಅವನಲ್ಲಿ ಬದುಕು ಸಾರ್ಥಕವೆಂಬ ದೃಷ್ಟಿಯನ್ನು ಹುಟ್ಟಿಸಬಹುದಾಗಿತ್ತು. ಮಾಲಿನ್ಯ ನಾಶವಾಗುವದು ನಿಸರ್ಗ ನಿಯಮ. ಹಣ್ಣೆಲೆ ಉದುರುತ್ತದೆ; ಒಣಗಿದ ಕೊಂಬೆ ಮುರಿದು ಬೀಳುತ್ತದೆ. ಅದನ್ನು ನೆನೆಸಿ ಯಾರೂ ದುಃಖಿಸುವದಿಲ್ಲ. ಹೊಸ ಸೃಷ್ಟಿ ಅವ್ಯಾಹತವಾಗಿ ನಡೆದಿರುವಾಗ, ಹೊಸ ಚೆಲುವು ಮೂಡುತ್ತಿರುವಾಗ, ನಿರಾಶೆ ಹತಾಶೆಗಳಿಗೆ ನೀರೆರೆಯುವದು ಬೇಡ. ಎಡಬಲಗಳಲ್ಲಿ, ಸಾಗುತ್ತಿರುವ ಒಳಿತು ಕೆಡಕುಗಳಲ್ಲಿ, ಬದುಕನ್ನು ಅರ್ಥಪೂರ್ಣವಾಗಿಸುವ ಒಳಿತನ್ನಷ್ಟೇ ಆಯ್ದುಕೊಳ್ಳೋಣ. ಸ್ವರ್ಣಯುಗ ಮುಂದೆ ಇದೆ ಎಂಬ ಭರವಸೆಯಿಂದ ಬಾಳೋಣ.

ಈ ಪತ್ರಿಕೆಯನ್ನು ನಿಮ್ಮ ಮಡಿಲಿಗೆ ಹಾಕುತ್ತಿರುವ ಲೋಕ ಶಿಕ್ಷಣ ಟ್ರಸ್ಟ್ ಸುಮಾರು ಆರು ದಶಕಗಳ ತನ್ನ ಅಸ್ತಿತ್ವದಲ್ಲಿ ಒಳಿತು–ಕೆಡಕುಗಳೆರಡನ್ನೂ ಕಂಡಿದೆ. ವ್ಯಕ್ತಿ ಜೀವನದಲ್ಲಿ ಎದುರಾಗುವ ಕಷ್ಟ ಕಾರ್ಪಣ್ಯಗಳನ್ನೆಲ್ಲ ಅನುಭವಿಸಿದೆ. ಆದರೆ ಸತ್ಯಕ್ಕೆ ಜಯ ಎಂಬ ಆಶಾವಾದದ ಫಲವಾಗಿ ಅದಕ್ಕೆ ಬಡಿದಿದ್ದ ಗ್ರಹಬಾಧೆ ನಿವಾರಣೆಯಾಯಿತು. ತಲೆಯ ಮೇಲಿದ್ದ ಕಾರ್ಮೋಡ ಚದುರಿತು. ಹೊಸರೂಪ ತಳೆದು, ಜ್ಞಾನವೃದ್ಧರಾದ ಐವರು ಮಹನೀಯರ ಕರ್ಣಧಾರತ್ವದಲ್ಲಿ "ಸತ್ಯಕ್ಕೆ ಜಯ" ಎಂಬ ಸಿದ್ಧಾಂತವನ್ನು ಸದಾ ಎತ್ತಿ ಹಿಡಿಯುವ ಸಂಕಲ್ಪದಿಂದ ಈಗ ಮುಂದಡಿ ಇಡುತ್ತಿದೆ. ಕನ್ನಡ ಕುಲಜಾತರ ಹೃತ್ಪೂರ್ವಕ ಆಶೀರ್ವಾದದಿಂದ ಈ ಧ್ಯೇಯ ಸಾಧಿಸಲ್ಪಡಲಿ, ಸಂಕಲ್ಪ ಈಡೇರಲಿ ಎಂದು ಅದರ ಆಶಯ.

ಈ ಸಂಚಿಕೆಗೆ ಲೇಖನಗಳನ್ನು ಬರೆದುಕೊಟ್ಟ ಮಹನೀಯರಿಗೆ, ಜಾಹೀರಾತು ನೀಡಿ ಸಹಕರಿಸಿದ ಬಾಂಧವರಿಗೆ ಹಾಗೂ ಸಹೃದಯಿ ಓದುಗರಿಗೆ ಅನಂತ ವಂದನೆಗಳು.

**— ಸಂಪಾದಕ**

# ಮುಪ್ಪಿನ ಮಿತಾಕ್ಷರಿಯ ವಚನಗಳು



ಸಾಕೆಂದೆ ಹಗಲಿರುಳಿನ ಈ ಹಗರಣ !
ಮೂರ್ಮಲೆತ, ಇರಿತ, ತಿವಿತ:
ಬದುಕುತಿಹೆ ಕಾಳಗದಿ ಸೈನಿಕ ಬದುಕುವಂತೆ
ಆದರೆ,
ಅಪಾರ ಸೌಂದರ್ಯವಿದು, ಮಹಾದ್ಭುತವು ಸೃಷ್ಟಿ
ಯಸ್ಮಿನ್ ದೃಷ್ಟೇ ಪರಾವರೇ !
ಗೂಡಿಗೈದುವ ಹಕ್ಕಿಗಳ ತೋರಣ ಸಾಲು,
ಒರಗಿದ ಸನಾತನ ಶಿಲಾಪಿಂಡವ ಹೊತ್ತು
ಯುಗಗಳನೆಣಿಸಿ ನಿಂತಿರುವ ನೀಳ ಗೊಮ್ಮಟಗಲ್ಲು,
ಪಾತಾಳಕಿಕ್ಕಿದರು ಮುಗಿಲ ಮುದ್ದಿಸುವಂತೆ
ಬೆಳೆದು ಬೆಳೆದೇ ಬೆಳೆವ ರೆಡ್‌ವುಡ್ ಮಹಾವೃಕ್ಷ,
ಚವಂಗವಾಡುವ ಮಗುಗಳತಿ ಮಧುರ ಮೇಳದನಿ,
ಕಾದಲರ ನಲ್ನುಡಿ, ಕಲಿಯ ರಣಗರ್ಜನೆ,
ಚಂದ್ರನೌಕೆಯು ಗಗನಗಾಮಿ ತಂದಿಹ ಶಿಲೆ,
ತಪಸಿಯೊರೆದೋಂಕಾರ,
ಸೊಂಡೆಯನೆತ್ತಿ ಸುವ್ವಿಗೆಯ್ಯುವ ಸಲಗ :
ಇವನು ತೊರೆಯುವದೆಂತು ?
ತೊರೆದು ಬೆಳಕಿಗೆ ಬೆಳಕು, ಕತ್ತಲೆಗೆ ಕತ್ತಲು,
ಮಣ್ಣಿಗೆ ಮಣ್ಣಾಗಿ ಬೆರೆವುದೆಂತು ?
ಓ ಸೃಷ್ಟಿಯ ಒಗಟು ತಂದೊಡ್ಡಿದವನೆ !
ಅನಾಯಾಸ ನಮ್ಮೆದುರು ಬಿಡಿಸಿ ಕುಣಿದಾಡುತಿಹ
ಓ ದಯಾಘನನೇ !
ಆಲಿಸೀ ಮೊರೆಯ;
ಇಳೆ-ಮುಗಿಲುಗಳನು ಇರುಳೊಳು ಸಂಧ್ಯೆ ತೊರೆವಂತೆ
ನನ್ನ ಪಂಚೇಂದ್ರಿಯವ
ಆನಂದ ತೊರೆಯದಿರಲಿ :
ನನ್ನ ಮನ-ಬುದ್ಧಿಯನು
ಆನಂದ ಮರೆಯದಿರಲಿ !
ಸಗುಣದ ಸಂಪದವು ನಿರ್ಗುಣದ ನಿರ್ವಯಲಲ್ಲಿ
ಅಂದಗೆಡದಿರಲಿ !

ಚರಾಚರವು ಪರಾತ್ಪರಕೆ
ದರ್ಪಣವ ಹಿಡಿವಂತೆ
ಆತ್ಮನ ಕಿಂಡಿ ತೆರೆದಿರಲಿ !
ಚೆಲುವು ದೃಶ್ಯಗಳೆಲ್ಲ ಮಾಸದಲೆ ಮಡಗದಲೆ
ನಿರ್ಗುಣದಲೂನು ಸಗುಣದ ಸವಿಯು ಸುರಿವಂತೆ
ಕರುಣಿಸೈ ಓ ತಂದೆ !
ವರವಿದನು ಕರುಣಿಸು,
ಚಿತ್ತವನ್ನು ರಮಣಿಸು,
ಅಮೃತಗಳನುಣಿಸು !

# ಕರ್ನಾಟಕದ ಗಂಗೆ ಕೃಷ್ಣಾನದಿ

ಕೃಷ್ಣಾ ಕೊಲ್ಹಾರ ಕುಲಕರ್ಣಿ

ಶ್ರಾವಣದ ದಿನಗಳು. ಮುಗಿಲು ತುಂಬ ಮೋಡಗಳು, ದಿನವಿಡೀ ಸೂರ್ಯನ ದರುಶನವಿಲ್ಲ. ಒಂದು ಹನಿ ಮಳೆಯೂ ಇಲ್ಲ. ಆದರೆ ಊರ ಮುಂದೆ ಹರಿಯುವ ಕೃಷ್ಣೆ ಮಾತ್ರ ಕ್ಷಣ-ಕ್ಷಣಕ್ಕೂ ತುಂಬುತ್ತ-ಭೋರ್ಗರೆಯುತ್ತ ಹರಿಯುತ್ತಿದ್ದಾಳೆ. ಕಡುಗೆಂಪು ಬಣ್ಣದ ನೀರಿನ ಕೃಷ್ಣೆ ತನ್ನ ಎರಡೂ ಬದಿಗೂ ಮುಳ್ಳು–ಕಂಟಿ, ಗಿಡ–ಮರಗಳನ್ನು ಹೊತ್ತು ಬಂದೇ ಬರುತ್ತಿದ್ದಾಳೆ. ಅಂತೆಯೇ ಕೈಲಾಸದಲ್ಲಿ ಕುಳಿತಿದ್ದ ಶಿವ ಆಶ್ಚರ್ಯ ಚಕಿತನಾಗಿ ಕೆಳಗೆ ಇಳಿದು ಬಂದು ಕೇಳಿದ,

ಕಬ್ಬಲಗಿತ್ತಿ ನಿನ್ನ ಅಬ್ಬರೇನ ಹೇಳಲೆ ?
ಹೆಬ್ಬ್ಯಾಗ ಹಾವ ಬರತಾಳ–ಹಿರಿಹೊಳಿ
ಅಬ್ಬರ ನೋಡಿ ಶಿವ ಇಳಿದ ಕೇಳ್ಯಾನ ॥

ಹೆಂಗಸ ನಿನಗ್ಯಾಕ ಗರವೀಕಿ ?
ಹೆಂಗಸ ಎಂದು ಹಂಗಿಸಬ್ಯಾಡ
ನಾಲಕು ರಾಜ್ಯವ ಸಲಹೀನ್ಯ ॥

ವಿಜಾಪುರ ಜಿಲ್ಲೆಯ ಜಾನಪದ ಸಾಹಿತ್ಯದ ಈ ತುಣುಕುಗಳು ಕೃಷ್ಣೆಯ ಚಿತ್ರವನ್ನು ಕೊಡುವಲ್ಲಿ ಸಾರ್ಥಕವಾಗಿವೆ. ನಾಲ್ಕು ರಾಜ್ಯಗಳನ್ನು (ಮಹಾರಾಷ್ಟ್ರ-ಕರ್ನಾಟಕ-ಆಂಧ್ರ ಹಾಗು ತಮಿಳುನಾಡು) ಸಲಹುವ ದಕ್ಷಿಣ ಭಾರತದ ಅತಿದೊಡ್ಡ ನದಿಗಳಲ್ಲಿ ಒಂದಾದ ಈ ನಮ್ಮ ಕೃಷ್ಣೆ ಕರ್ನಾಟಕಕ್ಕಂತೂ ಗಂಗೆಯೇ ಸರಿ ! ಅಂತೆಯೇ ಅವಳು ನಮ್ಮವರಿಗೆ, ಹಿರಿಹೊಳಿ, ಗಂಗವ್ವ, ಗಂಗಾಮಾಯಿ, ಶಿರಿಗೌರಿ, ಗರತಿ ಎಂದು ಮಣ್ಣಿನ ಮಕ್ಕಳಿಂದ ಕರೆಯಿಸಿಕೊಳ್ಳುತ್ತಾಳೆ.

ಅರಬ್ಬೀ ಸಮುದ್ರದಿಂದ ಕೇವಲ ೬೪ ಕಿಲೋಮೀಟರು ಅಂತರಗಳ ಮೇಲೆ ಪಶ್ಚಿಮದ ಘಟ್ಟಗಳೆಂದು ಹೆಸರುವಾಸಿಯಾದ ಸಹ್ಯಾದ್ರಿ ಗಿರಿಧಾಮಗಳಲ್ಲಿ ಮಹಾಬಳೇಶ್ವರ ಎಲ್ಲರೂ ಕೇಳಿ–ಬಲ್ಲ ಊರು. ಅಲ್ಲಿ ಸುಮಾರು ೧೩೩೮ ಮೀಟರ್ರು ಎತ್ತರದಲ್ಲಿ ಕೃಷ್ಣೆ ಹುಟ್ಟುತ್ತಾಳೆ. ಪ್ರಾರಂಭದಲ್ಲಿ ದಕ್ಷಿಣಾಭಿಮುಖವಾಗಿ ಹರಿದು ನದಿ ಬೆಟ್ಟಗಳ ಎಡೆಯಲ್ಲಿ ವಂಕಿಯಂತೆ ವೇಗವಾಗಿ ನುಸುಳುತ್ತಾಳೆ. ಸಾತಾರ ಜಿಲ್ಲೆಯ ಕರ್ಹಾಡಕ್ಕೆ ಬರುವಷ್ಟರಲ್ಲಿ ಬಲಬದಿಯಲ್ಲಿ 'ಕೊಯ್ನಾ' ನದಿಯನ್ನು ಸೇರಿಸಿಕೊಳ್ಳುತ್ತಾಳೆ. ಮತ್ತೆ ತುಸುವೆ ಅಂತರದಲ್ಲಿ ಸಾಂಗಲಿಯ ಹತ್ತಿರ 'ವರ್ಣಾ' ಹಾಗೂ ಕುರುಂದವಾಡ ಹತ್ತಿರ 'ಪಂಚ ಗಂಗಾ' ಹೀಗೆ ಕರ್ನಾಟಕದಲ್ಲಿ ಪಾದಾರ್ಪಣ ಮಾಡುವಾಗಲೇ ಮೂರು ನದಿಗಳನ್ನು ಕೂಡಿಕೊಂಡು ದಿಕ್ಕನ್ನು ಬದಲಿಸಿಕೊಳ್ಳುತ್ತಾಳೆ. ಬೆಳಗಾವಿ ಜಿಲ್ಲೆಯ ಕುಡಚಿಯ ಹತ್ತಿರ ಪೂರ್ವಾಭಿಮುಖಿವಾಗಿ ಕರ್ನಾಟಕದಲ್ಲಿ ಕಾಲಿಡುತ್ತಾಳೆ. ತುಸು ದೂರ ಕರ್ನಾಟಕದ ಗಡಿಗುಂಟ ಹರಿದು ಆಮೇಲೆ ಕರ್ನಾಟಕದಲ್ಲಿ ಪ್ರವೇಶಿಸಿ ಬೆಳಗಾವಿ, ವಿಜಾಪುರ ಹಾಗೂ ರಾಯಚೂರು ಜಿಲ್ಲೆಗಳಲ್ಲಿ ಹರಿಯುತ್ತಾಳೆ. ಇಲ್ಲಿ ಮತ್ತೆ ಎರಡು ನದಿಗಳು ಘಟಪ್ರಭಾ ಹಾಗೂ ಮಲಪ್ರಭಾ ನದಿಗಳು ಕೃಷ್ಣೆಯನ್ನು ಕೂಡಿಕೊಳ್ಳುತ್ತವೆ. ಕರ್ನಾಟಕವನ್ನು ಬಿಡುವ ಮೊದಲು ರಾಯಚೂರು ಹತ್ತಿರ 'ಡೋಣಿ' ಎಂಬ ಉಪನದಿಯೂ ಕೃಷ್ಣೆಯನ್ನು ಕೂಡುತ್ತದೆ.

ಕರ್ನಾಟಕದ ಸೀಮೋಲ್ಲಂಘನ ಮಾಡಿ ಆಂಧ್ರವನ್ನು ಪ್ರವೇಶಿಸಿ ತುಸು ಅಂತರದ ನಂತರ ಈಶಾನ್ಯಾಭಿಮುಖವಾಗಿ ಹರಿದು ಪೂರ್ವಘಟ್ಟಗಳ ಪ್ರದೇಶಗಳಲ್ಲಿ ಆಗ್ನೇಯಕ್ಕೆ ತಿರುಗಿ ಮಛಲಿಪಟ್ಟಣದ ಹತ್ತಿರ ಬಂಗಾಲ ಉಪಸಾಗರವನ್ನು ಕೂಡುತ್ತಾಳೆ. ಈ ಮಧ್ಯ ಆಂಧ್ರದಲ್ಲಿ ಹರಿಯುವಾಗ ಕೃಷ್ಣೆಯನ್ನು ಸೇರುವ ಉಪನದಿಗಳು ಹಲವಾರು ಭೀಮಾ, ತುಂಗಭದ್ರಾ. ಹಾಗೂ ಮೂಸಿ ನದಿಗಳು ದೊಡ್ಡವು. ಹೀಗೆ ಮಹಾರಾಷ್ಟ್ರದ ಮಹಾಬಳೇಶ್ವರದಿಂದ ಆಂಧ್ರದ ಮಛಲಿಪಟ್ಟಣದ ವರೆಗೆ ಸುಮಾರು ೧೪೦೦ ಕಿಲೋಮೀಟರುಗಳಷ್ಟು ಉದ್ದವಾಗಿ ಕೃಷ್ಣೆ ಹರಿದಿದ್ದಾಳೆ. ಗೋದಾವರಿಗಿಂತ ತುಸು ಕಡಿಮೆ ಕಾವೇರಿಗಿಂತ ಅಧಿಕ.

ಪಶ್ಚಿಮ ಘಟ್ಟಗಳ ಸೋಪಾನವನ್ನು ಇಳಿಯುವಾಗ ವೇಗವಾಗಿ ಹರಿದು ಕರ್ನಾಟಕದಲ್ಲಿ ಸರಾಗವಾಗಿ ಹರಿಯುತ್ತಾಳೆ. ಅಂತೆಯೇ ಇಲ್ಲಿಯ ನದಿಯ ದಂಡೆಗಳು ಎತ್ತರ ಹಾಗು ಅಲ್ಲಲ್ಲಿ ನಡುಗಡ್ಡೆಗಳೂ ಕಾಣಸಿಕ್ಕಾವು. ವಿಜಾಪುರ ಜಿಲ್ಲೆಯನ್ನು ದಾಟಿ. ರಾಯಚೂರು ಜಿಲ್ಲೆಯ ಉತ್ತರದ ಸೆರಗಿನಲ್ಲಿ ಜಾರುವಾಗ ನದಿಯ ಔನ್ನತ್ಯ ಇನ್ನಷ್ಟು ನಷ್ಟವಾಗಿ ಐದು ಕಿಲೋಮೀಟ

**ಮಹಾರಾಷ್ಟ್ರದ ಮಹಾಬಳೇಶ್ವರದಲ್ಲಿ ಹುಟ್ಟಿ ಆಂಧ್ರದ ಮಛಲಿಪಟ್ಟಣದ ಬಳಿ ಸಮುದ್ರ ಸೇರುವ ದಕ್ಷಿಣದ ದೊಡ್ಡ ನದಿ ಕೃಷ್ಣೆ. ಮಹಾರಾಷ್ಟ್ರ, ಕರ್ನಾಟಕ, ಆಂಧ್ರ ರಾಜ್ಯವನ್ನು ಸಲಹುವ ಈ ಕೃಷ್ಣೆ, ಉತ್ತರ ಕರ್ನಾಟಕದ ಜನಮನದಲ್ಲಿ ಶಾಶ್ವತವಾಗಿ ನಿಂತಿದ್ದಾಳೆ. ಕೃಷ್ಣಾ ನದಿತೀರವು ಐತಿಹಾಸಿಕ ಘಟನೆಗಳಿಗೆ, ಪವಿತ್ರ ಕ್ಷೇತ್ರಗಳಿಗೆ ಪ್ರಸಿದ್ಧಿ ಪಡೆದಿದೆ.**



ಕೃಷ್ಣೆಯ ಉಗಮಸ್ಥಾನ ಮಹಾಬಳೇಶ್ವರ ಸರೋವರ. ಛಾಯಾ ಚಿತ್ರ: ಎಸ್. ಎಸ್. ಪಾಟೀಲ

ರುಗಳ ಅಂತರದಲ್ಲಿ ೧೨೨ ಮೀಟರುಗಳಷ್ಟು ಕೆಳಗೆ ಇಳಿಯುವ ನದಿಯ ವೇಗ ಇನ್ನಷ್ಟು ಅಧಿಕವಾಗುತ್ತದೆ. ಬಂಡೆಗಳ ಮೇಲೆ ಜಿಗಿದು ಹರಿಯುವ ನದಿಯ ಅಬ್ಬರ ವಿಪರೀತವಾಗಿ ಅದು ತುಂತುರಿನ ರಾಶಿಯನ್ನು ಸಿಂಪಡಿಸುತ್ತ ಸಾಗುತ್ತದೆ. ಆಂಧ್ರದಲ್ಲಿ ಅದರ ಪಾತ್ರ ಬಲು ಆಳ, ಬಲು ಕಡಿದು. ನಲ್ಲಮಲೆ ಬೆಟ್ಟಗಳ ನಡುವೆ ಜಿಗಿದು ವಜೀರಾಬಾದದ ಹತ್ತಿರ ಹಾಯ್ದು ಪೂರ್ವಘಟ್ಟಗಳ ಬಳಿ ಅದರ ಗತಿ ಬಲುಮಂದ, ಆ ಹೊತ್ತಿಗೆ ಅದು ತನ್ನ ಪ್ರವಾಹದೊಂದಿಗೆ ಹೊತ್ತು ತರುವ ಮಣ್ಣು ಅಗಾಧವಾಗಿದೆ. ಒಂದು ಅಂದಾಜಿನಂತೆ ಪ್ರವಾಹ ಕಾಲದಲ್ಲಿ ದಿನ ಒಂದಕ್ಕೆ ಸುಮಾರು ಏಳೂವರೆ ಚದುರ ಕಿಲೊ ಮೀಟರ ಸ್ಥಳದಲ್ಲಿ ೩೦ ಸೆಂಟೀಮೀಟರ ದಪ್ಪ ಆಗುವಷ್ಟು ಮಣ್ಣನ್ನು ತಂದು ಗುಡ್ಡೆ ಹಾಕುತ್ತದೆ.

ಮಹಾಬಳೇಶ್ವರದ ಹತ್ತಿರ ಹುಟ್ಟಿ 'ಹಾಯು' [illegible] ಕೃಷ್ಣೆ [illegible]

## ದೇವವಾಣಿಯಲ್ಲಿ 'ಕೃಷ್ಣೆ'

ಸ್ಕಂದ, ಪದ್ಮ ಹಾಗು ಬ್ರಹ್ಮ ಪುರಾಣಗಳಲ್ಲಿ ಕೃಷ್ಣೆಯ ಮಹಾತ್ಮೆ ಬಂದಿದೆಯಷ್ಟೆ. ಅದಲ್ಲದೆ ಭಾರತೀಯರ ಮಹಾಕಾವ್ಯ ಮಹಾಭಾರತದಲ್ಲೂ ಎರಡು ಕಡೆಗೆ ಕೃಷ್ಣೆಯ ಉಲ್ಲೇಖವಿದೆ. ಸಭಾ ಪರ್ವದ ೯ನೆಯ ಅಧ್ಯಾಯದಲ್ಲಿ

'ಗೋದಾವರೀ ಕೃಷ್ಣವೇಣಾ ಕಾವೇರೀಚ ಸರಿದ್ವರಾ ।  
ಕಿಂ ಪುನಾ ಚ ವಿಶಾಲ್ಯಾಚ ತಥಾ ವೈತರಣೀ ನದೀ ॥

ಅಲ್ಲದೆ ಭೀಷ್ಮ ಪರ್ವದ ೯ನೆಯ ಅಧ್ಯಾಯದಲ್ಲಿ

ನದೀಂ ನೇತ್ರವತೀಂ ಚೈವ ಕೃಷ್ಣವೇಣಾಂ ಚ ನಿಮ್ನಗಾಂ ।  
ಇರಾವತೀಂ ವಿತಸ್ತಾಂ ಚ ಪಯೋಷ್ಣೀಂ ದೇವಿಕಾಮಪಿ ॥

ಎಂದು ಉಲ್ಲೇಖಗೊಂಡಿದೆ.

ವಿವಾಹಕಾಲದ ಮಂಗಲಾಷ್ಟಕದಲ್ಲಿ ಬರುವ ಕೃಷ್ಣೆಯ ಉಲ್ಲೇಖವನ್ನು ಎಲ್ಲರೂ ಬಲ್ಲರು.

ಗಂಗಾ ಸಿಂಧು ಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ  
ಕೃಷ್ಣಾ ಭೀಮರಥೀ ಚ ಫಲ್ಗು ಸರಯೂಃ ಶ್ರೀ ಗಂಡಕೀ ಗೋಮತೀ ॥  
ಕಾವೇರೀಕಪಿಲಾ ಪ್ರಯಾಗವಿನತಾ ನೇತ್ರಾವತೀತ್ಯಾದಯೋ ।  
ನದ್ಯಃ ಶ್ರೀಹರಿಪಾದ ಪಂಕಜಭವಾಃ ಕುರ್ವಂತು ವೋ ಮಂಗಲಂ ॥



**ಸಂಗಮನಾಥನ ದೇವಾಲಯ** — ಬಂದನಂತೆಯೆ ಭಕ್ತವರ ಬಸವಣ್ಣ ಸಂಗಮಕ್ಷೇತ್ರಕೆ ನಯನಗಳು ಕಳವೇರಿ ದಳವೇರಿದನು ದರ್ಶನಮಾತ್ರಕೆ ॥

—ಡಿ. ಎಸ್. ಕರ್ಕಿ

ರೂಪದಲ್ಲಿ ಅಜಗಜಾಂತರದ ವ್ಯತ್ಯಾಸ. ಅಲ್ಲಿ ಅವಳ ವಿರಾಟ್ ದರ್ಶನ. ಇಲ್ಲಿಯ ಅವಳ ಹರಹು, ವೇಣ್ಣಾ, ಕೋಯನಾ, ಪಂಚಗಂಗಾ, ಘಟಪ್ರಭಾ, ಮಲಪ್ರಭಾ, ಡೋಣಿ, ಭೀಮಾ, ತುಂಗಭದ್ರಾ, ಮೂಸಿ ನದಿಗಳ ಸಂಗಮ ರಾಷ್ಟ್ರೀಯ ಭಾವೈಕ್ಯತೆಯ ಒಂದು ಮಾದರಿ, ವಿಶಾಲ ಭಾರತದ ಸಮ್ಯಕ್ ದರ್ಶನ !

ನಮ್ಮ ದೇಶದ ಎಲ್ಲಕ್ಕೂ ಇರುವಂತೆ ಕೃಷ್ಣೆಗೂ ಒಂದು ಚರಿತ್ರೆ ಇದೆ. ಪುರಾಣಗಳಲ್ಲಿ ಇದು 'ಕೃಷ್ಣವೇಣ್ಣಾ' ಅಥವಾ 'ಕೃಷ್ಣವೇಣಿ' ಎಂದು ಉಲ್ಲೇಖಗೊಂಡಿದೆ. ಜಾತಕ ಕಥೆಗಳಲ್ಲಿ ಇದಕ್ಕೆ 'ಕನ್ಹಪೆಣ್ಣ' ಎಂದು ಹೆಸರು. ಖಾರವೇಲದ ಹಾಥಿಗುಂಫ ಶಾಸನಗಳಲ್ಲೂ ಕನ್ಹಪೆಣ್ಣದ ಉಲ್ಲೇಖವಿದೆ. ಸ್ಕಂದ, ಪದ್ಮ ಹಾಗು ಬ್ರಹ್ಮ ಪುರಾಣಗಳು ಕೃಷ್ಣೆಯ ಮಹಾತ್ಮೆಯನ್ನು ಹೇಳುತ್ತವೆ. ನದಿಗಳ ತಾಯಿ ಹಾಗು ದಕ್ಷಿಣದ ಗಂಗೆಯೆಂದು ಕರೆಯುವ ಈ ನದಿಯ ಇಕ್ಕೆಲಗಳಲ್ಲಿ ವಾಸಿಸುವವರ ಜನ್ಮವೇ ಒಂದು ಪಾವನ, ಅವರ ಪಾಪಗಳು ನಾಶವಾಗಿ ಪುಣ್ಯಭಾಗಿಗಳಾಗುತ್ತಾರೆಂದೂ ಪುರಾಣಗಳು ಹೇಳುತ್ತವೆ.

ಹನ್ನೆರಡು ವರುಷಕೊಮ್ಮೆ ಗುರು ಗ್ರಹವು ಕನ್ಯಾರಾಶಿಯಲ್ಲಿ ಬಂದಾಗ ಉತ್ತರದ ಗಂಗೆಯು ದಕ್ಷಿಣದ ಕೃಷ್ಣೆಯ ಹತ್ತಿರ ಬಂದು ಒಂದು ವರುಷ



ಛಾಯಾಚಿತ್ರ: ಕೃಷ್ಣಾ ಕ್ಷತ್ರಿ

ಕೃಷ್ಣೆ ಮಲಾಪಹಾರಿ ಸಂಗಮ

## ದಾಸವಾಣಿಯಲ್ಲಿ

ಪಾಪ ಪರಿಹಾರಿಣಿ ಕೃಷ್ಣೆಯ ಕುರಿತು ಕನ್ನಡದ ಬಹುತೇಕ ಎಲ್ಲ ಹರಿದಾಸರೂ ಕೀರ್ತನೆಗಳನ್ನು ರಚಿಸಿದ್ದಾರೆ. ಕಲಿಯುಗಕ್ಕೆ ಈ ಕೃಷ್ಣೆ ಅಧೀನಳೆಂದು ಶ್ರೀ ವಿಜಯದಾಸರು ಒಂದೆಡೆ ಹೀಗೆ ಹೇಳುತ್ತಾರೆ.

ಏನು ಕಾರಣ ಬಂದೆ ಗಂಗೆ
ನಾನೇನು ಪುಣ್ಯವನು ಮಾಡಿದವನಲ್ಲ ॥ ಪ ॥

ಎಂದು ಪ್ರಾರಂಭವಾಗುವ ಮೂರು ನುಡಿಗಳ ಪದದಲ್ಲಿ ಗಂಗೆ ಕೃಷ್ಣೆಗೆ ಬರುವ ಕಾರಣ —

... ... ... ... ... ... ... ...
ಕಲಿಯುಗಕೆ ಈ ಕೃಷ್ಣೆ ಅಧೀನಳೆಂದು ಬಂದ್ಯೋ ।
... ... ... ... ... ... ... ॥ ೨ ॥

ಎಂದು ಹೇಳಿದರೆ ಇನ್ನೊಂದರಲ್ಲಿ

ಶ್ರೀ ಕೃಷ್ಣವೇಣಿ ಕಲ್ಯಾಣಿ
ಕಷ್ಟ ಪರಿಹರಿಪೆ ನಿತ್ಯಸಾಗರನ ರಾಣಿ ॥ ಪ ॥

ಎಂದು ಸ್ತುತಿಸುತ್ತ ಅವಳ ಪುರಾಣಾಂತರ್ಗತ ಕಥೆಯನ್ನು ಹೇಳಿ ಕೊನೆಗೆ—

ಕಲಿಯುಗಕೆ ನೀನೆ ವೆಗ್ಗಳವೆಂದು ಬುಧಜನರು ।
ಒಲಿದು ಕೊಂಡಾಡುವರು ಸತತದಲ್ಲಿ ।
ಜಲನಿಧಿಯ ಎರಡು ಮೊಗದಲಿ ಮೆರೆದೆ ಮಹಾತಟದಿ
ನೆಲೆಗೊಳಿಸು ವಿಜಯ ವಿಠಲನ ಚರಣದಲ್ಲಿ ॥ ೫ ॥

ಎಂದು ಹೇಳಿದ್ದಾರೆ. ಮತ್ತೊಂದು ಕೀರ್ತನೆಯಲ್ಲಿ

ಜಯಕೃಷ್ಣವೇಣಿ ದುರ್ಜನರ ಗಂಟಲಗಾಣಿ
ನಿಯತ ಮತಿ ಗುಣ ಶ್ರೇಣಿ ನಿತ್ಯಕಲ್ಯಾಣಿ ॥ ಪ ॥

ಎಂದು ಹೊಗಳಿಸಿಕೊಂಡಿದ್ದಾಳೆ. ಶ್ರೀ ಜಗನ್ನಾಥದಾಸರು ತಮ್ಮ ಒಂದು ಕೀರ್ತನೆಯಲ್ಲಿ

ಜನಪದಗಳಾಗೆ ಕಾನನವಾಗೆ ಮನ್ವಾದಿ ।
ದಿನಗಳೆಲ್ಲಾಗೆ ಮತ್ತಾವಾನಲೀ ।
ಮನುಜ ಮಜ್ಜನ ಗೈಯ್ಯೆ ವಾಜಪೇಯಾದಿ ಮಖ
ವನುಸರಿಸಿದದಕೆ ಫಲವೆ ನೋತ ತತ್ಫಲವೀವೆ ॥ ೪ ॥

ಎಂದರೆ, ಇನ್ನೊಂದು ಕೀರ್ತನೆಯಲ್ಲಿ

ಮದದರನು ಪೊಂದಿನ ಮಜ್ಜನವ
ಐಧಿಸೆ ಶರೀರದಿ ಹುದುಗಿದ ಪಾಪಗಳುದರಿಸಿ ಕಾಲಿಸ
ಸದನವ ಹೊಗಗೊಡದು
ದಧಿ ಮಥನ ಪದ ಪದುಮವ ತೋರ್ಪೆ ॥ ೨ ॥

ಎಂದು ಕೃಷ್ಣೆಯ ಮಹಾತ್ಮೆಯನ್ನು ಸಾರಿದ್ದಾರೆ.

# ಸಾಹಿತ್ಯದಲ್ಲಿ ಕೃಷ್ಣೆ

ಕರ್ನಾಟಕದ ಕೃಷ್ಣೆ ಹಳೆಗನ್ನಡ-ಹೊಸಗನ್ನಡ ಕಾವ್ಯಗಳೆರಡರಲ್ಲಿ ಕವಿಗಳನ್ನು ಬಿಟ್ಟಿಲ್ಲ. ೧೫ನೇ [illegible] 'ಅದೃಶ್ಯ' ಕವಿ ಕೃಷ್ಣೆಯ ದಡದ [illegible] ವಾಸಿ. ತನ್ನ ಪ್ರೌಢದೇವರಾಯನ ಕಾವ್ಯದ ಆರಂಭದಲ್ಲಿ ತನ್ನ ಊರು ಪರಿಸರವನ್ನು ಹೇಳಿಕೊಳ್ಳುತ್ತ ಈ ತೊರೆಸಾಲನ್ನು ಸುಂದರವಾಗಿ ಬಣ್ಣಿಸಿದ್ದಾನೆ.

ಈ ಶತಮಾನದ ನಾಡಗೀತೆ "ಉದಯವಾಗಲಿ ಚೆಲುವ ಕನ್ನಡ ನಾಡು" ಪಾವನೆಯರಾ ಕೃಷ್ಣೆ [illegible] ತಾಣ್ಯಾದನ್ನು ಉಲ್ಲೇಖಿಸದೆ ಮುಂದೆ ಹೋಗಿಲ್ಲ.

ಕವಿ 'ವಿನಾಯಕ' ರಂತೂ ಕೃಷ್ಣೆಯ ಉಗಮದಿಂದ ಮನಸೋತು 'ಉಗಮ' ಎಂಬ ಹೆಸರಿನಿಂದ ಒಂದು ಕವನ ಸಂಗ್ರಹವನ್ನೇ ಪ್ರಕಟಿಸಿದ್ದಾರೆ. ಅವರ ಒಂದು ಭಾವಗೀತೆ ಕೃಷ್ಣೆಯ ೧೪೦೦ ಕಿಲೋ ಮೀಟರು ಉದ್ದದ ಸಂಪೂರ್ಣ ಚಿತ್ರವನ್ನು ಕೊಡುತ್ತದೆ.

"......ಓ ಕೃಷ್ಣೆ!
ಓ ಅಮೃತ ತರಂಗಿಣಿ!
ಜೀವದಾಯಿನಿ!
ಮಲೆನಾಡಿನ ಉತ್ತುಂಗ ಶೃಂಗದಿಂದ
ಘನತೆವೆತ್ತ ಸಹ್ಯಾದ್ರಿಯ ಮಹಾಲಿಂಗದ
ಜಡೆಯಿಂದ
ಗಂಗೆಯಂತೆ ನೀನಿಳಿದು ಬಂದೆ.
ದಿಕ್ಕು ದಿಕ್ಕಿಗೆ ಮಂಗಳ ಗೀತೆಯುಕ್ಕಿತು.
ನಿನ್ನ ದಂಡೆಗುಂಟ ಜಾನಪದಗಳು ಮೆರೆದವು
ನಗರಗಳು ತಲೆಯೆತ್ತಿದವು
ಹೊಲಗಳು ಹುಲುಸಾಗಿ ಬೆಳೆದು ತೋಟಗಳು
ನಂದನಿಸಿದವು
ಹೀಗೆ ಸರ್ವಮಂಗಳೆಯಾಗಿ ಲೋಕ ಕಲ್ಯಾಣಿಯಾಗಿ ಕೊಯಿನಾ ನದಿಯನು ಕರೆದೆ;
ಪಂಚಗಂಗೆಯೊಡನೆ ಬೆರೆದೆ
ಮಲಪ್ರಭೆಯೊಡನೆ ಆದಿ ಘಟಪ್ರಭೆಯೊಡನೆ
ಕೂಡಿದೆ.
ತುಂಗಭದ್ರೆಗೆ ಔತಣವಿತ್ತು ಭದ್ರಕಾಳಿಯಾದೆ
ಬಂದ ನದಿಗಳೊಡನೆ ಸಂಗಮಿಸಿ ಹೊನ್ನಾಗಿಸಿದೆ
...ಸರ್ವಾರ್ಪಣವೆಂದು ಸಂಚಿತ ಪುಣ್ಯವನ್ನೆಲ್ಲ
ಸಮುದ್ರರಾಜನಿಗರ್ಪಿಸಿ ಧಾರೆಯೆರೆದುಕೊಂಡೆ"

ಗದ್ಯ ಸಾಹಿತ್ಯದಲ್ಲೂ ಕೂಡ 'ಕೃಷ್ಣೆ' ಅನೇಕ ಲೇಖಕರ ಕಥೆ-ಕಾದಂಬರಿಗಳಲ್ಲಿ ಕಾಣಿಸಿಕೊಂಡಿದ್ದಾಳೆ. ಅವುಗಳಲ್ಲಿ ಈ ಶತಮಾನದ ಶ್ರೇಷ್ಠ ಕೃತಿಯೆಂದು ಪರಿಗಣಿತವಾದ ರಾವಬಹಾದ್ದೂರರ 'ಗ್ರಾಮಾಯಣ' ಬೃಹತ್ ಕಾದಂಬರಿಯ ವಸ್ತು ಕೃಷ್ಣೆಯ ದಡದ ಕಾಲ್ಪನಿಕ! ಹಳ್ಳಿ ಪಾಢಳ್ಳಿಯದು. ಪುಟಪುಟಗಳಲ್ಲೂ ಅಲ್ಲಿ ಚಿತ್ರಿಸಿರುವ ಪರಿಸರ ವಾಸ್ತವ ಕೃಷ್ಣೆಯದು. ಅದರಂತೆ ಸತ್ಯಕಾಮರ "ಕೃಷ್ಣಾರ್ಪಣ' ಕಾದಂಬರಿ ಗಮನಾರ್ಹ.

## ಆಣೆಕಟ್ಟು — ಕೆ. ಆರ್. ಸ್ವಾಮಿ



ಮೊದಲು ಮೇಲುಗಡೆ ಇರುವವರನ್ನು ಮುಳುಗಿಸಿದರು.



ನಂತರ ಕೆಳಗಿರುವವರನ್ನು ಮುಳುಗಿಸಿದರು

ಇರುತ್ತಾಳಂತೆ. ಹಿಂದುಗಳಿಗೆ ಅದೊಂದು ಪವಿತ್ರ ಸಂದರ್ಭ. ಗಂಗೆಯನ್ನು ಕಾಣದವರು ಆಗ ಕೃಷ್ಣೆಯಲ್ಲಿ ಮಿಂದು ಧಾರ್ಮಿಕ ವಿಧಿಗಳನ್ನು ಆಚರಿಸಿ ಗಂಗಾಸ್ನಾನದಷ್ಟೇ ಪುಣ್ಯವನ್ನು ಪಡೆಯುತ್ತಾರೆ!

ಸ್ಕಂದ ಪುರಾಣದಲ್ಲಿ ಬರುವ ಇನ್ನೊಂದು ಕಥೆ ಕೃಷ್ಣ ಭುವಿಗೆ ಅವತರಿಸಿದ ಕಾರಣವನ್ನು ಹೇಳುತ್ತದೆ. ಕಲಿಯುಗದ ಪ್ರಾರಂಭದಲ್ಲಿ ಅಧರ್ಮದಿಂದ, ಪಾಪಕಾರ್ಯಗಳಿಂದ ಸಾತ್ವಿಕ ಋಷಿಗಳಿಗೆ ಬದುಕುವುದು ತುಂಬ ದುಸ್ತರವಾಯಿತು. ಅವರೆಲ್ಲ ಸೇರಿ ನಾರದರನ್ನು ಮೊರೆಹೊಕ್ಕರಂತೆ. ನಾರದರು ತಮ್ಮ ತಂದೆ ಬ್ರಹ್ಮನಿಗೆ ಹೇಳಿದರು. ಭೂಮಿಗೆ ಹೋಗಿ ಋಷಿಗಳಿಗೆ ಸಹಾಯ ಮಾಡಲು ಬ್ರಹ್ಮನು ವಿಷ್ಣುವಿಗೆ ಆಜ್ಞೆ ಮಾಡಿದನಂತೆ. ಆಗ ವಿಷ್ಣು (ಕೃಷ್ಣ) ತನ್ನ ದೇಹದಿಂದ ಕೃಷ್ಣೆಯನ್ನು ಹರಿಬಿಟ್ಟನಂತೆ. ಈ ವಿಷಯ ಗೊತ್ತಾದಾಗ ಸಹ್ಯ ಪರ್ವತ ರಾಜ ಆ ಪವಿತ್ರ ನದಿ ತನ್ನಲ್ಲಿಯೇ ಹರಿಯಲೆಂದು ತಪಸ್ಸು ಮಾಡಿದನಂತೆ. ಅವನ ಪ್ರಾರ್ಥನೆಯ ಫಲವಾಗಿ ಕೃಷ್ಣೆ ಸಹ್ಯ ಶಿಖರಗಳಲ್ಲಿ ಅವತರಿಸಿದಳೆಂದು ಕಥೆ ಸಾಗುತ್ತದೆ. ಕೃಷ್ಣೆಗೆ ಪಾಪ ಪರಿಹಾರಿಣಿ ಎಂದೂ ಹೆಸರಿದೆ.

ಕೃಷ್ಣವರ್ಣ ಎಂದರೆ ಕಪ್ಪು ಬಣ್ಣ ಎಂದು ಅರ್ಥವಷ್ಟೆ. ಪಾವನೆಯಾದ ಕೃಷ್ಣೆ ಹೆಚ್ಚಾಗಿ ಕಪ್ಪು ಬಣ್ಣದ ಎರೆ ಮಣ್ಣಿನಲ್ಲಿ ಹರಿಯುವದರಿಂದ ಅದರ ತಳದ ಮತ್ತು ಮಣ್ಣಿನ ದಂಡೆಗಳು, ಅಲ್ಲಿಯ ಮಳಲು ಕಪ್ಪಾಗಿವೆ. ಇದರಿಂದಾಗಿ ನೀರೂ ಕೊಂಚ ಕಪ್ಪಾಗಿ ತೋರಿ ಕೃಷ್ಣೆ ಎಂಬ ಹೆಸರು ಅನ್ವರ್ಥಕವಾಗಿರಬೇಕು. ಇದಕ್ಕೆ ಪೂರಕವಾಗಿ ಭಾರತೀಯರ ಚರಿತ್ರ ಪುರುಷ ಶ್ರೀಕೃಷ್ಣ, ಅವನ ತಂಗಿ ಅಗ್ನಿಪುತ್ರಿಯಾದ ದ್ರೌಪದಿ–ಕೃಷ್ಣೆಯರ ಹೆಸರಿನ ಸಂಬಂಧದಿಂದಾಗಿ 'ಕೃಷ್ಣೆ' ಎಂಬ ನದಿಯ ಹೆಸರು ಪಾವನತ್ವವನ್ನೂ ಅಭಿವ್ಯಕ್ತಿಸುತ್ತದೆ. ಆದ್ದರಿಂದಲೇ ನಮ್ಮ ನಾಡಗೀತೆಯಲ್ಲಿ 'ಪಾವನೆಯರಾ ಕೃಷ್ಣೆ–ಭೀಮೆಯರ ತಾಯ್ನಾಡು' ಎಂದು ಹೇಳಲಾಗಿದೆ.

ಯಾವುದೊಂದು ದೇಶದ ಇತಿಹಾಸ ಹಾಗೂ ಸಂಸ್ಕೃತಿಯ ನಿರ್ಮಾಣಕ್ಕೆ ಮತ್ತು ಅವುಗಳ ವಿಕಾಸಕ್ಕೆ ದೊಡ್ಡ–ದೊಡ್ಡ ನದಿಗಳು ಬಹು

## ತೀರ್ಥಪ್ರಬಂಧದಲ್ಲಿ ಕೃಷ್ಣೆಯ ವರ್ಣನೆ

ದಕ್ಷಿಣಭಾರತದ ನದಿಗಳಲ್ಲಿ ಕೃಷ್ಣೆಗೆ ವಿಶಿಷ್ಟ ಸ್ಥಾನ. ಪರಮಪಾವನ ಗಂಗೆ ಕೂಡ ಹನ್ನೆರಡು ವರುಷಕ್ಕೊಮ್ಮೆ ಕನ್ಯಾರಾಶಿಯಲ್ಲಿ ಗುರು ಆಗಮಿಸಿದಾಗ ಕೃಷ್ಣಾನದಿಗೆ ಧಾವಿಸುತ್ತಾಳೆ. ಕೃಷ್ಣಾನದಿಯನ್ನು 'ಹಿರಿಹೊಳೆ'ಯೆಂದೂ ಕರ್ನಾಟಕದ ಗಂಗೆ ಎಂದೂ ಜಾನಪದಕವಿಗಳು ಬಣ್ಣಿಸಿದ್ದಾರೆ. ಕೃಷ್ಣೆಯ ಮಾಹಾತ್ಮ್ಯೆ ಕುರಿತು ಅನೇಕ ಗ್ರಂಥಗಳಲ್ಲಿ ಪುರಾಣಗಳಲ್ಲಿ ಉಲ್ಲೇಖಗಳಿವೆ. ಬ್ರಹ್ಮದೇವರು ಸೃಷ್ಟಿಯ ಆರಂಭದಲ್ಲಿ ಒಂದು ಯಜ್ಞ ಮಾಡಿದರು. ಮಹಾಬಲ ಮತ್ತು ಅತಿಬಲರೆಂಬಿಬ್ಬರು ದೈತ್ಯರು ಯಜ್ಞಕ್ಕೆ ವಿಘ್ನವನ್ನೊಡ್ಡಿದರು. ಆಗ ವಿಷ್ಣುವು ಅತಿಬಲನನ್ನು ಆದಿಮಾಯೆ ದುರ್ಗೆಯು ಮಹಾಬಲನನ್ನು ಸಂಹರಿಸಿದರು. ಮಹಾಬಲನ ಪ್ರಾರ್ಥನೆಯಂತೆ ಆ ಸ್ಥಳಕ್ಕೆ ಮಹಾಬಲೇಶ್ವರವೆಂದು ಹೆಸರು ಬಂದಿತು. ಕೃಷ್ಣೆ ಮಹಾಬಲೇಶ್ವರದ ಒಂದು ಪರ್ವತದಲ್ಲಿ ಹುಟ್ಟಿ ಗೋಮುಖದೊಳಗಿಂದ ಹರಿದುಬರುತ್ತಾಳೆ. ಇಲ್ಲಿಯೇ ಮಹಾಬಲೇಶ್ವರ ದೇವಸ್ಥಾನವಿದೆ. ಕೃಷ್ಣೆಯು ಮಹಾರಾಷ್ಟ್ರ ಕರ್ನಾಟಕ ಆಂಧ್ರಪ್ರದೇಶಗಳನ್ನು ಪಾವನಗೊಳಿಸಿ ಮಛಲೀಪಟ್ಟಣದಬಳಿ ಸಮುದ್ರ ಸೇರುತ್ತಾಳೆ.

ಭಾವೀಸಮೀರರೆಂದು ಖ್ಯಾತಿ ಪಡೆದ ಶ್ರೀಮದ್ ವಾದಿರಾಜರು ಬರೆದ ತೀರ್ಥ ಪ್ರಬಂಧವು ಭಾರತದ ಸುಂದರವರ್ಣನೆಯನ್ನು ನೀಡುತ್ತದೆ. ಕೃಷ್ಣಾನದಿಯನ್ನು ಅವರು ನಾಲ್ಕು ಶ್ಲೋಕಗಳಲ್ಲಿ ಸ್ತುತಿಸಿದ್ದಾರೆ.

"ನಮಾಮಿ ಸುಕೃತಶ್ರೇಣಿಂ
ಕೃಷ್ಣವೇಣಿಂ ತರಂಗಿಣೀಂ
ಯದ್ವೀಕ್ಷಣಂ ಕೋಟಿಜನ್ಮಕೃತ
ದುಷ್ಕರ್ಮ ಶಿಕ್ಷಣಂ ॥
ಗುರು ಕನ್ಯಾಗತಂ ಧನ್ಯಾ
ಯಾಪುರಸ್ಕೃತ್ಯ ಸೇವ್ಯಸೇ ।
ಶ್ರೀಕೃಷ್ಣವೇಣೀ ಪಾಪಾನಿ
ಸಾತ್ವಂ ಪುಣ್ಯಯಸೀಧ್ರುವಂ ॥ ೨ ॥
ಕಿಂ ವರ್ಣಯಾಮಿ ಹೇಕೃಷ್ಣೇತ್ವಯಿ
ಕೃಷ್ಣಸ್ಯ ಸನ್ನಿಧಿಂ । ಯತ್ ಸಮಸ್ತಪದೋ
ಕೌತು ಪುಂಭಾವಮುಪಲಂಬಸೇ ॥ ೩ ॥
ಶ್ರೀ ಕೃಷ್ಣವೇಣೀ ಕಲ್ಯಾಣಿ ಯಾಚೇ
ತ್ವಾಮಹಮನ್ವಹಂ ॥
ಶ್ರೀ ಕೃಷ್ಣ ಚರಣಾಂಭೋಜೇ ಭಕ್ತಿಂ
ಭಕ್ತಭವಚ್ಛಿದಿ ॥ ೪ ॥

ದರ್ಶನ ಮಾತ್ರದಿಂದ ಕೋಟಿ ಜನ್ಮಗಳ ಪಾಪವನ್ನು ಪರಿಹಾರ ಮಾಡಿ ಪುಣ್ಯವನ್ನೀವ ಕೃಷ್ಣವೇಣಿಗೆ ನಾನು ನಮಸ್ಕರಿಸುವೆನೆಂದು ಹೇಳಿದ ಶ್ರೀ ವಾದಿರಾಜರು ಭಾಗೀರಥಿ ಸನ್ನಿಧಾನಯುಕ್ತಳಾದ ನೀನು ಗುರುವು ಕನ್ಯಾರಾಶಿಯಲ್ಲಿರುವಾಗ ಪತ್ನೀಸಹಿತನಾದ ಆತನನ್ನು ಪೂಜಿಸಿ ಪೂಜಿತಳಾಗಿರುವೆ. ಅಂತಹ ನೀನು ಪಾಪಗಳನ್ನು ಕಳೆದು ಪುಣ್ಯವನ್ನು ನೀಡುತ್ತಿ ಎಂದು ಬಣ್ಣಿಸಿರುವರು.

ನಿನ್ನಲ್ಲಿ ಕೃಷ್ಣನ ಸನ್ನಿಧಿ ಇರುವದರಿಂದ ಕೃಷ್ಣವೇಣೀ ಎಂದು ಕರೆಯಲ್ಪಡುತ್ತಿ. (ಶ್ರೀ ಕೃಷ್ಣಾನದಿ ಹಾಗೂ ವೇಣಾನದಿ ಹೀಗೆ ಕೃಷ್ಣವೇಣಿ ಶಬ್ದಕ್ಕೆ ಪುಂಭಾವವನ್ನು ಇಲ್ಲಿ ಹೇಳಲಾಗಿದೆ.)

ಎಲೈ ಕೃಷ್ಣವೇಣಿಯೇ ನಿರಂತರವೂ ಭಕ್ತರ ಸಂಸಾರ ದುಃಖ ನಾಶಮಾಡುವ ಶ್ರೀ ಕೃಷ್ಣನ ಚರಣಕಮಲಗಳಲ್ಲಿ ಸುದೃಢಭಕ್ತಿಯ ಕೊಡು ಎಂದೂ ಅವರು ಬೇಡಿಕೊಂಡಿದ್ದಾರೆ.

## ಶ್ರೀ ತೀರ್ಥಕ್ಷೇತ್ರ ವಿಲಾಸದಲ್ಲಿ

ಚತುಶ್ಶಾಸ್ತ್ರಸಂಪನ್ನರೂ ಸರಸಕವಿಗಳೂ ವಾಗ್ಮಿಗಳೂ ಆದ ಪಂಡಿತರಾಜ ಜಾಲೀಹಾಳ ಶ್ರೀನಿವಾಸಾಚಾರ್ಯರು ತಮ್ಮ ತೀರ್ಥಕ್ಷೇತ್ರ ವಿಲಾಸದಲ್ಲಿ ಕೃಷ್ಣವೇಣಿಯನ್ನು ವಂದಿಸಿದ್ದಾರೆ.

ಶ್ರೀ ಕೃಷ್ಣವೇಣೀಂ ಕಲ್ಯಾಣ ಕಾರಿಣೀಂ
ಪಾಪವಾರಿಣಿಂ ।
ಭವಾಬ್ಧಿ ತಾರಿಣಿಂ ವಂದೇ ಪುಣ್ಯಶ್ರೇಣಿಂ
ತರಂಗಿಣೀಮ್ ॥

ಪಾಪವನ್ನು ಪರಿಹರಿಸಿ ಕಲ್ಯಾಣ ಮಾಡುವ ಹಾಗು ಭವಸಾಗರ ದಾಟಿಸುವ ಪುಣ್ಯಕರ ತರಂಗಗಳುಳ್ಳ ಶ್ರೀಕೃಷ್ಣವೇಣಿಯನ್ನು ವಂದಿಸುವೆನು ಎಂದಿತ್ಯಾದಿಯಾಗಿ ಅವರು ಐದು ಶ್ಲೋಕಗಳಲ್ಲಿ ವರ್ಣಿಸಿದ್ದಾರೆ.

ಸ್ವಸೇವಕಾನಾಂ ವನಿತಾಜನಾನಾಂ
ಸ್ಯಾತ್ ಕೃಷ್ಣವೇಣೀ ತ್ವಮನಂತಕಾಲಮ್
ಏವಂ ಬಭೌ ವೇದಯಿತುಂ ಜಗತ್ಯಾಂ
ಶ್ರೀ ಕೃಷ್ಣವೇಣೀತಿ ಪವಿತ್ರ ನಾಮ್ನಾ ॥
ಮಜ್ಜಜ್ಜನಾನಾಂ ಕಲುಷಂ ಗೃಹೀತ್ವಾ
ಕೃಷ್ಣೀ ಭವಂತೀಮಿವ ರಾಜಮಾನಾಮ್ ।
ಅಹರ್ನಿಶಂ ಪೂರಿತ ಭಕ್ತತೃಷ್ಣಾಂ
ಕೃಷ್ಣ ಪ್ರಬೋಧಾಯ ಭಜಾಮಿಕೃಷ್ಣಮ್ ॥

ಕೃಷ್ಣವೇಣಿ ಎಂಬ ಹೆಸರು ಬಂದ ಬಗೆಯನ್ನು ಕಲ್ಪಿಸಿದ ಕವಿಗಳು ಸ್ನಾನ ಮಾಡುವವರ ಕಲ್ಮಷವನ್ನೂ ದೂರಮಾಡುವದರಿಂದ ಕಪ್ಪಾಗಿ ತೋರುತ್ತಿರುವ ಕೃಷ್ಣೆಯನ್ನು ಅನೇಕ ವಿಧವಾಗಿ ಕೊಂಡಾಡಿರುವರು.

ಸಂಗ್ರಹ : ಬಿ.ಆರ್. ಬಿ





1 ನಾಗಾರ್ಜುನ ಅಣೆಕಟ್ಟು

2 ಶ್ರೀಶೈಲೇಶ್ವರ ಮಹಾದ್ವಾರ

ಮುಖ್ಯ ಪಾತ್ರ ವಹಿಸಿವೆ. ಬದುಕಿಗೆ ಬಹು ಅವಶ್ಯವಾದ ನೀರಿನ ಹತ್ತಿರ ಮಾನವನ ವಸತಿ ಪ್ರಾರಂಭವಾದದ್ದು ಎಂದೋ ಕಂಡ ವಿಷಯ. ಅಂತೆಯೇ ನೀರು ನಮ್ಮ ಹಿರಿಯರಿಗೆ ತೀರ್ಥವೆನಿಸಿತು. ತೀರ್ಥಪ್ರದೇಶಗಳು ಕ್ಷೇತ್ರಗಳೆನಿಸಿದವು.

ಅಂತೆಯೇ ಕೃಷ್ಣೆಯ ದಡದ ಕೂಡಲ ಸಂಗಮ ಕ್ಷೇತ್ರ ಒಂದು ಕ್ರಾಂತಿಗೇ ಅನುವಾಗಿ ಬಸವಣ್ಣ ಬೆಳೆದ–ಕೊನೆಗೆ ಐಕ್ಯ ಹೊಂದಿದ ಪಾವನ ಕ್ಷೇತ್ರವಾಯಿತು. ಕೃಷ್ಣೆಯ ದಡದ ಇನ್ನೊಂದು ಪ್ರಾಚೀನ-ಬಹು ಪವಿತ್ರ ಕ್ಷೇತ್ರ ಶ್ರೀಶೈಲ. ಆಂಧ್ರದಲ್ಲಿಯ ಶ್ರೀಶೈಲ ದೇಶದ ಎಲ್ಲ ಶರಣರ–ಭಕ್ತರ ಕೇಂದ್ರವಾಯಿತು. ಅಲ್ಲಿ ಸಾವಿರ ಮೆಟ್ಟಿಲಗಳನ್ನಿಳಿದು ಕಾಣುವ ಕೃಷ್ಣೆ, ಪಾತಾಳಗಂಗೆ ಎನಿಸಿದ್ದಾಳೆ. ಭಾವುಕರಿಗೆ ಪವಿತ್ರ ಸ್ಥಾನ, ಸೌಂದರ್ಯಾರಾಧಕರಿಗೆ ಕಣ್ಮನ ಸೆಳೆಯುವ ನೋಟ, ಇವುಗಳಲ್ಲದೆ. ಛಾಯಾಭಗವತಿ, ಕೊಪ್ಪರದ ನರಸಿಂಹ, ಸೀತಿಮನಿ, ಗಾಲವ ಕ್ಷೇತ್ರ ಗಲಗಲಿ ಒಂದೆ ಎರಡೇ ಉದ್ದಕ್ಕೂ ಸುಮಾರು ೫೦ ಕಿ.ಮೀ.ಗೆ ಒಂದರಂತೆ ಹೆಸರಾಂತ ಕ್ಷೇತ್ರಗಳು ಕೃಷ್ಣೆಗುಂಟ, ವಸತಿ ಹಬ್ಬಾದಂತೆ ನಾಗರಿಕತೆಗೆ ನಾಂದಿಯಾಗಿ ಮಾನವನ ಅಭ್ಯುದಯಕ್ಕೆ ದಾರಿಯಾಯಿತು.

ಕೃಷ್ಣೆ ಕೂಡ ಅಂಥ ಇತಿಹಾಸ–ಸಂಸ್ಕೃತಿಗಳನ್ನು ನಿರ್ಮಿಸಿದ್ದಾಳೆ. ಅವಳ ದಂಡೆಯ ಮೇಲೆ ದೊರೆತಿರುವ ಪ್ರಾಚೀನ ಅವಶೇಷಗಳಿಂದ ಇಲ್ಲಿ ಬೌದ್ಧ ಮತವು ಉಚ್ಛ್ರಾಯ ಸ್ಥಿತಿಯನ್ನು ಹೊಂದಿತ್ತು ಎಂದು ಹೇಳಬಹುದು. ಅಮರಾವತಿ ಎಂಬಲ್ಲಿ ಬೌದ್ಧ ಅವಶೇಷಗಳು ಹೇರಳವಾಗಿ ದೊರೆತಿದ್ದರೆ ಇದರ ಬಳಿಯ ಧರಣಿಕೋಟೆ (ಧಾನ್ಯಕಟಕಂ) ಎಂಬ ಬೌದ್ಧಕೇಂದ್ರವೊಂದು ಶಾತವಾಹನರ ರಾಜಧಾನಿಯಾಗಿತ್ತೆಂದು ತಿಳಿದು ಬರುತ್ತದೆ. ನಾಗಾರ್ಜುನ ಸಾಗರದ ಹತ್ತಿರ ದೊರೆತ ಪುರಾತನ ನಗರದ ಅವಶೇಷಗಳು ಅಲ್ಲೊಂದು ವಿಶ್ವವಿದ್ಯಾಲಯವಿತ್ತೆಂದೂ ಕ್ರಿ.ಶ. ಮೂರನೆಯ ಶತಮಾನದ ಹೊತ್ತಿಗೆ ಅಲ್ಲಿ ಶ್ರೀಲಂಕಾ, ಜಪಾನ್, ಟಿಬೇಟ್, ಸಯಾಮ ದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರೆಂಬುದಕ್ಕೆ ಅಲ್ಲಿ ದೊರೆತ ಅವಶೇಷಗಳು ಸಾಕ್ಷಿಯಾಗಿವೆ.

ಕರ್ನಾಟಕದಲ್ಲಿ ಐದನೆಯ ಶತಮಾನದ ಬಾದಾಮಿಯ ಚಾಲುಕ್ಯರು ಕೃಷ್ಣೆಯ ಜಲಾನಯನ ಪ್ರದೇಶದವರು. ಕೃಷ್ಣೆ ಮಲಾಪಹಾರಿ ಕೂಡುವ ಸಂಗಮ ಪ್ರದೇಶದವರು. ಆ ಮುಂದಿನ ವಿಜಯನಗರದ ರಾಜರಿಗಂತೂ ಕೃಷ್ಣೆ ಸರ್ವದಾ ರಕ್ಷಿಣಿ. ಅಂತೆಯೇ ಅವಳ ಮೇಲೆ ಎಂದಿಗೂ ಅವರ ಆಧಿಪತ್ಯ. ಆ ಕಾಲದ ರಾಯಚೂರು ಕೋಟೆಯ ಇತಿಹಾಸದಲ್ಲಿ ಬರುವ ಹಲವಾರು ಕಾಳಗದ ಹಿನ್ನೆಲೆ ಕೃಷ್ಣೆಯ ಆಧಿಪತ್ಯವೇ ಆಗಿತ್ತು. ಕೃಷ್ಣೆ ಒಲಿದರೆ ಶತ್ರು ಬರಲಾರ. ಮುನಿದರೆ ಸರ್ವನಾಶ! ಕೊನೆಗೆ ವಿಜಯನಗರದ ರಾಯರಿಗೆ ಕೈ ಕೊಟ್ಟವಳೂ ಕೃಷ್ಣೆಯೇ. ರಕ್ಕಸ–ತಂಗಡಗಿಯ ಹತ್ತಿರ ಶಾಹಿ ಅರಸರು ಕೃಷ್ಣೆಯನ್ನು ದಾಟದಿದ್ದರೇ... ಅದು ರೇ ... ಸಾಮ್ರಾಜ್ಯ !

ವಾರ್ಷಿಕ ಸರಾಸರಿ ೧೫೦ ರಿಂದ ೨೫೦ ಅಂಗುಲ ಮಳೆಯ ಪ್ರದೇಶದಲ್ಲಿ ಕೃಷ್ಣೆ ಹುಟ್ಟುವಳಾದರೂ ಅವಳು ಹರಿದದ್ದು ಮಾತ್ರ ಸರಾಸರಿ ೧೫ ರಿಂದ ೨೦ ಇಂಚು ಮಳೆಯ ಪ್ರದೇಶದಲ್ಲಿ. ದಷ್ಟಪುಷ್ಟವಾಗಿ ಬೆಳೆದ ಮಹಾರಾಜರ ಮನೆಯ ಹೆಣ್ಣನ್ನು ಸುದಾಮನ ಒಕ್ಕಲಿಗೆ ಮದುವೆ ಮಾಡಿಕೊಟ್ಟಂತೆ. ಅಂತೆಯೇ ಅವಳು ಹರಿದ ನಾಡೆಲ್ಲ ಬರಗಾಲಕ್ಕೆ ಪ್ರಸಿದ್ಧವಾಗಿದೆ. ಇಕ್ಕೆಲಗಳಲ್ಲಿ ಅವಳ ರಭಸ ಕಡಿಮೆಯಾದಾಗ ಕಾಳು ಚೆಲ್ಲಿ ಮುತ್ತು ಬೆಳೆಯುವ ಹಾಲು ಹರಿಯುವ ಪ್ರದೇಶವಾದರೆ ಉಳಿದ ಒಳನಾಡು ಒಣನೆಲ–ಬಂಜರು ಭೂಮಿ. ಶತ–ಶತಮಾನಗಳಿಂದ ಕೃಷ್ಣೆಯನ್ನು ಉಪಯೋಗಿಸುವುದನ್ನು ನಮ್ಮವರು ಕಲಿಯಲೇ ಇಲ್ಲ. ಅದೊಂದು ಐತಿಹಾಸಿಕ ದುರಂತ !

ಬ್ರಿಟಿಷರೇ ಕೃಷ್ಣೆಯ ಉಪಯೋಗದ ಮೊದಲ ಕಾರಣಕರ್ತರಾದರು. ಕಳೆದ ಶತಮಾನದಲ್ಲಿ ರಾಜಮಹೇಂದ್ರಿಯಲ್ಲಿ ಗೋದಾವರಿಗೆ, ಅಣೆಕಟ್ಟನ್ನು ಕಟ್ಟಿದ ಆರ್ಥರ್–ಕಾಟನ್‌ನೇ ವಿಜಯವಾಡಾದ ಹತ್ತಿರ ಕೃಷ್ಣೆಗೆ ಒಂದು ಕಟ್ಟೆಯನ್ನು ಕಟ್ಟಿದ. ಅದುವೆ ಕೃಷ್ಣೆಯ ಪ್ರಥಮ ಉಪಯೋಗ. ೧೮೫೨–೫೫ ರಲ್ಲಿ ನಿರ್ಮಾಣವಾದ ಈ ಕಟ್ಟೆಯ ದಡದಲ್ಲಿ ಎರಡು ಕಾಲುವೆಗಳಿವೆ. ೧೯೩೫ ರಲ್ಲಿ ಈ ಕಟ್ಟೆಯನ್ನು ಒಮ್ಮೆ ಎತ್ತರಿಸಿದರು. ೧೯೬೫ ರಲ್ಲಿ ಮತ್ತೊಮ್ಮೆ ಅದರ ನವೀಕರಣವಾಗಿ ಪ್ರಕಾಶಂ–ಬ್ಯಾರೇಜ ಎಂಬ ನಾಮಕರಣವಾಯಿತು. ಇಲ್ಲಿ ಸುಮಾರು ೧೨ ಲಕ್ಷ ಎಕರೆ ಭೂಮಿಗೆ ನೀರಾವರಿ ಸೌಲಭ್ಯ ಇದೆ.

## ಮುಳವಾಡ

ನೂರು ವರ್ಷಗಳ ಹಿಂದೆ ಬ್ರಿಟಿಶರು ಕೃಷ್ಣಾ–ಗೋದಾವರಿ ಯೊಜನೆಗಳನ್ನು ರೂಪಿಸಿದಾಗ ಮುಳವಾಡ ಏತ ನಿರಾವರಿ ಯೋಜನೆ ಇತ್ತು. ಅಂದಿನ ಯೊಜನೆಗೆ ಒಂದು ಅಸ್ಪಸ್ಟ ರೂಪ ಸಿಕ್ಕದ್ದು ೫೦ ವರುಷಗಳ ಹಿಂದೆ. ಅದರೆ ಅದು ಸ್ಪಷ್ಟವಾಗಿ ಗುರುತಿಸುವ ಮುನ್ನ ಕೃಷ್ಣಾ ಮೇಲ್ದಂಡೆ ಯೋಜನೆಯ ಸೊಲ್ಲು ಎದ್ದಾಗ ಏತ ನೀರಾವರಿ ಚಿತ್ರ ಮಸಕಾಯಿತು. ಅದಕ್ಕೆ ಕಾರಣ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ವಿಜಾಪುರ ಜಿಲ್ಲೆಯ ಬರ ಪರಿಹಾರದ ಭ್ರಮೆ ! ಈ ಭ್ರಮೆ ನಿರಸನವಾದಾಗ ಈಗ ಮತ್ತೆ ಮುಳವಾಡ ಏತ ನೀರಾವರಿ ಯೋಜನೆಯ ಕೂಗು ಎದ್ದಿದೆ.

ಆಲಮಟ್ಟಿ ಕಟ್ಟೆಯಿಂದ ಸುಮಾರು ೧೫ಕಿ.ಮಿ. ಹಿಂದೆ ಇರುವ ಬಳೂತಿ ಗ್ರಾಮದ ಬಳಿ ಬೃಹತ್ ಜಾಕ್‌ವೆಲ್ಲಗಳನ್ನು ಸ್ಥಾಪಿಸಿ ಜಲಾಶಯದ ನೀರನ್ನು ಉನ್ನತ ಶಕ್ತಿಯ ನೀರೆತ್ತುವ ಪಂಪುಗಳನ್ನು ಬಳಸಿ ಬಳೂತಿಯಿಂದ ಉತ್ತರಕ್ಕೆ ೨೦ ಕಿ. ಮಿ. ದೂರದ ಮಲಘಾಣ ಗ್ರಾಮ ಹಾಗೂ ೩೫ ಕಿ.ಮಿ. ಅಂತರದ ಮುಳವಾಡ ಗ್ರಾಮದ ಬಳಿ ನಿರ್ಮಿಸಲಾಗುವ





1 ನಾರಸೋಬ ವಾಡಿ ಬಳಿ ಹರಿಯುತ್ತಿರುವ ಕೃಷ್ಣೆ
2 ಕೃಷ್ಣೆಯಲ್ಲಿ ಜಲವಿಹಾರ

# ಯಾತ ನೀರಾವರಿ ಯೋಜನೆ

'ಲಿಫ್ಟ ಪಾಯಿಂಟ'ಗಳಿಗೆ ಸಾಗಿಸುವುದು. ಅಲ್ಲಿಂದ ಕಾಲುವೆ–ಉಪಕಾಲುವೆಗಳ ಮುಖಾಂತರ ನೀರನ್ನು ವಿಜಾಪುರ, ಸಿಂದಗಿ, ಇಂಡಿ, ಬಸವನ ಬಾಗೇವಾಡಿ ಮತ್ತು ಮುದ್ದೇಬಿಹಾಳ ತಾಲೂಕುಗಳ ಸುಮಾರು ೬.೫ ಲಕ್ಷ ಎಕರೆ ಭೂಮಿಗೆ ನೀರನ್ನು ಸಾಗಿಸುವುದು. ಇದು ಯೋಜನೆಯ ರೂಪ–ರೇಷೆ. ಮಲಘಾಣ–ಮುಳವಾಡ ಗ್ರಾಮಗಳು ಸಮುದ್ರ ಮಟ್ಟದಿಂದ ಸುಮಾರು ೨ ಸಾವಿರ ಅಡಿ ಎತ್ತರದಲ್ಲಿವೆ. ನೀರಾವರಿಯಾಗಲಿರುವ ಐದು ತಾಲೂಕುಗಳ ಭೂಮಿ ಇದಕ್ಕಿಂತ ಕಡಿಮೆ ಎತ್ತರದಲ್ಲಿರುವುದರಿಂದ ನೀರು ಸರಬರಾಜು ಸುಲಭ. ಅಲ್ಲದೆ ವಿಜಾಪುರ ಮತ್ತಿತ್ತರ ನಗರ–ಪಟ್ಟಣಗಳಿಗೆ ಕುಡಿಯುವ ನೀರಿನ ಪೂರೈಕೆಯೂ ಸುಲಭ.

ಯೋಜನೆಯನ್ನು ೪–೫ ಹಂತಗಳಲ್ಲಿ ಜಾರಿಗೊಳಿಸುವುದೆಂದೂ ಅದಕ್ಕೆ ಅಂದಾಜು ವೆಚ್ಚ ಇಂದಿನ ಲೆಕ್ಕದಲ್ಲಿ ೫೫೦ ಕೋಟಿ ರೂಪಾಯಿಗಳು. ಆದರೆ ಯಾತ ನೀರಾವರಿ ಯೋಜನೆಗಳಿಗೆ ವಿಶ್ವಬ್ಯಾಂಕಿನ ನೆರವು ಕೊಟ್ಟಿಲ್ಲ. ಅದ್ದರಿಂದ ಈ ಯೋಜನೆಯ ಆರ್ಥಿಕ ಹೊರೆ ಸಂಪೂರ್ಣ ಕರ್ನಾಟಕ ಸರಕಾರದ್ದು.

ಆಲಮಟ್ಟಿ ಕಟ್ಟೆ ಪೂರ್ತಿಯಾದಾಗ ಮಾತ್ರ ಈ ಯೋಜನೆ ಸಾಧ್ಯ. ಆದರೆ ಕಟ್ಟೆ ಕೆಲಸ ಮುಗಿದು ನೀರು ನಿಲ್ಲಿಸಿದಾಗ ಜಾಕ್‌ವೆಲ್ಲಗಳನ್ನು ನಿರ್ಮಿಸುವುದು ಕಠಿಣ. ಆದ್ದರಿಂದ ಯಾತ ನೀರಾವರಿಯ ಜಾಕ್‌ವೆಲ್ಲಗಳನ್ನು ಈಗಿನಿಂದಲೇ ನಿರ್ಮಿಸಬೇಕಾಗುತ್ತದೆ. ಜೊತೆಗೆ ಲಿಫ್ಟ ಪಾಯಿಂಟ ಕಾಲುವೆ ಉಪಕಾಲುವೆಗಳನ್ನು ತೋಡುವ ಕೆಲಸವೂ ಆಗಬೇಕು. ಈವರೆಗೆ ಈ ಯೋಜನೆಯ ಪ್ರಾಥಮಿಕ ಕೆಲಸಗಳಾದ ಭೌಗೋಲಿಕ ಸರ್ವೇಕ್ಷಣೆ ಕೂಡ ನಡೆದಿಲ್ಲ. ಒಂದು ಸಂತೋಷದ ವಿಷಯವೆಂದರೆ ಈ ವರ್ಷದ ಆದಿಯಲ್ಲಿ ಕೃಷ್ಣಾ ಹಾಗೂ ಅದರ ಉಪನದಿಗಳ ಯಾತ ನೀರಾವರಿ ಯೋಜನೆಗಳ ಜಾರಿಗಾಗಿ ಒಂದು ಪ್ರತ್ಯೇಕ ಕಾರ್ಪೊರೇಶನ್ ರಚಿತವಾಗಿದೆ. ಅದರ ಮುಖ್ಯ ಕಛೇರಿ ವಿಜಾಪುರದಲ್ಲಿದೆ.

ಆಮೆಗಡಿಯಲ್ಲಿ ಸಾಗಿದ ಕೃಷ್ಣಾ ಮೇಲ್ದಂಡೆ ಯೋಜನೆಯ ಕೆಲಸ ಕಂಡಾಗ ಮುಳವಾಡ ಯಾತ ನೀರಾವರಿ ಯೋಜನೆ 'ಮೃಗಜಲ' ಎನಿಸುವುದು ಸ್ವಾಭಾವಿಕ !

ಸ್ವಾತಂತ್ರ್ಯಾ ನಂತರದ ದಿನಗಳಲ್ಲಿ ಹೊಸದೇವ ಮಂದಿರಗಳೆಂದು ಹೆಸರಿಸಿ ಅಣೆಕಟ್ಟುಗಳ ಆಂದೋಲನ ಪ್ರಾರಂಭವಾದಾಗ ಕರ್ನಾಟಕ–ಆಂಧ್ರಗಳಲ್ಲಿ ಕೃಷ್ಣೆಗೆ ಮತ್ತೆ ಕಟ್ಟೆಗಳನ್ನು ಕಟ್ಟುವ ಯೋಜನೆಗಳು ಅಸ್ತಿತ್ವದಲ್ಲಿ ಬಂದವು. ಆದರೆ ಈ ವರೆಗೆ ಪೂರ್ತಿಯಾಗಿ ಫಲ ಅನುಭವಿಸಿದವರು ಮತ್ತೆ ಆಂಧ್ರದವರೆ ! ಆಂಧ್ರದ ನಲ್ಗೊಂಡ ಜಿಲ್ಲೆಯ ಮಿರ್ಯಾಲಗುಡ ತಾಲೂಕಿನಲ್ಲಿ ನಂದಿಕೊಂಡ ಗ್ರಾಮದ ಬಳಿ ನಿರ್ಮಾಣವಾದ ನಾಗಾರ್ಜುನ ಸಾಗರ ಕಟ್ಟೆಯಲ್ಲಿ ೧೧೦ ಚದುರ ಮೈಲಿಗಳ ವಿಶಾಲ ಪ್ರದೇಶದಲ್ಲಿ ನೀರು ಶೇಖರಣೆಯಾಗುತ್ತದೆ. ಇದು ಭಾರತದಲ್ಲಿ ಅತ್ಯಂತ ದೊಡ್ಡ ಹಾಗೂ ವಿಶ್ವದಲ್ಲಿ ಮೂರನೆಯ ದೊಡ್ಡ ಮಾನವ ನಿರ್ಮಿತ ಸಾಗರ ! ವಿಶ್ವದಲ್ಲಿ ಅತ್ಯಂತ ಉನ್ನತವಾದ ಕಲ್ಲು ಕಟ್ಟಡದ ಕಟ್ಟೆ. ಇಕ್ಕೆಲಗಳಲ್ಲಿ ೫೦ ಸಾವಿರ ಕಿಲೋವಾಟ್ ಸಾಮರ್ಥ್ಯದ ೮ ವಿದ್ಯುಜ್ಜನಕ ಘಟಕಗಳೂ ಇರುತ್ತವೆ. ಮೊದಲ ಹಂತದ ಯೋಜನೆಯಲ್ಲಿ ಸುಮಾರು ೨೦.೫೪ ಲಕ್ಷ ಎಕರೆ ಭೂಮಿ ನೀರು ಉಣ್ಣುತ್ತದೆ.

ಇದೇ ಅವಧಿಯಲ್ಲಿ ಕರ್ನಾಟಕದಲ್ಲಿ ರೂಪುಗೊಂಡ ಕೃಷ್ಣಾ–ಮೇಲ್ದಂಡೆ ಯೋಜನೆಯ ನಿರ್ಮಾಣ ಕಾರ್ಯ ಕುಂಟುತ್ತ ಸಾಗಿದೆ. ವಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನ ಆಲಮಟ್ಟಿಯ ಬಳಿ ಒಂದು ಕಟ್ಟೆಯನ್ನು, ಕಲಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿನ ನಾರಾಯಣಪುರ ಹತ್ತಿರ ಇನ್ನೊಂದು ಕಟ್ಟೆಯನ್ನೂ ಕಟ್ಟುವ ಯೋಜನೆ ನಾಗಾರ್ಜುನ ಸಾಗರದಷ್ಟೇ ಹಳೆಯದು. ೧೯೫೦ರಲ್ಲಿಯೇ ವ್ಯವಹಾರ ಪ್ರಾರಂಭವಾಗಿ, ೧೯೬೪ರಲ್ಲಿ ಕಾರ್ಯ ಪ್ರಾರಂಭವಾಯಿತು. ಇದೀಗ ನಾರಾಯಣಪುರದ ಕಟ್ಟೆ ಪೂರ್ತಿಯಾಗಿದೆ. ಅದರ ಕಾಲುವೆಗಳು ಇನ್ನೂ ಪೂರ್ತಿಯಾಗಬೇಕಿದೆ. ಆಲಮಟ್ಟಿ ಜಲಾಶಯದ ಕಾರ್ಯ ಇನ್ನೂ ನಡೆದಿದೆ. ಈ ಯೋಜನೆಗಳು ಪೂರ್ತಿಗೊಂಡಾಗ ಕಲಬುರ್ಗಿ–ರಾಯಚೂರು ಜಿಲ್ಲೆಗಳ ಸುಮಾರು ೪೬ ಲಕ್ಷ ಹಾಗೂ ವಿಜಾಪುರ ಜಿಲ್ಲೆಯ ಸುಮಾರು ೨ ಲಕ್ಷ ಎಕರೆ ಭೂಮಿಗೆ ನೀರಾವರಿ ಸೌಲಭ್ಯ ಒದಗಲಿದೆ,

ಹಾಳುಗರೆಯುತ್ತ ದಾರಿದ್ರ್ಯದ ಸಂಕೇತವಾಗಿ ನಿಂತಿರುವ ಇಲ್ಲಿನ ಫಲವತ್ತಾದ ಭೂಮಿಯ ಭಾಗ್ಯದ ಬಾಗಿಲು ಆಗ ತೆರೆದೀತೆಂಬ ಆಶೆ ಇಲ್ಲಿಯ ಜನರದು...ಇಷ್ಟಾಗಿಯೂ ಇಲ್ಲಿಯ ಜನರ ಹಾಗೂ ಕೃಷ್ಣೆಯ ನಡುವಿನ ಗೆಳೆತನ ಅನನ್ಯವಾಗಿದೆ. ಅವರ ಮಾತಿನಲ್ಲಿಯೇ ಹೇಳುವುದಾದರೆ,

ಸಿಂಗಳಿ ಶಿವ ಶಿವ ಸಿಂಗಳಿ ಹರ ಹರ
ಸಿಂಗಳ ನಮಗ ವಿಸವಾಸ–ಬಿರಿಯೋಳೆಯ
ಗಂಗವ್ವಗ ನಮಗ ಗೆಳೆತ್ಯಾನs ॥






# ಕೃಷ್ಣಾ ಮೇಲ್ದಂಡೆ ಯೋಜನೆ

ಕೃಷ್ಣಾ ಮೇಲ್ದಂಡೆ ಯೋಜನೆಯ ನಿವೇಶನದ ಆಯ್ಕೆಯನ್ನು ಕುರಿತ ವ್ಯವಹಾರ ಪ್ರಾರಂಭವಾದದ್ದು ೧೯೫೦ ರಷ್ಟು ಹಿಂದೆ. ಆಗ ದೃಷ್ಟಿಯಲ್ಲಿ ಇದ್ದದ್ದು ವಿಜಾಪುರ ಜಿಲ್ಲೆಯ ಬರಗಾಲದ ಶಾಶ್ವತ ಪರಿಹಾರ ಮಾತ್ರ. ಮುಂದೆ ಭಾಷಾವಾರು ಪ್ರಾಂತ ರಚನೆಯಾದಾಗ ಯೋಜನೆಗೆ ಒಂದು ಖಚಿತ ರೂಪ ಬಂದಿತು. ಒಂದು ಕಟ್ಟೆಯನ್ನು ಆಲಮಟ್ಟಿಯಲ್ಲಿಯೂ ಇನ್ನೊಂದನ್ನು ನಾರಾಯಣಪುರದ ಹತ್ತಿರವೂ ಕಟ್ಟುವುದೆಂದು ನಿರ್ಧಾರವಾಯಿತು. ೧೯೬೪ ರಲ್ಲಿ ದಿವಂಗತ ಲಾಲಬಹಾದ್ದೂರ ಶಾಸ್ತ್ರಿಗಳಿಂದ ಶಂಕು ಸ್ಥಾಪನೆಯಾಯಿತು. ಎರಡೂ ಕಟ್ಟೆಗಳ ಹಾಗೂ ಸಮಗ್ರ ಕಾಲುವೆಗಳ ಅಂದಿನ ವೆಚ್ಚ ೨೮೫ ಕೋಟಿ ರೂಪಾಯಿಗಳೆಂದು ಅಂದಾಜು ಮಾಡಲಾಯಿತು.

ಈ ಇಪ್ಪತ್ತು ವರುಷಗಳಲ್ಲಿ ಮಾರ್ಚ ೧೯೮೫ರ ವರೆಗೆ ಒಟ್ಟು ೩೧೭ ಕೋಟಿ ರೂಪಾಯಿಗಳು ಖರ್ಚಾಗಿವೆ. ನಾರಾಯಣಪುರದ ಕಟ್ಟೆ ಪೂರ್ತಿಯಾಗಿದೆ. ಅದರ ಕಾಲುವೆಗಳ ನಿರ್ಮಾಣ ಕೆಲಸ ನಡೆದಿದೆ. ಆಲಮಟ್ಟಿಯ ಕಟ್ಟೆ ೧೬೭೦ ಅಡಿ ಎತ್ತರ ಕಟ್ಟಲಾಗಿದೆ. ಮೊದಲ ಹಂತದ ಕಟ್ಟೆಯ ಎತ್ತರ ೧೬೮೦ ಅಡಿ.

ಕಳೆದ ವರುಷ ಇಡೀ ಯೋಜನೆಯ ಮರು ಅಂದಾಜು ಮಾಡಿದಾಗ ನಿಗದಿಯಾದ ಹಣ ೧೦೪೯ ಕೋಟಿ ರೂಪಾಯಿಗಳು! ಇದು ಮೊದಲ ಹಂತದ ಅಂದಾಜು ವೆಚ್ಚ.

ಕ್ರಿ. ಶ. ೨೦೦೦ ಒಳಗಾಗಿ ಇಡೀ ಯೋಜನೆಯನ್ನು ಪೂರ್ತಿಗೊಳಿಸುವದಾಗಿ ರಾಜ್ಯ ಸರಕಾರ ಒಪ್ಪಿಕೊಂಡಿದೆ.

ಯೋಜನೆ ಪೂರ್ತಿಯಾದಾಗ ನೀರಾವರಿಗೆ ಒಳಪಡುವ ೨೮ ಲಕ್ಷ ಎಕರೆ ಭೂಮಿಯಲ್ಲಿ ಕಲಬುರ್ಗಿ, ರಾಯಚೂರು ಜಿಲ್ಲೆಗಳಲ್ಲಿ ತಲಾ ೧೩ ಲಕ್ಷ ಎಕರೆ ಹಾಗೂ ವಿಜಾಪುರ ಜಿಲ್ಲೆಯಲ್ಲಿ ೨ ಲಕ್ಷ ಎಕರೆ ಭೂಮಿ ಸೇರಿದೆ. ಎರಡನೆಯ ಹಂತದಲ್ಲಿ ಆಲಮಟ್ಟಿ ಕಟ್ಟೆಯಲ್ಲಿ ೨೫೦ ಮೆಗಾವಾಟ್ ಶಕ್ತಿಯ ೬ ವಿದ್ಯುಜ್ಜನಕಗಳನ್ನು ಅಳವಡಿಸುವ ಯೋಜನೆಯೂ ಇದೆ.

ಈ ಯೋಜನೆಯ ಅಡಿಯಲ್ಲಿ ಒಟ್ಟು ೧೯೯ ಹಳ್ಳಿಗಳು ಹಾಗೂ ಅರ್ಧ ಬಾಗಿಲುಕೋಟೆ ನಗರವು ಮುಳುಗಡೆಯಾಗುತ್ತದೆ. ಇದು ಜಗತ್ತಿನಲ್ಲಿಯೇ ಅತಿ ದೊಡ್ಡ ಪ್ರಮಾಣದ ಜನವಸತಿಯ ಮುಳುಗಡೆ! ಒಟ್ಟು ಮುಳುಗಡೆಯಾಗುವ ೨.೮೬ ಲಕ್ಷ ಎಕರೆ ಭೂಮಿಯಲ್ಲಿ ಅತಿ ಹೆಚ್ಚು ಜನವಸತಿ ಹಾಗೂ ಫಲವತ್ತಾದ ಭೂಮಿ ಮುಳುಗಡೆಯಾಗುವದು ವಿಜಾಪುರ ಜಿಲ್ಲೆಯಲ್ಲಿ. ಇಂದು ಯೋಜನೆಗಾಗಿ ಸುಮಾರು ೬೦೦೦ ಜನರು ದುಡಿಯುತ್ತಿದ್ದಾರೆ.

ಯೋಜನೆ ಪೂರ್ತಿಗೊಂಡಾಗ ದಕ್ಷಿಣ ಏಷಿಯಾದಲ್ಲಿಯೇ ಇದೊಂದು ದೊಡ್ಡ ಯೋಜನೆ ಎನಿಸುತ್ತದೆ.



# ದೇವಾಲಯಗಳ ನಗರ-ಕಂಚಿ

ವೆಂಕಟನಾರಾಯಣ

ಛಾಯಾಚಿತ್ರ: ಜಿ.ಎಸ್. ನಾರಾಯಣ ಸ್ವಾಮಿ.

ಅಯೋಧ್ಯಾ ಮಥುರಾ ಮಾಯಾ
ಕಾಶೀ ಕಾಂಚೀ ಅವಂತಿಕಾ।

ಪುರೀ ದ್ವಾರವತೀ ಚೈವ
ಸಪ್ತೈತಾ ಮೋಕ್ಷದಾಯಕಾಃ ॥

ಭಾರತದ ಸಪ್ತ ಮೋಕ್ಷಪುರಿಗಳಲ್ಲೊಂದಾದ ದಕ್ಷಿಣ ಭಾರತದಲ್ಲಿರುವ ಏಕೈಕ ಮೋಕ್ಷಪುರಿ ಕಂಚಿ. ಇದು ಶಾಕ್ತ ಸಂಪ್ರದಾಯದ ಅಂಬಾ ಪ್ರಧಾನ ಕ್ಷೇತ್ರ.

ಕಂಚೀಪುರ ಎಂದೇ ಜನಪ್ರಿಯವಾಗಿರುವ ಮತ್ತು ತಮಿಳು ಶಾಸ್ತ್ರೀಯ ಸಾಹಿತ್ಯದಲ್ಲಿ 'ಕಚ್ಚಿ' ಎಂದು ಕರೆಯಲ್ಪಡುವ ಅತ್ಯಂತ ಪುರಾತನವಾದ ಈ ನಗರಿಗೆ ಕಂಚಿ, ಕಾಂಜೀವರಂ ಎಂಬ ಹೆಸರೂ ಇದೆ.

ಕಂಚಿ ಎಂಬ ಹೆಸರು ಪುರಾಣಗಳಲ್ಲೂ ಪ್ರಸ್ತಾಪವಾಗಿದೆಯೆಂದರೆ ಇದರ ಪ್ರಾಚೀನತೆ ಎಷ್ಟೆಂಬುದು ಅರಿವಾಗುತ್ತದೆ. ಶಿವಪುರಾಣ (ಉಮಾಸಂಹಿತಾ-೫, ೪೪ನೇ ಅಧ್ಯಾಯ)ದಲ್ಲಿ ವೇದ ವ್ಯಾಸರು ಸಂದರ್ಶಿಸಿದ ಧಾರ್ಮಿಕ ಕ್ಷೇತ್ರಗಳ ಪೈಕಿ ಕಂಚಿಯ ಹೆಸರೂ ಇದೆ.

ಅನಂತರ ಮಾರ್ಕಂಡೇಯ ಪುರಾಣದಲ್ಲಿ (೫೫ನೇ ಅಧ್ಯಾಯ-ಕೂರ್ಮ ನಿವೇಶ ಅಧ್ಯಾಯ) ಸಾಧು-ಸಂತರು ಮತ್ತು ತಪಸ್ವಿಗಳು ನೆಲೆಗೊಂಡಿದ್ದ ಸ್ಥಳಗಳಲ್ಲಿ ಕಂಚಿಯ ಪ್ರಸ್ತಾಪವಿದೆ.

ಇನ್ನು ಭಾಗವತ ಪುರಾಣದಲ್ಲಿ (ಬಲರಾಮ ತೀರ್ಥಯಾತ್ರಾ ಪ್ರಕರಣ ೧೦ನೇ ಸ್ಕಂದ ೭೧ನೇ ಅಧ್ಯಾಯ) ಕಂಚಿಯನ್ನು "ಕಾಮಕೋಟಿ ಪುರಿ" ಎಂದು ಬಣ್ಣಿಸಲಾಗಿದೆ. ಶ್ರೀಧರನ ಭಾವಾರ್ಥ ದೀಪಿಕಾ ಮತ್ತು ವಿಜಯಧ್ವಜ ಪದಾರ್ಥ ರತ್ನಾವಳಿಯಲ್ಲಿ 'ಕಾಮಕೋಷ್ಣಿ ಪುರಿ' ಕಾಮಕೋಷ್ಠಿ ಪುರಿ ಎಂಬ ಪ್ರಸ್ತಾಪವನ್ನು ಕಾಣಬಹುದು.

ವಲ್ಲಭಾಚಾರ್ಯರು ತಮ್ಮ ಸುಬೋಧಿನಿ ವ್ಯಾಖ್ಯಾನದಲ್ಲಿ ಕಾಮಕೋಟಿಪುರಿಯನ್ನು ಪ್ರಸ್ತಾಪಿಸಿದ್ದಾರೆ.

## ಶಕ್ತಿಪೀಠ

ತಂತ್ರಶಾಸ್ತ್ರದಲ್ಲಿ ಕಂಚಿ ಭಾರತದ ಅತಿ ಮುಖ್ಯ ಶಕ್ತಿಪೀಠಗಳಲ್ಲೊಂದಾಗಿದೆ. ಮಹಾಲಕ್ಷ್ಮಿ ತಂತ್ರದಲ್ಲಿ ೧೦೮ ಶಕ್ತಿಪೀಠಗಳ ಪೈಕಿ ಮೂರು ಅತ್ಯಂತ ಪ್ರಮುಖವಾದವುಗಳು. ಕಂಚಿಯ ಕಾಮರಾಜ ಪೀಠ, ಕಾಮರೂಪ ಪೀಠ ಮತ್ತು ಜಲಂಧರನಲ್ಲೊಂದಿದೆ. ಬಂಗಾಳಿ ವಿಶ್ವಕೋಶದ ಹಿಂದಿ ಆವೃತ್ತಿಯಲ್ಲಿ ಕಾಂಚೀಪುರ ಒಂದು ಪ್ರಾಚೀನ ಮಹಾತೀರ್ಥ...ಕಂಚಿ ಮಹಾ ಪೀಠ ಸ್ಥಾನವೂ ಹೌದು ಎಂದು ಬರೆಯಲಾಗಿದೆ.

ಕಾಂಚೀಪುರದ ಎಲ್ಲ ಹಿಂದುಗಳಿಗೂ ಅದರಲ್ಲಿಯೂ ಶೈವ, ವೈಷ್ಣವ ಮತ್ತು ಶಾಕ್ತರಿಗಂತೂ ಅತಿ ಪವಿತ್ರವಾದ ಸ್ಥಳ. ದೇವಸ್ಥಾನಗಳನ್ನು ಅತಿ ಹೆಚ್ಚಾಗಿ ಹೊಂದಿರುವ ನಗರಗಳಲ್ಲಿಯೂ ಒಂದೆನಿಸಿಕೊಂಡಿದೆ.

ಈ ಎಲ್ಲ ಅಂಶಗಳಿಗೆ ಕಳಸವಿಟ್ಟಂತೆ ವೇದವ್ಯಾಸರು, ಶಂಕರಭಗವತ್ಪಾದರು ಸುರೇಶ್ವರಾಚಾರ್ಯರು, ವಿದ್ಯಾರಣ್ಯರು ಕಾಂಚೀಪುರದೊಡನೆ ನಿಕಟ ಸಂಪರ್ಕ ಹೊಂದಿದ್ದರೆಂಬುದು ಅತಿ ಮಹತ್ವದ ಅಂಶ.

ಹೀಗೆ ಪೌರಾಣಿಕ ಯುಗದಿಂದಾರಂಭಿಸಿ ಚಾರಿತ್ರಿಕ ಯುಗದಲ್ಲೂ ಪ್ರಖ್ಯಾತಿಯ ಶಿಖರವನ್ನೇರಿ ಇಂದಿಗೂ ಅಷ್ಟೇ ಮಹತ್ವವನ್ನುಳಿಸಿಕೊಂಡು ಬಂದಿರುವ ಏಕೈಕ ಪುಣ್ಯಕ್ಷೇತ್ರ ಕಾಂಚೀಪುರ ಎಂದರೆ ಏನೂ ಅತಿಶಯೋಕ್ತಿಯಲ್ಲ.

## ಗೋಪುರಗಳ ನಗರಿ

ಕಾಂಚೀಪುರ ಇನ್ನೂ ಸಾಕಷ್ಟು ದೂರ ಇರುವಾಗಲೇ ಎತ್ತರದ ಗೋಪುರಗಳು ಯಾತ್ರಾರ್ಥಿಗಳ ಕಣ್ಣನ್ನ ಸೆಳೆಯುತ್ತವೆ. ಗೋಪುರದ



ಶ್ರೀ ಕಾಮಾಕ್ಷಿ ದೇವಾಲಯದ ಕಾಮಕೋಟಿ ವಿಮಾನ

ದರ್ಶನದಿಂದ ಮೈರೋಮಾಂಚನಗೊಂಡರೆ, ಮನಸ್ಸು ಆಹ್ಲಾದಭರಿತವಾಗುತ್ತದೆ. ಕ್ಷಣ ಕ್ಷಣಕ್ಕೂ ಕುತೂಹಲ ಕೆರಳುತ್ತದೆ.

ಕಾಂಚೀಪುರದಲ್ಲಿ ಒಂದು ಕಾಲಕ್ಕೆ ಸಾವಿರದೆಂಟು ಶಿವಾಲಯಗಳೂ ಸಾವಿರದೆಂಟು ವಿಷ್ಣು ಮಂದಿರಗಳೂ ಇದ್ದವಂತೆ, ಈಗ ಅಷ್ಟಿಲ್ಲವಾದರೂ ದಕ್ಷಿಣ ಭಾರತದ ಬೇರಾವುದೇ ಪಟ್ಟಣದಲ್ಲಿರುವದಕ್ಕಿಂತ ಅಧಿಕ ದೇವಾಲಯಗಳಿವೆ, ಹಾದಿಗೊಂದು ಬೀದಿಗೊಂದರಂತಿರುವ ವಿನಾಯಗಂ ಅಥವ ಅಮ್ಮನ್‌ಕೋಯಿಲ್‌ಗಳೂ ಸೇರಿ ಒಟ್ಟು ೩೬೦ ದೇವಾಲಯಗಳಿವೆ ಎಂಬುದು ಒಂದು ಅಂದಾಜು. ಈ ಪೈಕಿ ಒಟ್ಟು ೪೧ ದೊಡ್ಡ ದೇವಾಲಯಗಳು. ಅವುಗಳಲ್ಲಿ ೧೮ ಶಿವಾಲಯಗಳು ೧೮ ವಿಷ್ಣು ಮಂದಿರಗಳು.

## ದೇವಾಲಯಗಳು

ಈ ದೇವಾಲಯಗಳ ಪೈಕಿ ಏಕಾಂಬರನಾಥ, ಕಾಮಾಕೋಟ್ಯಮ್ಮ, ಕಾಮಾಕ್ಷಿ, ಕಚ್ಛಪೇಶ್ವರ, [illegible] ವೈಕುಂಠಪೆರುಮಾಳ, [illegible] ಪೆರುಮಾಳ, [illegible] ಅರುಳಾಳ ಪೆರುಮಾಳ, [illegible] ಪ್ರಣವೇಶ್ವರ, [illegible] ಕೈಲಾಸನಾಥ, [illegible] ಕಾಳೀಶ್ವರ, ಮುಕ್ತೀಶ್ವರ ಪಾಂಡವದೂತ ಪೆರುಮಾಳ, ಫಣಮಣೀಶ್ವರ, ಪುಣ್ಯ ಕೋಟೀಶ್ವರ, ಸರ್ವತೀರ್ಥೇಶ್ವರ, ಸೀತೇಶ್ವರ, ಚೊಕ್ಕನಾಥೇಶ್ವರ, ಚೊಕ್ಕೀಶ್ವರ, ತಿಯುತ್ತಂಗ ವಿಲಕ್ಕೊರಿ ಪೆರುಮಾಳ ತ್ರೈಲೋಕ್ಯನಾಥ, ಉಲಘಳಂಧ ಪೆರುಮಾಳ, ಯಥೋಕ್ತಕರಿ ವರದರಾಜ, ಪೆರುಂದೇವಿ, ಗುಹಾನರಸಿಂಹ, ಧನ್ವಂತರಿ, ಆಂಡಾಳ ಶ್ರೀರಾಮ ವಿಶ್ವಕ್ಸೇನ ಪೊಲ್ಲಾಪ್ಪುರಿ ವಿನಾಯಕ, ಅಷ್ಟಭುಜ ಪೆರುಮಾಳ, ಗಣಪತಿ ಸುಬ್ರಹ್ಮಣ್ಯ, ಹೀಗೆ ದೊಡ್ಡ ಪಟ್ಟಿಯೇ ಆಗುತ್ತದೆ.

ದೇವರನ್ನು ನಂಬುವವರು ಆತ ಸರ್ವಾಂತರ್ಯಾಮಿ ಭಕ್ತಜನ ಸೇವಕ ಎನ್ನುತ್ತಾರೆ. ಧರ್ಮಗ್ಲಾನಿಯಾದಾಗ ಸಂಭವಾಮಿ ಯುಗೇ ಯುಗೇ ಎಂದು ನಾನಾ ಅವತಾರಗಳನ್ನೆತ್ತಿ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪರಿಪಾಲಿಸುವ [illegible] ಭರವಸೆ ನೀಡಿದ್ದಾನೆ. ಹೀಗೆ ಅವತಾರವೆತ್ತಿದಾಗ ಅಸಂಖ್ಯಾತ ಪವಾಡಗಳನ್ನು ಮೆರೆದಿದ್ದಾನೆ. ಆತನ ಮಹತ್ತಿಗೆ ಭಕ್ತರು ಮಾರುಹೋಗಿದ್ದಾರೆ.

## ವಿಗ್ರಹಾರಾಧನೆ

ಕೃತ, ತ್ರೇತಾ ಮತ್ತು ದ್ವಾಪರ ಯುಗಗಳಲ್ಲಿ ದೇವತೆಗಳು ಪ್ರತ್ಯಕ್ಷರಾಗಿಯೇ ಭೂಲೋಕಕ್ಕೆ ಬರುತ್ತಿದ್ದರು. ಮನುಷ್ಯರೂ ಸಹ ಬರಿಗ[illegible]ನಿಂದಲೇ ನೋಡುತ್ತಿದ್ದರು. ಮತ್ತು ಸಾ[illegible]ತ್ಕರಿಸಿಕೊಳ್ಳುತ್ತಿದ್ದರು. ಆದರೆ ಕಲಿಯು[illegible]ದಲ್ಲಿ ಬರಿಗಣ್ಣಿಗೆ ದೇವತೆಗಳು ಕಾಣುವದಿ[illegible] ಹಾಗಾಗಿ ಅವರು ತಮಗಿಷ್ಟವಾದ ದೇವತೆಗಳ[illegible] ಸುಂದರ ಆಕಾರ ಮತ್ತು ಲಕ್ಷಣಗಳಿಂದ ಕೂಡಿ[illegible] ವಿಗ್ರಹಗಳಲ್ಲಿ ಆವಾಹಿಸಿ ಆರಾಧಿಸುವ ಪರಿಪಾ[illegible] ಬೆಳೆಸಿಕೊಂಡು ಬಂದಿದ್ದಾರೆ. ಈ ವಿಗ್ರಹಾರಾಧ[illegible] ಮೂಲಕ ತಮ್ಮ ಇಷ್ಟಾರ್ಥಗಳು ನೆರವೇರು[illegible] ದೆಂಬ ನಂಬಿಕೆಯನ್ನು ಹೊಂದಿದ್ದಾರೆ.

ನಿರಾಕಾರೇಷು ದೇವೇಶ ಚಿತ್ತಂನ ರಮ[illegible]
ಯತ[illegible]
ತಸ್ಮಾದಾಕಾರವತ್ಪೂರ್ವಂ ಲಕ್ಷಣಂ
ಕೃದಿಚಕ್ಷಣ[illegible]

ನಿರಾಕಾರವಾದ ಯಾವ ವಸ್ತುವನ್ನೇ ಆಗ[illegible] ಮನಸ್ಸಿಗೆ ತಂದುಕೊಂಡು ಧ್ಯಾನಿಸುವದು ಎ[illegible] ರಿಗೂ ಸಾಧ್ಯವಿಲ್ಲವಾದ್ದರಿಂದ ಆಕಾರಯುಕ್ತವಾ[illegible] ವಸ್ತುವನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು.

ಭಗವಂತನಿಗೆ ಪರಾ ಅಪರಾ ಎಂಬ ಎರಡ[illegible] ವಿಧದ ಶಕ್ತಿಯುಂಟು. ಪರಾ ಎಂಬುದನ್ನು ತಿ[illegible] ಯಲು ನಮಗೆ ಸಾಧ್ಯವಿಲ್ಲ, ದೃಗ್ಗೋಚರವ[illegible] ಅಲ್ಲ. ಅಪರಾ ಎನ್ನುವದು ಪುರುಷ ನಿರ್ಮಿ[illegible] ಅರ್ಚಾಮೂರ್ತಿ. ಇದು ಪಂಚಭೂತಾತ್ಮ[illegible] ವಾಗಿರುವದು.

ದೇವತೆಗಳನ್ನು ಆಲಯದಲ್ಲಿ ಪ್ರತಿಷ್ಠಾಪಿ[illegible] ಪೂಜಿಸುವ ಪದ್ಧತಿ ತ್ರೇತಾಯುಗದಲ್ಲಿ ಪ್ರಚಾರ[illegible] ಬಂದಿತೆಂದು ನಂಬಲಾಗಿದೆ. ದ್ವಾಪರದಲ್ಲಿ ಋ[illegible] ಮುನಿಗಳು ತಮ್ಮ ವಾಸಸ್ಥಾನಗಳಾದ ಆರ[illegible] ಗಳಲ್ಲಿ ಅಂಥ ದೇವ ಪ್ರತಿಷ್ಠೆ ಮಾಡುತ್ತಿದ್ದರ[illegible] ಸಿದ್ಧರು ನಿತ್ಯವೂ ಅಂತಹ ಪ್ರತಿಮೆಗಳಿಗೆ ಪೂ[illegible] ಸಲ್ಲಿಸಿ ಕೃತಾರ್ಥರಾಗುತ್ತಿದ್ದರು.

ಅನಂತರ ಕಲಿಯುಗದಲ್ಲಿ ಆಗಮೋ[illegible] ಪ್ರತಿಷ್ಠಾಪೂರ್ವಕ ದೇವ ಪೂಜಾದಿ ವಿಧಿಗ[illegible] ಪ್ರಚಾರಕ್ಕೆ ಬಂದವು.

## ನಿರ್ಮಾಣಾರ್ಹತೆ

ಕಲಿಯುಗದಲ್ಲಿ ಸ್ವರ್ಗವೆಂಬ ಪುರುಷಾರ್ಥ[illegible] ವನ್ನಪೇಕ್ಷಿಸುವ ರಾಜರು ನಗರಗಳನ್ನು ಕ[illegible] ದರು. ಹಾಗೆ ನಗರ ಕಟ್ಟುವ ಮುನ್ನ ದೇವಾಲ[illegible] ಗಳನ್ನು ನಿರ್ಮಿಸಿದರು. ಎಲ್ಲ ರಾಜರೂ ನ[illegible] ನಿರ್ಮಾಣಕ್ಕೆ ಅರ್ಹರಾಗಿರಲಿಲ್ಲ. ಯಾವ ರಾಜ[illegible] ಯುದ್ಧದಲ್ಲಿ ವಿಜಯಶಾಲಿಯಾಗುವನೋ ಅಂ[illegible] ದೊರೆ ಮಾತ್ರ ನಗರ ನಿರ್ಮಾಣಕ್ಕೆ ಅರ್ಹನಾ[illegible] ತ್ತಿದ್ದ.

ಆದರೆ ದುರ್ಗಾಸ್ಥಾನಗಳಿಗೆ ಮಾತ್ರ ಇಂ[illegible] ನಿರ್ಬಂಧವಿರಲಿಲ್ಲ. ಇವುಗಳನ್ನು ಎಲ್ಲ ರಾಜ[illegible] ನಿರ್ಮಿಸಬಹುದಿತ್ತು. ದೇವಾಲ[illegible]

ಳಿಸುವ ರಾಜನು ಪೂಜಾದಿಗಳಿಗೆ ಭೂಮಿ ನಾದಿಯಾಗಿ ಸರ್ವ ಸವಲತ್ತುಗಳನ್ನು ಒದಗಿ ಯೇ ದೇವಸ್ಥಾನಗಳ ಸ್ಥಾಪನಾವಿಧಿ ಪೂರೈಸ ೇಕಾಗುತ್ತಿತ್ತು. ಆದರೆ ಮನೆಯಲ್ಲಿ ಮಾಡ ಹುದಾದ ಪ್ರತಿಷ್ಠಾವಿಧಿಗೆ ಇಂತಹ ನಿರ್ಬಂಧ ಇಲ್ಲ. ಮನೆಯಲ್ಲಿ ಮಾಡುವ ಪೂಜೆ ಸ್ವಾರ್ಥ ಪೂಜೆ. ಆಲಯಗಳಲ್ಲಿ ಮಾಡುವ ಪೂಜೆ ಸರ್ವ ಲೋಕ ಕ್ಷೇಮಕರ ಎಂದು ನಂಬಲಾಗಿದೆ.

ದೇವಾಲಯಗಳಲ್ಲಿ ಪ್ರತಿಷ್ಠಾಪಿತಗೊಂಡ ದೇವತೆಯು ತಾನು ನೆಲೆಸಿದ ಸ್ಥಳವನ್ನಷ್ಟೇ ಅಲ್ಲದೆ ತನ್ನ ಬಳಿಗೆ ಬರುವ ಭಕ್ತಾದಿಗಳನ್ನೂ ಪುನೀತಗೊಳಿಸಿ ಅವರ ಸರ್ವ ಇಷ್ಟಾರ್ಥಗಳನ್ನು ಈಡೇರಿಸಿ ಕೊನೆಗೆ ಮೋಕ್ಷ ಕೊಡುವದೆಂಬ ನಂಬಿಕೆ ಪ್ರಬಲವಾಗತೊಡಗಿತು.

ಹೀಗಾಗಿ ದೇವಾಲಯಗಳು ಆಸ್ತಿಕ ಜನತೆಯ ಅವಿಭಾಜ್ಯ ಅಂಗವೆನಿಸಿ ಪೂಜಾಸ್ಥಾನಗಳಾಗ ತೊಡಗಿದವು. ಪೂಜೆ ಎಂದರೆ ನಮ್ಮ ಮನಸ್ಸನ್ನು ನಮ್ಮ ಯೋಜನೆಗಳನ್ನು ಪರಿಶುದ್ಧಗೊಳಿಸಿ ಕೊಳ್ಳುವದು ಎಂದರ್ಥ. ಅವರವರ ಭಾವಕ್ಕೆ ಅವರವರ ಭಕುತಿಗೆ ತಕ್ಕಂತೆ ಫಲಾಫಲಗಳು ದೊರೆಯುತ್ತವೆ. ನಮ್ಮ ತನು-ಮನ ಪರಿಶುದ್ಧ ವಾದರೆ ನಮ್ಮ ಪಾಪಗಳೆಲ್ಲ ಪರಿಹಾರ ವಾದಂತೆಯೇ. ಮಾನಸಿಕ ಪರಿಶುದ್ಧತೆಯೇ ಶಾಂತಿ. ಮಾಯೆಗೆ ಸಿಲುಕಿ ಮರುಳಾದ ಮನುಜ ದಾರಿ ಅರಿಯದೆ ಮಿಡುಕುತ್ತಿರುವಾಗ ಭಗವಂತ ಅವನನ್ನು ಮಾಯಾಪಾಶದಿಂದ ಹೊರಗೆಳೆಯು ತ್ತಾನೆ.

## ಸಪ್ತಮೋಕ್ಷ ಪುರಿಗಳಲ್ಲೊಂದು

ಇಂಥ ಜರಾಮರಣಗಳಿಂದ ಶಾಶ್ವತ ಮುಕ್ತಿ ಪಡೆಯಲು ಪವಿತ್ರ ಕ್ಷೇತ್ರಗಳ ದರ್ಶನ ದೇವತಾ ರಾಧನೆ ತೀರ್ಥಯಾತ್ರೆ ಅತ್ಯಗತ್ಯ ಎಂಬುದನ್ನು ನಮ್ಮ ಹಿರಿಯರು ಕಂಡುಕೊಂಡರು. ಹೀಗೆ ಮೋಕ್ಷ ಬಯಸುವವರಿಗಾಗಿ ನಮ್ಮ ದೇಶದಲ್ಲಿ ಅಯೋಧ್ಯಾ, ಮಥುರಾ, ಮಾಯಾ (ಹರಿ ದ್ವಾರ) ಕಾಶೀ, ಕಂಚೀ, ಅವಂತಿಕಾ (ಉಜ್ಜ ಯಿನಿ) ದ್ವಾರಕಾ ಎಂಬ ಏಳು ಮೋಕ್ಷಪುರಿ ಗಳಿವೆ. ಈ ಪೈಕಿ ಆರು ಮೋಕ್ಷಪುರಿಗಳು ಉತ್ತರ ಭಾರತದಲ್ಲಿದ್ದು ಕಾಂಚೀಪುರಿ ಮಾತ್ರ ದಕ್ಷಿಣ ಭಾರತದಲ್ಲಿದೆ. ಈ ದೃಷ್ಟಿಯಿಂದಲೂ ಕಾಂಚೀಪುರಕ್ಕೆ ಹೆಚ್ಚಿನ ಮಹತ್ವವಿದೆ.

ಸಾಮಾನ್ಯವಾಗಿ ದೇವಾಲಯಗಳನ್ನು ಷಡ್ವರ್ಗ ದೇವಾಲಯ, ಶೃಂಗದೇವಾಲಯ, ಜೈನ ದೇವಾ ಲಯ, ರೇಖಾಖಾರರ ಗೌರಿ ದೇವಾಲಯ, ಶಾಕ್ತ ದೇವಾಲಯ, ಮತ್ತು ಲುಥಾ ದೇವಾಲಯ ಗಳೆಂದು ವಿಭಾಗಿಸಲಾಗಿದೆ.

ದಕ್ಷಿಣ ಭಾರತದಲ್ಲಿ ನಾವು ಹೆಚ್ಚಾಗಿ ಷಡ್ವರ್ಗ ದೇವಾಲಯಗಳನ್ನು ಕಾಣುತ್ತೇವೆ. ಷಡ್ವರ್ಗ ದೇವಾಲಯಗಳೆಂದರೆ ಅಧಿಷ್ಠಾನ ಪ್ರಧಾನ ಶೈಲಿ.



ಕಂಚಿಯ ಅಧಿದೇವತೆ ಶ್ರೀ ಕಾಮಾಕ್ಷಿ

ಅಧಿಷ್ಠಾನದ ಮೇಲೆ ಸ್ತಂಭಗಳು, ಪ್ರಸ್ತರ, ಕಂಠ, ಶಿಖರ, ಮತ್ತು ಸ್ತೂಪಿ ಇವೇ ಆರು ವರ್ಗಗಳು. ಕಾಂಚೀಪುರದಲ್ಲಿ ನಾವು ಕಾಣುವ ದೇವಾಲಯಗಳೂ ಸಹ ಇದೇ ಗುಂಪಿಗೆ ಸೇರಿ ದವು.

## ಶಿಲ್ಪ ಸೌಂದರ್ಯದ ಆಗರ

ಕಾಂಚೀಪುರ ಕೇವಲ ಇಷ್ಟಕಾಮ್ಯಾರ್ಥ ಪೂರೈಕೆಗಾಗಿ ಬರುವವರಿಗಷ್ಟೇ ಅಲ್ಲ, ಶಿಲ್ಪ ಸೌಂದರ್ಯ ಸವಿಯಬಯಸುವ, ಪ್ರಕೃತಿಯ ರಮಣೀಯತೆಯನ್ನು ಕಾಣಬಯಸುವ ಗುಡಿ ಗೋಪುರಗಳ ವಿನ್ಯಾಸ ಅಭ್ಯಸಿಸುವವರಿಗೂ ಅತ್ಯಂತ ಪ್ರಶಸ್ತ ತಾಣ. ಇತಿಹಾಸ ತಿಳಿಯುವವ ರಿಗಂತೂ ಅಗೆದು ಮುಗಿಸಲಾಗದಷ್ಟು ವಿವರಗ ಳನ್ನು ತನ್ನ ಗರ್ಭದಲ್ಲಡಗಿಸಿಕೊಂಡಿರುವ ಗಣಿ.

'ನಗರೇಷು ಕಾಂಚಿ' ಎಂದು ಹೊಗಳಿದ ಕವಿ ಕಾಳಿದಾಸನಷ್ಟೇ, ಚೀನೀ ಯಾತ್ರಿಕ ಹ್ಯೂಯೆನ್ ತ್ಸಾಂಗನೂ (ಕ್ರಿ. ೬೪೨) ಕಂಚಿಯನ್ನು ಮೆಚ್ಚಿ ಕೊಂಡಿದ್ದಾನೆ. ಪುರುಷರಲ್ಲಿ ವಿಷ್ಣು, ಮಹಿಳೆ ಯರಲ್ಲಿ ರಂಭಾ, ಪುಷ್ಪಗಳಲ್ಲಿ ಜಾಜಿ, ಪಟ್ಟಣಗ ಳಲ್ಲಿ ಕಾಂಚೀಪುರ ಸುಂದರಾತಿ ಸುಂದರ ಎಂಬ ಬಣ್ಣನೆಯಲ್ಲಿ ಕಿಂಚಿತ್ತೂ ಉತ್ಪ್ರೇಕ್ಷೆ ಇಲ್ಲ.

ಕಾಂಚೀಪುರಕ್ಕೆ ಪುರಾಣಗಳಲ್ಲಿ ಸತ್ಯವ್ರತಕ್ಷೇತ್ರ ಎಂಬ ಹೆಸರಿತ್ತು. ಅಂದರೆ ಇಲ್ಲಿನ ಜನ ಸತ್ಯ ಪರಿಪಾಲಕರಾಗಿದ್ದರು ಮತ್ತು ಅದಕ್ಕಾಗಿ ಎಂಥ ತ್ಯಾಗಕ್ಕೂ ಸಿದ್ಧರಾಗಿದ್ದರು.

ಕಾಂಚೀಪುರ ಕೇವಲ ಪವಿತ್ರ ಯಾತ್ರಾಸ್ಥಳ ವಷ್ಟೇ ಆಗಿರಲಿಲ್ಲ. ನಾನಾ ಧರ್ಮಗಳ ಉಗಮ ಸ್ಥಾನವೂ ಸಾಹಿತ್ಯದ ಮಹತ್ತಿನ ಕೇಂದ್ರವೂ

ಆಗಿದೆ. ಇಲ್ಲಿ ಬಹಳ ಮುಂಚಿನಿಂದಲೂ ವಿಶಿಷ್ಟ ಶಿಕ್ಷಣ ಕೇಂದ್ರಗಳಿದ್ದ ಉದಾಹರಣೆಗಳಿವೆ. ಕ್ರಿಸ್ತಶಕೆಯ ಆದಿ ಶತಮಾನಗಳಿಂದಲೂ ಇಲ್ಲಿ ಘಟಿಕಗಳು ಅಥವಾ ಶಿಕ್ಷಣ ಕೇಂದ್ರಗಳು ಅಸ್ತಿತ್ವಕ್ಕೇರಿದ್ದವು. ಘಟಿಕ ಎಂದರೆ ಅತ್ಯಂತ ಆಳವಾದ ಜ್ಞಾನ ಪಡೆವ ಕೇಂದ್ರ ಎಂದು. ಕ್ರಿ. ಶ. ೩೪೫ ರಿಂದ ೩೭೦ರ ವರೆಗೆ ಆಳಿದ ಕದಂಬದೊರೆ ಮಯೂರ ಶರ್ಮ ಕಾಂಚೀಪುರದ ಘಟಿಕದಲ್ಲಿ ಅಧ್ಯಯನ ಮಾಡಿದ ದಾಖಲೆ ಇದೆ. ಚತುರ್ವೇದಾಧ್ಯಯನ ಮತ್ತು ಸಂಶೋಧನೆಗಳನ್ನು ಕಂಚಿಯಲ್ಲಿ ನಡೆಸಿದುದು ಪಲ್ಲವ ದೊರೆ ನಂದಿವರ್ಮನ ಕಾಲದ ತಾಮ್ರ ಶಾಸನಗಳಿಂದ ವ್ಯಕ್ತವಾಗುತ್ತದೆ. ಹೆಸರಾಂತ ಪಂಡಿತ ಭಾರವಿ ಕಂಚಿಯಲ್ಲಿ ನೆಲೆಸಿದ್ದರು. ಪಲ್ಲವ ರಾಜಸಿಂಹ ವಿಷ್ಣುವಿನ ಕೋರಿಕೆಯಂತೆ ಅವರು ಇಲ್ಲಿಯೇ ವಾಸಿಸುತ್ತಿದ್ದರು. ಇನ್ನೊಬ್ಬ ಪಲ್ಲವದೊರೆ ರಾಜಾಸಿಂಹ ಕಾವ್ಯಾದರ್ಶದ ಕರ್ತೃ ದಂಡಿಪಂಡಿತನಿಗೆ ಆಶ್ರಯವಿತ್ತಿದ್ದ. ಕಂಚಿಯು ಅತ್ಯಂತ ಪ್ರಾಚೀನ ಘಟಿಕ ರಾಷ್ಟ್ರದಲ್ಲೇ ಅತಿ ಪ್ರಖ್ಯಾತಿ ಪಡೆದಿತ್ತು.

ಕಾಂಚಿಪುರದಲ್ಲಿ ಬೌದ್ಧ, ಜೈನ, ಶೈವ ಮತ್ತು ವೈಷ್ಣವ ಮತಗಳು ಒಂದು ಕಾಲಕ್ಕೆ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದವು. ಇನ್ನು ಪಂಡಿತರ ಸಂಖ್ಯೆಯಂತೂ ಅಪಾರವಾಗಿತ್ತು. ಇಂದಿಗೂ ಸಹ ಕಾಂಚೀಪುರದ ಶಿವಾಸ್ಥಾನ ಬ್ರಹ್ಮಪುರೀಶ್ವರ ದೇವಸ್ಥಾನದ ಬಳಿ ಇರುವ ಮಹಾಸ್ವಾಮಿ ದೇವಾಲಯದಲ್ಲಿ ಮತ್ತು ವರದರಾಜಸ್ವಾಮಿ ವಿದ್ಯಾಪೀಠದಲ್ಲಿ ವೇದಾಧ್ಯಯನಪಾಠ ಶಾಲೆಗಳಿವೆ. ಏಳು ವರ್ಷಕಾಲ ಇಲ್ಲಿ ವೇದಾಧ್ಯಯನ ಮಾಡಬೇಕು. ಕರ್ನಾಟಕದ ೧೭ ವಿದ್ಯಾರ್ಥಿಗಳು (ಗುಲ್ಬರ್ಗದ ನಾಲ್ವರು ಮತ್ತು ದಕ್ಷಿಣ ಕನ್ನಡದ ೧೩) ವೇದಾಧ್ಯಯನ ನಿರತರಾಗಿದ್ದಾರೆ.

## ಕಂಚಿ ಪದದ ಉಗಮ

ಕಂಚಿ ಎಂಬ ಪದ 'ಕಚ್ಚಿ' ಎಂಬುದರಿಂದ ಬಂದಿತೆಂಬ ವಾದವಿದೆ. ತಮಿಳಿನಲ್ಲಿ 'ಕಚ್ಚಿ' ಎಂದರೆ. ದೃಶ್ಯ ಎಂದು ಅರ್ಥ. 'ಕಚ್ಚಿ' ಎಂಬುದು ಒಂದು ವಿಧದ ಮರ ಎಂದೂ ಹೇಳಲಾಗುತ್ತದೆ. ಈ ಮರಗಳು ಇಲ್ಲಿ ವಿಶೇಷವಾಗಿ ಬೆಳೆಯುತ್ತಿದ್ದುದರಿಂದಾಗಿ ಕಚ್ಚಿ ಎಂಬ ಹೆಸರು ಬಂದಿತೆಂದೂ ಕ್ರಮೇಣ ಇದೇ ಕಂಚಿ ಆಯಿತು ಎಂದೂ ಹೇಳಲಾಗುತ್ತದೆ.

'ಕ' ಎಂದರೆ ಬ್ರಹ್ಮ ಅಂಚಿ ಎಂದರೆ ಪೂಜೆ, ಪ್ರಾರ್ಥನೆ. ಅಂದರೆ ಬ್ರಹ್ಮ ಪೂಜಿಸಿದ ಸ್ಥಳ ಕಂಚಿ ಎಂದು ಪೌರಾಣಿಕ ಕಥೆ. ಬ್ರಹ್ಮ ಇಲ್ಲಿ ವರದರಾಜ ಮತ್ತು ಕಾಮಾಕ್ಷಿಯನ್ನು ಪೂಜಿಸಿ ಶಾಪ ವಿಮುಕ್ತನಾದ ಎಂಬ ಪ್ರತೀತಿ ಇದೆ.

ಕಂಚಿ ಎಂಬುದರ ಶಬ್ದಶಃ ಅರ್ಥ ಒಡ್ಯಾಣ ಅಥವಾ ಹೆಂಗಸರು ಧರಿಸುವ ಡಾಬು ಎಂದು. ತಮಿಳಿನಲ್ಲಿ ಕಂಚಿ ಎಂದರೆ ಸಾಮಾನ್ಯವಾಗಿ ಹೆಂಗಸರು ಸೊಂಟಕ್ಕೆ ಧರಿಸುವ ಒಡ್ಯಾಣವನ್ನು ಪರಸ್ಪರ ಸರಿಸುವ ಕೊಕ್ಕೆ ಎಂದು. ಈ ಕೊಕ್ಕೆ ಸರಿಯಾಗಿ ಮಹಿಳೆಯ ನಾಭಿಯನ್ನು ಸ್ಪರ್ಶಿಸುತ್ತಿರುತ್ತದೆ. ಬಹುಶಃ ಇದೇ ಅರ್ಥದಲ್ಲಿ ಕಾಂಚೀಪುರವನ್ನು ಭಾರತ ಮಾತೆಯ ನಾಭಿಸ್ಥಳ. ಎಂದು ಬಣ್ಣಿಸಲಾಗಿದೆ. ಶಂಖ ಚಕ್ರಗದಾಧಾರಿಯಾಗಿ ಅಭಯಮುದ್ರಾಂಕಿತ ಮಹಾವಿಷ್ಣು ಯಜ್ಞಕುಂಡದಿಂದ ಆವಿರ್ಭೂತನಾಗಿ ಬ್ರಹ್ಮನಿಗೆ ದರ್ಶನ ನೀಡಿದನೆಂಬುದು ಸ್ಥಳ ಪುರಾಣ.

## ಪಂಚಭೂತ ಸ್ಥಳ

ಸಕಲ ಚರಾಚರ ವಸ್ತುಗಳ ವ್ಯುತ್ಪತ್ತಿಗೆ ಕಾರಣೀಭೂತವೆನಿಸಿರುವ ಭೂಮಿ(ಪೃಥ್ವಿ) ನೀರು (ಅಪಾಹ), ಅಗ್ನಿ(ತೇಜಸ್), ಗಾಳಿ(ವಾಯು), ಮತ್ತು ಆಕಾಶವೆಂಬ ಪಂಚಭೂತಗಳು ನಮ್ಮ ನೆಲದ ಪಂಚ ಸ್ಥಳಗಳಲ್ಲಿ ನೆಲೆಗೊಂಡಿವೆ. ಅಂಥ ಪಂಚ ಸ್ಥಳಗಳಲ್ಲಿ ಕಂಚಿಯೂ ಒಂದಾಗಿದೆ.

ಪಂಚಭೂತಗಳಲ್ಲಿ ಎರಡು ಕಾಂಚಿಪುರದಲ್ಲಿವೆ. ಸಾಕ್ಷಾತ ಪರಾಶಿವಮೂರ್ತಿ ಇಲ್ಲಿ ಪೃಥ್ವೀ ಅಂಗವಾಗಿ ನೆಲೆಗೊಂಡು ಏಕಾಂಬರನಾಥನೆಂಬಭಿದಾನದಿಂದ ಪೂಜೆಗೊಳ್ಳುತ್ತಿದ್ದಾರೆ. ಕಾಮಾಕ್ಷಿ ಎಂಬ ಹೆಸರಿನಿಂದ ಬಿಲಾಕಾಶರೂಪವಾಗಿ ಜಗತ್ಕಾರಿಣಿ ತಾಯಿ ಪರಾಶಕ್ತಿ ಇಲ್ಲಿ ನೆಲೆಗೊಂಡಿದ್ದಾಳೆ.

ತಮಿಳುನಾಡಿನ ರಾಜಧಾನಿಯಾದ ಮದ್ರಾಸಿನ ವಾಯುವ್ಯಕ್ಕೆ ೭೬ ಕಿ. ಮೀಟರ ದೂರದಲ್ಲಿ ಸುಮಾರು ೧೧.೬ ಚದರ ಕಿ. ಮೀಟರ ವಿಸ್ತೀರ್ಣದಲ್ಲಿ ವ್ಯಾಪಿಸಿರುವ ಕಾಂಚೀಪುರದ ಜನಸಂಖ್ಯೆ ೧೯೮೧ ರ ಜನಗಣತಿ ಪ್ರಕಾರ ೧,೩೦,೯೨೬. ಸಮುದ್ರ ಮಟ್ಟಕ್ಕಿರುವ ಇಲ್ಲಿ ಪರಮಾವಧಿ ಉಷ್ಣಾಂಶ ಬೇಸಿಗೆಯಲ್ಲಿ ೩೭.೬ ಡಿಗ್ರಿ ಮತ್ತು ಚಳಿಗಾಲದಲ್ಲಿ ೨೮.೭ ಡಿಗ್ರಿ ಸೆಂಟಿಗ್ರೇಡ್. ಚಳಿಗಾಲದಲ್ಲಿ ಅನುಕ್ರಮವಾಗಿ ೨೧.೧ ಮತ್ತು ೧೯.೮ ಡಿಗ್ರಿ ಸೆಂಟಿಗ್ರೇಡ. ತಮಿಳು ತೆಲುಗು ಹಾಗೂ ಇಂಗ್ಲೀಷ ಇಲ್ಲಿನ ಆಡು ಭಾಷೆ. ಉತ್ತಮ ಬಸ್ ಮತ್ತು ರೈಲು ಸೌಕರ್ಯವಿದೆ. ಸ್ಥಳೀಯವಾಗಿ ಸೈಕಲ್ ರಿಕ್ಷಾ ತ್ರೀ ಸಾಮಾನ್ಯರ ಕೈಗೆಟುಕುವ ಬಾಡಿಗೆ ದರದಲ್ಲಿ ಸುಲಭಲಭ್ಯ, ಸಂಚಾರ ಸಾಧನ.



ಏಕಾಂಬರೇಶ್ವರ ದೇವಾಲಯದ ರಾಜಗೋಪುರದ ವಿಮಾನ



ಏಕಾಂಬರೇಶ್ವರ ದೇವಾಲಯದ ಮಾವಿನಮರ

ಕಂಚಿಯ ಸುತ್ತಮುತ್ತ ನಾಲ್ಕೂ ದಿಕ್ಕುಗಳಲ್ಲಿ ಸಮೀಪದಲ್ಲೆಲ್ಲೂ ದೊಡ್ಡ ಅಥವಾ ಸಣ್ಣ ಕಾಡುಗಳಾಗಲೀ ಬೆಟ್ಟಗುಡ್ಡಗಳಾಗಲೀ ಇಲ್ಲದಿರುವದೊಂದು ವಿಶೇಷ. ಅತ್ಯಂತ ಹತ್ತಿರವೆಂದರೆ ೧೬ ಕಿಲೋ ಮೀಟರ ದೂರದಲ್ಲಿರುವ ಶಿವರಾಮ ಬೆಟ್ಟ. ಕಂಚಿಯ ಮಣ್ಣು ಅತ್ಯಂತ ಕೆಳದರ್ಜೆಯದು. ಜಮ್ಮುಗಲ್ಲು ಅಥವಾ ಸುಣ್ಣಕಲ್ಲು ಮಿಶ್ರಿತ. ತೆಂಗು-ಹುಣಸೆ ಇಲ್ಲಿನ ಮುಖ್ಯ ಬೆಳೆ.

ವಿಶಾಲ ರಸ್ತೆಗಳನ್ನೊಳಗೊಂಡ ಈ ನಗರಿಯಲ್ಲಿ ಬಟ್ಟೆ ಉದ್ಯಮ ಪ್ರಧಾನವಾಗಿದೆ. ಕಂಚಿಯ ರೇಷ್ಮೆಸೀರೆ ಅತ್ಯಂತ ಹೆಸರುವಾಸಿ. ಕರ್ನಾಟಕದಲ್ಲಿ ಹುಟ್ಟುವ ಪಾಲಾರ ನದಿ ಮತ್ತು ಅದರ ಉಪನದಿ ವೇಗವತಿ, ಶಿವಕಂಚಿ ಮತ್ತು ವಿಷ್ಣುಕಂಚಿಯ ನಡುವೆ ಹರಿಯುತ್ತವೆ.

## ಕವಿಕಂಡ ಕಂಚಿ

ರವಿ ಕಾಣದುದನ್ನು ಕವಿ ಕಂಡ ಎಂಬಂತೆ, ಕಾಂಚಿಪುರವನ್ನು ಪ್ರಳಯ ಸಿಂಧು ಶಿವಪುರ, ಇಂದುಪುರ, ಮುಮ್ಮೂರ್ತಿವಾಸಂ, ಕಾಮಪೀಠಂ ಕಾಮಕೋಟ್ಟಂ, ತಪೋಮಯಂ ಸಕಲಸುದ್ಧಿ, ಕಣ್ಣಕಪ್ಪು, ತುಂದಿರಾಪುರ, ತಂಡಕಾಪುರ, ಸತ್ಯವ್ರತ ಕ್ಷೇತ್ರ ಎಂದೆಲ್ಲಾ ಕವಿಗಳು ಕರೆದಿದ್ದಾರೆ.

ಕ್ರಿಸ್ತಪೂರ್ವ ಎರಡನೆಯ ಶತಮಾನದಲ್ಲಿ ರಚಿಸಲಾದ ಪತಂಜಲಿಯ ಮಹಾಭಾಷ್ಯದಲ್ಲಿ ಕಂಚಿಯ ಪ್ರಸ್ತಾಪವಿದೆ. ಅನಂತರದ ಶ್ರೀಹರ್ಷ ತನ್ನ ನಿಷಧ ಚರಿತದಲ್ಲಿ ದಮಯಂತೀ ಸ್ವಯಂವರದಲ್ಲಿ ಕಾಂಚೀಪುರದ ಯುವರಾಜ ಉಪಸ್ಥಿತನಿದ್ದ ಎಂದು ಹೇಳುತ್ತಾನೆ. ಇನ್ನು ತಮಿಳು ಸಾಹಿತ್ಯದಲ್ಲಂತೂ ಕಂಚಿಯ ಪ್ರಸ್ತಾಪ ವಿಪುಲವಾಗಿದೆ. ತಮಿಳಿನ ಅತ್ಯಂತ ಶ್ರೇಷ್ಠವೆನಿಸಿದ ಐದು ಕಾವ್ಯಗಳಲ್ಲೊಂದಾದ ಮಣಿಮೇಕಲೈನಲ್ಲಿ ಸಮುದ್ರ ಕೊರೆತದಿಂದ ಪ್ರಾಚೀನ ಚೋಳರ ರಾಜಧಾನಿ ಪೂಹಕ ನಾಶಗೊಂಡ ಪರಿಣಾಮವಾಗಿ ಅಲ್ಲಿನ ಅಳಿದುಳಿದ ಜನ ಕಾಂಚೀಪುರಕ್ಕೆ ವಲಸೆ ಬಂದ ಪ್ರಸ್ತಾಪವಿದೆ.

ಇನ್ನು ಐತಿಹಾಸಿಕವಾಗಿ ಕಾಂಚೀಪುರ ಪಲ್ಲವರ ರಾಜಧಾನಿಯಾಗಿತ್ತೆಂಬುದು ಚರಿತ್ರೆಯಿಂದ ತಿಳಿಯುತ್ತದೆ. ಇನಕ್ಕೂ ಮುಂಚಿನ ಪ್ರಸ್ತಾಪವೆಂದರೆ ಅಶೋಕನ ಶಾಸನದಲ್ಲಿ. ಕಾಂಚೀಪುರವನ್ನೊಳಗೊಂಡ ತಮಿಳುನಾಡಿನ ಕುಕ್ಷಿಗೆಯ ಭಾಗವಾದ ತೊಂಡೈಮಂಡಲ ಪ್ರದೇಶವನ್ನು ಸತ್ಯಪುತ್ರ ಭೂಮಿ ಎಂದು ಬಣ್ಣಿಸಲಾಗಿದೆ. ಇನ್ನು ಸಮುದ್ರಗುಪ್ತ ತನ್ನ ದಕ್ಷಿಣ ದಂಡಯಾತ್ರೆ ಕಾಲಕ್ಕೆ ಕಂಚಿಯ ವರೆಗೂ ಹೋಗಿದ್ದುದಾಗಿ ಮತ್ತು ತನ್ನ ಚೈತ್ರಯಾತ್ರೆಯ ಕುರುಹಾಗಿ ವಿಜಯಸ್ತಂಭ ನೆಟ್ಟಿದುದಾಗಿಯೂ ದಾಖಲಿಸಿದ್ದಾನೆ.

ಅನಂತರ ಪಲ್ಲವರು ಚೋಳವಂಶಜ ಒಂದನೇ ರಾಜೇಂದ್ರ ಆಂಧ್ರ ಚೋಳರೂ ಆಳ್ವಿಕೆ ನಡೆಸಿದ ಪ್ರಸ್ತಾಪವಿದೆ.

## ಪಲ್ಲವರ ಆಳ್ವಿಕೆ

ಪಲ್ಲವರ ಬಗ್ಗೆ ದೊರೆತಿರುವ ಮೊದಲ ಹೆಸರೆಂದರೆ ಸ್ಕಾಂದವರ್ಮ. ಈತ ಯುವರಾಜನಾಗಿದ್ದ ಎನ್ನಲಾಗಿದೆ. ಆದರೆ ಇವನೇ ಪಲ್ಲವರ ಮೊದಲ ರಾಜನಲ್ಲ ಎಂಬುದೂ ಇದರಿಂದ ಖಚಿತವಾಗುತ್ತದೆ. ಈತ ಅಗ್ನಿಸ್ತೋಮ, ವಾಜಪೇಯ ಮತ್ತು ಅಶ್ವಮೇಧಯಾಗಗಳನ್ನು ಮಾಡಿದನೆಂದು ಚರಿತ್ರೆಯಿಂದ ತಿಳಿಯುತ್ತದೆ. ಉತ್ತರದಲ್ಲಿ ಕೃಷ್ಣಾನದಿಯ ವರೆಗೂ ಪಶ್ಚಿಮದಲ್ಲಿ ಅರಬ್ಬೀ ಸಮುದ್ರದವರೆಗೂ ತನ್ನ ರಾಜ್ಯ ವಿಸ್ತರಿಸಿದ್ದ.

ದೇವಾಲಯ ನಿರ್ಮಾಣ ಪಲ್ಲವರಿಗೆ ತುಂಬ ಖುಷಿ ಕೊಡುವ ವಿಷಯ. ಪಿರಮಿಡ್ ಆಕಾರದ ಗೋಪುರ ಹೊತ್ತ ಗರ್ಭಗುಡಿ ಹೊರಭಾಗದಲ್ಲಿ ಮಂಟಪ ನಿರ್ಮಾಣ ಸುತ್ತಲೂ ಚಚ್ಚೌಕಾಕಾರದ ಗೋಡೆಗಳಿಂದಾವೃತವಾದ ವಿಶಾಲ ಪ್ರಾಕಾರ ಇವರ ಶೈಲಿ.

ಶಿಲ್ಪ ಕಲಾ ಸೌಂದರ್ಯಕ್ಕೆ ಅತ್ಯಧಿಕ ಪ್ರಾಶಸ್ತ್ಯ ನೀಡಿದ್ದ ಪಲ್ಲವರು ತಮ್ಮ ಆಸಕ್ತಿಯನ್ನು ಈ ದೇವಾಲಯಗಳಲ್ಲಿ ಹೊರಗೆಡಹಿದ್ದಾರೆ. ವೈಕುಂಠ ಪೆರುಮಾಳ್ ದೇವಾಲಯದಲ್ಲಂತೂ ಪಲ್ಲವರ ಶಿಲ್ಪಕಲಾ ಪ್ರೌಢಿಮೆ ಪರಾಕಾಷ್ಠೆ ಮುಟ್ಟಿದೆ. ಕಗ್ಗಲ್ಲು ಶಿಲ್ಪಿಯ ಅಗತ್ಯಕ್ಕೆ ತಕ್ಕಂತೆ ಮಣಿದಿದೆ. "ಶಿಲೆಯಲ್ಲವೀ ಗುಡಿಯು ಕಲೆಯ ಬಲೆಯು" ಎಂಬ ಕವಿವಾಣಿ ಸಾಕಾರ ರೂಪು ತಳೆದಿದೆ ಈ ದೇವಾಲಯಗಳಲ್ಲಿ. ದೇವಾಲಯ ಸಿಂಹ ಸ್ತಂಭಗಳ ಮೇಲೆ ಪಲ್ಲವ ಇತಿಹಾಸದ ಪ್ರಮುಖ ಘಟನೆಗಳನ್ನು ಒಡಮೂಡಿಸಲಾಗಿದೆ.

ತಮಿಳುನಾಡಿನ ಚಂಗಲ್ಪೇಟೆ ಜಿಲ್ಲೆಯ ಮುಖ್ಯ ಕೇಂದ್ರವೆನಿಸಿರುವ ಕಾಂಚೀಪುರ ರಾಜಕೀಯ, ಧಾರ್ಮಿಕ, ಹಾಗೂ ಶೈಕ್ಷಣಿಕವಾಗಿ ಅತಿ ಪ್ರಾಚೀನ. ಅಷ್ಟೇ ಪ್ರಮುಖ ಕೇಂದ್ರವೂ ಹೌದು. ಇಲ್ಲಿ ನಾವು ನಾಲ್ಕನೇ ಶತಮಾನದಿಂದ ಹದಿನಾರನೇ ಶತಮಾನದವರೆಗೆ ವಿವಿಧ ಕಾಲ ಹಾಗೂ ಆಳ್ವಿಕೆಗಳ ಸುಮಾರು ೬೫೦ ಶಾಸನಗಳನ್ನು ಕಾಣಬಹುದು. ಇವುಗಳಲ್ಲಿ ಪಲ್ಲವರ ಶಾಸನಗಳು ಕೇವಲ ೧೨. ಕನ್ನಡ ರಪಾರಮಾಗಿವೆ

ಚಿನ್ನ ಕೃಷ್ಣ ದೇವರಾಯ ಕೆತ್ತಿಸಿದ ೧೫೫೮ ಶಾಸನ ಗಳಿವೆ.

## ಸ್ವರ್ಣ ತುಲಾಭಾರ

ಚೋಳರೂ, ರಾಷ್ಟ್ರಕೂಟರೂ ಏಳನೇ ಶತಮಾನದ ಕಾಕತೀಯರೂ. ಕಾಂಚೀಪುರದ ಜತೆ ಸಂಪರ್ಕ ಹೊಂದಿದ್ದ ಇತಿಹಾಸವಿದೆ. ಹೊಯ್ಸಳರೂ ರಾಷ್ಟ್ರಕೂಟ ಸಾಮ್ರಾಜ್ಯ ಸ್ಥಾಪಕ ದಂತಿದುರ್ಗ ಸಹ ಕಂಚಿಯೊಡನೆ ಸಂಪರ್ಕ ಹೊಂದಿದ್ದ. ಹೊಯ್ಸಳೇಶ್ವರ ವಿಷ್ಣುವರ್ಧನ ಇಲ್ಲಿ ಸುವರ್ಣ ತುಲಾಭಾರ ಮಾಡಿಕೊಂಡನಂತೆ.

ಸರ್ವಮತ ಸಮನ್ವಯ ಕೇಂದ್ರವಾಗಿರುವ ಕಾಂಚೀಪುರದಲ್ಲಿ ಶೈವ ಮತ್ತು ವೈಷ್ಣವ ಮತದ ಪ್ರಾಬಲ್ಯ ಬೆಳೆಯುವವರೆಗೂ ಬೌದ್ಧ ಹಾಗೂ ಜೈನ ಮತಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದವು. ಮೂರನೇ ಶತಮಾನದಲ್ಲಿ ಇಲ್ಲಿ ಕ್ರೈಸ್ತಮತ ಪ್ರಚಾರದಲ್ಲಿತ್ತೆಂದು ನಂಬಲಾಗಿದೆ.

ಕಾಂಚೀಪುರ ಹಲವಾರು ಸಾಧು ಸಂತರು ಮತ್ತು ಪಂಡಿತವರೇಣ್ಯರ ಜನ್ಮ-ಆವಾಸ ಸ್ಥಾನವೂ ಆಗಿದೆ. ಇಲ್ಲಿ ಹುಟ್ಟುವದು–ದೇಹ ತ್ಯಾಗಮಾಡುವದು ಒಂದು ಪುಣ್ಯವಿಶೇಷವೆಂದು ಭಾವಿಸಲಾಗುತ್ತದೆ.

ವೈಷ್ಣವ ಪಂಥದ ಆಳ್ವಾರಗಳಲ್ಲಿ ಪ್ರಥಮರೆನಿಸಿದ ಪೊಯ್ಗೈಯ್ ಆಳ್ವಾರ ಜನಿಸಿದ್ದು ಈ ಪುಣ್ಯ ಕ್ಷೇತ್ರದಲ್ಲಿ. ಸೆಕ್ಕಿಯ ನಯನಾರ್ ತಿರುಕುರಿಪ್ಪುತೊಂಡನಯನಾರ ಮುಂತಾದವರು ಇಲ್ಲೇ ಇಹಲೋಕ ತ್ಯಾಗಮಾಡಿ ಕೈವಲ್ಯವನ್ನೈದಿದರು.

ಅದ್ವೈತಮತಸ್ಥಾಪನಾಚಾರ್ಯ ಆದಿಶಂಕರ, ವಿಶಿಷ್ಟಾದ್ವೈತಮತ ಸಂಸ್ಥಾಪಕ ರಾಮಾನುಜಾಚಾರ್ಯ, ನಿಗಮನಾಥ ಮಹಾದೇಶಿಕರ ಮುಂತಾದ ಮಹಾಪುರುಷರು ತಮ್ಮ ಪಾದ ಧೂಳಿಯಿಂದ ಈ ಕ್ಷೇತ್ರದ ಮಹತ್ವವನ್ನು ಹಲವು ಪಟ್ಟು ಹೆಚ್ಚಿಸಿದ್ದಾರೆ.

## ಪವಾಡಗಳ ರಂಗಸ್ಥಳ

ತಿರುಕಾಚನಂಬಿ, ತಿರುಕಾಜಯಪ್ಪ ಶಿವಾಚಾರ್ಯರಂತಹ ಭಗವದ್ಭಕ್ತ ಶಿಖಾಮಣಿಗಳು ಇಲ್ಲಿ ನೆಲೆಸಿ ಕೃತಾರ್ಥರಾದರು. ಮಹಾ ಚೇತನಗಳ ಭಕ್ತಿ ಪರಾಕಾಷ್ಠೆಗೆ ಮನಸೋತ ಭಗವಂತ ಈ ಪವಿತ್ರ ಕ್ಷೇತ್ರದಲ್ಲಿ ನಾನಾ ಪವಾಡಗಳನ್ನು ಮೆರೆದಿದ್ದಾನೆ, ಎಂದೇ ಕಾಂಚೀಪುರವನ್ನು "ಪರಮಾತ್ಮನ ಪವಾಡಗಳ ರಂಗಸ್ಥಳ" ಎಂದು ಬಣ್ಣಿಸಲಾಗಿದೆ.

ಕಾಂಚೀಪುರದಲ್ಲಿ ಎರಡು ಬಾರಿ ಹೊನ್ನಿನ ಮಳೆ ಸುರಿದ ಪೌರಾಣಿಕ ಘಟನೆ ಉಲ್ಲೇಖವಿದೆ. ಒಮ್ಮೆ ಕಾಮಾಕ್ಷಿಯೂ ಮಗದೊಮ್ಮೆ ವರದರಾಜಸ್ವಾಮಿಯು ಪತ್ನಿ ಪೆರುಮಾಳ ದೇವಿಯೂ ಹೊನ್ನಿನ ಮಳೆಗರೆದರೆಂಬುದು ಸ್ಥಳ ಪುರಾಣ.

ಕಾಂಚೀ ಪುರದ ಎಲ್ಲ ದೇವಸ್ಥಾನಗಳ ಗೋಪುರಗಳೂ ಕಾಮಾಕ್ಷಿ ದೇವಾಲಯಕ್ಕೆ ಅಭಿಮುಖವಾಗಿಯೇ ಇರುವದೊಂದು ವಿಶೇಷ. ಇಲ್ಲಿ ನಡೆಯುವ ಯಾವುದೇ ಉತ್ಸವ ಪ್ರಮುಖವಾಗಿ ಕಾಮಾಕ್ಷಿ ದೇವಾಲಯದ ಸುತ್ತ ಇರುವ ನಾಲ್ಕು ಬೀದಿಗಳಲ್ಲಿ ಮಾತ್ರ ನಡೆಯುತ್ತದೆ ಮತ್ತು ಉತ್ಸವ ಮೂರ್ತಿಗಳೂ ಕಾಮಾಕ್ಷಿ ದೇವಾಲಯಕ್ಕೆ ಪ್ರದಕ್ಷಿಣೆ ಹಾಕಿಯೇ ಮೂಲಸ್ಥಾನ ಸೇರಿಕೊಳ್ಳುತ್ತವೆ.

## ಕಾಂಚೀಪುರದ ವೈಶಿಷ್ಟ್ಯ

ಕಾಂಚೀಪುರದಲ್ಲಿ ಎದ್ದುಕಾಣುವ ಮತ್ತೊಂದು ಮುಖ್ಯ ಸಂಗತಿಯೆಂದರೆ ಯಾವ ಶಿವಾಲಯದಲ್ಲಿಯೂ ದೇವಿಗಾಗಿ ಪ್ರತ್ಯೇಕ ಗರ್ಭಗುಡಿ ಇಲ್ಲದಿರುವದು.

ಭಾರತದ ಬೇರಾವುದೇ ಶಿವಾಲಯದಲ್ಲೂ ದೇವಿಗಾಗಿ ಪ್ರತ್ಯೇಕ ಗರ್ಭಗೃಹ ಇಲ್ಲದಿರುವ ಉದಾಹರಣೆ ಇಲ್ಲ. ಇಲ್ಲಿ ಮಾತ್ರ ಈ ವೈಶಿಷ್ಟ್ಯ. ಕಂಚಿಯಲ್ಲಿ ನಾನಾ ಹೆಸರುಗಳಿಂದ ಪ್ರತಿಷ್ಠೆಗೊಂಡಿರುವ ಎಲ್ಲ ಶಿವಾಲಯಗಳಿಗೂ ಕಾಮಾಕ್ಷಿಯೇ ಅಧಿಷ್ಠಾನ ದೇವತೆ. ಕಾಮಾಕ್ಷಿ ಸಮೇತ ಎಂದು ಹೇಳಿಯೇ ಆಯಾ ದೇವರುಗಳ ಹೆಸರು ಹೇಳುವ ಪರಿಪಾಠ ಇಲ್ಲಿ.

> ನಾ ಅನ್ಯೋಸ್ತಿ ವಿಗ್ರಹಾಃ
> ದೇವ್ಯಾಃ ಕಾಂಚ್ಯಾಂ
> ತನ್ಮೂಲ ವಿಗ್ರಹಾಃ ।

ಅಂದರೆ ಕಂಚಿಯಲ್ಲಿರುವ ಯಾವ ಶಿವಾಲಯದಲ್ಲೂ ದೇವಿಗಾಗಿ ಪ್ರತ್ಯೇಕ ಗರ್ಭಗುಡಿ ಇಲ್ಲ. ಕಾಂಚೀಪುರದ ಎಲ್ಲೆಯನ್ನು ದಾಟಿಹೋದರೆ ದೇವಿಯ ವಿಗ್ರಹವಿರುವ ಗರ್ಭಗುಡಿಗಳನ್ನು ಕಾಣಬಹುದು.

ಕಾಮಾಕ್ಷಿ ವಿಲಾಸದಲ್ಲಿ ಈ ವೈಶಿಷ್ಟ್ಯಕ್ಕೆ ಕಾರಣವನ್ನು ವಿವರಿಸಲಾಗಿದೆ. ಕಾಮ(ಮನ್ಮಥ)ನ ತಪಸ್ಸಿಗೆ ಮೆಚ್ಚಿದ ಕಾಮಾಕ್ಷಿಯು ಭೂಮಿಯ ಮೇಲಿನ ಎಲ್ಲ ದೇವಸ್ಥಾನಗಳು ಹಾಗೂ ಕೈಲಾಸದಲ್ಲಿದ್ದ ತನ್ನ ಪೂರ್ಣ [illegible] ತಾನೇ



ವರದರಾಜ ಸ್ವಾಮಿ ಪುಣ್ಯಕೋಟಿ



ಬಂಗಾರದ ಹಲ್ಲಿ ಬೆಳ್ಳಿ ಹಲ್ಲಿ

ಆವಾಹಿಸಿಕೊಂಡು ಬಿಲಾಕಾಶರೂಪಿಯಾದಳು. ಅನಂತರ ಬ್ರಹ್ಮದೇವನ ಪ್ರಾರ್ಥನೆಗೆ ಓಗೊಟ್ಟು ಕಂಚಿಯನ್ನು ಹೊರತುಪಡಿಸಿ ಉಳಿದ ದೇವಾಲಯಗಳಲ್ಲಿನ ತನ್ನ ಪ್ರತಿಮೆಯಲ್ಲಿ ಆವಾಹಿತಳಾಗುವದಾಗಿ ಭರವಸೆಯಿತ್ತಳು. ಅಂದಿನಿಂದ ಕಂಚಿಯನ್ನು ಶಿವಜಿತಕ್ಷೇತ್ರ ಎಂದು ಕರೆಯಲಾಗುತ್ತಿದೆ.

ಕಾಂಚೀಪುರವನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಶಿವಕಂಚಿ ಅಥವಾ ದೊಡ್ಡ ಕಂಚಿ. ವಿಷ್ಣುಕಂಚಿ ಅಥವಾ ಸಣ್ಣಕಂಚಿ ಹಾಗೂ ಜಿನಕಂಚಿ. ಶಿವಕಂಚಿಯಲ್ಲಿ ಶೈವ ದೇವಾಲಯಗಳೂ ಮತ್ತು ಶೈವ ಸಂಪ್ರದಾಯದವರೂ ಅಧಿಕವಾಗಿ ನೆಲೆಸಿದ್ದರೆ ವಿಷ್ಣುಕಂಚಿಯಲ್ಲಿ ವಿಷ್ಣುಮಂದಿರಗಳೇ ಹೆಚ್ಚು ವೈಷ್ಣವರೂ ಅಧಿಕ ಸಂಖ್ಯೆಯಲ್ಲಿದ್ದಾರೆ. ಇನ್ನು ಜಿನಕಂಚಿಯಲ್ಲಿ ಜೈನಪಂಥದವರು ಅಧಿಕ.

ಹೀಗೆ ಪೌರಾಣಿಕ ಕಾಲದಿಂದಾರಂಭಿಸಿ ಚಾರಿತ್ರಿಕಯುಗದಲ್ಲೂ ಅದ್ವಿತೀಯ ಪ್ರಸಿದ್ಧಿಹೊಂದಿ ಇಂದಿಗೂ ಲಕ್ಷಾಂತರ ಜನರನ್ನು ತನ್ನತ್ತ ಸೆಳೆಯುತ್ತಿರುವ ಕಾಂಚೀಪುರದ ಕೀರ್ತಿ ಅಜರಾಮರ.

## ಕಾಮಾಕ್ಷಿ ದೇವಾಲಯ

ಕಾಂಚೀಪುರದ ಅಧಿದೇವತೆಯಾದ ಕಾಮಾಕ್ಷಿ ದೇವಾಲಯದ ನಾಲ್ಕು ದಿಕ್ಕಿನಲ್ಲೂ ನಾಲ್ಕು ದೊಡ್ಡ ಗೋಪುರಗಳಿವೆ. ಸುತ್ತಲೂ ಎತ್ತರದ ಗೋಡೆಗಳಿಂದಾವೃತ್ತವಾಗಿರುವ ಈ ದೇವಾಲಯದ ರಾಜಗೋಪುರ ಕಾಮಕೋಟಿಯನ್ನು ದಾಟಿ ಒಳಪ್ರಾಕಾರಕ್ಕೆ ಹೋದರೆ ನಾವು ಹೋಗುತ್ತಿರುವ ದಿಕ್ಕು ಯಾವುದು ಎಂಬುದೇ ತಿಳಿಯದಂತಾಗುತ್ತದೆ.

ಈ ದೇವಾಲಯದಲ್ಲಿ ಗಾಯತ್ರಿಮಂತ್ರದ ೨೪ ಅಕ್ಷರಗಳ ದ್ಯೋತಕವಾಗಿ ೨೪ ಕಂಬಗಳ ಗಾಯತ್ರಿ ಮಂಟಪ ನಿರ್ಮಿಸಲಾಗಿದೆ. ಕಾಮಾಕ್ಷಿ ದೇವಾಲಯದ ಮುಂದೆ ಶ್ರೀಚಕ್ರವನ್ನು ಶಂಕರಾಚಾರ್ಯರು ಸ್ಥಾಪಿಸಿದ್ದರು. ಕಾಮಾಕ್ಷಿ ದೇವಾಲಯ ಶ್ರೀಚಕ್ರ ರೂಪದಲ್ಲೇ ನಿರ್ಮಿತವಾಗಿದೆ. ಕಂಚೀ ನಗರವೂ ಸಹ ಶ್ರೀ ಚಕ್ರದ ಮಾದರಿಯಲ್ಲೇ ಇದೆ.

ತಪಸ್ ಕಾಮಾಕ್ಷಿ, ಬಿಲಾಕಾಶ, ಅರೂಪ ಲಕ್ಷ್ಮೀ ವಾರಾಹಿ, ಸಂತಾನ ಸ್ತಂಭ, ಅರ್ಧನಾರೀಶ್ವರ ರೂಪ, ಲಕ್ಷ್ಮಿ, ಅನ್ನಪೂರ್ಣ, ಧರ್ಮಸಾಸ್ತಾ, ಆದಿಶಂಕರ, ದುರ್ವಾಸ ಮುನಿ, ಉತ್ಸವ ಕಾಮಾಕ್ಷಿ, ತುಂಡೀರ ಮಹಾರಾಜ, ಮಹಾಸರಸ್ವತಿ, ಧರ್ಮಸ್ತಂಭ ಕಾಳಿ, ಕಾಲಭೈರವ, ದುರ್ಗಿ, ಕಾಳಿ, ವಿಶ್ವನಾಥ, ಪಂಚಗಂಗೆ, ಭೂತ ವಿಗ್ರಹ, ಪೆರುಮಾಳ. ಅಗಸ್ತ್ಯ ಮತ್ತು ಹಯಗ್ರೀವ ಹೀಗೆ ೨೫ ನೋಡಬೇಕಾದ ಗರ್ಭಗುಡಿಗಳಿವೆ.

'ಕಾ' ಎಂದರೆ ಸರಸ್ವತಿ 'ಮಾ' ಎಂದರೆ ಲಕ್ಷ್ಮಿ. ಲಕ್ಷ್ಮಿ ಸರಸ್ವತಿಯರಿಬ್ಬರೂ ಕಾಮಾ-ಕ್ಷಿಯ ನೇತ್ರಗಳ ಮುಖಾಂತರ ಭಕ್ತ ಜನರನ್ನುದ್ಧರಿಸುತ್ತಾರೆಂಬುದು ನಂಬಿಕೆ. ಲಕ್ಷ್ಮೀ ಸರಸ್ವತಿಯರಿಬ್ಬರು ಕಾಮಾಕ್ಷಿಯ ಎರಡೂ ಪಾರ್ಶ್ವಗಳಲ್ಲಿ ನಿಂತು ಚಾಮರ ಸೇವೆ ಮಾಡುತ್ತಿದ್ದಾರೆ, ಕೇವಲ ದೃಷ್ಟಿಹರಿಸುವ ಮಾತ್ರದಿಂದ ಭಕ್ತ ಜನರ ಇಷ್ಟಾರ್ಥಗಳನ್ನು ಈಡೇರಿಸುತ್ತಾಳೆಂಬುದು ಸ್ಥಳಪುರಾಣ.

ಧರ್ಮ, ಅರ್ಥ, ಕಾಮಗಳೆಂಬ ಇಹಲೋಕದ ಮೂರು ಪುರುಷಾರ್ಥಗಳ ಜೊತೆಗೆ ಮೋಕ್ಷವೆಂಬ ನಾಲ್ಕನೆಯದನ್ನೂ ಅನುಗ್ರಹಿಸಿ ಸಂರಕ್ಷಿಸುತ್ತಾಳೆಂಬುದು ಪ್ರತೀತಿ. ಕೃತಯುಗದಲ್ಲಿ ದೂರ್ವಾಸರು ೨೦೦೦ ಶ್ಲೋಕಗಳಿಂದಲೂ ತ್ರೇತಾಯುಗದಲ್ಲಿ ಪರಶುರಾಮನು ೫೦೦ ಶ್ಲೋಕಗಳಿಂದಲೂ ಮೂಕ ಶಂಕರರು ೫೦೦ ಶ್ಲೋಕಗಳಿಂದಲೂ ತಾಯಿ ಕಾಮಾಕ್ಷಿಯನ್ನು ಸ್ತುತಿಸಿದ್ದಾರೆ. ತ್ಯಾಗರಾಜರು, ಮುತ್ತುಸ್ವಾಮಿದೀಕ್ಷಿತರು ಶಾಮಾಶಾಸ್ತ್ರಿಗಳು ಕಾಮಾಕ್ಷಿಯ ಮೇಲೆ ಹಲವಾರು ಕೃತಿಗಳನ್ನು ರಚಿಸಿದ್ದಾರೆ.

ಕಾಮಾಕ್ಷಿ ದೇವಾಲಯ ವಿಶಾಲತೆಯ ದೃಷ್ಟಿಯಲ್ಲಿ ಸಣ್ಣದೆನಿಸಿದರೂ ಇದು ನಮ್ಮ ನೆಲದ ಅತಿ ಪುರಾತನ ದೇವಾಲಯಗಳಲ್ಲೊಂದು. ಈ ಕಾಮಾಕ್ಷಿಯನ್ನು ಲಲಿತಾಸಹಸ್ರ ನಾಮಾವಳಿ, ಲಲಿತಾ ಷ್ಟೋತ್ತರಶತನಾಮಾವಳಿ ಮತ್ತು ಲಲಿತಾ ತ್ರಿಶತಿಯಲ್ಲಿ "ಕಾಮಕೋಟಿ ಮಹಾಪೀಠ ಪದ್ಮಸ್ಥ" "ಕಾಮಕೋಟಿ ನಿಲಯ" "ಮತ್ತು ಕಾಮಕೋಟಿಕಾ" ಎಂದಿರುವದನ್ನು ನೋಡಿದರೆ ಕಂಚಿಯು ಕಾಮಾಕ್ಷಿದೇವಿಯ ಕಾಮಕೋಟಿ ಪೀಠ ಎಂಬುದು ವೇದ್ಯವಾಗುತ್ತದೆ.

ಗರ್ಭಗೃಹದಲ್ಲಿರುವ ದೇವಿ ಕಾಮಾಕ್ಷಿ ರಾಜರಾಜೇಶ್ವರಿಯಾಗಿ ರಾರಾಜಿಸುತ್ತಿದ್ದಾಳೆ. ಈ ವಿಗ್ರಹದ ಪಕ್ಕದಲ್ಲಿ ಇನ್ನೊಂದು ವಿಗ್ರಹವಿದೆ. ಇದೇ ತಪಸ್ ಕಾಮಾಕ್ಷಿ ದೇವಿ ಒಂಟಿಕಾಲಲ್ಲಿ ನಿಂತು ಇನ್ನೊಂದು ಪಾದವನ್ನು ನಾಭಿಯ ಬಳಿ ಕೇಂದ್ರೀಕರಿಸಿರುವ ಭಂಗಿಯಲ್ಲಿ ತಪೋಮುದ್ರೆಯಲ್ಲಿದ್ದಾಳೆ.

ದೇವಾಲಯದ ಪೂರ್ವದ್ವಾರದಲ್ಲಿ ಹಯಗ್ರೀವ ಮತ್ತು ಅಗಸ್ತ್ಯರ ವಿಗ್ರಹಗಳು ಎದುರುಬದುರಾಗಿವೆ ಹಯಗ್ರೀವರು ಅಗಸ್ತ್ಯರಿಗೆ ಲಲಿತೋಪಾಖ್ಯಾನದ ಮುಖಾಂತರ ದೇವಿಯ ಪೂಜಾ ವಿಧಾನ ರಹಸ್ಯವನ್ನು ಬೋಧಿಸುತ್ತಿರುವ ಭಂಗಿ ಇದೆಂಬುದು ಸ್ಥಳ ಪುರಾಣ.

ದೇವಿ ಪರಾಶಕ್ತಿಯು ಕಂಚಿಯಲ್ಲಿ ಕಾಮಾಕ್ಷಿ ಸ್ವರೂಪ ತಳೆದಿದ್ದಾಳೆಂದು ಭಾವಿಸಬಹುದು.

ಕಾಮಾಕ್ಷಿ ಗರ್ಭಗೃಹದಲ್ಲಿ ಕಾಮಾಕ್ಷಿ ವಿಗ್ರಹದ ಎಡಭಾಗದ ಗೋಡೆಯೊಳಗೆ ಪುಟ್ಟ ಗೂಡಿನಲ್ಲಿ ಅರೂಪ ಲಕ್ಷ್ಮೀಯ ವಿಗ್ರಹವಿದೆ. ದೇವಿ ಕಾಮಾಕ್ಷಿಗೆ ಅರ್ಚನೆ ಮಾಡಿದ ಕುಂಕುಮ ಪ್ರಸಾದ ಸ್ವೀಕರಿಸುವ ಭಕ್ತರು ಅದನ್ನು ಅರೂಪ ಲಕ್ಷ್ಮಿಯ ಮೇಲೆ ಹಾಕಿದ ನಂತರವೇ ಆ ಪ್ರಸಾದವನ್ನು ಹಣೆಯ ಮೇಲೆ ಧರಿಸಬೇಕು.

ಅರೂಪ ಲಕ್ಷ್ಮಿಯ ಬಗ್ಗೆ ಸ್ಥಳ ಪುರಾಣ ಇಂತಿದೆ. ಒಮ್ಮೆ ಮಹಾಲಕ್ಷ್ಮಿ ವಿಷ್ಣುವಿನ ಸೌಂದರ್ಯದ ಬಗ್ಗೆ ತಮಾಷೆ ಮಾಡಿದಳು. ಇದರಿಂದ ಕೋಪಗೊಂಡ ವಿಷ್ಣು ಲಕ್ಷ್ಮಿಯ ಮುಖವನ್ನು ವಿರೂಪಗೊಳಿಸಿದ ತನ್ನ ತಪ್ಪಿಗಾಗಿ ಪಶ್ಚಾತ್ತಾಪ ಪಟ್ಟ ಲಕ್ಷ್ಮಿಯನ್ನು ಸಮಾಧಾನಿಸಿದ ವಿಷ್ಣು ಭೂಲೋಕಕ್ಕೆ ಹೋಗಿ ಕಾಮಾಕ್ಷಿ

ದೇವಾಲಯದಲ್ಲಿ ತಪಸ್ಸು ಮಾಡಿದರೆ ಶಾಪ ವಿಮೋಚನೆಯಾಗಿ ಮೊದಲಿನ ರೂಪ ಬರುತ್ತದೆಂದ. ಲಕ್ಷ್ಮಿ ಹಾಗೆಯೇ ಮಾಡಿದಳು. ಕಾಮಾಕ್ಷಿ ಅವಳನ್ನಾಶೀರ್ವದಿಸಿ ಅಂಜನ ಕಾಮಾಕ್ಷಿ ಎಂದು ಕರೆದಳು. ಕಾಮಾಕ್ಷಿಯ ಪ್ರಸಾದದಿಂದ ಅರೂಪ ಲಕ್ಷ್ಮಿ ಸುರೂಪ ಪಡೆದಳೆಂಬುದು ಸ್ಥಳ ಪುರಾಣ

### ಸಂತಾನ ಸ್ತಂಭ

ಕಾಮಾಕ್ಷಿ ವಿಗ್ರಹದ ಎಡಭಾಗದಲ್ಲಿದೆ ಮಕ್ಕಳಾಗದವರು ತಾಯಿಗೆ ಹರಸಿಕೊಂಡು ಈ ಸ್ತಂಭ ಪ್ರದಕ್ಷಿಣೆ ಮಾಡಿದರೆ ಮಕ್ಕಳಾಗುವ ದೆಂಬ ನಂಬಿಕೆ ಪ್ರಚಲಿತವಿದೆ.

ದೇವಿ ಕಾಮಾಕ್ಷಿಯ ಪದತಲದಲ್ಲಿ ಶ್ರೀಚಕ್ರ ವಿನ್ಯಾ[illegible]ಾಗಿದೆ. ಈ ಶ್ರೀಚಕ್ರವನ್ನು ಆದಿ ಶಂಕರರು ಪ್ರತಿಷ್ಠಾ[illegible]ರು. ಶ್ರೀಚಕ್ರ ಎಂದರೆ ಲಲಿತಾ ತ್ರಿಪುರ ಸುಂ[illegible] ಇನ್ನೊಂದು ಹೆಸರು. ಶ್ರೀ ವಿದ್ಯಾಸ್ವರೂಪಿಣಿ ಎಂದೂ ಕರೆಯುಲಾಗುತ್ತದೆ. ಶ್ರೀಚಕ್ರಕ್ಕೆ ಪೂಜೆ ಮಾಡಿದರೆ ಪರಾಶಕ್ತಿಗೆ ಪೂಜೆ ಮಾಡಿದಷ್ಟೇ ಪುಣ್ಯ. ಅಷ್ಟೋತ್ತರ ಸಹಸ್ರನಾಮ ಮುಂತಾದ ಅರ್ಚನೆಗಳು ನಡೆಯುವದೇ ಶ್ರೀಚಕ್ರಕ್ಕೆ. ಶ್ರೀಚಕ್ರದ ಸುತ್ತಲೂ ಲಕ್ಷ್ಮಿಯು ಅಷ್ಟರೂಪಗಳಲ್ಲಿ ಕಂಗೊಳಿಸುತ್ತಿದ್ದಾಳೆ

### ಏಕಾಂಬರೇಶ್ವರ

ಈ ದೇವಾಲಯ ಮೂರನೇ ಕಲೋತ್ತುಂಗ ಮತ್ತು ಕೃಷ್ಣದೇವರಾಯನ ಕಾಲದಲ್ಲಿ ಅತ್ಯಂತ ಪ್ರಬುದ್ಧ ಮಾನಕ್ಕೆ ಬಂದಿತು.

ಶಿವ ಇಲ್ಲಿ ಪಂಚಭೂತಾತ್ಮಗಳಲ್ಲೊಂದಾದ ಪೃಥ್ವೀ ಲಿಂಗವಾಗಿ ಆವಿರ್ಭವಿಸಿದ್ದಾನೆ. ಒಮ್ಮೆ ಕೈಲಾಸದಲ್ಲಿ ಶಿವ ಪಾರ್ವತಿಯರು ವಿನೋದ ದಿಂದ ಕಾಲ ಕಳೆಯುತ್ತಿರುವಾಗ ಪಾರ್ವತಿ ತಮಾಷೆಗಾಗಿ ಶಿವನ ಎರಡೂ ಕಣ್ಣು ಮುಚ್ಚಿದ ಳಂತೆ. ಆಗ ತ್ರಿಲೋಕಗಳೂ ಗಾಡಾಂಧಕಾರದಲ್ಲಿ ಮುಳುಗಿದವನಂತೆ. ಈ ಪಾಪ ಪರಿಹಾರಾರ್ಥ ವಾಗಿ ಪಾರ್ವತಿ ಭೂಲೋಕಕ್ಕೆ ಬಂದು ಕಂಚಿ ಯಲ್ಲಿ ತಪಸ್ಸನ್ನಾಚರಿಸಿ ವಿಷ್ಣುವಿನಿಂದ ಶಿವನ ನ್ನೊಲಿಸಿಕೊಂಡಳಂತೆ.

### ಮರಳಿನ ಲಿಂಗ

ಮರಳಿನಲ್ಲಿ ಶಿವಲಿಂಗ ಮಾಡಿ ಪೂಜಿಸುತ್ತಿದ್ದ ಳಂತೆ. ಶಿವ ಇವಳ ತಪಸ್ಸನ್ನು ಪರೀಕ್ಷಿಸ ಲೋಸುಗ ತನ್ನ ಜಟೆಯಲ್ಲಿದ್ದ ಗಂಗೆಯನ್ನು ಪ್ರವಹಿಸಿದನಂತೆ. ಭೋರ್ಗರೆದು ಬರುವ ಪ್ರವಾಹವನ್ನು ಕಂಡು ಮರಳು ಲಿಂಗವನ್ನು ತೋಳ್ತೆಕ್ಕೆಯಲ್ಲಿ ತಬ್ಬಿಕೊಂಡು ಏ ಕಂಪಾ ಎಂದು ಕೂಗಿದಳಂತೆ.

ಆ ಹೊತ್ತಿಗೆ ವಿಷ್ಣು ವಿಶ್ವರೂಪ ಧರಿಸಿ ಪ್ರವಾಹಕ್ಕೆ ಅಡ್ಡಲಾಗಿ ಮಲಗಿ ಪ್ರವಾಹ ತಡೆದ ನಂತೆ. ಈ ಪ್ರವಾಹಕ್ಕೆ ಕಂಪಾ ಎಂದೇ ಹೆಸರು ಬಂದಿತು. ಈಗ ಅಲ್ಲಿ ನೀರು ಹರಿಯುತ್ತಿಲ್ಲ ವಾದರೂ ದೇವಾಲಯದ ಪ್ರಾಕಾರದಲ್ಲಿದ್ದ ಕಲ್ಯಾಣಿಯೊಂದಿದ್ದು ಅದನ್ನೇ ಕಂಪಾತೀರ್ಥ ಎನ್ನುತ್ತಾರೆ. ಈಗಲೂ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದಾಳೆ ಎಂದು ಪ್ರತೀತಿ.

ಈ ಶಿವಾಲಯದಲ್ಲಿರುವ ಲಿಂಗಕ್ಕೆ ದ್ರವಾಭಿ ಷೇಕವಿಲ್ಲ. ಈ ದೇವಾಲಯದ ಒಳಪ್ರಾಕಾರದ ಸುತ್ತಲೂ ಸಾವಿರದೆಂಟು ಲಿಂಗಗಳಿವೆ. ೬೩ ಜನ ನಯಮನಾರರ ಉತ್ಸವ ಮೂರ್ತಿಗಳನ್ನು ಕಾಣಬಹುದು.

ಶೈವ ವೈಷ್ಣವ ಪಂಥಗಳ ಸಮಗ್ರತೆಯ ದ್ಯೋತಕವೋ ಎಂಬಂತೆ ವಿಷ್ಣುವಿನ ಗರ್ಭಗುಡಿ ಇದೆ. ನೀಲತ್ತಿಂಗಳ್ ತುಂಡ ಪೆರುಮಾಳ ಎಂಬ ಹೆಸರಿನ ಈ ದೇವಾಲಯ ವೈಷ್ಣವ ಸಂಪ್ರದಾ ಯದ ೧೦೮ ಮುಖ್ಯ ದೇವಾಲಯಗಳಲ್ಲೊಂದು.

ಇಲ್ಲಿ ಏಕಾಂಬರೇಶ್ವರನ ಕಲ್ಯಾಣ ಮಹೋ ತ್ಸವ ಸಂದರ್ಭದಲ್ಲಿ ಜಾತಿ, ಮತ, ಪಂಥ ಪಂಗಡ ಭೇದವಿಲ್ಲದೆ ಸಾಮೂಹಿಕ ವಿವಾಹ ಗಳಾಗುವದುಂಟು.



ಶಿವಗಂಗೈ ತೀರ್ಥ

## ಸಾವಿರ ಕಂಬಗಳ ಮಂಟಪ

ಈ ಮಂಟಪ ಏಕಾಂಬರನಾಥಸ್ವಾಮಿ ದೇವಾಲಯದಲ್ಲಿದೆ. ಈ ಮಂಟಪದಲ್ಲಿ ಒಟ್ಟು ಸಾವಿರ ಕಂಬಗಳಿದ್ದು ಬಹುತೇಕ ಕಲ್ಲಿನಿಂದ ಕೆತ್ತಿದ ಏಕಶಿಲಾಸ್ತಂಭಗಳು. ನಾಲ್ಕು ಸಾಲುಗಳಲ್ಲಿರುವ ಕಂಬಗಳು ಮಾತ್ರ ಗಾರೆಯಿಂದ ಕಟ್ಟಿದವುಗಳಾಗಿವೆ. ಸೂಕ್ತ ಮೇಲ್ವಿಚಾರಣೆಯಿಲ್ಲದೆ ಶಿಥಿಲಾವಸ್ಥೆಯಲ್ಲಿರುವ ಈ ಮಂಟಪ ದನಕರುಗಳ ವಿಶ್ರಾಂತಿಧಾಮವಾಗಿದೆ. ಶೈವ ದೇವಸ್ಥಾನಗಳಲ್ಲಿ ಶುಚಿತ್ವಕ್ಕೆ ಸ್ವಲ್ಪ ಕೊರತೆ ಎಂಬ ವಾದಕ್ಕೆ ನೈಜ ಉದಾಹರಣೆ ಈ ಮಂಟಪ.

## ಸಹಸ್ರ ಲಿಂಗೇಶ್ವರ

ಸಹಸ್ರ ಲಿಂಗೇಶ್ವರ ಏಕಾಂಬರನಾಥ ದೇವಾಲಯದಲ್ಲಿದೆ. ಒಟ್ಟು ಸಾವಿರದೆಂಟು ಲಿಂಗಗಳು ಸೇರಿ ಸಹಸ್ರಲಿಂಗೇಶ್ವರ ಎಂಬ ಅಭಿದಾನ ಪಡೆದಿದೆ. ಈ ಲಿಂಗಕ್ಕೆ ಮಾಡಿಸುವ ಒಂದು ಪೂಜೆಯಿಂದ ಸಾವಿರದೆಂಟು ಲಿಂಗಗಳಿಗೆ ಪೂಜೆಮಾಡಿಸಿದಷ್ಟು ಪುಣ್ಯ ಬರುತ್ತದೆ ಎಂಬುದು ಸ್ಥಳಪುರಾಣ.

## ಮಾವಿನ ಮರ

ಇದು ಅತ್ಯಂತ ಪವಿತ್ರವಾದ ಮಾವಿನ ಮರ. ಶಿವನ ಕಣ್ಣುಗಳನ್ನು ಮುಚ್ಚಿ ಜಗತ್ತನ್ನೆಲ್ಲಾ ಗಾಢಾಂಧಕಾರ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಕಾಂಚಿಪುರಕ್ಕೆ ಬಂದ ಪಾರ್ವತಿ ಮರಳು ಲಿಂಗ ಸ್ಥಾಪಿಸಿದ್ದು ಈ ಮರದಡಿಯಲ್ಲೇ ಎಂದು ಸ್ಥಳ ಪುರಾಣ ಹೇಳುತ್ತದೆ.

ಸುಮಾರು ೩೫೦೦ ವರ್ಷಗಳಷ್ಟು ಹಳೆಯದೆನ್ನಲಾದ ಈ ಮರದಲ್ಲಿ ನಾಲ್ಕು ಕೊಂಬೆಗಳಿದ್ದು ಇವನ್ನು ನಾಲ್ಕು ವೇದಗಳಿಗೆ ಹೋಲಿಸಲಾಗಿದೆ.

ಈ ಮಾವಿನಮರದ ನಾಲ್ಕು ಕೊಂಬೆಗಳಲ್ಲಿ ಬಿಡುವ ಮಾವಿನ ಹಣ್ಣು ನಾಲ್ಕು ಬಗೆಯ ರುಚಿ ಹೊಂದಿರುತ್ತದೆಂಬುದು ಪ್ರತೀತಿ. ಈ ಹಣ್ಣು ತಿನ್ನುವ ಮಹಿಳೆಯರು ಪುತ್ರ ಸಂತಾನ ಪಡೆಯುವರೆಂಬ ಪ್ರತೀತಿಯಿದೆ. ಅನೇಕರು ಮಕ್ಕಳನ್ನು ಪಡೆದ ದೃಷ್ಟಾಂತಗಳೂ ಇವೆ.

## ಬಂಗಾರದ ಹಲ್ಲಿ

ಬಂಗಾರದ ಹಲ್ಲಿ-ಬೆಳ್ಳಿ ಹಲ್ಲಿ ಮತ್ತು ಸೂರ್ಯ ಚಂದ್ರರ ಪ್ರತಿಕೃತಿಯನ್ನು ವಿಷ್ಣು ಕಂಚಿಯಲ್ಲಿರುವ ವರದರಾಜ ಸ್ವಾಮಿ ದೇವಾಲಯದ ಒಳಗೆ ಪ್ರವೇಶಿಸಿದ ನಂತರ ಒಳಪ್ರಾಕಾರದ ಮೇಲ್ಛಾವಣಿಯ ಒಳಭಾಗದಲ್ಲಿ ಕಾಣಬಹುದಾಗಿದೆ.

ಆಶುವಂತನೆಂಬ ರಾಜನ ಇಬ್ಬರು ಪುತ್ರರು ಶಿಕ್ಷಣ ಪಡೆಯಲು ದೂರ್ವಾಸ ಮುನಿಗಳ ಬಳಿ ಇದ್ದರು. ಒಮ್ಮೆ ಪೂಜೆಗಾಗಿ ನದಿಯಿಂದ ನೀರು ತರುತ್ತಿದ್ದಾಗ ಈ ಹುಡುಗರಿಬ್ಬರೂ ನೀರಿನ ಪಾತ್ರೆಯನ್ನು ಮರದಡಿ ಇಟ್ಟು ಆಟವಾಡಿದರು. ಈ ಸಂದರ್ಭದಲ್ಲಿ ನೀರಿನೊಳಕ್ಕೆ ಹಲ್ಲಿಯೊಂದು ಬಿದ್ದಿತು. ಆಟ ಮುಗಿಸಿದ ಹುಡುಗರು ನೀರನ್ನು ತಂದು ಪೂಜೆಗೆ ಅಣಿ ಮಾಡಿದರು.

ನೀರಿನಲ್ಲಿ ಬಿದ್ದಿದ್ದ ಹಲ್ಲಿಯನ್ನು ಕಂಡ ತಕ್ಷಣ ಕೋಪಾವಿಷ್ಟರಾದ ದೂರ್ವಾಸ ಮುನಿಗಳು ಅವರಿಬ್ಬರಿಗೂ ಹಲ್ಲಿಗಳಾಗುವಂತೆ ಶಾಪವಿತ್ತರು. ಭಯಗ್ರಸ್ಥರಾದ ಬಾಲಕರು ಶಾಪ ವಿಮೋಚನೆಗಾಗಿ ಯಾಚಿಸಿದಾಗ ಅನಂತ ತೀರ್ಥದಲ್ಲಿ ಮಿಂದು ವರದರಾಜನ ದರ್ಶನ ಮಾಡಿದರೆ ಮೊದಲ ರೂಪ ಬರುತ್ತದೆಂಬ ಅಭಿಶಾಪವನ್ನಿತ್ತರು. ಆ ಬಾಲಕರು ಹಾಗೆಯೇ ಮಾಡಿ ವಿಶಾಪಹೊಂದಿದರು ಎಂಬುದು ಸ್ಥಳ ಪುರಾಣ.

ಸರಸ್ವತಿಯಿಂದ ಶಾಪಗ್ರಸ್ತನಾದ ದೇವೇಂದ್ರ ವರದರಾಜ ಸ್ವಾಮಿಯ ಕೃಪೆಯಿಂದಾಗಿ ಶಾಪ ವಿಮುಕ್ತನಾಗುತ್ತಾನೆ. ಈ ಸಂದರ್ಭದಲ್ಲಿ ಸಾಕ್ಷಿಯಾಗಿ ಎರಡು ಹಲ್ಲಿಗಳಿದ್ದವಂತೆ. ಅವೂ ಸಹ ವರದರಾಜ ಸ್ವಾಮಿಯ ಕೃಪೆಯಿಂದ ಶಾಪ ವಿಮುಕ್ತಿ ಹೊಂದಿದವಂತೆ.

ಶಾಪವಿಮುಕ್ತನಾದ ದೇವೇಂದ್ರ ಚಿನ್ನ ಮತ್ತು ಬೆಳ್ಳಿಯ ಎರಡು ಹಲ್ಲಿಗಳನ್ನು ಮಾಡಿಸಿ ಒಳ ಪ್ರಾಕಾರದಲ್ಲಿಡಿಸಿದನಂತೆ.

ಹಲ್ಲಿ ಮೈಮೇಲೆ ಬೀಳುವದರಿಂದುಂಟಾಗುವ ದೋಷ ಈ ಬಂಗಾರ ಮತ್ತು ಬೆಳ್ಳಿ ಹಲ್ಲಿಗಳ ಸ್ಪರ್ಶದಿಂದ ಪರಿಹಾರವಾಗುತ್ತದೆ ಎಂಬ ನಂಬಿಕೆಯಿದೆ. ಅಲ್ಲಿಗೆ ಹೋಗಿಬಂದವರಿಗೆ ನಮಸ್ಕಾರ ಮಾಡಿದರೂ ಈ ದೋಷ ಪರಿಹಾರವಾಗುತ್ತದೆಂಬ ಪ್ರತೀತಿ ಚಾಲ್ತಿಯಲ್ಲಿದೆ.

## ಶಿವಗಂಗೈ ತೀರ್ಥ

ಏಕಾಂಬರನಾಥ ದೇವಾಲಯದ ಒಳಪ್ರಾಕಾರದಲ್ಲಿರುವ ದೊಡ್ಡ ಕಲ್ಯಾಣಿಯೇಶಿವಗಂಗೈತೀರ್ಥ. ರಾಜದ್ವಾರದಿಂದ ಕಲ್ಯಾಣಿಗೆ ಹಾಯ್ದು ಹೋಗುವ ಮಧ್ಯೆ ಮಂಟಪವೊಂದಿದೆ. ಇಲ್ಲಿ ಒಂದು ಪುಟ್ಟ ಗರ್ಭಗುಡಿ ಇದೆ. ತಿರುಕ್ಕಾಚಿ ಮಾಯನಂ ಎಂದು ಹೆಸರು. ಇದರ ಮುಂದೆ ಪ್ರಖ್ಯಾತದಾನಿ ಪಚ್ಚೆಯಪ್ಪ ಮೊದಲಿಯಾರ ಅವರ ಹೆಸರಿನ ಮಂಟಪವೊಂದಿದೆ. ಎತ್ತರದ ಮೇಲ್ಛಾವಣಿ ದೊಡ್ಡ ದೊಡ್ಡ ಕಂಬಗಳು ಶಿಲ್ಪಕಲಾ ನೈಪುಣ್ಯದ ಆಗರ. ಇಲ್ಲಿನ ಎದುರುಬದುರಾಗಿರುವ ಎರಡು ಕಂಬಗಳಲ್ಲಿ ಪಾರ್ವತಿ ಶಿವನ ಕಣ್ಣು ಮುಚ್ಚಿರುವ ಮತ್ತು ತಪಸ್ಸಿನ ನಂತರ ಶಿವ ಪಾರ್ವತಿಯರ ವಿವಾಹದ ದೃಶ್ಯಗಳನ್ನು ಕೆತ್ತಲಾಗಿದೆ.

## ವರದರಾಜಸ್ವಾಮಿ

ವಿಷ್ಣುಕಂಚಿ ಅಥವಾ ಸಣ್ಣ ಕಂಚೀಪುರದಲ್ಲಿರುವ ಐದು ಪ್ರಾಕಾರಗಳ ಈ ದೇವಾಲಯದ ಪೂರ್ವ ಗೋಪುರ ವಿಜಯ ನಗರ ಕಾಲದಲ್ಲಿ ನಿರ್ಮಿಸಲ್ಪಟ್ಟಿತು. ೫೦ ಮೀಟರು ಎತ್ತರದ ಈ ಗೋಪುರಕ್ಕೆ ೯ ಅಂತಸ್ತುಗಳಿದ್ದು ಮೇಲೆ ೧೧ ಕಲಶಗಳಿವೆ. ಇಡೀ ದೇವಾಲಯದ ಅತಿ ವಿಸ್ತಾರದ ಭಾಗವಿದು. ಈ ದೇವಾಲಯದ ಪುಣ್ಯಕೋಟಿ ವಿಮಾನಕ್ಕೆ ೧೫೧೮ರಲ್ಲಿ ಕೃಷ್ಣದೇವರಾಯನು ಚಿನ್ನದ ತಗಡು ಹೊದಿಸಿದನೆಂದು ತಿಳಿದು ಬರುತ್ತದೆ.

ಮೂರನೇ ಪ್ರಾಕಾರದಲ್ಲಿರುವ ಪೆರುಂದೇವಿ ಅಮ್ಮನವರ ಗುಡಿಯು ಮಹಾಮಂಟಪ ಉಯ್ಯಾಲೆ ಮಂಟಪಗಳು, ನಾಲ್ಕನೆಯ ಪ್ರಾಕಾರದಲ್ಲಿರುವ ಮನವಾಳ ಮಹಾಮುನಿ ತಿರುಮಳಿಶೈ ಆಳ್ವಾರ ಗುಡಿಗಳು, ವಾಹನ ಮಂಟಪ, ತುಲಾಭಾರ ಮಂಟಪ, ಲಾಯದ ಮಂಟಪಗಳು, ಚಕ್ರತಾಳ್ವಾರ (ಸುದರ್ಶನ) ಗುಡಿಯ ಎರಡೂ ಪಕ್ಕಗಳಲ್ಲಿರುವ ಮಂಟಪಗಳು ಕಲ್ಯಾಣ ಮಂಟಪಗಳೆಲ್ಲವು ವಿಜಯ ನಗರದ ಕಾಲದ ಅರಸರು ಮತ್ತು ಅವರ ಸಮಕಾಲೀನರು ಕಟ್ಟಿಸಿದವುಗಳು.

ಪೆರಂದೇವಿ ಅಮ್ಮನವರ ಗುಡಿ ಮೂಲತಃ ೧೩ನೇ ಶತಮಾನದ್ದೆನ್ನಲಾಗಿದೆ. ಆದರೆ ಈಗಿರುವ ಗುಡಿ ಕ್ರಿ. ಶ. ೧೪೮೦ರ ಸುಮಾರಿಗೆ ನಿರ್ಮಿಸಿದ್ದು. ತಳ ಪಾಯದಿಂದ ಗೋಡೆಯ ಮೇಲೆ ಮುಂದಕ್ಕೆ ಚಾಚಿಕೊಂಡಂತಿರುವ ಕಪೋತದವರೆಗೂ ಗೋಡೆಗಳಲ್ಲಿ ವೈವಿಧ್ಯಪೂರ್ಣವಾದ ಸುಂದರ ಅಲಂಕರಣ ವಿನ್ಯಾಸಗಳಿವೆ.

ಕೃತ ಯುಗದಲ್ಲಿ ಬ್ರಹ್ಮ ಅಶ್ವಮೇಧಯಾಗ ಮಾಡಲು ಕಾಂಚೀಪುರವನ್ನು ಆರಿಸಿಕೊಂಡ. ಪತ್ನಿ ಸರಸ್ವತಿಯನ್ನು ಬ್ರಹ್ಮಲೋಕದಲ್ಲೇ ಬಿಟ್ಟು ಗಾಯತ್ರಿ-ಸಾವಿತ್ರಿಯೊಡನೆ ಭೂಲೋಕಕ್ಕಾಗಮಿಸಿದ. ಇದರಿಂದ ಅಪಮಾನಿತಳಾದ ಸರಸ್ವತಿ ಯಾಗಕ್ಕೆ ಅಡಚಣೆಯೊಡ್ಡಲು ವೇಗವತಿ ನದೀ ರೂಪದಲ್ಲಿ ರಭಸದಿಂದ ಧಾವಿಸಿದಳು. ಆಗ ಬ್ರಹ್ಮನ ಪ್ರಾರ್ಥನೆಯಂತೆ ವಿಷ್ಣುವು ಹುಟ್ಟುಡುಗೆಯಲ್ಲಿ ಈ ಪ್ರವಾಹಕ್ಕೆ ಅಡ್ಡಲಾಗಿ ಮಲಗಿ ಪ್ರವಾಹ ತಡೆದನಂತೆ. ಯಾಗದ ಕೊನೆಗೆ ಮಹಾವಿಷ್ಣು ಅಗ್ನಿ ಕುಂಡದಿಂದ ಆವಿರ್ಭೂತನಾಗಿ ಬ್ರಹ್ಮನ ಅಪೇಕ್ಷೆಯಂತೆ ದರ್ಶನ ನೀಡಿದನೆಂಬುದು ಸ್ಥಳ ಪುರಾಣ.

ಬ್ರಹ್ಮನ ದಿವ್ಯಾದೇಶದಂತೆ ವಿಶ್ವಕರ್ಮ ಮರದಲ್ಲಿ ವರದರಾಜ ಸ್ವಾಮಿಯ ವಿಗ್ರಹವೊಂದನ್ನು ಕೆತ್ತಿದನಂತೆ. ಈ ವಿಗ್ರಹವನ್ನು ಮೂಲ ವಿಗ್ರಹವೆಂದೂ ಅಗ್ನಿಕುಂಡದಿಂದ ಪ್ರತ್ಯಕ್ಷನಾದ ವಿಷ್ಣು ಮೂರ್ತಿಯ ವಿಗ್ರಹವನ್ನು ಉತ್ಸವಮೂರ್ತಿಯೆಂದೂ ಕರೆಯಲಾಗುತ್ತದೆ.

ಬ್ರಹ್ಮದೇವ ಮರದಲ್ಲಿ ಕೆತ್ತಿಸಿದ ಮರದ ವಿಗ್ರಹವನ್ನು ದೇವಾಲಯ ಆವರಣದಲ್ಲಿರುವ ಅನಂತ ಸರಸ್ಸಿನಲ್ಲಿ ಜಲಾಧಿವಾಸ ಮಾಡಿಸಿ ಆ ಸ್ಥಳದಲ್ಲಿ ಕಲ್ಲಿನ ವಿಗ್ರಹ ಪ್ರತಿಷ್ಠಾಪಿಸಲಾಗಿದೆ. ಮರದ ವಿಗ್ರಹವನ್ನು ಅರವತ್ತು ವರ್ಷಕ್ಕೊಮ್ಮೆ ಹೊರತೆಗೆದು ಭಕ್ತರ ದರ್ಶನಕ್ಕಿಡಲಾಗುತ್ತಿತ್ತು.



ರೇಶ್ಮೆ ಸೀರೆಯ ಮಳಿಗೆ —ಫೋಟೋ : ರಾಜವರ್ಣಾಕ್ಯಮ್ ಮೊದಲಿಯಾರ್ ಕಂಪನಿ

ಭಕ್ತ ತನ್ನ ಜೀವಮಾನದಲ್ಲಿ ಒಮ್ಮೆಯಾದರೂ ಈ ವಿಗ್ರಹ ದರ್ಶನ ಮಾಡಲೆಂಬ ಉದ್ದೇಶದಿಂದ ಈಗ ನಲವತ್ತು ವರ್ಷಗಳಿಗೊಮ್ಮೆ ಈ ವಿಗ್ರಹ ವನ್ನು ಜಲಾಧಿವಾಸದಿಂದ ಹೊರತೆಗೆದು ವಸಂತ ಮಂಟಪದಲ್ಲಿಡಲಾಗುತ್ತದೆ. ಈ ಮೂರ್ತಿ ಒಂದು ಮಂಡಲ ಅಂದರೆ ೪೫ ರಿಂದ ೪೮ ದಿನಗಳಕಾಲ ಇಟ್ಟದ್ದು ಮತ್ತೆ ಜಲಾದಿವಾಸ ಮಾಡಿಸಲಾಗು ವದು. ಇಂತಹ ಒಂದು ಉತ್ಸವ ೧೯೭೯ರಲ್ಲಿ ನಡೆದಿತ್ತು.

ಈ ದೇವಾಲಯುವನ್ನು ಪಲ್ಲವರು ಮತ್ತು ಚೋಳರು ಬಹುವಾಗಿ ಅಭಿವೃದ್ಧಿಪಡಿಸಿದರು. ಈಗ ಈ ದೇವಾಲಯ ತಮಿಳನಾಡು ಸರ್ಕಾರದ ಹಿಂದೂ ಧಾರ್ಮಿಕ ಮತ್ತು ಧರ್ಮದತ್ತಿ ಇಲಾಖೆಯ ನಿರ್ವಹಣೆಗೊಳಪಟ್ಟಿದೆ.

ವರದರಾಜ ಸ್ವಾಮಿಯ ವಿವಿಧ ಉತ್ಸವಗಳು ಅತ್ಯಂತ ನಯನಮನೋಹರ. ಒಮ್ಮೆ ಬ್ರಹ್ಮದೇವನು ವಜ್ರ, ವೈಢೂರ್ಯ ಮುಂತಾದ ಅತ್ಯಪೂರ್ವ ಆಭರಣಗಳಿಂದ ಅಲಂಕರಿಸಿ ಸ್ವಾಮಿಯ ಉತ್ಸವಗಳನ್ನು ವಿವಿಧ ವಾಹನಗಳ ಮೇಲೆ ನೆರವೇರಿಸಿದನಂತೆ. ಅಂದಿನಿಂದ ಬ್ರಹ್ಮೋತ್ಸವ ವೆಂಬ ಹೆಸರು ರೂಢಿಗೆ ಬಂದಿತು.

ಈ ಉತ್ಸವಗಳಲ್ಲಿ ಗರುಡೋತ್ಸವ ಬಹಳ ಪ್ರಸಿದ್ಧಿ. ಒಮ್ಮೆ ರಾಬರ್ಟ ಕ್ಲೈವ ಮದ್ರಾಸ ಪ್ರಾಂತ್ಯದ ಗೌರ್ನರ ಆಗಿದ್ದಾಗ ಕಂಚಿಗೆ ಭೇಟಿ ನೀಡಿದ್ದರಂತೆ. ಆಗ ಗರುಡೋತ್ಸವ ನಡೆಯು ತ್ತಿತ್ತು. ಆ ಉತ್ಸವ ನೋಡಿ ಆತ್ಮಾನಂದ ಭರಿತರಾದ ಕ್ಲೈವ ತಮ್ಮ ಪತ್ನಿಯ ಕೊರಳಲ್ಲಿದ್ದ ಕಂಠೀಹಾರವನ್ನೇ ತೆಗೆದು ಸ್ವಾಮಿಗೆ ಅರ್ಪಿ ಸಿದರಂತೆ. ಅಂದಿನಿಂದ ಗರುಡೋತ್ಸವದ ದಿನ ಈ ಕಂಠೀಹಾರವನ್ನು ಸ್ವಾಮಿಗೆ ಅಲಂಕರಿಸ ಲಾಗುವದು.

ಈ ದೇವಾಲಯದಲ್ಲಿನ ಪೆರುಂದೇವಿ ನಾಯರ್ ಮಹಾಲಕ್ಷ್ಮಿಯ ಅವತಾರ ಮಹಾಪತಿವೃತಾ ಶಿರೋಮಣಿ ಎಂಬ ಕಾರಣದಿಂದಾಗಿ ಈ ಮೂರ್ತಿಯ ಉತ್ಸವವನ್ನು ಬೀದಿಗಳಲ್ಲಿ ಕೊಂಡೊಯ್ಯುವದಿಲ್ಲ.

ಈ ದೇವಾಲಯದಲ್ಲಿರುವ ಗುಹಾನರಸಿಂಹ ನೋಡಲೇಬೇಕಾದ ಇನ್ನೊಂದು ಸ್ಥಳ.

## ನೂರು ಕಂಬಗಳ ಮಂಟಪ

ವರದರಾಜಸ್ವಾಮಿ ದೇವಾಲಯದ ಒಳ ಪ್ರಾಕಾರ ಪ್ರವೇಶಿಸುತ್ತಿದ್ದಂತೆಯೇ ಎಡಭಾಗ ದಲ್ಲಿ ಕಾಣುವದೇ ನೂರು ಕಂಬಗಳ ಮಂಟಪ. ವಾಸ್ತವವಾಗಿ ಇಲ್ಲಿರುವದು ೯೬ ಕಂಬಗಳೇ. ಆದರೂ ಹೆಸರು ಮಾತ್ರ ನೂರು ಕಂಬಗಳ ಮಂಟಪ ಎಂದೇ ಪ್ರಖ್ಯಾತವಾಗಿದೆ.

ಶಿಲ್ಪಕಲಾ ಸೌಂದರ್ಯ ಅತ್ಯದ್ಭುತವಾಗಿ ಒಡ ಮೂಡಿರುವ ಈ ಮಂಟಪದ ನಾಲ್ಕೂ ಮೂಲೆ ಗಳಲ್ಲಿ ಕಂಬಗಳು ಮೂರು ಭಾಗಗಳಾಗಿ ಜೋಡಿ ಸಲ್ಪಟ್ಟಿವೆ. ಪ್ರತಿ ಕಂಬದಲ್ಲೂ ಕತ್ತಿ ಹಿಡಿದ ಕುದುರೆ ಸವಾರನ ಕೆತ್ತನೆ ಇದೆ. ಕೆಲವು ಕಂಬಗ ಳಲ್ಲಿ ಇಬ್ಬರು ಸವಾರರನ್ನು ಹೊತ್ತ ಕುದುರೆ ಯನ್ನೂ ಕೆತ್ತಲಾಗಿದೆ. ಎರಡೂ ಮುಖಗಳಲ್ಲಿನ ವ್ಯತ್ಯಾಸವನ್ನು ಗುರುತಿಸಬಹುದಾಗಿದೆ.

ನಾಲ್ಕೂ ಮೂಲೆಗಳಲ್ಲಿ ಕಲ್ಲಿನ ಸರಪಳಿಗಳು ಕಪೋತಗಳಿಂದ ತೂಗಾಡುತ್ತಿರುವದನ್ನು ಕಾಣ ಬಹುದು. ಈ ಸರಪಳಿಗಳಿಂದ ಸ್ವಲ್ಪ ಮೇಲೆ ಪಕ್ಷಿಗಳನ್ನು ಹಿಡಿಯುಲು ಬೆಕ್ಕು ಹೊಂಚು ಹಾಕು ತ್ತಿರುವದನ್ನು ಕಾಣಬಹುದು. ಈ ಪಕ್ಷಿಗಳು ತಮ್ಮ ಮರಿಗಳಿಗೆ ಆಹಾರವುಣಿಸುತ್ತಿರುವದನ್ನು ನೋಡಬಹುದು.

ಮಂಟಪದೊಳಗೆ ರಾಮಾಯಣ ಮಹಾ ಭಾರತದ ದೃಶ್ಯಗಳನ್ನು ಕೆತ್ತಲಾಗಿದೆ. ಕೆಲ ಕಂಬಗಳ ಮೇಲೆ ಅಪೂರ್ವ ನೃತ್ಯ ಭಂಗಿಗಳೂ ಇವೆ. ಹಿಂಭಾಗದ ಕಂಬವೊಂದರಲ್ಲಿ ಸೈನಿಕ ನೊಬ್ಬ ಬಂದೂಕು ಹಿಡಿದು ಶತ್ರುವಿನತ್ತ ಗುರಿ ಇಡುತ್ತಿರುವ ದೃಶ್ಯವಿದೆ. ಅಂದರೆ ಇದಕ್ಕಿಂತಲೂ ಮುಂಚೆಯೇ ಬಂದೂಕಿನ ಬಳಕೆಯಿತ್ತೆಂಬುದು ವ್ಯಕ್ತವಾಗುತ್ತದೆ.

ಈ ಕಲ್ಯಾಣ ಮಂಟಪವನ್ನು ಕನ್ನಡದ ರಮಾರಮಣ ವಿಜಯನಗರದ ಕೃಷ್ಣ ದೇವ ರಾಯ ಕಟ್ಟಿಸಿದ. ವಿಜಯನಗರ ಶೈಲಿಯ ಅತ್ಯುತ್ತಮ ಮಾದರಿಯನ್ನು ನಾವಿಲ್ಲಿ ಕಾಣ ಬಹುದಾಗಿದೆ. ಎತ್ತರವಾದ ಪೀಠದ ಮೇಲೆ ಕಟ್ಟಿರುವ ಈ ಮಂಟಪದ ವಿಸ್ತೀರ್ಣ ೫೭೫ ಚದರ ಮೀಟರುಗಳು, ಏಕಶಿಲೆಯ ನಿಡಿದಾದ ಉತ್ತಮ ಶಿಲೆಗಳಿಂದ ಕೂಡಿ ವೈವಿಧ್ಯಮಯ ವಾಗಿರುವ ಈ ಮಂಟಪದ ಎರಡು ಮೀಟರ ಎತ್ತರದ ಪೀಠದಲ್ಲಿ ಸಮತಲವಾದ ಪಟ್ಟಿ ಗಳಿವೆ. ಇವುಗಳಲ್ಲಿ ಆನೆ, ಕುದುರೆ, ಹಂಸ ಮುಂತಾದ ಪ್ರಾಣಿ ಪಕ್ಷಿಗಳ ಚಿತ್ರಗಳನ್ನೂ ನರ್ತನ ಮಾಲೆಗಳನ್ನೂ ಕೆತ್ತಲಾಗಿದೆ.

## ಕೈಲಾಸನಾಥ ದೇವಾಲಯ

ಅತ್ಯಂತ ಪುರಾತನವಾದ ಈ ದೇವಾಲಯ ಕಂಚಿಯ ಪಶ್ಚಿಮಕ್ಕೆ ಸುಮಾರು ಒಂದೂವರೆ ಕಿಲೋಮೀಟರ ದೂರದಲ್ಲಿದೆ. ಈ ದೇವಾಲಯ ದಲ್ಲಿ ನಾರದ ಪೂಜಿಸಿದ ಇನ್ನೊಂದು ಲಿಂಗವು ಇದೆ.

ಸಮುದ್ರಮಥನ ಕಾಲಕ್ಕೆ ಉದ್ಭವಿಸಿದ ವಿವಿಧ ದೇವತೆಗಳ ವಿಗ್ರಹಗಳು ಈ ದೇವಾ ಲಯದ ಪ್ರಾಕಾರದ ಸುತ್ತಲೂ ಇವೆ. ಸುತ್ತಲೂ ೫೮ ಗೋಪುರಗಳಿದ್ದು ಈ ಗೋಪುರಗಳೇ ಆವರಣ ಗೋಡೆಯಾಗಿ ಮಾರ್ಪಟ್ಟಿವೆ.

ಈ ದೇವಾಲಯದ ಗರ್ಭಗೃಹ ಪ್ರದಕ್ಷಿಣೆ ಹಾಕುವಾಗ ಅತ್ಯಂತ ಕಿರಿದಾದ ಸ್ಥಳವಿದೆ. ಅಲ್ಲಿ ತೆವಳಿಕೊಂಡೇ ಹೋಗಬೇಕು. ಈ ಪ್ರದಕ್ಷಿಣೆ ಯನ್ನು "ಸ್ವರ್ಗ ಪ್ರದಕ್ಷಿಣೆ" ಎಂದು ಬಣ್ಣಿಸ ಲಾಗುತ್ತದೆ. ಅತ್ಯಂತ ಪುರಾತನವೂ ಅಪಾರ ಶಿಲ್ಪಕಲೆಯ ಬೀಡೂ ಆಗಿರುವ ಈ ದೇವಾಲಯ ವನ್ನು ಮರಳು ಮತ್ತು ಕಲ್ಲು (ಗಾರೆ)ಗಳಿಂದ ನಿರ್ಮಿಸಲಾಗಿದೆ.

ಇಲ್ಲಿನ ಶಿಲ್ಪಕಲಾ ಸೌಂದರ್ಯಕ್ಕೆ ದೇಶವಿದೇಶ ಪ್ರವಾಸಿಗರು ಬೆರಗಾಗಿ ಹೋಗಿದ್ದಾರೆ. ಈ ದೇವಾಲಯ ೮ನೇ ಶತಮಾನದಲ್ಲಿ ನಿರ್ಮಿತ ವಾದದ್ದೆನ್ನಲಾಗಿದೆ. ಈ ದೇವಾಲಯದ ತಳ ಪಾಯದಿಂದ ಗೋಪುರದ ವರೆಗೆ ವರ್ಣಕಲಾ ವಿನ್ಯಾಸವಿದೆ.

## ಕಾಂಚೀವರಂ ರೇಶ್ಮೆ ಜಗತ್ಪ್ರಸಿದ್ಧ

ದಕ್ಷಿಣ ಭಾರತದಲ್ಲಿ ಜವಳಿ ಉದ್ಯಮ ಗಟ್ಟಿಯಾಗಿ ನೆಲೆಯೂರಿರುವ ಕೇಂದ್ರಗಳ ಪೈಕಿ ತಮಿಳ್ನಾಡೂ ಒಂದು. ಜವಳಿ ಉದ್ಯಮ ಲಕ್ಷಾಂತರ ಜನರ ಜೀವನಾಡಿಯಾಗಿದೆ.

ಹತ್ತಿ ಮತ್ತು ರೇಶ್ಮೆ ಎರಡಕ್ಕೂ ತಮಿಳುನಾಡು ಹೆಸರುವಾಸಿ. ಕೈಮಗ್ಗ ಭದ್ರವಾಗಿ ನೆಲೆಯೂರಿ ನಿಂತಿರುವದೇ ಇಲ್ಲಿ ಎಂದರೂ ತಪ್ಪಲ್ಲ. ನಯನ ಮನೋಹರ ಧರ್ಮಾವರಂ ರೇಶ್ಮೆ ಸೀರೆ ಅತ್ಯಂತ ಬೆಲೆ ಬಾಳುವ ಕಾಂಚೀವರಂ ರೇಶ್ಮೆ ಸೀರೆ ಎಂದರೆ ಹೆಣ್ಣು ಮಕ್ಕಳಿಗೆ ಮೈಯೆಲ್ಲಾ ಕಣ್ಣು.

ಕಂಚಿಯಲ್ಲಿ ದೊರೆಯುವ ರೇಶ್ಮೆ ಸೀರೆ ನೇಯುವ ಉದ್ಯಮದಲ್ಲಿ ಸುಮಾರು ಐದು ಸಾವಿರ ಕುಟುಂಬಗಳು ನಿರತವಾಗಿವೆ. ರೇಶ್ಮೆ ಸೀರೆ ಪ್ರಮುಖ ಸಗಟು ವ್ಯಾಪಾರಿಗಳಲ್ಲೊಬ್ಬರಾದ ಕೆ. ನಟೇಶ ಮೊದಲಿಯಾರ ಮತ್ತು ಸನ್ಸನ ಶ್ರೀಧರ ಅವರ ಪ್ರಕಾರ ಈ ರೇಶ್ಮೆ ಸೀರೆಯ ಕನಿಷ್ಠ ಬೆಲೆ ೧೭೦೦ ಗರಿಷ್ಟ ಬೆಲೆ ೧೦ ರಿಂದ ೧೧ ಸಾವಿರ ರೂ ವರೆಗೂ ಇದೆ. ಅತ್ಯುತ್ತಮ ಸೀರೆ ವಿನ್ಯಾಸಕ್ಕೆ ತಮಿಳುನಾಡು ಸರಕಾರದ ಪ್ರಶಸ್ತಿಯೂ ಲಭಿಸಿದೆ.

## ಕೈಮುಗ್ಗದ ಸೀರೆ

ಕೈಮಗ್ಗ ಉದ್ಯಮವೂ ಸಹ ಸಾಕಷ್ಟು ಮುಂದುವರಿದಿದೆ. ರೇಶ್ಮೆ ಸೀರೆಗಳ ವಿನ್ಯಾಸ ಮಾದರಿಗಳಲ್ಲೇ ಹತ್ತಿ ಸೀರೆಗಳನ್ನೂ ತಯಾರಿಸಲಾಗುತ್ತಿದೆ. ೧೫೦ ರಿಂದ ೩೦೦ ರೂ. ವರೆಗೆ ಈ ವಿನ್ಯಾಸಗಳ ಸೀರೆ ದೊರೆಯುತ್ತದೆ. ಕಂಚಿ ಸುತ್ತಮುತ್ತ ಸುಮಾರು ೨೦ ಸಾವಿರ ಕುಟುಂಬಗಳು ಈ ನೇಯ್ಗೆ ಉದ್ಯಮದಲ್ಲಿ ನಿರತವಾಗಿವೆ. ಪ್ರತಿ ಹಳ್ಳಿಯ ಮನೆ ಮನೆಯೂ ಒಂದು ಮಗ್ಗ ಹೊಂದಿವೆ.

ಕಾಂಚೀಪುರ, ಆರಣಿ, ಕುಂಭಕೋಣಂ ಕೊಯಿಮುತ್ತೂರು ಮತ್ತು ಮಧುರೆ ಕೈಮಗ್ಗದ ಸೀರೆಗಳಿಗೆ ಅಪಾರ ಖ್ಯಾತಗಳಿಸಿವೆ.

ಹೀಗೆ ಉತ್ಪಾದಿತವಾಗುವ ಸೀರೆಗಳನ್ನು ಮಾರಾಟ ಮಾಡಲು ನೂರಾರು ಸಹಕಾರ ಸಂಘಗಳು ಹುಟ್ಟಿಕೊಂಡಿವೆ.

## ಮಠದ ಬಳಿಯೇ ಮಸೀದಿ

ಕಂಚಿ ಕಾಮಕೋಟಿ ಪೀಠ ಜಗದ್ವಿಖ್ಯಾತ. ಈ ಮಠದ ಸಮೀಪದಲ್ಲೇ ಮುಸಲ್ಮಾನರ ಮಸೀದಿಯೊಂದೂ ಇದೆ.

ಬೆಳಗಿನ ಐದು ಗಂಟೆಗೆ ಸುಪ್ರಭಾತ ಸಮಯಕ್ಕೆ ಸರಿಯಾಗಿ ಅಲ್ಲಾಹೋ ಅಕ್ಬರ್ ಎಂಬ ಪ್ರಾರ್ಥನೆ ಗಗನ ಮಂಡಲ ಭೇದಿಸುತ್ತದೆ.

ಆದರೂ ಯಾವ ಭಕ್ತಾದಿಯ ಗಮನವನ್ನೂ ಇದು ಸೆಳೆದಿಲ್ಲ. ಹಿಂದು-ಮುಸ್ಲಿಂ ಸಾಮರಸ್ಯಕ್ಕೆ ಯಾವ ಧಕ್ಕೆಯೂ ಬಂದಿಲ್ಲ. ●



# ಶ್ರೀ ಕಂಚಿ ಕಾಮಕೋಟಿ ಪೀಠ

ಸಂಖ್ಯಾಶಾಸ್ತ್ರದಲ್ಲಿ ಒಂದು ಮೊದಲ ಸಂಖ್ಯೆಯಾದರೆ ಕೋಟಿ ಕೊನೆಯ ಸಂಖ್ಯೆ. ಕಾಮ ಎಂದರೆ ಮನುಷ್ಯನ ಬಯಕೆಗಳು. ಅಥವಾ ಕೋಟಿ ಎಂದರೆ ಕೊನೆ. ಅಂದರೆ ಮನುಷ್ಯನ ಬಯಕೆಗಳನ್ನು ಇಷ್ಟಾರ್ಥಗಳನ್ನು ಕೊನೆಯವರೆಗೆ ಅಂದರೆ ಸಂಪೂರ್ಣವಾಗಿ ಈಡೇರಿಸುವದೇ ಕಾಮಕೋಟಿ ಎಂಬುದರ ಅರ್ಥ.

ಅದ್ವೈತ ಮತದ ಪ್ರಭಾವವನ್ನು ದೇಶಾದ್ಯಂತ ಪಸರಿಸಿದ ಆದಿಶಂಕರರು ಕಾಂಚೀಪುರಕ್ಕೂ ಭೇಟಿಯಿತ್ತು ದೇವಿ ಕಾಮಾಕ್ಷಿಯ ಮುಂದೆ ಶ್ರೀ ಚಕ್ರವನ್ನಿರಿಸಿದ ಉಲ್ಲೇಖವಿದೆ. ಅಲ್ಲಿಯೇ ಶ್ರೀ ಚಕ್ರವನ್ನೂ ಸ್ಥಾಪಿಸಿದರೆಂದು ಐತಿಹ್ಯವಿದೆ. ಈಶ್ವರ ಸ್ವರೂಪಿಯಾದ ಆದಿಶಂಕರರು ತಾವು ಕೈಲಾಸದಿಂದ ತಂದಿದ್ದ ಐದು ಲಿಂಗಗಳ ಪೈಕಿ ತಮ್ಮ ಸ್ವಂತ ಪೂಜೆಗೆಂದು ಇಟ್ಟುಕೊಂಡಿದ್ದ ಯೋಗಲಿಂಗವನ್ನು ಚಂದ್ರಮೌಳೀಶ್ವರನೆಂಬಭಿದಾನದಿಂದ ಇಲ್ಲಿ ಪ್ರತಿಷ್ಠಾಪಿಸಿದರು. ಮತ್ತು ಅವರು ಸರ್ವಜ್ಞ ಪೀಠಾರೋಹಣ ಮಾಡಿದುದೂ ಇಲ್ಲಿಯೇ ಎಂದು ಹೇಳಲಾಗುತ್ತದೆ.

ಭಗವತ್ಪಾದ ಶ್ರೀ ಶಂಕರಾಚಾರ್ಯರ ಜೀವನ ಗಾಥೆಯನ್ನು ಚಿತ್ರಿಸುವ ಅನೇಕ ಹೊತ್ತಿಗೆಗಳು ಶ್ರೀ ಶಂಕರರ ಕಂಚಿ ಭೇಟಿಯನ್ನು ಚಿತ್ರಿಸಿವೆ.



**ಶ್ರೀ ಚಂದ್ರಶೇಖರೇಂದ್ರ ಸರಸ್ವತಿ ಮಹಾಸ್ವಾಮಿಗಳು**

ಕಂಚಿ ಕಾಮಕೋಟಿ ಪೀಠಸ್ಥ ಶಂಕರಾಚಾರ್ಯರ ಪರಂಪರೆಯಲ್ಲಿ ೬೮ನೆಯವರು. ಆಚಾರ್ಯರು ಜನತೆಯ ಅಪಾರ ಭಕ್ತಿಗೌರವ ಆದರಕ್ಕೆ ಪಾತ್ರರಾಗಿದ್ದಾರಲ್ಲದೆ ಅದ್ವಿತೀಯ ಪಂಡಿತರೂ ಸಹ. ಶ್ರೀ ಶ್ರೀಗಳವರ ಅದ್ವಿತೀಯತ್ವವನ್ನು ವಿದೇಶಿ ಪಂಡಿತೋತ್ತಮರೂ ಗೌರವಿಸಿದ್ದಾರೆ. ಭಗವಂತನ ಪ್ರೇರಣೆಯಾದಾಗ ಶ್ರೀ ಶ್ರೀಗಳವರು ಭಕ್ತರಿಗೆ ದರ್ಶನ ನೀಡಿ ಆಶೀರ್ವದಿಸುತ್ತಾರೆ.

# ಬಾಲ ಸನ್ಯಾಸಿ

**ಪರಮಪೂಜ್ಯ ಶ್ರೀ ಚಂದ್ರಶೇಖರೇಂದ್ರ ಸರಸ್ವತೀ ಮಹಾಸ್ವಾಮಿಗಳು ಸನ್ಯಾಸ ಸ್ವೀಕರಿಸಿದ ಎರಡು ವರ್ಷಗಳ ನಂತರ ಸರಿ ಸುಮಾರು ಅವರ ೧೫ ನೇ ವರ್ಷದಲ್ಲಿ ತೆಗೆದ ಛಾಯಾ ಚಿತ್ರವಿದು.**



**ಶ್ರೀ ಜಯೇಂದ್ರ ಸರಸ್ವತಿ ಮಹಾಸ್ವಾಮಿಗಳು**

ಶ್ರೀಪೀಠ ಪರಂಪರೆಯಲ್ಲಿ ೬೯ ನೇಯವರಾಗಿ ಪಟ್ಟಾಭಿಷಿಕ್ತರಾಗಿರುವ ಶ್ರೀ ಶ್ರೀಗಳವರು ಭಾರತಾದ್ಯಂತ ಕಾಲ್ನಡಿಗೆಯಲ್ಲೇ ಸಂಚರಿಸಿದ್ದಾರೆ, ಅನೇಕ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಇವು ಹಿಂದೂ ಧರ್ಮ ಸಂರಕ್ಷಣೆ ಪ್ರಚಾರ ಕಾರ್ಯದಲ್ಲಿ ಅದ್ವಿತೀಯವೆನಿಸಿಕೊಂಡಿವೆ. ಶ್ರೀ ಶ್ರೀಗಳವರು ೧೯೫೪ರ ಮಾರ್ಚ್ ೨೨ ರಂದು ಸನ್ಯಾಸಾಶ್ರಮ ಸ್ವೀಕರಿಸಿದರು.

ಶಿವರಹಸ್ಯವೆಂಬ ಪ್ರಾಚೀನತಮ ಕಾವ್ಯದ ಒಂದು ಅಧ್ಯಾಯದಲ್ಲಿ ಶ್ರೀ ಶಂಕರರು ಕಂಚಿಯಲ್ಲೇ ಮೋಕ್ಷ ಪಡೆದರೆಂಬ ಉಲ್ಲೇಖವಿದೆ.

ಶಂಕರಾಚಾರ್ಯ ಸ್ವಾಮಿಗಳಿಂದ ಕಂಚಿ ಕಾಮಕೋಟಿ ಪೀಠದಲ್ಲಿ ಅನೂಚಾನವಾಗಿ ದಿವ್ಯ ಜ್ಞಾನ ಪರಿಪೂರ್ಣ ಪೀಠಾಧಿಪತಿಗಳು ರಾರಾಜಿಸುತ್ತ ಬಂದಿದ್ದಾರೆ. ಸರ್ವಜ್ಞ ತಮೇಂದ್ರರು ಅತ್ಯಂತ ಶ್ರೇಷ್ಠ ತಪಸ್ವಿಗಳೂ ವಿದ್ಯಾಸಂಪನ್ನರೂ ಆಗಿದ್ದರು. ಅವರು ರಚಿಸಿದ ಸಂಕ್ಷೇಪಶಾರೀರಕಂ ಗ್ರಂಥ ಅದ್ವಿತೀಯವಾದುದು ಇಂದಿಗೂ ಸಹ ವೇದಾಂತ ವಿದ್ಯಾರ್ಥಿಗಳು ಹಾಗೂ ವಿದ್ವಾಂಸರ ಅಧ್ಯಯನ ಗ್ರಂಥವಾಗಿದೆ.

ಈ ಪೀಠಸ್ಥ ಅಧ್ವರ್ಯುಗಳಲ್ಲಿ ಕೃಪಾಶಂಕರ ಮೂಕಶಂಕರ, ಚಿತ್‌ಸುಖಾಚಾರ್ಯ, ಅಭಿನವಶಂಕರ, ವಿದ್ಯಾತೀರ್ಥ, ಶಂಕರಾನಂದ, ವ್ಯಾಸಾಚಲ, ಮಹಾದೇವ ಪರಮಶಿವೇಂದ್ರ ಆತ್ಮಬೋಧ ಭಗವನ್ನಾಮ ಬೋಧೇಂದ್ರ ಶ್ರೀಗಳವರು ಉಲ್ಲೇಖನಾರ್ಹರು.

ವಿಜಯನಗರ ಸಂಸ್ಥಾಪನಾಚಾರ್ಯ ವಿದ್ಯಾರಣ್ಯರು ಮತ್ತು ಸದಾಶಿವ ಬ್ರಹ್ಮೇಂದ್ರರು ಈ ಪೀಠದ ಜೊತೆ ಅತ್ಯಂತ ನಿಕಟಸಂಪರ್ಕ ಹೊಂದಿದ್ದರು.

ಕಂಚಿ ಕಾಮಕೋಟಿ ಪೀಠಕ್ಕೆ ಹಲವು ಹತ್ತು ಕಡೆಗಳಿಂದ ನೆರವಿನ ಮಹಾಪೂರ ಹರಿದುಬಂದಿದೆ. ಚೋಳ, ವಿಜಯನಗರ, ತಿರುವನಂತಪುರ, ಮರಾಠಾ ತಂಜಾವೂರು ಅರಸರು ಮತ್ತು ಜಮೀನ್ದಾರರು ನೀಡಿರುವ ಕೊಡುಗೆ ಗಣನೀಯ. ವಿಧರ್ಮೀಯರೂ ಸಹ ಈ ಮಠಕ್ಕೆ ಕಾಣಿಕೆಗಳನ್ನು ಸಲ್ಲಿಸಿದ್ದಾರೆ.

ಇಂದಿಗೂ ಈ ಮಠದ ಭಕ್ತ ಕೋಟಿ ಶ್ರೀ ಮಠದ ಬಗ್ಗೆ ಅಪಾರ ಪ್ರೇಮ ನಿಷ್ಠೆಯಿಂದ ನಡೆದುಕೊಳ್ಳುತ್ತಿದೆ.



**ಶ್ರೀ ವಿಜಯೇಂದ್ರ ಸರಸ್ವತಿ ಮಹಾಸ್ವಾಮಿಗಳು**

ಶ್ರೀ ಶ್ರೀಗಳವರು ೧೯೮೩ರ ಏಪ್ರಿಲ್ ೨೨ ರಂದು ಕಂಚಿಯಲ್ಲಿ ಸನ್ಯಾಸದೀಕ್ಷೆ ಪಡೆದರು. ಪರಮಪೂಜ್ಯ ಶ್ರೀ ಚಂದ್ರಶೇಖರೇಂದ್ರ ಸರಸ್ವತಿ ಶ್ರೀಗಳವರು ಹಾಗೂ ಶ್ರೀ ಜಯೇಂದ್ರ ಸರಸ್ವತಿ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ವೇದ ಉಪನಿಷತ್ತುಗಳ ಅಧ್ಯಯನ ನಡೆಸುತ್ತಿದ್ದಾರಲ್ಲದೆ ಶ್ರೀ ಚಂದ್ರಮೌಳೀಶ್ವರರ ನಿತ್ಯ ಪೂಜಾ ಕೈಂಕರ್ಯದಲ್ಲೂ ನಿರತರಾಗಿದ್ದಾರೆ.

# ಟೆನ್ ಕಮಾಂಡ್‌ಮೆಂಟ್ಸ್

ಜರಾ-ಮರಣಗಳಿಂದ ಮುಕ್ತರಾಗಿ ಮೋಕ್ಷ ಬಯಸುವ ಹಿಂದುಗಳೆಲ್ಲರೂ ಪ್ರತಿ ಏಕಾದಶಿ ಮತ್ತು ಅಮಾವಾಸ್ಯೆಯನ್ನನುಸರಿಸಬೇಕು. ಶೈವರು ಪ್ರತಿನಿತ್ಯ ೧೦೮ ಶಿವನಾಮ ಜಪಿಸಬೇಕು. ವೈಷ್ಣವರು ೧೦೮ ಬಾರಿ ವಿಷ್ಣುನಾಮ ಸ್ಮರಣೆ ಮಾಡಬೇಕು.

ಇದು ವೇದದ ಟೆನ್ ಕಮಾಂಡಮೆಂಟ್ಸ್. 'ಕರ್ಮವೀರ' ವಿಶೇಷಾಂಕಕ್ಕೆ ಸಂದೇಶವೊಂದನ್ನು ಕೋರಿದಾಗ ಕಂಚಿ ಕಾಮಕೋಟಿ ಪೀಠಾಧೀಶ ಶ್ರೀಚಂದ್ರಶೇಖರೇಂದ್ರ ಸರಸ್ವತಿ ಮಹಾಸ್ವಾಮಿಗಳಾದಿಯಾಗಿ ಕಾಂಚೀಪುರದಲ್ಲಿರುವ ಎಲ್ಲ ಸಾಧು-ಸನ್ಯಾಸಿಗಳು ನೀಡಿದ ಒಕ್ಕೊರಲಿನ ಸಂದೇಶ.

ಕರ್ನಾಟಕದಲ್ಲಿರುವ ಹಿಂದೂಗಳ ಪೈಕಿ ಎರಡು ಜಾತಿಗಳವರು ಮಾತ್ರ ತಪ್ಪದೆ ಭಗವನ್ನಾಮ-ಸ್ಮರಣೆ ಮಾಡುತ್ತಾರೆ. ವೀರಶೈವರು ಅಥವಾ ಲಿಂಗಾಯತರು ಮತ್ತು ವೈಷ್ಣವರು ಅಥವಾ ಮಾಧ್ವರು ಎಂದು ಈ ಸಾಧುಸನ್ಯಾಸಿಗಳು ಅಭಿಪ್ರಾಯ ಪಡುತ್ತಾರೆ.

ಕರ್ನಾಟಕದಲ್ಲಿ ವೀರಶೈವರು ಗಣನೀಯ ಪ್ರಮಾಣದಲ್ಲಿದ್ದಾರೆ ಇವರಲ್ಲಿ ಆಸ್ತಿಕರ ಸಂಖ್ಯೆಯೇ ಅಧಿಕ. ಈ ಧರ್ಮಭೀರುಗಳು ಬೇರೇನು ಮಾಡದಿದ್ದರೂ ಪ್ರತಿನಿತ್ಯ ಶಿವಲಿಂಗಕ್ಕೆ ಆರೋಗಣೆಮಾಡದೆ ತುತ್ತನ್ನೇ ಎತ್ತುವದಿಲ್ಲ ಎಂಬುದು ಇವರ ಹೇಳಿಕೆ.

ಇದೇ ರೀತಿ ವೈಷ್ಣವರು ಸಹ ಪ್ರತಿ ಏಕಾದಶಿಯಂದು ನಿರ್ಜಲ ನಿರಾಹಾರಿಗಳಾಗಿರುತ್ತಾರೆ, ದ್ವಾದಶಿಯಂದು ಸೂರ್ಯೋದಯಕ್ಕೆ ಮುನ್ನವೆ ಪಾರಣೆ ಮುಗಿಸುತ್ತಾರೆ.

ಏಕಾದಶಿ ಅತ್ಯಂತ ಶ್ರೇಷ್ಠವಾದ ದಿನ ಇದು ವಿಷ್ಣು ವ್ರತ, ದ್ವಾದಶಿ ಪಾರಣೆ, ಇದು ಶಿವವ್ರತ.

ಅಂತೆಯೇ ಅಮವಾಸ್ಯೆಯನ್ನು ಆಚರಿಸಬೇಕು. ಏಕಾದಶಿ ದೇವ ಕಾರ್ಯವಾದರೆ ಅಮವಾಸ್ಯೆ ಪಿತೃ ಕಾರ್ಯವಿದ್ದಂತೆ. ಅಂದು ರಾತ್ರಿಭೋಜನ ನಿಷಿದ್ಧ ಇವೆರಡನ್ನೂ ಎಲ್ಲರೂ ಕಡ್ಡಾಯವಾಗಿ ಆಚರಿಸುವದರಿಂದ ಮೋಕ್ಷಪ್ರಾಪ್ತಿ ಖಚಿತ ಎಂಬುದು ಇವರ ಹೇಳಿಕೆ,

ಎಲ್ಲ ಹಿಂದುಗಳೂ ತಮ್ಮ ನಿತ್ಯನೈಮಿತ್ತಿಕ ಪೂಜೆ-ಪುರಸ್ಕಾರಾದಿಗಳ ಜೊತೆಗೆ ದಿನದ ಯಾವುದಾದರೂ ಹೊತ್ತಿನಲ್ಲಿ ಶೈವರು ೧೦೮ ಬಾರಿ ಶಿವ ಜಪವನ್ನು ವೈಷ್ಣವರು ೧೦೮ ಬಾರಿ ವಿಷ್ಣುನಾಮ ಸ್ಮರಣೆಯನ್ನು ಮಾಡಬೇಕು. ಇತರರು ಅವರವರ ಸಂಪ್ರದಾಯಾನುಸಾರ ತಮ್ಮ ತಮ್ಮ ಮನೆದೇವತೆ-ಇಷ್ಟದೇವತೆಗಳನ್ನು ಪೂಜಿಸುತ್ತ ಈ ಜಪಗಳಲ್ಲೊಂದನ್ನು ಮಾಡಬೇಕೆಂದೂ ಆದೇಶ ನೀಡಿದ್ದಾರೆ. ●

---

# ಒಂದು-ಹಲವು



ಎಷ್ಟು ಹಣತೆಗಳಿಂದ ಕತ್ತಲೆಯು ಕರಗುವದು ?  
  ಎಷ್ಟು ಕವಿತೆಗೆ ಜಗದ ಕಣ್ಣು ತೆರೆಯುವದು ?  
ಒಂದಿದ್ದರೂ ಸಾಕು, ಮನೆಗೆ ಬೆಳಕಾಗುವದು  
  ಒಂದು ಕವಿತೆಗೆ ಕೂಡ ಮನ ಕರಗಬಹುದು.

ಹಲವು ಬಣ್ಣದ ಕಣ್ಣು ಸೆಳೆಯುವ ಗುಲಾಬಿಗಳು  
  ಸುಂದರ ಪ್ರದರ್ಶನಕೆ ಕಸಿಗೊಂಡ ಒನಪು;  
ಚೆಂಗುಲಾಬಿಯ ಕಂಪು, ಕೋಮಲತೆ, ನಯವೊಂದೆ  
  ಕಣ್ಣುಮನಸಿಗೆ ತಣ್ಣಗೊಂದು ಸವಿನೆನಪು.

ಆಕಾಶದಲಿ ಹಲವು ಚಿಕ್ಕೆ ಚೆಲ್ಲಾಪಿಲ್ಲಿ-  
  ಬದಿಗೆ ಚಂದ್ರನ ಬದಿಗೆ ಒಂದೆ ಕಿರು ತಾರೆ;  
ಉದಯಾಸ್ತಗಳ ಹೊನ್ನ ಬೆಳಕು ಚಿಮ್ಮುವ ತವಕ-  
  ತುಂಬಿ ತುಳುಕದ ಹಾಗೆ ಆ ಕ್ಷಿತಿಜ ಮೇರೆ.

ಹಲವಕ್ಕೆ ತೆಕ್ಕೆ ಬಿದ್ದರೆ ಎಲ್ಲ ದಕ್ಕಬಹುದೆ ?  
ವೈವಿಧ್ಯಕ್ಕೆ ಒಂದೆಡೆಗೆ ಮಧ್ಯಬಿಂದುವಿರದೆ ?

**ಚೆನ್ನವೀರ ಕಣವಿ**



# ಒಂದು ಅತ್ಯಾಚಾರದ ಹಂತಗಳು

—ಸತೀಶ ಕುಲಕರ್ಣಿ

೧

ಅವಳು ಅವನನ್ನು ಹುಡುಕುತ್ತ ಹೊರಟಿದ್ದಳು
ಯಾವ ಊರೊ, ಯಾವ ಕೇರಿಯೊ
ರಾತ್ರಿ ಮಾತ್ರ ಖಾತ್ರಿಯಿತ್ತು.
ಅವನು
ನಿತ್ಯದಂತೆ ಎಲೆಗಳಾಟದಲ್ಲೊ
ಬಾಟಲಿಗಳ ಕೂಟದಲ್ಲೊ –
ಎಲ್ಲೊ ಮುಳುಗಿದ್ದ.
ಇಲ್ಲಿ ಮನೆಯಲ್ಲಿ ಮೂರು ವರ್ಷದ 'ಮುನ್ನ'
'ಅಪ್ಪ ಅಪ್ಪ' ಎಂದು ನರಳುತಿದ್ದ
ಅವಳು ಆ ಅಪ್ಪನನ್ನು ಹುಡುಕುತ್ತ ಹೊರಟಿದ್ದಳು.

೨

ಅವರು ಬಂದು ತಡೆದರವಳನ್ನು :
ಮೇಲೆ ಗಿಡಗಳ ದಳದಳ-
ಗಾಳಿಗುಲುಕುವ ಎಲೆಗಳು
ಕೀವು ತುಂಬಿ ಸೋರುವ
ಹುಣ್ಣು ನಕ್ಷತ್ರಗಳು
ಇಷ್ಟು ಅವಳ ಕೊನೆಯ ನೆನಪುಗಳು.

ಮರುದಿನ :
ಬೀದಿಗೆ ತೆರೆದು ಬಿದ್ದಿದ್ದವಳಂಗಾಂಗಗಳು
ಮಾತು. ಮೌನ. ಗುಸು ಗುಸು
ಊರ ತುಂಬ ಹಾರಿ ಸುದ್ದಿಯಾದವು

೩

ಈಗ ಒಂದು ವರ್ಷದಿಂದ
ಕಟಕಟೆಯಲ್ಲಿ– ಅವಳು.
ಎದುರು-
ಪೋಲೀಸರು ವಕೀಲರು.
ವಾದ ಪ್ರತಿವಾದ ಅಹವಾಲು, ಸವಾಲು ಸಬೂಬುಗಳು.
ಗಂಡ ಹೆಂಡತಿ ನಿತ್ಯ ಪ್ರತಿನಿತ್ಯ ಬಂದು ಹೋಗುತಿದ್ದರು.
ಸಾವಕಾಶ
ಬೇರೆ ಬೇರೆಯಾದರು
ದಿನಗಳು– ಗಂಡಸಂತ ದನಗಳು.

೪

'ಅತ್ಯಾಚಾರವಾಗಿಲ್ಲ'
–ತೀರ್ಪು ಬಂದಿತ್ತು ಒಂದು ದಿನ.
ಅವಳು ಹೆರಿಗೆ ನೋವಿಗೆ
ನರಳುತಿದ್ದಳು.

# ಕಾಷ್ಠವ್ಯಸನ

ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ

ಮನುಷ್ಯನ ಆವಶ್ಯಕತೆಗಳಲ್ಲಿ ಆಹಾರ, ವಸ್ತ್ರ, ತಲೆ ಮೇಲೆ ಸೂರು ಇವು ಮುಖ್ಯವೂ ಅನಿವಾರ್ಯವೂ ಆದುವು. ಆಹಾರಕ್ಕೆ ಮುಖ್ಯವಾಗಿ ಶಾಖ (ಸೌದೆ) ಬೇಕು. ನಾನು ಜೀವಮಾನವೆಲ್ಲ ಕಾಡಿನಲ್ಲಿ-ಮಲೆನಾಡಿನ ನಡುವೆಯೇ-ವಾಸಿಸಿದವನು. ಆಗ ನಮ್ಮ ದೇಶದಲ್ಲಿ ನಿಜವಾಗಿಯೂ ಕಾಡು ಎಂಬುದು ಇತ್ತು. ಗಗನ ಚುಂಬಿ ವೃಕ್ಷಗಳು, ತಿರುಗಾಡುವುದಕ್ಕೂ ಜಾಗ ಕೊಡದ ಪೊದೆಗಳು, ಮೃಗಸರ್ಪಗಳು, ಅವೆಲ್ಲ ಸಾವಿರಾರು ವರುಷಗಳಿಂದ ನಮ್ಮ ಜೊತೆಯಲ್ಲಿಯೇ ನಮ್ಮ ಮಗ್ಗುಲಲ್ಲಿಯೇ ಬೆಳೆದು ತಾವು ತಾವೇ ಹುಟ್ಟಿಕೊಂಡು ಅವುಗಳಿಗೆ ಕೊನೆಯೇ ಇಲ್ಲ ಎನ್ನುವಷ್ಟು ವಿಸ್ತಾರವಾಗಿದ್ದವು. ಮಳೆಗಾಲದಲ್ಲಿ ಮೂರು ತಿಂಗಳ ಕಾಲ ಜಡಿಮಳೆ ಹಿಡಿದು ಹೊರಗಡೆ ಸಂಚಾರವೇ ಅಸಾಧ್ಯವಾಗುತ್ತಿದ್ದುದರಿಂದ, ಮೂರು ತಿಂಗಳಿಗೆ ಬೇಕಾಗುವ ಒಣಗಿದ ಸೌದೆಯನ್ನು-ಉರುವಲು-ಮಲೆನಾಡಿನವರು ಶೇಖರಿಸಿ ಇಟ್ಟುಕೊಳ್ಳುತ್ತಿದ್ದರು.

**ಸೌದೆ - ಉರುವಲು - ಇದೀಗ ಸಿಕ್ಕುವದು ತುಂಬ ಕಠಿಣ ಆದರ ಬೆಲೆಯೂ ದಿನದಿನಕ್ಕೆ ಹೆಚ್ಚುತ್ತಿದೆ. ಅದರ ಸ್ಥಾನವನ್ನು ವಿದ್ಯುತ್ ಮೊದಲಾದವು ತುಂಬಲು ಪ್ರಯತ್ನಿಸುತ್ತಿವೆ. ಹೀಗಿದ್ದರೂ ಸೌದೆಗೆ– ಕಾಷ್ಠಕ್ಕೆ– ತನ್ನದೇ ಆದ ಸ್ಥಾನ, ಮಹತ್ವ ಇದೆ. ಜೀವನದ ಆವಶ್ಯಕತಗಳಲ್ಲೊಂದೆನಿಸಿದ ಸೌದೆಯ ಮಹತ್ವವನ್ನು ಇಂದಿನವರಿಗಿಂತ ಹಳೆಯ ತಲೆಮಾರಿನವರೇ ಹೆಚ್ಚು ಬಲ್ಲರು.**

ಈಚಿನ ದಿನಗಳಲ್ಲಿ ಮರಗಳನ್ನು ಕುಯ್ಯುವ ಒಂದು ಪೆಡಂಭೂತ (Saw mill)-ಆಧುನಿಕ ನಾಗರಿಕತೆಯ ಅತ್ಯಂತ ಕ್ರೂರ ಸಂಕೇತ–ವೃಕ್ಷ ಶತ್ರು, ಈ ದೇಶದಲ್ಲಿ ಹುಟ್ಟಿಕೊಂಡಿದೆ. ನೂರು ವರುಷಗಳಿಂದ ಬೆಳೆಸಿರುವ ಅಮೂಲ್ಯವಾದ ಮರಗಳನ್ನು ಅದು ಆರು ತಿಂಗಳಿನಲ್ಲಿ ಕುಯ್ದು ನೆಲಸಮ ಮಾಡುತ್ತದೆ. ಈ ಕಾರಣದಿಂದ ಭೂಸಾರವೆಲ್ಲ ಕೊಚ್ಚಿ ಹೋಗಿ ನೆಲ ಬೋಳಾಗಿ ಮಳೆ ಕಡಿಮೆಯಾಗಿ ಭೂಮಿ ಸಹ ಬಂಜರು ಬೀಳುತ್ತದೆ.

ಮನುಷ್ಯ ನಾಗರಿಕನಾಗುತ್ತ ಬಂದಂತೆ ಸೌದೆ ಅಥವ ಶಾಖದ ಅವಶ್ಯಕತೆ ಅವನಿಗೆ ಹೆಚ್ಚಾಯಿತು. ಬೆಚ್ಚನೆಯ ಮನೆ, ಬಿಸಿಬಿಸಿ ಊಟ ಇವು ಬೇಕಾದವು. ಪ್ರಾಯಶಃ ಪ್ರಾರಂಭದಲ್ಲಿ ಮನುಷ್ಯನೂ ಹಸಿಮಾಂಸವನ್ನೇ ತಿನ್ನುತ್ತಿದ್ದನೇನೊ; ಇಂಗ್ಲಿಷ ಪ್ರಬಂಧಕಾರ ಚಾರ್ಲಸ್ ಲ್ಯಾಂಬ್, "ಬೇಯಿಸಿದ ಹಂದಿ"ಯ ಮೇಲೆ ಒಂದು ಪ್ರಬಂಧವನ್ನು ಬರೆದಿದ್ದಾನೆ. ಮನುಷ್ಯ ತೀರ ಅನಾಗರಿಕನಾಗಿದ್ದಾಗ ಕಾಡುಕಿಚ್ಚು ಹತ್ತಿ ಮರಗಳೂ, ಪ್ರಾಣಿಗಳೂ ಬೆಂದುಹೋದುವಂತೆ. ಒಂದು ಹಂದಿಯೂ ಸಹಬೆಂದು ಬಿದ್ದಿದ್ದಿತಂತೆ. ಮನುಷ್ಯ ಆ ಹಂದಿಯ ಮೈಗೆ ಒಂದು ಬೆರಳನ್ನು ಹಾಕಿ ಸ್ವಲ್ಪ ಅಮುಕಿದನಂತೆ, ಅದರಲ್ಲಿ ಇನ್ನೂ ಕಾವು ಇದ್ದುದರಿಂದ ಕೈಸುಟ್ಟಿತಂತೆ, ಸುಟ್ಟ ಬೆರಳನ್ನು ಮನುಷ್ಯ ಸ್ವಾಭಾವಿಕವಾಗಿ ಬಾಯಲ್ಲಿ ಇಟ್ಟುಕೊಂಡನಂತೆ, ಆಗ ಆತನಿಗೆ ಬೇಯಿಸಿದ ಹಂದಿಯ ಮಾಂಸದ ರುಚಿ ಗೊತ್ತಾಯಿತು. ಅಲ್ಲಿಂದ ಮುಂದೆ ಮನುಷ್ಯ ಆಹಾರವನ್ನು ಬೇಯಿಸಿ ತಿನ್ನುವುದನ್ನು ಕಲಿತುಕೊಂಡ! ಮನುಷ್ಯನಿಗೆ ಯಾವಾಗಲೂ ಶಾಖವು






ಪ್ರಿಯ. "ಬೆಚ್ಚನೆಯ ಮನೆಯಾಗಿ" ಎನ್ನುತ್ತಾನೆ ಸರ್ವಜ್ಞ. ಛಳಿ ಹೆಚ್ಚಾಗಿರುವಪಾಶ್ಚಿಮಾತ್ಯರಾಷ್ಟ್ರಗಳಲ್ಲಿ ಸ್ವಾಗತಿಸುವುದಕ್ಕೆ "ಬೆಚ್ಚನೆಯ ಸ್ವಾಗತ" **Warm Wel-Come** ಎನ್ನುತ್ತಾರೆ, ಬಿಸಿಲು ಧಗೆ ಹೆಚ್ಚಾಗಿರುವ ನಮ್ಮ ದೇಶದಲ್ಲಿ ಶೈತ್ಯೋಪಚಾರ, ತಂಪಾದ ಪಾನೀಯ, ಬೇಸಿಗೆಯಲ್ಲಿ ತಂಗಾಳಿ ಇವು ಸ್ವಾಗತದ ಸಂಕೇತಗಳಾಗಬಹುದು. ಮನುಷ್ಯರಿಗೆ ದೇವತೆಗಳು ಕೊಟ್ಟವರ ಅಗ್ನಿ. ದೇವತೆಗಳಲ್ಲಿ ಕೂಡ ಅಗ್ನಿಯ ಸ್ಥಾನ ಹಿರಿದು. ಅಗ್ನಿಯ ಮೂಲಕವೇ ದೇವತೆಗಳಿಗೆ ಅರ್ಪಣೆಸಲ್ಲುತ್ತದೆ.

ನಾನು ಹಳ್ಳಿಯಲ್ಲಿದ್ದಾಗ ಹೇಗೋ ಮಳೆಗಾಲವನ್ನು ನಿಭಾಯಿಸಲು ಸಾಕಾಗುವಷ್ಟು ಸೌದೆಯನ್ನು ಕೂಡಿಸಿ ಇಟ್ಟಿರುತ್ತಿದ್ದೆ. ಅನಂತರ ಬೆಂಗಳೂರಿಗೆ ಬಂದೆ. ಈಗ ಐವತ್ತೈದು ವರುಷಗಳ ಕೆಳಗೆ ನಾನು ಬೆಂಗಳೂರಿನಲ್ಲಿ ಹತ್ತು ವರುಷ ಖಾದಿಕೆಲಸ ಮಾಡುತ್ತ ಇದ್ದೆ. ಆಗ ಬೆಂಗಳೂರಿನ ಜನ ಸಂಖ್ಯೆ ಎರಡುಲಕ್ಷ. ಈಗ ಇದು ಭಯಂಕರವಾದ ದೊಂಬಿನಗರವಾಗಿದೆ. ಇದು ಕೊರತೆಯ ನಗರ, ಯಾರಿಗೂ ಯಾವ ಪದಾರ್ಥವೂ ಸಿಕ್ಕುವುದಿಲ್ಲ. ನೀರು, ದೀಪ, ಸೌದೆ, ತರಕಾರಿ ಮನೆ ಎಲ್ಲಕ್ಕೂ ಅಭಾವ, ಕೊಲೆ, ಆತ್ಮಹತ್ಯ ದರೋಡೆ, ದುಬಾರಿಬೆಲೆ, ಇವಕ್ಕೆಲ್ಲ ಇದು ಅಗ್ರಸ್ಥಾನ. ಭಾರತದಲ್ಲಿ ಇದೇ ದುಬಾರಿವೆಚ್ಚದ ನಗರವೆಂದು ಅಂಕಿಸಂಖ್ಯಾ ಶಾಸ್ತ್ರಜ್ಞರು ಹೇಳುತ್ತಾರೆ. ಇಲ್ಲಿಯದೂ ಸೌದೆ, ಉರವಲು, ಶಾಖ ಇದರದೇ ಮುಖ್ಯ ತೊಂದರೆ. ನನಗೆ ವಿದ್ಯುತ್ ಶಕ್ತಿಯನ್ನು ಕಂಡರೆ ಯಾವಾಗಲೂ ಭಯ. ಅದೊಂದು ಮಹಾರಾಕ್ಷಸ. ಅದರಿಂದ ನಿತ್ಯ ಸಂಭವಿಸುತ್ತಿರುವ ನಿರಪರಾಧಿಗಳ ಸಾವನ್ನು ಕಂಡು ನಾನು ಜರ್ಜರಿತನಾಗಿದ್ದೇನೆ. ಇದರ ವೇಗ, ಅಪಾಯಶಕ್ತಿಗೆ ತಕ್ಕ ಎಚ್ಚರಿಕೆವಹಿಸಲು– ಸ್ವಾತಂತ್ರ್ಯ ಬಂದ ನಾಲ್ವತ್ತು ವರುಷಗಳಾದರೂ ಇನ್ನೂ ಅಕ್ಷರಜ್ಞಾನವನ್ನು ಹೊಂದದಿರುವ ನಮ್ಮ ದೇಶದ ಮಹಿಳೆಯರು, ಹಳ್ಳಿಯ ಜನರಿಗೆ ಸಾಧ್ಯವೇ ಇಲ್ಲ. ಅನಿರೀಕ್ಷಿತ ಕಡೆಗಳಲ್ಲೆಲ್ಲ ನಾನು ಅದರ ಹೊಡೆತವನ್ನು - ಶಾಕ್ - ಅನುಭವಿಸಿದ್ದೇನೆ, ನಾನು ಒಂದು ಮಳೆಯ ರಾತ್ರಿ ಬೆಂಗಳೂರು ನಡುಬೀದಿಯಲ್ಲಿ ಹೋಗುತ್ತಿರುವಾಗ ಒಂದು ವಿದ್ಯುತ್ ತುಂಬಿದ ತಂತಿ ಮೇಲಿನಿಂದ ಕಿತ್ತುಬಿದ್ದು ನನ್ನ ಮುಂಗೈಗೆ ತಗುಲಿ, ನೆಲದ ಮೇಲೆ ಬಿದ್ದು ನೂರಾರು ಆನೆ ಪಟಾಕಿಗಳಂತೆ ಉರಿದು ಚಟಪಟನೆ ಸಿಡಿಯಿತು. ತಂತಿ ತಗಲಿದ ನನ್ನ ಮುಂಗೈಯಲ್ಲಿ ಸುಟ್ಟಗಾಯ ಮೂರು ತಿಂಗಳ ನಂತರ ವಾಸಿಯಾಯಿತು. ವೈದ್ಯರು "ತಂತಿ ಮುಂಗೈಗೆ ತಗಲುವ ಬದಲು ಅಂಗೈಗೆ ತಗುಲಿದ್ದರೆ, ನಿಮ್ಮ ಕೈ ಸ್ವಾಭಾವಿಕವಾಗಿ ಅದನ್ನು ಹಿಡಿದುಕೊಳ್ಳುತ್ತಿತ್ತು. ನಿಮ್ಮ ಕೆಲಸ ಮುಗಿದು ಹೋಗುತ್ತಿತ್ತು" ಎಂದರು. ನನಗೆ ಒಂದು ಬಲ್ಬು ಹಾಕುವುದಕ್ಕೂ ಭಯ.

ನಾನು ಬೆಂಗಳೂರಿನಲ್ಲಿ ಒಂದು ಮನೆಯನ್ನು ಕಟ್ಟಿಸಿದಾಗ ಅದಕ್ಕೆ ಕಟ್ಟುವಾಗಲೇ- ಗೋಡೆಯೊಳಗೆ ಸೂರಿನಲ್ಲಿ– ವಿದ್ಯುತ್ ತಂತಿಗಳನ್ನು– ದೀಪ, ಊಟ ಸ್ನಾನಕ್ಕೆ–ಎ.ಇ.ಎಚ್. ಮಾಡಬೇಕೆಂದು ನನ್ನ ಹೆಂಡತಿ ಮಕ್ಕಳು ನಿರ್ಣಯಿಸಿದರು. ಮಿತ್ರರೊಬ್ಬರು "ಅದು ಒಳಗೆ ಕಟ್ಟಿರೆ ಗೋಡೆಗಳಿಗೆಲ್ಲ ಶಾಕ್ ಹೊಡೆಯುತ್ತೆ ಬೇಡ" ಎಂದರು. ನಾನು ಗೋಡೆಯೊಳಕ್ಕೆ ವಿದ್ಯುತ್ ತಂತಿಗಳನ್ನು ಹಾಕಿಸಲಿಲ್ಲ. ಅನಂತರ ನನ್ನ ಇಚ್ಛೆಯನ್ನು ಲಕ್ಷಿಸದೇ ದೀಪ, ಅಡಿಗೆಗೆ ಸ್ನಾನಕ್ಕೆ ವಿದ್ಯುತ್ ಬಳಕೆಗೆ ಬಂತು. ಜೊತೆಗೆ ವಿದ್ಯುತ್ ಖೋತಾ ಬಳಕೆಗೆ ಬಂತು. ಸ್ನಾನಕ್ಕೆ ನೀರು ಕಾಯದುದರಿಂದ ನಾನು ಸೌದೆ ಒಲೆ ಮಾಡಿಸಿ ಹಂಡೆ ಹೂಳಿಸಿದೆ, ಅಡಿಗೆಗೆ ವಿದ್ಯುತ್ ಶಕ್ತಿ ಖೋತಾದಿಂದ ತೊಂದರೆ ಆದಾಗ, ಸೀಮೆಎಣ್ಣೆ ಒಲೆ ತಂದೆ. ನಮ್ಮ ಪ್ರಾಂತದ ವಿದ್ಯುತ್‌ಶಕ್ತಿ ಒಂದು ವಿಚಿತ್ರ ಇಲಾಖೆ, ಹೆಚ್ಚು ಹೆಚ್ಚು ಬಳಸಿದವರಿಗೆ-ಖೋತಾ ಇರುವಾಗಲೂ–ಹೆಚ್ಚಾಗಿಯೇ ಕೊಡುತ್ತಾರೆ. ಮಿತವ್ಯಯದಿಂದ ಇರಬೇಕು, ಹೆಚ್ಚು ಉರಿಸಬಾರದು ಎಂದು ಇರುವವರಿಗೆ ಖೋತಾವನ್ನೂ ಹೆಚ್ಚಿಗೆ ಹಾಕುತ್ತಾರೆ. ಅಂದರೆ ದುಂದು ವೆಚ್ಚ ಮಾಡಿದವರಿಗೆ ಪುರಸ್ಕಾರ: ಹೆಚ್ಚು ವಿದ್ಯುತ್ ಶಕ್ತಿ. ಕಡಿಮೆ ಉರಿಸಿದವನಿಗೆ ಕಡಿಮೆ. ಮಿತಿಯನ್ನು ಮೀರಿದವರಿಗೆ ಜುಲ್ಮಾನೆ, ದಂಡ ಒಂದಕ್ಕೆ ನಾಲ್ಕು. ಪ್ರಜೆಗಳು ಮಹಾಪರಾಧಿಗಳು, ದಂಡವಿಧಿಸಬೇಕು. ಆದರೆ ಇಲಾಖಾ ನೌಕರರಿಗೆ ಉಚಿತವಾಗಿ ವಿದ್ಯುತ್ ಶಕ್ತಿ !

ಹೋದವರುಷ ನಮ್ಮ ತಂದೆಯವರ ಶ್ರಾದ್ಧಕ್ಕೆ, ಒಂದು ತಿಂಗಳು ಮುಂಚಿನಿಂದಲೇ ನನಗೆ ಸೌದೆಯ ಯೋಚನೆ, ತಿಥಿ ಅಡಿಗೆಯ ಪರಿಕರ, ಅಡಿಗೆ ಕ್ರಮ ಇವು ವಿಶಿಷ್ಟ ತರಹ, ಅನುಭವಿಗಳು ಬೇಕು. ಕರ್ಮಗಳೆಲ್ಲ ಆಗಿ ಮಟಮಟ ಮಧ್ಯಾಹ್ನದಲ್ಲಿ ನಿಮಂತ್ರಣಗಾರರು (ಆಹ್ವಾನಿತರು) ಊಟಕ್ಕೆ ಕೂಡುತ್ತಾರೆ. ಊಟದಲ್ಲಿ ರುಚಿಯ ಜೊತೆಗೆ ಬಿಸಿಯೂ ಮುಖ್ಯ. ಅಡಿಗೆಗಳೆಲ್ಲ ಬಿಸಿ ಬಿಸಿಯಾಗಿರಬೇಕು. ಹಿಂದಲ ಕಾಲದಲ್ಲಿ ಸೌದೆಗೆ ದರಿದ್ರವಿರಲಿಲ್ಲ. ಕಾಡುಗಳು ಹೆಚ್ಚಾಗಿದ್ದವು. ಒಲೆಯಲ್ಲಿ ಸದಾ ಸೌದೆಯ ಕೆಂಡ

ವಿರುತ್ತಿದ್ದಿತು. ಈಗ ವಿದ್ಯುತ್ ಒಲೆ ಆದುದರಿಂದ ಅಡಿಗೆ ಆದಕೂಡಲೇ ಒಲೆ ಆರಿಸಬೇಕು. ಆರಿಸಿದರೆ, ಬಡಿಸುವ ವೇಳೆಗೆ ವಿದ್ಯುತ್ ಇರುವುದಿಲ್ಲ. ಎಲ್ಲ ಪದಾರ್ಥಗಳೂ ಆರಿ ತಣ್ಣಗಾಗುತ್ತವೆ, ನಿಮಂತ್ರಣಗಾರರು ತುಂಬ ಬೇಸರಪಡುತ್ತಾರೆ, ಆ ದಿನದ ಅಡಿಗೆಯನ್ನು ತುಂಬ ಬಿಸಿಯಾಗಿ ಇಟ್ಟಿರಬೇಕೆಂಬುದು ಶ್ರಾದ್ಧಕರ್ತರ ಮತ್ತು ನಿಮಂತ್ರಣಗಾರರ ಬಯಕೆ. ಅಣುಬಾಂಬು ತಯಾರಿಸುತ್ತಿರುವ ಚೀನದಲ್ಲಿ ಪಿತೃಗಳ ಮತ್ತು ಎಲ್ಲ ಹಿರಿಯರ ದಿನಾಚರಣೆಯನ್ನು ತುಂಬ ಗೌರವದಿಂದ ಆಚರಿಸುತ್ತಾರೆಂದು ಅಲ್ಲಿಗೆ ಹೋಗಿ ಬಂದು ಗ್ರಂಥವನ್ನು ಬರೆದಿರುವ ಶ್ರೀ ಎಸ್. ವಿ ಕೃಷ್ಣರಾಯರು ಹೇಳಿದ್ದಾರೆ.

ಸಿಕ್ಕುವುದಿಲ್ಲ. ಯಂತ್ರದಿಂದ ಬರುವ ಆಹಾರವನ್ನೇ ಒದಗಿಸುತ್ತೇವೆ" ಎನ್ನಬಹುದು. ಹಾಲು ಹಣ್ಣು ಯಾವುದೂ ಸಿಕ್ಕುವುದಿಲ್ಲ. ಯಂತ್ರಗಳ ಮೂಲಕ ಸೀಸೆಗಳಲ್ಲಿ, ಪೊಟ್ಟಣಗಳಲ್ಲಿ ಒದಗಿಸುತ್ತೇವೆ. "ಎನ್ನಬಹುದು. ಅಂತೂ ಹಿಂದೆ ನೋಡಿದ್ದ ಯಾವ ಅಂಗಡಿಯಲ್ಲಿಯೂ ಸರ್ವೆಸೌದೆ ಸಿಕ್ಕದುದರಿಂದ ಮಲ್ಲೇಶ್ವರಕ್ಕೆ ಹೋಗುವ ಬಸ್ ರಸ್ತೆಯಲ್ಲಿ ಹೊರಟೆ. ಸುಮಾರು ಒಂದು ಫರ್ಲಾಂಗ್ ಹೋದ ಮೇಲೆ ಅಲ್ಲೊಂದು ಸೌದೆ ಅಂಗಡಿ ಸಿಕ್ಕಿತು. ಆದರೆ ಅಲ್ಲಿಯೂ ಸರ್ವೆಸೌದೆ ಇರಲಿಲ್ಲ. ಅಲ್ಲಿ ಗೊಬ್ಬಳಿ ಅಥವಾ ಜಾಲಿ ದಿಮ್ಮಿಗಳು-ಅವೂ ಹಸಿ-ಇದ್ದವು. ಆದರೆ ಅದು ತುಂಬ ಹಸಿಯಾಗಿತ್ತು. ನೀರು ತೊಟ್ಟಿಕ್ಕುತ್ತಿರುವುದೋ

ಫಲಹಾರ ಮಾಡಿ ಅರ್ಧಗಂಟೆ ಸುಧಾರಿಸಿಕೊಂಡು ಬಂದು ನನ್ನ ದಿಮ್ಮಿಗೆ ಕೈ ಹಾಕಿದನು. ಅದು ನಿಜವಾಗಿ ಸಾಹಸದ ಕಾರ್ಯವೆ. ಗೊಬ್ಬಳಿ ಮರ ಬಹಳ ಗಟ್ಟಿ ಚೇಗು. ಅದನ್ನು ಆತನಿಗೆ ನಾನು ಆ ದಿನ ಒಡೆಯಲು ಹೇಳಿದುದೇ ತಪ್ಪು. ನನಗೆ ಸ್ವಲ್ಪ ವಿವೇಕವಿದ್ದರೂ ಆ ದಿನ ನಾನು ದಿಮ್ಮಿಯನ್ನು ಅಲ್ಲಿ ಬಿಟ್ಟು ಬರಬೇಕಾಗಿತ್ತು. ಬೆಳಗಿನಿಂದ ಇಷ್ಟು ಹೊತ್ತು ಕುಳಿತು ಆಯಿತು. ಸೌದೆ ತೆಗೆಸಿಕೊಂಡೇ ಹೋಗೋಣ ಎಂಬ ಹಟ. ಅಂತೂ ಅವನು ಸೌದೆಯನ್ನು ಒಡೆದು ಗಾಡಿಗೆ ತುಂಬಿದನು.

ಸೌದೆ ಅಂಗಡಿಗಳು ಸಾಮಾನ್ಯವಾಗಿ ಮನೆಗಳಿಗೆ ಹತ್ತಿರದಲ್ಲಿಯೇ ಇರುತ್ತವೆ. ಆದರೆ




ಹೋದವರುಷ ನಮ್ಮ ತಂದೆಯವರ ಶ್ರಾದ್ಧಕ್ಕೆ ಒಂದು ತಿಂಗಳ ಮುಂಚೆಯೇ ನಾನು ಒಂದು ದಿನ ಬೆಳಿಗ್ಗೆ ನಾಲ್ಕು ಮಣ ಒಣಗಿದ ಸರ್ವೆಸೌದೆಯನ್ನು ಹುಡುಕಿ ತರೋಣವೆಂದು ಹೊರಟೆ. ರಾಜಾಜಿನಗರದಲ್ಲಿ ಹಿಂದೆ ಸರ್ವೆಸೌದೆ ಸಿಕ್ಕುತ್ತಿದ್ದ ಅಂಗಡಿಗಳಿಗೆಲ್ಲ ಹೋಗಿ ನೋಡಿದೆ. ಅಲ್ಲಿ ಎಲ್ಲಿಯೂ ಸರ್ವೆಸೌದೆ ಸಿಕ್ಕಲಿಲ್ಲ." ಈಚೆಗೆ ಸರ್ವೆಸೌದೆ ಸಿಕ್ಕುತ್ತಿಲ್ಲ. ಎಲ್ಲ ಬಿರ್ಲಾ ಕಾರ್ಖಾನೆಗೆ ಹೋಗುತ್ತಿದೆ" ಎಂದರು. ಈ ಹುಚ್ಚು ಔದ್ಯೋಗೀಕರಣದಿಂದ ಏನೇನು ಆಗುತ್ತದೆಯೊ? ನಾಳೆ "ಅಕ್ಕಿಯೂ

ಎಂಬಂತಿತ್ತು. ಅಂಗಡಿಯವನು "ಅದು ಹಸಿಯಾದರೂ ಉರಿಯುತ್ತೆ" ಎಂದು ಹೇಳಿದುದರಿಂದ ನಾನು ಒಂದು ದಿಮ್ಮಿಯನ್ನು ತೂಗಿಸಿದೆ. ಅದು ಹದಿನೈದು ಮಣ ಇತ್ತು. ಅದನ್ನು ಒಡೆದು ಸೀಳಿ ಗಾಡಿಗೆ ತುಂಬಬೇಕಾಗಿತ್ತು. ಕೈಗಾಡಿಯನ್ನು ಇಟ್ಟಿದ್ದವನೇ ಸೌದೆಯನ್ನು ಒಡೆದು-ಎತ್ತು ಇರಲಿಲ್ಲ-ಗಾಡಿಯನ್ನು ಎಳೆದುಕೊಂಡು ಹೋಗಿ ಗಿರಾಕಿಯ ಮನೆಗೆ ಹಾಕುತ್ತಿದ್ದನು. ಗಾಡಿಯವನು ಮೊದಲು ಒಬ್ಬ ಗಿರಾಕಿ ತೆಗೆದುಕೊಂಡಿದ್ದ ದಿಮ್ಮಿಯನ್ನು ಒಡೆದು ಅವನ ಮನೆಗೆ ಹಾಕಿ ಬಂದನು. ಅನಂತರ

ನಾನು ಹೇಗೋ ತಪ್ಪುಮಾಡಿ ಸರ್ವೆಸೌದೆಗಾಗಿ ಸುತ್ತಾಗಿ ಸ್ವಲ್ಪದೂರದ ಅಂಗಡಿಗೆ ಹೋಗಿ ಬಿಟ್ಟಿದ್ದೆ. ಗಾಡಿಯವ ಗಾಡಿ ಎಳೆದು ಸೌದೆ ಒಡೆದು ಸೋತಿದ್ದನು, ಅವನು ಮುಂದೆ ಎಳೆದುಕೊಂಡು ಹೋಗುತ್ತಿರಲು ನಾನು ಹಿಂದೆ ತಳ್ಳುತ್ತಿದ್ದೆ. ಬರಬರುತ್ತ ಗಾಡಿ ಏನು ಮಾಡಿದರೂ ಹೋಗಲೇ ಒಲ್ಲದು, ನಾವು ಹೋಗುತ್ತಿದ್ದುದು ಬಸ್ಸುರಸ್ತೆ ಯಾಗಿದ್ದುದರಿಂದ ಅಲ್ಲಿ ನೂಕುನುಗ್ಗಲು ಹೆಚ್ಚೆಂದು ಮಗ್ಗಲು ರಸ್ತೆಗೆ ಗಾಡಿಯನ್ನು ತಿರುಗಿಸಿದೆವು. ಆದರೆ ನಮ್ಮ ಗ್ರಹಚಾರಕ್ಕೆ ಆ ರಸ್ತೆ, ನಾವು ಹೋಗುತ್ತಿದ್ದ ಕಡೆಗೆ

ದಿಬ್ಬವಾಗಿತ್ತು. ನಾನೂ ಪಂಚೆಯನ್ನು ಮೇಲಕ್ಕೆ ಕಟ್ಟಿ ಎರಡು ಕೈಗಳಿಂದಲೂ ಗಾಡಿಯನ್ನು ದಬ್ಬುತ್ತಿದ್ದೆ. ಆದರೆ ಚಲಿಸುತ್ತಲೇ ಇರಲಿಲ್ಲ. ಬದಲಾಗಿ ಗಾಡಿ ಇಳಿಜಾರು ಆಗಿದ್ದ ಹಿಂದಕ್ಕೇ ಅಂಗುಲ ಅಂಗುಲವಾಗಿ ಜರಗುತ್ತಿತ್ತು. ಗಾಡಿಯುವನು ಎಳೆಯಲಾರದೆ ಒಂದು ಸಲಕೈಬಿಟ್ಟಾಗ ಗಾಡಿ ಪೂರ್ತಿ ನನ್ನ ಕಡೆಗೆ ಉರುಳಿತು. ಭಾರವನ್ನು ತಡೆಯಲಾರದೆ ನಾನು ಕೈ ಬಿಟ್ಟು ಬಿಟ್ಟೆ. ಸ್ವಲ್ಪ ಹಿಂದಕ್ಕೆ ಸರಿದು ಗಾಡಿ ನಿಂತೇ ಬಿಟ್ಟಿತು. ಗಾಡಿಯುವನೂ ನಾನೂ ತುಂಬ ಸೋತಿದ್ದೆವು. ಆ ಬೀದಿಯಲ್ಲಿ ನನಗೆ ಪರಿಚಿತರಾದ ಹಿರಿಯರೊಬ್ಬರು "ಇದೇನಪ್ಪ ನಿನ್ನ ಅವತಾರ, ಒಳ್ಳೆಯವರ ಮಾನ ಪಟ್ಟಣದಲ್ಲಿ ಹೋಯಿತು" ಎಂದಂತೆ, ಕ್ಯಾಮರಾ ಇದ್ದಿದ್ದರೆ ಫೋಟೊ ತೆಗೆಯುತ್ತಿದ್ದೆ, ಇಪ್ಪತ್ತು ರೂಪಾಯಿ ಸಿಕ್ಕುತ್ತಿತ್ತು ಎಂದರು. ಆ ದಾರಿಯಲ್ಲಿ ಬಂದ ಮತ್ತೊಬ್ಬ ಬಲಿಷ್ಠ ಕೂಲಿಯುವನ ಸಹಾಯದಿಂದ ಅಂತೂ ಮಧ್ಯಾಹ್ನ ಎರಡು ಗಂಟೆಗೆ ಮನೆ ಸೇರಿದೆವು. ನನ್ನ ಹೆಂಡತಿಗೆ ನಾನು ಸೌದೆ ತರಲು ಹೋಗಿದ್ದುದು ಗೊತ್ತಾಗಿದ್ದುದರಿಂದ ಅವಳು ಸ್ವಲ್ಪ ಕಾತರಳಾಗಿ ಆ ವೇಳೆಗೆ ಸುತ್ತಮುತ್ತ ಇದ್ದ ಕೆಲವು ಸೌದೆ ಅಂಗಡಿಗಳಿಗೆ ಹೋಗಿ ವಿಚಾರಿಸಿ ಸಾಕಷ್ಟು ಗಾಬರಿ ಮಾಡಿಕೊಂಡಿದ್ದಳು.

■

ಬೆಂಗಳೂರಿನಲ್ಲಿ ಸತ್ತರೆ ಸುಡುವುದಕ್ಕೆ ಸೌದೆ ಸಿಕ್ಕುತ್ತದೆಂಬ ಖಾತರಿ ಇಲ್ಲ. ಹಾಸನದಂಥ ಸಣ್ಣ ಊರಿನಲ್ಲಿಯೇ ಸುಬ್ಬುವಿನ ಹೆಣಕ್ಕೆ ಒಟ್ಟಿದ್ದ ಸೌದೆಯನ್ನು ಎತ್ತಿಕೊಂಡು ಹೋಗಿದ್ದರು. ಮನುಷ್ಯ ಏನು ಮಾಡುತ್ತಾನೆ ಎಂಬುದನ್ನು ಹೇಳುವದು ಸಾಧ್ಯವಿಲ್ಲ! ಮರುದಿನ ಸಂಚಯನಕ್ಕೆ ಸ್ಮಶಾನಕ್ಕೆ ಹೋದಾಗ ಹೆಣ ಅರ್ಧಮಾತ್ರ ಬೆಂದಿತ್ತು. ಹೊಸದಾಗಿ ಸೌದೆಯನ್ನು ತರಿಸಿ ಚಿತೆಯನ್ನು ಸರಿಮಾಡಲು ಹೋದಾಗ, ಹೆಣದ ತಲೆ ಅಲ್ಲಿ ಇಲ್ಲದುದು ಕಂಡಿತು. ನಾಯಿಯೋ ನರಿಯೋ ಎತ್ತಿಕೊಂಡು ಹೋಗಿದ್ದಿರಬೇಕು. ಆಗ ಸುತ್ತಮುತ್ತ ಸ್ವಲ್ಪದೂರ ನೋಡಿದಾಗ ತಲೆಯು ಗದ್ದೆ ಹಳ್ಳದಲ್ಲಿ ಬಿದ್ದಿತ್ತು. ಅದನ್ನು ತಂದು ಚಿತೆಯ ಮೇಲೆ ಅದರ ಸ್ಥಳದಲ್ಲಿ ಇಟ್ಟು, ಸೌದೆ ಒಟ್ಟಿ ಇರಿಸಿದ ಮೇಲೆ ಶವವು ಪೂರ್ತಿಯಾಗಿ ಬೂದಿಯಾಯಿತು. ಅನಂತರ ಮೇಲೆ ನೀರು ಸುರಿದು ಅಸ್ಥಿ ಸಂಚಯನ ಮಾಡಿ ಮನೆಗೆ ಬಂದೆವು.

ಸ್ಮಶಾನಕ್ಕೆ ಸುಬ್ಬುವಿನ ಮಿತ್ರ ರಾಮುವೂ ಬಂದಿದ್ದನು. ರಾಮುವೂ ಸುಬ್ಬುವೂ ದೀರ್ಘ ಕಾಲದ ಮಿತ್ರರು. ಇಬ್ಬರೂ ರೋಗಿಗಳು ಅವರಿಬ್ಬರೂ ನಾನು ಮುಂಚೆ ಸಾಯುತ್ತೇನೆ, ನಾನು ಮುಂಚೆ ಸಾಯುತ್ತೇನೆ ಎಂದು ವಿನೋದವಾಗಿಯೇ ಚರ್ಚಿಸುತ್ತಿದ್ದರು. ಮೊದಲು ಹೋದವರು ವೈಕುಂಠದಲ್ಲಿ ಮತ್ತೊಬ್ಬನಿಗಾಗಿ ಜಾಗವನ್ನು ಕಾಯ್ದು ಇಟ್ಟಿರಬೇಕೆಂದು ಮಾತನಾಡುತ್ತಿದ್ದರು. ರಾಮುವಿನ ಅಂತ್ಯಕ್ಕೂ ಹೆಚ್ಚುಕಾಲವಿಲ್ಲವೆಂಬುದು ಎಲ್ಲರಿಗೂ ಗೊತ್ತಾಗಿದ್ದಿತು. ಸುಬ್ಬುವಿನ ಮರಣದಿನ ರಾಮುವೂ ಹಳೆಯ ಮಿತ್ರನ ಅಂತ್ಯದರ್ಶನಕ್ಕಾಗಿ ರುದ್ರಭೂಮಿಗೆ ಬಂದಿದ್ದನು. ಅಂದು ಅವನು ಅತ್ಯಂತ ನಿಶ್ಯಕ್ತನೂ ನಿರುತ್ಸಾಹಿಯೂ ಆಗಿದ್ದನು.

ರಾಮು ಸಾಯುವುದಕ್ಕೆ ಮೂರು ದಿನಗಳ ಮುಂಚೆ, ನಾನು ಅವನ ಮನೆಗೆ ಹೋಗಿದ್ದೆ ರಾಮು ತೀರ ನಿಶ್ಯಕ್ತನಾಗಿದ್ದನು. ನನ್ನನ್ನು ನೋಡಿ ಬಲಾತ್ಕಾರದಿಂದ ನಗುವನ್ನು ತುಟಿಗೆ ತರಿಸಿಕೊಂಡನು. ನಾನು ಹೊರಡುವುದಕ್ಕೆ ಮುಂಚೆ ಅವನು ನನ್ನ ಕೈ ಹಿಡಿದುಕೊಂಡು "ನನ್ನದೊಂದು ಕೊನೆ ಪ್ರಾರ್ಥನೆ ಇದೆ" ಎಂದನು ನಾನು "ಆ ಕಾಲ ಬಹಳದೂರ ಇದೆ." ಎಂದೆ. ರಾಮುವು "ದೂರವಿಲ್ಲ" ಎಂದು ನನ್ನ ಕೈಯ್ಯನ್ನು ಮತ್ತಷ್ಟು ಅಮುಕಿದನು. ನಾನು ಆತುರದಿಂದಲೇ "ಹೇಳಿ, ಹೇಳಿ ಖಂಡಿತ ನಡೆಸುತ್ತೇನೆ" ಎಂದೆ. ರಾಮುವು "ನನ್ನ ದಹನವಾಗುವ ದಿನ ನನ್ನ ಶವ ಸುಟ್ಟು ಪೂರ್ತಿ ಬೂದಿಯಾಗುವವರೆಗೆ ನೀವು ಸ್ಮಶಾನ ಬಿಟ್ಟು ಹೋಗಕೂಡದು" ಎಂದನು. ನಾನು ಅವನಿಗೆ ಪೂರ್ತಿ ಆಶ್ವಾಸನೆ ಕೊಟ್ಟು ಹಿಂದಿರುಗಿದೆ. ಮೂರು ದಿನಗಳ ನಂತರ ರಾಮು ಸತ್ತನು. ನಾನು ಮನೆ ಬಿಟ್ಟು ಎಲ್ಲಿಯೂ ಹೋಗದೆ ಕಾಯುತ್ತಲೇ ಇದ್ದೆ, ಶವಯಾತ್ರೆಯ ಜೊತೆ ನಾನೂ ರುದ್ರಭೂಮಿಗೆ ಹೋದೆ. ಮಧ್ಯಾಹ್ನ ಒಂದು ಗಂಟೆ ಹೊತ್ತಿಗೆ ಶವಕ್ಕೆ ಬೆಂಕಿಕೊಟ್ಟು ಬಂದಿದ್ದವರೆಲ್ಲ ಗಾಳಿಯ ಅರ್ಭಟಕ್ಕೆ ಎಲ್ಲ ಭಸ್ಮವಾಗುತ್ತೆ ಎಂದುಕೊಂಡು ಹೊರಟು ಹೋದರು,

ಸ್ಮಶಾನದಲ್ಲಿ ನಾನೊಬ್ಬನೇ ಕುಳಿತಿದ್ದೆ. ನನಗಿಂತ ನಾಲ್ಕಾರು ಮಾರು ಆಚೆ ಮತ್ತೊಬ್ಬರು ಕುಳಿತಿದ್ದರು. ಅವರು ಯಾರು ಎಂಬುದು ನನಗೆ ಗೊತ್ತು. ಅವರೂ ಶವಸಂಸ್ಕಾರಕ್ಕಗಿಯೇ ಬಂದಿದ್ದವರು. ಆದರೆ ಅವರು ಯಾಕೆ ಇತರೊಂದಿಗೆ ಮನೆಗೆ ಹೋಗಲಿಲ್ಲ ಎಂದು ಯೋಚಿಸಿದೆ. ನಾಲ್ಕು ನಿಮಿಷ ಬಿಟ್ಟು ನಾನು ಅವರ ಸಮೀಪದಲ್ಲಿ ಹೋಗಿ ಕುಳಿತೆ. ರಾಮು ಹಿಂದೆ ಶಾಲಾಮಾಸ್ತರ್ ಆಗಿದ್ದ. ಇವರು ಶಾಲೆಯ ಮುಖ್ಯೋಪಾಧ್ಯಾಯರು. ನಾನು ಅವರನ್ನು "ನೀವು ಯಾಕೆ ಇನ್ನೂ ಮನೆಗೆ ಹೋಗಲಿಲ್ಲ. ಇಲ್ಲೆ ಕುಳಿತಿರಿ" ಎಂದು ಕೇಳಿದೆ. ಅವರು "ಶವ ಸುಟ್ಟು ಬೂದಿಯಾಗುವವರೆಗೆ ನಾನು ಇಲ್ಲಿ ಇರಬೇಕು" ಎಂದರು. "ನಾನೂ ಅದಕ್ಕಾಗಿಯೆ ಇಲ್ಲ ಇರಬೇಕು, ರಾಮು ನಿಮಗೂ ಹೇಳಿದ್ದನೇ" ಎಂದು ಕೇಳಿದೆ. ಅವರು "ಹೌದು ಒಬ್ಬರದು ಒಬ್ಬರಿಗೆ ತಿಳಿಯದಂತೆ ನಮ್ಮಿಬ್ಬರನ್ನೂ ತನ್ನ ಶವದ ಕಾವಲಿಗೆ ಇರಿಸಿಕೊಂಡಿದ್ದ" ಎಂದರು. ನಾನು ''ಒಬ್ಬರು ತಪ್ಪಿದರೆ ಒಬ್ಬರು ಇರಲಿ ಎಂದು ಹೀಗೆ ಮಾಡಿರಬಹುದು" ಎಂದೆ. ನಾವು ಎರಡು ಗಂಟೆ ಕುಳಿತಿರುವದರೊಳಗೆ ಶವ ಪೂರ್ತಿ ದಹನವಾಯಿತು.

ಬೆಂಗಳೂರಿನಲ್ಲಿ ಸಾಯುವವನಿಗೆ ಸುಡಲು ಸೌದೆ ಸಿಕ್ಕುವುದೋ ಇಲ್ಲವೊ ಹೇಳಲಾರೆ. ಆದರೆ ಇಲ್ಲಿ ವಿದ್ಯುತ್ ಚಿತಾಗಾರವಿದೆ. ಆದರೆ ವಿದ್ಯುತ್ ಕೊರತೆಯೂ ಇದೆ. ಚಿತಾಗಾರದ ಮುಂದೆ ಶವಗಳ ಸಾಲು ''ಕ್ಯೂ" ನಿಲ್ಲಬಹುದು, ಅಲ್ಲಿಯೂ ವಿ.ಐ.ಪಿ., ಸಾಮಾನ್ಯ ಎಂಬ ಮೇಲು ಕೀಳು ಪ್ರಭಾವಗಳು ತಲೆದೋರಬಹುದು. ''ಇಲ್ಲಿ ಕಿರೀಟ ಪತಿಯೂ ಕೂಲಿಯೂ ಒಂದೇ'' ಎಂಬ ನುಡಿಯೂ ಸುಳ್ಳಾಗಬಹುದು. ಶವ ಪೂರ್ತಿ ಬೇಯುವುದಕ್ಕೆ ವಿದ್ಯುತ್ ಕೊರತೆಯಿಂದ ಒಲೆ ತಣ್ಣಗಾಗಬಹುದು. ವರುಷಗಳ ಕೆಳಗೆ ಒಂದು ಚಿತಾಗಾರದಲ್ಲಿ ಶವ ಅರ್ಧ ಬೆಂದಿದ್ದಾಗ ವಿದ್ಯುತ್ ಆರಿಹೋಯಿತು, ತಣ್ಣಗಾದ ಎಷ್ಟೋ ಹೊತ್ತಿನ ಮೇಲೆ ಮತ್ತೆ ವಿದ್ಯುತ್ ಬಂದು ಶವವನ್ನು ಮತ್ತೆ ಬಿಸಿಮಾಡಿ ಬೂದಿಮಾಡಿತು. ಸತ್ತವರು ರಾಷ್ಟ್ರಜೀವನದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವರು.

●

ಲೋಕಮಾನ್ಯ ಬಾಲಗಂಗಾಧರ ತಿಲಕರು ಸ್ವರಾಜ್ಯ ಹೋರಾಟಕ್ಕಾಗಿ ಮರಾಠಾ ಕೇಸರಿ ಪತ್ರಿಕೆಗಳಲ್ಲಿ ಸಿಡಿಲಿನಂತಹ ಲೇಖನಗಳನ್ನು ಬರೆಯುತ್ತಿದ್ದರು. ಅವರು ಬಾಡಿಗೆಗೆ ಹಿಡಿದಿದ್ದ ಕೊಠಡಿಯೇ ಆಫೀಸು, ವಾಸದ ಮನೆ ಎಲ್ಲ ಆಗಿತ್ತು. ಮೇಜು ಕುರ್ಚಿ ಯಾವುದೂ ಇರಲಿಲ್ಲ. ಹಾಸಿಗೆಯ ಸುರುಳಿಯೇ ಕಾಲುಮಣೆ. ಅವರ ಜೊತೆ ಕೆಲಸಗಾರ "ನಾವು ಸತ್ತರೆ ನಮ್ಮ ಶವ ಸಂಸ್ಕಾರಕ್ಕೆ ಸಹ ಆಗುವಷ್ಟು ಹಣ ನಮ್ಮಲ್ಲಿಲ್ಲ" ಎಂದರು. ತಿಲಕರು "ಸತ್ತರೆ ನಮ್ಮ ಶವದ ವಿಲೇವಾರಿಯನ್ನು ಪೌರಸಭೆಯವರು ನೋಡಿಕೊಳ್ಳುತ್ತಾರೆ. ನಮಗೆ ಯಾಕೆ ಈ ಉಸಾಬರಿ?" ಎಂದರು. ಹಾಗೆ ನಾವೂ ನಮ್ಮ ಕಾಷ್ಠವ್ಯಸನವನ್ನು ಮರೆಯಬೇಕು. ಆದರೆ ನಿಮಂತ್ರಣಗಾರರು ಬಿಸಿ ಬಿಸಿ ಬೇಡುತ್ತಾರಲ್ಲ ಸ್ವಾಮಿ! ●





# ಭಾರತೀಯ ಸಂಗೀತ ವೈಭವ

ಡಾ. ಬಿಂದುಮಾಧವ ಡಿ. ಪಾಠಕ

ಭಾರತದಲ್ಲಿ ಸಂಗೀತವು ಎಲ್ಲ ಜನಮನಸದಲ್ಲಿ ವ್ಯಾಪ್ತವಾಗಿದೆ. ಲೋಕ ಸಂಗೀತದಿಂದ ಹಿಡಿದು ವೈದಿಕ ಸಂಗೀತ, ಶಾಸ್ತ್ರೀಯ ಸಂಗೀತ ಇವುಗಳ ಪಾರಂಪಾರಿಕ ವಿಕಾಸ, ಪರಿವರ್ತನೆ ಮತ್ತು ಪರಿವರ್ಧನೆ ಭಾರತದಲ್ಲಿ ಎಷ್ಟರ ಮಟ್ಟಿಗೆ ಆಗಿದೆಯೋ ಅಷ್ಟುಮಟ್ಟಿಗೆ ಇನ್ನುಳಿದ ಯಾವ ದೇಶಗಳಲ್ಲಿ ಆದದ್ದು ಕಂಡುಬರುವದಿಲ್ಲ. ಇದು ಭಾರತೀಯರಿಗೆ ಹೆಮ್ಮೆಯ ವಿಷಯ. ಭಾರತೀಯ ಸಂಗೀತದ ಇತಿಹಾಸ ಅತ್ಯಂತ ಪ್ರಾಚೀನವಾಗಿದ್ದು ಇದರ ಮೂಲದ ಕಥೆ ಶೋಧಿಸಲು ಸಾಧ್ಯವಿಲ್ಲ. ಆದರೂ ವೇದಗಳಲ್ಲಿ, ಪುರಾಣಗಳಲ್ಲಿ, ಉಪನಿಷತ್ತುಗಳಲ್ಲಿ ಸಂಗೀತದ ಬಗೆಗಿನ ಉಲ್ಲೇಖಗಳು ದೊರೆಯುತ್ತವೆ. ಭಾರತೀಯರು ಸಂಗೀತದ ಸಂಬಂಧವನ್ನು ಧರ್ಮದ ಜೊತೆಗೆ ಜೋಡಿಸಿದರು. ಜೀವನದ ನಾಲ್ಕು ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಇವುಗಳನ್ನು ಸಾಧಿಸುವದಕ್ಕಾಗಿ ಸಂಗೀತವೂ ಒಂದು ಶ್ರೇಷ್ಠ ಮಾಧ್ಯಮ ಎಂದು ಭಾವಿಸಿದರು. ಸಂಗೀತದ ಸಂಬಂಧವು ಧರ್ಮದ ಜೊತೆ ಕಲ್ಪಿಸಿಕೊಂಡಿರುವದರಿಂದ ನಮ್ಮ ಭಾರತೀಯರ ಸಮಸ್ತ ದೇವದೇವತೆಯರು ಗಾಯನ ವಾದನ ಹಾಗೂ ನರ್ತನ ಈ ಯಾವುದೇ ಒಂದು ವಿಧದ ಸಂಗೀತದ ಪರಿಣತರು ಎಂದು ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ.

ಸಾಮಾನ್ಯವಾಗಿ ಎಲ್ಲ ಭಾರತೀಯ ವಿದ್ವಾಂಸರು ಹಿಂದು ಧರ್ಮದ ಮೂಲಗ್ರಂಥವಾದ ವೇದ ಹಾಗೂ ಪುರಾಣಗಳನ್ನೇ ಆಧಾರವಾಗಿಟ್ಟುಕೊಂಡು ಬೇರೆ ಬೇರೆ ದೃಷ್ಟಿಕೋನದಿಂದ ಸಂಗೀತದ ಹುಟ್ಟಿನ ಬಗೆಗೆ ಚರ್ಚಿಸಿದ್ದಾರೆ. ಆದಿ ವಿಷ್ಣು ತನ್ನ ಮಗನಾದ ಬ್ರಹ್ಮನಿಗೆ, ಅನಂತರ ಬ್ರಹ್ಮನು ಈ ವಿದ್ಯೆಯನ್ನು ಶಿವನಿಗೂ,-ವೀಣಾ ಪುಸ್ತಕಪಾಣಿ ಸರಸ್ವತಿಗೂ ಹೇಳಿಕೊಟ್ಟನು. ಸರಸ್ವತಿಯು ನಾರದನಿಗೆ, ನಾರದನಿಂದ ತುಂಬುರು, ಗಂಧರ್ವರು, ಕಿನ್ನರರು ಹಾಗೂ ಅಪ್ಸರೆಯರಿಗೆ ಈ ವಿದ್ಯೆ ಲಭಿಸಿತು. ಸ್ವರ್ಗಲೋಕದಿಂದ ಭರತ, ಹನುಮಾನ, ನಾರದ ಮುಂತಾದ ಋಷಿಗಳು ಈ ಕಲೆಯ ಪ್ರಚಾರಕ್ಕಾಗಿ ಭೂಮಿಯ ಮೇಲೆ ಅವತರಿಸಿದರು ಎಂದು ಹೇಳಲಾಗಿದೆ. ಕೆಲವು ವಿದ್ವಾಂಸರು ಸಂಗೀತದ ಹುಟ್ಟು ಮಾನವನ ಕಲ್ಪನಾ ಶಕ್ತಿ ಹಾಗೂ ಉತ್ಪಾದಕ ಶಕ್ತಿಯ ಕೊಡುಗೆ ಆಗಿದೆ ಎಂದು ಪ್ರತಿಪಾದಿಸಿದ್ದಾರೆ. ಆದಿಮಾನವನು ಸಂಗೀತದ ಧ್ವನಿಯ ಮೂಲಕ ವಿವಿಧ ಮನೋಭಾವಗಳನ್ನು ವ್ಯಕ್ತಪಡಿಸುವ ಕಲೆ ಕಲಿಯಲು ತೊಡಗಿದನು. ಅವನು ಸುಖ ಹಾಗೂ ದುಃಖದ ಅನುಭವಗಳನ್ನು ಮುಖ ವಿಕಾರದಿಂದಲೂ ಹಸ್ತಾದಿ ಅಂಗಾಂಗಗಳ ಚಲನವಲನದಿಂದಲೂ ಅಭಿವ್ಯಕ್ತಪಡಿಸುತ್ತಿದ್ದನು. ಕಾಲಕಳೆದಂತೆ ಅವನಿಗೆ ಅನೇಕ ವಸ್ತುಗಳ ಅವಶ್ಯಕತೆ ಉಂಟಾಯಿತು. ನೀರಡಿಕೆಯಾದಾಗ ನದಿ ಹಳ್ಳಗಳ ನೀರನ್ನು ಕುಡಿದು, ಹಸಿವೆಯಾದಾಗ ಹಣ್ಣು ಹಂಪಲಗಳನ್ನು ತಿಂದು ಜೀವಿಸುತ್ತಿದ್ದನು. ನಿಸರ್ಗದ ಬಣ್ಣಬಣ್ಣದ ವಾತಾವರಣದಲ್ಲಿ ಪಶುಪಕ್ಷಿಗಳ ಧ್ವನಿಗಳು ಅವನ ಮನಸ್ಸಿನಲ್ಲಿ ಆಶ್ಚರ್ಯಜನಕ ಪ್ರವೃತ್ತಿಗಳನ್ನು ನಿರ್ಮಿಸುತ್ತಿದ್ದವು. ಮೇಘಗರ್ಜನೆ, ಗಿಡಗಳ ಸಪ್ಪಳ, ಕೋಗಿಲೆ ಹಾಗೂ ನವಿಲಿನಂತಹ ಪಕ್ಷಿಗಳ ಮಧುರ ಧ್ವನಿ ಇತ್ಯಾದಿಗಳನ್ನು ಕೇಳಿದಾಗ ಅವನು ತನ್ನ ಜೀವನದ ಕಷ್ಟಗಳನ್ನು ಮರೆಯುತ್ತಿದ್ದನು. ನಿಸರ್ಗ ನಿರ್ಮಿತ ಅನೇಕ ಮಧುರ ಧ್ವನಿಗಳನ್ನು ಕೇಳಿದ ಅವನ ಮನಸ್ಸಿನಲ್ಲಿ ಅಂತಹ ಧ್ವನಿಗಳ ಅನುಕರಣದಿಂದ ಬೇರೆ ಬೇರೆ ಧ್ವನಿಗಳನ್ನು ಉತ್ಪನ್ನಮಾಡುವ ಆಸೆ ಉಂಟಾಯಿತು. ಕಾಲಕ್ರಮೇಣ ಅವನಿಗೆ ಈ ಪ್ರಕೃತಿಯ ಬೇರೆ ಬೇರೆ ಸ್ವರಗಳ ಅನುಕರಣೆ ಮಾಡುವಲ್ಲಿ ಯಶಸ್ಸು ದೊರೆಯಿತು. ಮುಂದೆ ಅವನು ತನ್ನ ಕಲ್ಪನಾ ಶಕ್ತಿಯ ಬಲದಿಂದ ಅನೇಕ ಮಧುರ ಸ್ವರಗಳನ್ನು ಸೃಷ್ಟಿ ಮಾಡಿರಬಹುದು. ಇದೇ ಸಂಗಿತದ ಹಿನ್ನೆಲೆಯಾಗಿರಬಹುದು. ಈಶ್ವರ ಸಾಕ್ಷಾತ್ಕಾರಕ್ಕೆ ಸಾಧನವಾಗಬಲ್ಲ ಈ ನಿಯಮಬದ್ಧ ಸಂಗೀತವನ್ನೇ ಭರತಮುನಿಯು 'ಮಾರ್ಗ' ಅಥವಾ 'ಮಾರ್ಗ ಸಂಗೀತ' ಎಂದು ಕರೆದನು.

ಪ್ರಾಚೀನ ಕಾಲದಲ್ಲಿ ಸಂಗೀತವನ್ನು ಎರಡು ವಿಧದಿಂದ ವಿಭಜಿಸಲಾಗಿತ್ತು. ೧.ಮಾರ್ಗ ಸಂಗೀತ, ೨. ದೇಶಿ ಸಂಗೀತ ಅಥವಾ ಗಾನ ಎಂದು. ಪ್ರಾಚೀನ ಋಷಿಮುನಿಗಳು ದೇವಸಾಕ್ಷಾತ್ಕಾರಕ್ಕೆ ಸಂಗೀತವು ಒಂದು ಪ್ರಮುಖ ಸಾಧನವೆಂದು ಭಾವಿಸುತ್ತಿದ್ದರು. ಸಂಗೀತದಲ್ಲಿ ಮನಸ್ಸನ್ನು ಏಕಾಗ್ರಮಾಡುವ ಶಕ್ತಿ ಇದೆ ಎಂದು ಅವರು ನಂಬಿದ್ದರು.

ಮಾರ್ಗ ಸಂಗೀತದಲ್ಲಿ ಜಾತಿಗಾನ ಹಾಡುತ್ತಿದ್ದರು. ಈ ಜಾತಿಗಳು ಆ ಸಮಯದಲ್ಲಿ ಪ್ರಚಾರದಲ್ಲಿದ್ದ ಸ್ವರಗಳ ರಚನೆಗಳಾಗಿಯೋ ತಾಳಬದ್ಧವಾಗಿಯೋ ಇರುತ್ತಿದ್ದವು. ಮಾರ್ಗ ಸಂಗೀತದಲ್ಲಿ

ಸ್ವರ ರಚನೆಗಳು ಹಾಗೂ ಶಬ್ದ ತಾಳಗಳು ಕೇವಲ ಈಶ್ವರ ಪ್ರಾಪ್ತಿಗಾಗಿ ಪ್ರಯೋಗಗೊಳ್ಳುತ್ತಿದ್ದವು. ಇವುಗಳಿಗೆ 'ಗೀತ' ಎಂದು ಹೇಳುತ್ತಿದ್ದರು. ಭಾಷಾ, ವಿಭಾಷಾ ಹಾಗೂ ಅಂತರಭಾಷಾ ಈ ಮೂರು ಗೀತೆಗಳು ಮಾರ್ಗೀಯ ಸಂಗೀತದಲ್ಲಿದ್ದವು. ಗೀತಗಳಲ್ಲಿ ಶುದ್ಧಾ, ಭಿನ್ನಾ, ಗೌಡಿ, ಸಾಧಾರಣಾ, ವೇಸರಾ ಮುಂತಾದ ಪ್ರಕಾರಗಳಿದ್ದವು. ಮತಂಗನು ತನ್ನ ಬೃಹತ್ ದೇಶಿ ಗ್ರಂಥದಲ್ಲಿ ಶುದ್ಧಾ, ಸಾಧಾರಣ, ಭಾಷಾ, ವಿಭಾಷಾ, ರಾಗಗೀತ ಹಾಗೂ ಗೌಡಿ ಮುಂತಾದ ಏಳು ಪ್ರಕಾರದ ಗೀತಗಳ ವರ್ಣನೆ ಮಾಡಿದ್ದಾನೆ.

ಸಂಗೀತವು ಶಿವಸಾಕ್ಷಾತ್ಕಾರದ ಒಂದು ಸಾಧನವಾಗಿರುವದಂತೂ ನಿಜ, ಅದರ ಜೊತೆಗೆ ಅದರಲ್ಲಿ ಮತ್ತೊಂದು ಶಕ್ತಿಯೂ ಹುದುಗಿದೆ. ಅದೇ ಜನಮನ ರಂಜಿಸುವ ಶಕ್ತಿ. ಋಷಿಮುನಿಗಳು



ಸಂಗೀತದಲ್ಲಿ ಹುದುಗಿರುವ ಈ ಶಕ್ತಿಯ ಕಡೆಗೂ ಲಕ್ಷ್ಯಕೊಟ್ಟು ಜನಸಾಮಾನ್ಯರಿಗೆ ಅದರ ಪರಿಚಯ ಮಾಡಿಕೊಟ್ಟರು. ಇದೇ 'ದೇಶಿ ಸಂಗೀತ' ಅಥವಾ 'ಗಾನ' ಎಂಬ ಹೆಸರಿನಿಂದ ಪ್ರಚಾರದಲ್ಲಿ ಬಂತು. ದೇಶಿಸಂಗೀತದ ಉದ್ದೇಶ ಕೇವಲ ಜನಮನ ರಂಜನೆ. ಆದ್ದರಿಂದ ಅದರಲ್ಲಿ ಅನೇಕ ಬದಲಾವಣೆಗಳು ಕಾಣಿಸಿಕೊಂಡವು. ಆಧುನಿಕ ಕಾಲದಲ್ಲಿ ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಪ್ರಚಾರದಲ್ಲಿರುವ ಸಂಗೀತ ಪ್ರಾಚೀನಕಾಲದಿಂದ ಪ್ರಚಾರದಲ್ಲಿದ್ದ ದೇಶಿ ಸಂಗೀತವೇ ಸರಿ. ಈಗಿನ ಕಾಲದಲ್ಲಿ ಇದಕ್ಕೆ 'ಜಾನಪದ ಸಂಗೀತ' ಅಥವಾ 'ಲೋಕಗೀತ' ಎಂದು ಹೇಳುತ್ತಾರೆ. ಜನಾಭಿರುಚಿಯನ್ನೇ ಅವಲಂಬಿಸಿರುವ ಕಾರಣ ದೇಶದ ಬೇರೆ ಬೇರೆ ಭಾಗಗಳಲ್ಲಿ ಇದರ ರೂಪ ಬೇರೆ ಬೇರೆಯಾಗಿದ್ದದ್ದು ಕಂಡುಬರುತ್ತದೆ. ದೇಶಿಸಂಗೀತದ ಆಧಾರದ ಮೇಲೆಯೇ ಶಾಸ್ತ್ರೀಯ ಸಂಗೀತದ ನಿರ್ಮಾಣಗೊಂಡಿರುವದು ಸರ್ವವಿದಿತವಿದೆ.

ಭಾರತೀಯ ವೈದಿಕಯುಗದ ಸಂಗೀತ ಹಾಗೂ ಸಂಗೀತ ಸಾಧನೆಯ ಬಗೆಗೆ ಸಾಕಷ್ಟು ಉಲ್ಲೇಖಗಳು ಸಿಗುತ್ತವೆ. ವೇದ, ಬ್ರಾಹ್ಮಣ, ಉಪನಿಷತ್ತು ಹಾಗೂ ಅರಣ್ಯಕ ಗ್ರಂಥಗಳಲ್ಲಿ ಆ ಕಾಲದ ಸಂಗೀತದ ಸ್ಥಿತಿ, ಸಂಗೀತದ ಬಗೆಗಿದ್ದ ಜನರ ಮನೋಭಾವನೆ ಮತ್ತು ಆಗ ಪ್ರಚಾರದಲ್ಲಿದ್ದ ಸಂಗೀತದ ಬಗೆಗೂ ಹಲವಾರು ಅಂಶಗಳು ತಿಳಿದುಬರುತ್ತವೆ. ಋಗ್ವೇದ ಕಾಲದಲ್ಲಿ ಸಂಗೀತದ ಅಂಗಗಳಾದ ಗೀತ, ವಾದ್ಯ ಹಾಗೂ ನೃತ್ಯಗಳ ಪ್ರಚಾರವಿತ್ತೆಂಬುದು ಕಂಡುಬರುತ್ತದೆ.

ಋಗ್ವೇದದಲ್ಲಿ ಗೀತ ಪ್ರಬಂಧದ ಉಲ್ಲೇಖನವನ್ನು ಗೀತ, ಗಾಥಾ, ಗಾಯಿತ್ರಿ ಹಾಗೂ ಸಾಮ್ ಎಂಬ ಹೆಸರುಗಳಿಂದ ಗುರುತಿಸಲಾಗುತ್ತದೆ. ವೇದದ ಋಕ್ ಅಥವಾ ಋಚೆಗಳು ಉದಾತ್ತ, ಅನುದಾತ್ತ ಮತ್ತು ಸ್ವರಿತ ಈ ಮೂರು ಸ್ವರಗಳಲ್ಲಿ ಹಾಡಲ್ಪಡುತ್ತಿದ್ದವು. ಋಗ್ವೇದದಲ್ಲಿ ಕೆಲವು ಸಂಗೀತ ವಾದ್ಯಗಳ-ಗರ್ಗರಿ, ಶೋಣಿ, ಡಮರು, ಭೂಮಿ ದುಂದಭಿ ಮುಂತಾದವುಗಳ ಉಲ್ಲೇಖಗಳು ಸಿಗುತ್ತವೆ. ಋಗ್ವೇದದಲ್ಲಿ ಗೀತ ಹಾಗೂ ವಾದ್ಯದ ಜೊತೆಗೆ ನೃತ್ಯದ ಅನೇಕ ಪ್ರಕಾರಗಳ ಪ್ರಚಾರ ಸಮಾಜದಲ್ಲಿ ಇತ್ತು. ನೃತ್ಯ ಕಾರ್ಯಕ್ರಮಗಳು ಸಾರ್ವಜನಿಕ ಸಭಾಮಂಟಪಗಳಲ್ಲಿ ನಡೆಯುತ್ತಿದ್ದವು. ಇಂತಹ ನೃತ್ಯ ಸಮಾರಂಭಗಳಲ್ಲಿ ಸ್ತ್ರೀಪುರುಷರು ಸಮಾನವಾಗಿ ಭಾಗವಹಿಸುತ್ತಿದ್ದರು. 'ಸಮನ್' ಎಂಬ ವಿಶೇಷ ಸಮೂಹ ನೃತ್ಯ ಸಮಾರಂಭ ಋಗ್ವೇದ ಕಾಲದಲ್ಲಿ ಅತಿ ವಿಜೃಂಭಣೆಯಿಂದ ನಡೆಯುತ್ತಿತ್ತು.

ವೈದಿಕ ಯುಗದ ಸಂಗೀತದ ಸ್ವರೂಪವು ಸಾಮವೇದ ಕಾಲದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಆ ಕಾಲದಲ್ಲಿ ಅರಣ್ಯಕ, ಸಂಹಿತಾ ಪೂರ್ವಾರ್ಚಿಕ, ಉತ್ತರಾರ್ಚಿಕ, ಗ್ರಾಮಗೇಯಗಾನ, ಅರಣ್ಯಗೇಯಗಾನ, ಸ್ತೋಮ ಮುಂತಾದ ಸಂಗೀತದ ಪ್ರಚಾರವಿತ್ತು. ಸಾಮವೇದ ಕಾಲದಲ್ಲಿ ಏಳು ಸ್ವರಗಳ ವಿಕಾಸವಾಯಿತು ಎಂಬುದರ ಬಗೆಗೆ ಉಲ್ಲೇಖವಿದೆ. ಸಾಮಸ್ವರಗಳ ವಿಕಾಸವು ಕೇವಲ ಮೂರು ಸ್ವರಗಳಿಂದಾಗಿ ಪ್ರಾರಂಭವಾಗಿ ಈ ಮೂರು ಸ್ವರಗಳಲ್ಲಿಯೇ ಅಡಕವಾಗಿದ್ದ ಇನ್ನೂ ನಾಲ್ಕು ಸ್ವರಗಳ ಉತ್ಪತ್ತಿಯಾಯಿತು. ಈ ಸ್ವರಗಳಿಗೆ ಆ ಕಾಲದಲ್ಲಿ ಪ್ರಥಮ, ದ್ವಿತೀಯ, ತೃತೀಯ, ಚತುರ್ಥ, ಪಂಚಮ, ಮಂದ್ರಕೃಷ್ಟ ಮತ್ತು ಅತಿಸ್ವರ ಎಂಬ ಹೆಸರುಗಳಿಂದ ಗುರುತಿಸಲಾಗುತ್ತಿತ್ತು. ಆಧುನಿಕ ಸಂಗೀತದಲ್ಲಿ ಸಾಮವೇದದ ಈ ಸ್ವರಗಳು ಕೆಲಮಟ್ಟಿಗೆ ಪರಿವರ್ತನಗೊಂಡಿದ್ದು ಕಂಡುಬರುತ್ತದೆ.

ವೈದಿಕ ಯುಗದಲ್ಲಿ ಸಂಗೀತದ ಗರ್ಭದಿಂದ ನಾಟಕದ ಉತ್ಪತ್ತಿಯಾಯಿತೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಈ ಯುಗದ ನಂತರವೇ ನಾಟಕವು ಸಂಗೀತದಿಂದ ಬೇರ್ಪಟ್ಟಿತು. ಆ ಕಾಲದಲ್ಲಿ ಅನೇಕ ಧಾರ್ಮಿಕ ಸಂಘ ಸಂಸ್ಥೆಗಳು ಅಸ್ತಿತ್ವದಲ್ಲಿದ್ದವು. ಇಂತಹ ಸಂಸ್ಥೆಗಳು ಸಂಗೀತ ಆಧ್ಯಾತ್ಮಿಕ ರೂಪದ ವಿಕಾಸಕ್ಕೆ ಪ್ರಯತ್ನ ನಡೆಸುತ್ತಿದ್ದವು. ಇದರ ಫಲವಾಗಿ ಸಂಗೀತವು ಸಶಾಸ್ತ್ರೀಯವಾಯಿತಲ್ಲದೇ ಅದಕ್ಕೆ ಆಧ್ಯಾತ್ಮದ ನೆರವೂ ಕೂಡಿತು. ವೈದಿಕ ಸಂಸ್ಕೃತಿಯಲ್ಲಿ ಆತ್ಮಚಿಂತನ, ಬ್ರಹ್ಮಚಿಂತನ ಹಾಗೂ ಆಧ್ಯಾತ್ಮದ ತತ್ವಗಳು ಸಾಕಷ್ಟು ಕಂಡುಬರುತ್ತವೆ. ಇದರಲ್ಲಿ ಭಕ್ತಿ ಹಾಗೂ ಸಂಗೀತದ ಪ್ರಭಾವವೂ ಸಹ ಕಂಡು





ಬರುವದು. ವೈದಿಕಯುಗದ ಜನರು ಸಂಗೀತವು ವಿಕಾಸದ ಒಂದು ಸಾಧನ ಎಂದು ಭಾವಿಸು ತ್ತಿರಲಿಲ್ಲ. ಜೀವನದ ವಿಕಾಸದ ಸಾಧನೆಗಳಲ್ಲಿ ಸಂಗೀತವೂ ಒಂದು ಪ್ರಮುಖ ಅಂಗವೆಂದು ಅವರು ಭಾವಿಸುತ್ತಿದ್ದರು. ತಮ್ಮ ಕಲಾತ್ಮಕ ಜೀವನ ಸುಂದರಗೊಳ್ಳಲು ತಮ್ಮ ಚಾರಿತ್ರ್ಯ ಪರಿಶುದ್ಧವಾಗಿರಬೇಕೆಂದು ಅವರು ನಂಬಿದ್ದರು. ನೈತಿಕ ಚಾರಿತ್ರ್ಯ ಪರಿಶುದ್ಧಗೊಳ್ಳದೆ ಧರ್ಮಕ್ಕೆ ಪಾವಿತ್ರ್ಯ ಉಂಟಾಗಲು ಸಾಧ್ಯವಿಲ್ಲವೆಂದು ಅವರು ಅರಿತಿದ್ದರು. ಆದುದರಿಂದಲೇ ಅವರು ಸಂಗೀತಕ್ಕೆ ಧರ್ಮದ ಹೊದಿಕೆ ಹೊದಿಸಿದ್ದರು. ಪರಿಣಾಮ ವಾಗಿ ಭಾರತೀಯ ಸಂಗೀತವು ಇಂದಿಗೂ ತನ್ನ ಉಚ್ಚ ಗೌರವವನ್ನು ಕಾಪಾಡಿಕೊಂಡಿರುತ್ತದೆ. ವಿಶ್ವದಲ್ಲಿ ಭಾರತೀಯ ಸಂಗೀತದಷ್ಟು ಪವಿತ್ರ ವಾದ ಸಂಗೀತ ಮತ್ತೊಂದಿಲ್ಲ. ಏಕೆಂದರೆ ಭಾರತೀಯ ಸಂಗೀತಕ್ಕೆ ಧಾರ್ಮಿಕ ಹಿನ್ನೆಲೆ ಇದೆ. ಇದು ಮಾನವನ ಅಧಃಪತನಕ್ಕೆ ಆಸ್ಪದಕೊಡಲಿಲ್ಲ. ಆದರೆ ಕೆಲಕಾಲದ ನಂತರ ಸಂಗೀತ, ಧರ್ಮದಿಂದ ಬೇರ್ಪಟ್ಟಿತು. ಆಗ ಮಾನವನು ತನ್ನ ನೈತಿಕತೆ ಯಿಂದ ಜಾರಲಾರಂಭಿಸಿದನು. ವೈದಿಕ ಯುಗ ದಲ್ಲಿ ಅನೇಕ ಪ್ರಕಾರದ ವೀಣಾವಾದ್ಯಗಳು ಇದ್ದದ್ದು ಉಲ್ಲೇಖಗಳು ದೊರೆಯುತ್ತದೆ. ಉದಾ:- ಔದುಂಬರಿ, ಸೈರಂಧ್ರಿ, ಕೋಕಿಲಾ, ಕಾತ್ಯಾಯಿಣಿ, ಮಹತಿ, ಪಿನಾಕಿ, ಕಚ್ಛಪಿ ಮುಂ ತಾದವು. ಈ ಯುಗದಲ್ಲಿ ವೀಣೆಗೆ 'ವಾಣ' ಎಂಬ ಹೆಸರೂ ಇತ್ತು. ಇದಕ್ಕೆ ನೂರು ಸರ್ಗಗ ಳಿದ್ದ ಬಗ್ಗೆ ಉಲ್ಲೇಖವಿದೆ. ದಕ್ಷಿಣ ಭಾರತದಲ್ಲಿ ವೈದಿಕ ಯುಗದ ವೀಣೆಯು 'ಯಾಲ' ಎಂಬ ರೂಪದಲ್ಲಿ ಆಧುನಿಕ ಕಾಲದಲ್ಲಿ ಕಂಡುಬರುತ್ತದೆ. 'ವಾಣ' ಹಾಗೂ 'ಯಾಲ' ಏಕರೂಪವಾಗಿದ್ದವು ಎಂದು ಊಹಿಸಲಾಗಿದೆ.

'ಉಪನಿಷತ್ತುಗಳು' ಹಾಗೂ 'ಶತಪಥ ಬ್ರಾಹ್ಮಣ' ಮುಂತಾದ ಗ್ರಂಥದಲ್ಲಿ ಸಂಗೀತದ ಬಗೆಗೆ ಸಾಕಷ್ಟು ಪರಿಚಯ ಸಿಗುತ್ತದೆ. ಈ ಗ್ರಂಥಗಳಲ್ಲಿ ಸಾಮಗಾನದ ಸಾಕಷ್ಟು ಪ್ರಶಂಸೆ ಮಾಡಿದ್ದು ಕಂಡು ಬರುತ್ತದೆ. ಸಂಗೀತದ ಮಹತ್ವವನ್ನು ಕುರಿತು [illegible] ದಲ್ಲಿಯ ಗೀತ, ವಾದ್ಯ ಹಾಗೂ ನೃತ್ಯಗಳಿಂದ ಪ್ರಾಪ್ತವಾಗುವ ರಸಾನಂದವು ಪರಮಾನಂದ ಅಥವಾ ಬ್ರಹ್ಮಾನಂದದ ಮೂಲ ಎಂದು ಭಾವಿಸಲಾಗಿದೆ. ನಾರದೀಯ ಶಿಕ್ಷಾ ಹಾಗೂ ಪಾಣಿನಿಯ ಶಿಕ್ಷಾ ಮುಂತಾದ ಶಿಕ್ಷಾಗ್ರಂಥಗಳಲ್ಲಿ ಸಂಗೀತದ ವಿಶೇಷ ವರ್ಣನೆ ಇದೆ. ಈ ಗ್ರಂಥದ ಕರ್ತೃಗಳು ವೇದಗಳಲ್ಲಿಯ ವಿಭಿನ್ನ ಸ್ವರೋಚ್ಚಾ ರಣೆ ಅವುಗಳ ಕಾಲ, ಸ್ಥಾನ ಹಾಗೂ ಉದ್ಭವ ಮುಂತಾದವುಗಳ ಬಗೆಗೆ ವಿವರಣೆ ನೀಡಿದ್ದಾರೆ. ಈ ವಿವರಣೆಯಿಂದ ವೇದಗಳ ಆರ್ಚಿಕ, ಗಾಥಿಕ ಹಾಗೂ ಸಾಮಿಕ ಸ್ವರಾಂತರಗಳ ಪರಿಚಯು ದೊರೆಯುತ್ತದೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ವರ್ಣೋಚ್ಚಾರಕ್ಕೆ ಸಂಗೀತ ಹಾಗೂ ಸಾಹಿತ್ಯದಲ್ಲಿ ಮಹತ್ವದ ಸ್ಥಾನವಿದೆ. ವರ್ಣೋಚ್ಚಾರದ ಮುಖ್ಯ ಸ್ಥಾನ ಗಳು ಮೂರು. ಉರಸ್, ಕಂಠ, ಹಾಗೂ ಶಿರ ಈ ಮೂರು ಸ್ಥಾನಗಳಿಂದ ಉತ್ಪನ್ನವಾಗುವ ಸ್ವರಗಳಿಗೆ 'ಸವನ' ಎಂದು ಕರೆಯಲಾಗಿದೆ. ಉರಸ್‌ನಿಂದ ಉತ್ಪನ್ನವಾಗುವ ಧ್ವನಿಗೆ 'ಮಂದ್ರ' ಎಂದೂ ಕಂಠದಿಂದ ಉತ್ಪನ್ನವಾಗುವ ಧ್ವನಿಗೆ ಮಧ್ಯ ಅಥವಾ ಮಧ್ಯಮ ಹಾಗೂ ಶಿರಸ್ಸಿನಿಂದ ಉತ್ಪನ್ನವಾಗುವ ಧ್ವನಿಗೆ ತಾರ, ಉಚ್ಚ ಅಥವಾ ಉತ್ತಮ ಎಂಬ ಸಂಜ್ಞೆಕೊಡಲಾಗಿದೆ. ನಾರ ದೀಯ ಶಿಕ್ಷಾ ಗ್ರಂಥದಲ್ಲಿ ಸ್ವರ, ಗ್ರಾಮ, ರಾಗ, ತಾನ ಮುಂತಾದವುಗಳ ವರ್ಣನೆ ಬರುತ್ತವೆ. ಶಿಕ್ಷಾಗ್ರಂಥಗಳಲ್ಲಿ 'ಮೂರ್ಚ್ಛನಾ' ಮತ್ತು 'ತಾನ' ಮುಂತಾದವುಗಳ ಪ್ರಯೋಗ ಕೇವಲ ಮನೋ ರಂಜನೆಗೆ ಇರದೇ ಅದು ಅಭ್ಯುದಯ ಹಾಗೂ ಶ್ರೇಯಸ್ಸಿಗೆ ಸಾಧಕವಾಗಿವೆ. ಈ ಗ್ರಂಥಗಳಲ್ಲಿ ಷಡ್ಜ, ಮಧ್ಯಮ ಹಾಗೂ ಗಾಂಧಾರ ಎಂಬ ಮೂರು ಗ್ರಾಮಗಳ ಉಲ್ಲೇಖಗಳು ಇವೆ. ಸ್ವರ ಹಾಗೂ ರಾಗಗಳ ವಿಶಿಷ್ಟ ಸಂಯೋಜನೆಕೆ 'ಗ್ರಾಮರಾಗ' ಎಂದು ಹೆಸರಿಸಲಾಗಿದೆ. ಮೂರ್ಚ್ಛನೆಗಳ ಒಟ್ಟು ಸಂಖ್ಯೆ ೨೧ ಎಂದು ಭಾವಿಸಲಾಗಿದ್ದು ಇವುಗಳಲ್ಲಿ ಏಳರ ಸಂಬಂಧ ದೇವತೆಗಳ ಜೊತೆಗೆ ಉಳಿದ ಏಳರ ಸಂಬಂಧ ಪಿತೃಗಳ ಜೊತೆಗೆ ಇನ್ನುಳಿದ ಏಳರ ಸಂಬಂಧ ಋಷಿಗಳ ಜೊತೆಗೆ ಎಂದು ಸ್ಥಾಪನೆ ಮಾಡ ಲಾಗಿದೆ. ಮಧ್ಯಮ ಗ್ರಾಮಗಳ ಮೂರ್ಚ್ಛನೆಗಳ ನ್ನು ಕೇವಲ ಯಕ್ಷರು ಷಡ್ಜಗ್ರಾಮಗಳ ಮೂರ್ಚ್ಛ ನೆಗಳನ್ನು ಋಷಿಗಳು ಹಾಗೂ ಲೌಕಿಕ ಗಾಯಕರು ಮತ್ತು ಗಾಂಧಾರ ಗ್ರಾಮದಲ್ಲಿಯ ಮೂರ್ಚ್ಛ ನೆಗಳ ಪ್ರಯೋಗವನ್ನು ಗಂಧರ್ವರು ಮಾಡುತ್ತಿದ್ದ ರೆಂದು ಶಿಕ್ಷಾಕಾರರು ಅಭಿಪ್ರಾಯ ಪಟ್ಟಿದ್ದಾರೆ. ನಾರದೀಯ ಶಿಕ್ಷಾ ಗ್ರಂಥದಲ್ಲಿ ಪ್ರಾಣಿಗಳ ಧ್ವನಿ ಗಳ ಜೊತೆಗೆ ಸ್ವರಗಳ ಸಾಮರಸ್ಯವನ್ನು ವಿವೇಚಿಸಲಾಗಿದೆ. ಮಯೂರದ ಧ್ವನಿ ಷಡ್ಜ. ಎತ್ತಿನ ಧ್ವನಿ ವೃಷಭ, ಆಡಿನ ಧ್ವನಿ ಗಾಂಧಾರ. ಕ್ರೌಂಚ ಪಕ್ಷಿಯ ಧ್ವನಿ ಮಧ್ಯಮ, ಕೋಗಿಲೆಯ ಧ್ವನಿ ಪಂಚಮ, ಕುದುರೆಯ ಧ್ವನಿ ಧೈವತ. [illegible]ಯ ಧ್ವನಿ ನಿಷಾಧ ಎಂದು ಹೇಳಲಾಗಿದೆ.

ಸಪ್ತಸ್ವರಗಳ ಉತ್ಪತ್ತಿಯ ಬಗೆಗೂ ಶಿಕ್ಷಾಗ್ರಂಥಗಳಲ್ಲಿ ಉಲ್ಲೇಖವಿದೆ. ಷಡ್ಜದ ಉತ್ಪತ್ತಿ ಕಂಠದಿಂದ, ವೃಷಭದ ಉತ್ಪತ್ತಿ ಶಿರ ದಿಂದ, ಗಾಂಧಾರ ಹೃದಯದಿಂದ ಮಧ್ಯಮ ಮೂಗಿನಿಂದ, ಪಂಚಮ ಹೃದಯ, ಶಿರ ಹಾಗೂ ಕಂಠದಿಂದ, ಧೈವತ ಲಲಾಟದಿಂದ ಹಾಗೂ ನಿಷಾಧಸ್ವರವು ಶರೀರದ ನಾಭಿಯಿಂದ ಉತ್ಪನ್ನ- ವಾಗುತ್ತವೆ ಎಂದು ಹೇಳಬಹುದು. ಸಂಗೀತದ ಬಗೆಗಿನ ಶಿಕ್ಷಾಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟ ವಿವರಣೆಗಳನ್ನು ಅವಲೋಕಿಸಿದರೆ ಆ ಕಾಲದಲ್ಲಿ ನಮ್ಮ ಭಾರತೀಯ ಸಂಗೀತವು ವೈಭವ ಶಿಖರ ದಲ್ಲಿ ಇತ್ತೆಂದು ಭಾವಿಸಬಹುದು.

ಪುರಾಣಕಾಲದಲ್ಲಿಯೂ ಭಾರತೀಯ ಸಂಗೀತದ ಪ್ರಚಾರ ವೈಭವದಿಂದ ಸಾಗಿತ್ತು ಎಂದು ತಿಳಿದು ಬರುತ್ತದೆ. ಬ್ರಹ್ಮಪುರಾಣ, ವಿಷ್ಣುಪುರಾಣ, ಮಾರ್ಕಂಡೇಯಪುರಾಣ, ಹರಿವಂಶ ಪುರಾಣ ಮುಂತಾದವುಗಳಲ್ಲಿ ಸಂಗೀತದ ವರ್ಣನೆ ಹಾಗೂ ವಿಮರ್ಶೆ ಸಿಗುತ್ತದೆ. ಈ ವಿಮರ್ಶೆಯ ಮೂಲಕ ಪುರಾಣಯುಗದಲ್ಲಿ ವೇದಕಾಲೀನ ಸಂಗೀತದಲ್ಲಿದ್ದ ಏಕಸೂತ್ರತೆ ವಾಯುಭೂತಮಯವಾಗಿದ್ದದ್ದು ಕಂಡುಬರುತ್ತದೆ. ಸಂಗೀತದ ಪ್ರಚಾರ ವೇದ ಕಾಲದಲ್ಲಿ ಕೆಲವು ಜನಾಂಗಗಳಲ್ಲಿ ಇದ್ದದ್ದು ಈ ಕಾಲದಲ್ಲಿ ಜನ ಸಾಮಾನ್ಯರಲ್ಲಿಯೂ ಪ್ರಸಾರ ಗೊಳ್ಳಲು ಪ್ರಾರಂಭವಾಯಿತು. ಹಾಗೂ ಸಂಗೀತದ ಮನೋರಂಜಕ ತತ್ವ ಜನರಲ್ಲಿ ವಿಕಾಸ ಹೊಂದಲು ಪ್ರಾರಂಭವಾಯಿತು. ಜನರು ಸಂಗೀತದ ಆಂತರಿಕ ತತ್ವದ ಕಡೆಗೆ ಹೆಚ್ಚು ಗಮನ ಕೊಡದೆ ಕೇವಲ ಸಂಗೀತದ ಬಾಹ್ಯತತ್ವಗಳಿಗೆ ಹೆಚ್ಚು ಮಹತ್ವವನ್ನು ಕೊಡಲಾರಂಭಿಸಿದರು. ವಾಯುಪುರಾಣದಲ್ಲಿ ಸಂಗೀತ ಶಾಸ್ತ್ರಕ್ಕೆ ಸಂಬಂ- ಧಿಸಿದ ಅನೇಕ ತತ್ವಗಳ ವರ್ಣನೆ ಇದೆ. ಗ್ರಾಮ ರಾಗ, ಸ್ವರಸ್ಥಾನ, ಮಂದ್ರ, ಮಧ್ಯ ಹಾಗೂ ತಾರ, ನಾಟ್ಯ ಹಾಗೂ ಸಂಗೀತ ವಾದ್ಯಾಂತರ ಗಳ ವರ್ಣನೆಗಳು ಸಿಗುತ್ತವೆ. ಪುರಾಣಕಾಲ ದಲ್ಲಿ ನಾಟಕಗಳ ಪ್ರಚಾರಗಳು ಸಾಕಷ್ಟು ಇದ್ದು



ವಿಶೇಷವಾಗಿ ಸಂಗೀತ ನಾಟಕಗಳ ಪ್ರಚಾರ ವಿದ್ದದ್ದು ಕಂಡುಬರುತ್ತದೆ. ರಾಮಾಯಣ ಮತ್ತು ಮಹಾಭಾರತ ಗ್ರಂಥಗಳಲ್ಲಿ ಕೂಡಾ ಸಂಗೀತದ ವರ್ಣನೆ ದೊರೆಯುತ್ತದೆ.

ಭಾರತದ ಪ್ರಾಚೀನ ಸಂಸ್ಕೃತಿಯನ್ನು ಪ್ರತಿ ಬಿಂಬಿಸುವ ಈ ಮಹಾಕಾವ್ಯಗಳಲ್ಲಿ ಸಂಗೀತದ ಮೂರು ಅಂಗಗಳಾದ ಗಾಯನುವಾದನ ಹಾಗೂ ನೃತ್ಯಗಳು ಆ ಕಾಲದಲ್ಲಿ ಸಾಕಷ್ಟು ಪ್ರಚಾರ ದಲ್ಲಿದ್ದುದರ ಬಗೆಗೆ ತಿಳಿದು ಬರುತ್ತದೆ. ಅಲ್ಲದೇ ಸಂಗೀತದ ಕಲಾಪಕ್ಷ ಹಾಗೂ ಶಾಸ್ತ್ರ ಪಕ್ಷ ಇವೆರಡು ಆಕಾಲದಲ್ಲಿ ಉನ್ನತ ಸ್ಥಿತಿ ಯನ್ನು ಮುಟ್ಟಿದ ಬಗ್ಗೆ ವಿದಿತವಾಗುತ್ತದೆ. ರಾಮಾಯಣದಲ್ಲಿ ಸಂಗೀತದ ಬಗೆಗೆ ರೂಪಕ ಹಾಗೂ ಉತ್ಪ್ರೇಕ್ಷೆಗಳು ಕಂಡು ಬರುತ್ತವೆ. ಆ ಕಾಲದ ಜನರಲ್ಲಿ ಸಂಗೀತ ಶಿಕ್ಷಣದ ಬಗೆಗೆ ಸಾಕಷ್ಟು ಅಭಿರುಚಿ ಇದ್ದದ್ದು ವರ್ಣಿಸಲಾಗಿದೆ. ಬಾಲಕರಲ್ಲಿಯೂ ಸಂಗೀತ ಪ್ರಿಯತೆ ಕಂಡುಬರುತ್ತಿತ್ತು. ರಾವಣನು ಸ್ವತಃ ಸಂಗೀತ ಜ್ಞನಾಗಿದ್ದನು. ಸಂಗೀತದ ಬಗೆಗೆ 'ರಾವಣೀಯಂ' ಎಂಬ ಗ್ರಂಥವನ್ನು ಸಹ ಅವನು ರಚಿಸಿದ್ದನೆಂದು ಕೆಲವುಕಡೆ ಉಲ್ಲೇಖಗಳು ಸಿಗುತ್ತವೆ.

ಲವ-ಕುಶರಿಗೆ ಸಂಗೀತದ ಶಿಕ್ಷಣವು ವಾಲ್ಮೀಕಿ ಯ ಆಶ್ರಮದಲ್ಲಿ ಪ್ರಾಪ್ತಿಯಾಯಿತು. ಅವರ ಸ್ವರಮಾಧುರ್ಯ ಹಾಗೂ ಬುದ್ಧಿ ಚಾತುರ್ಯಗಳನ್ನು



ಪುರಂದರದಾಸರು

ಗಮನಿಸಿ ಅವರಿಗೆ ಗೇಯರೂಪದ ಅಭ್ಯಾಸ ಮಾಡಿಸಲಾಯಿತು. ಶ್ರೀ ರಾಮಚಂದ್ರನ ಹೇಳಿ ಕೆಯ ಮೇರೆಗೆ ಲವ-ಕುಶರು ರಾಮಾಯಣವನ್ನ 'ಮಾರ್ಗಸಂಗೀತದ' ಶೈಲಿಯಲ್ಲಿ ಪ್ರಸ್ತುತ ಪಡಿಸಿದರು. ಸ್ವರ, ಪದ, ತಾಲ, ಮೂರ್ಛನಾ ಮುಂತಾದ ಸಂಗೀತಾಲಂಕಾರಗಳನ್ನು ಶಾಸ್ತ್ರ ಬದ್ಧವಾಗಿ ಅವರು ಹಾಡಿ ಶ್ರೋತೃಗಳ ಮನ ತಣಿಸಿದರು ಎಂಬ ವರ್ಣನೆ ಇದೆ. ಸೀತಾ ಸ್ವಯಂವರದ ಸಮಯದಲ್ಲಿ ಶಿವಧನುಸ್ಸನ್ನು ಮುರಿದನಂತರ ಆಕಾಶದಲ್ಲಿಯೂ ದೇವತೆಗಳು ದುಂದುಬಿ ಮೊಳಗಿಸಿದರು. ಅಪ್ಸರೆಯರು ನರ್ತಿಸಲು ಪ್ರಾರಂಭಿಸಿದರು ಎಂದು ಬಣ್ಣಿಸಲಾಗಿದೆ.

ಮಹಾಭಾರತದಲ್ಲಿ ವರ್ಣಿಸಲಾದ ತಾತ್ಕಾಲೀನ ಸಮಾಜದರ್ಶನ ಬಹುಮುಖಿಯಾಗಿದ್ದು ಅದಕ್ಕೆ ಐತಿಹಾಸಿಕ ಮಹತ್ವವಿದೆ. ಮಹಾಭಾರತದಲ್ಲಿ ಒಂದು ಲಕ್ಷ ಶ್ಲೋಕಗಳಿದ್ದು ಅವೆಲ್ಲವೂ ಸಂಗೀತ ಮಯವಾಗಿವೆ. ಮಹಾಭಾರತ ಕಾಲದಲ್ಲಿ ವೈದಿಕ ಹಾಗೂ ಲೌಕಿಕ ಎಂದು ಎರಡು ಪ್ರಕಾರದ ಸಂಗೀತಗಳು ಪ್ರಚಾರದಲ್ಲಿದ್ದವು. ಸಂಗೀತದಲ್ಲಿ ಷಡ್ಜ ಮುಂತಾದ ಸಪ್ತಸ್ವರಗಳ ವರ್ಣನೆ ಸಿಗುತ್ತದೆ. ಸ್ವರ, ಪದ, ಸ್ತೋಮ ಮುಂತಾದವು ಗಳ ಅಧ್ಯಯನವೂ ಸಹ ಆ ಕಾಲದಲ್ಲಿ ನಡೆಯು ತ್ತಿತ್ತು. ಕಂಠ ಸಂಗೀತದ ಜೊತೆಗೆ ಅನೇಕ ವಾದ್ಯಯಂತ್ರಗಳ ವರ್ಣನೆಯೂ ಸಹ ಮಹಾ ಭಾರತದಲ್ಲಿ ದೊರೆಯುತ್ತದೆ. ಉದಾ:- ವೀಣಾ, ವೇಣು, ಮೃದಂಗ, ಪಣವ, ಭೇರಿ, ಶಂಖ,

---



# ಕುಂಚಬ್ರಹ್ಮ

ಚಿತ್ರಕಲಾಜಗತ್ತಿನಲ್ಲಿ ತನ್ನದೇ ಆದ ಸ್ಥಾನ ಗಳಿಸಿಕೊಂಡಿರುವ ಹಾಗೂ ಚಿತ್ರಕಲಾ ಪ್ರಪಂಚಕ್ಕೆ 'ರಾಗಮಾಲಾ' ಚಿತ್ರಗಳಂಥ ಅಪೂರ್ವ ಕೊಡುಗೆ ನೀಡಿದ ಕೀರ್ತಿ ಕುಂಚಬ್ರಹ್ಮ ಡಾ ಎಂ. ವಿ. ಮಿಣಜಗಿಯವರಿಗೆ ಸಲ್ಲುತ್ತದೆ. ರಜಪೂತ ಸಂಪ್ರದಾಯ ಚಿತ್ರಗಳಲ್ಲಿ ರಾಗಮಾಲಾ ಚಿತ್ರ- ಗಳಿಗೆ ವಿಶಿಷ್ಟ ಸ್ಥಾನವಿದ್ದು ಜಗತ್ತಿನ ಚಿತ್ರಕಲಾ ಇತಿಹಾಸದಲ್ಲಿಯೇ ಅನ್ಯಾದೃಶ್ಯವಾಗಿವೆ. ಸಂಗೀತ, ಸಾಹಿತ್ಯ, ಚಿತ್ರ ಈ ಮೂರನ್ನು ಒಂದಾಗಿಸಿದ ಇವನ್ನು ಚಿತ್ರಿಸಿದವರು ವಿರಳ. ಸರಳ ಸ್ನೇಹ- ಜೀವಿ, ಗಂಭೀರ ವ್ಯಕ್ತಿತ್ವದ ಲಹರಿ ತುಂಬು ಜೀವನ ನಡೆಸುತ್ತಿರುವ ಮಿಣಜಗಿಯವರು ರಾಗಮಾಲಾ ಚಿತ್ರಗಳಂಥ ಅದ್ಭುತ ಚಿತ್ರಗಳನ್ನು ಚಿತ್ರಿಸಿ, ನಿಜಜೀವನದ ರಾಗದ ತಂತಿಗಳನ್ನೇ ಮೀಟಿದ್ದಾರೆ. ೧೯೦೧ರಲ್ಲಿ ಬಿಜಾಪುರದ ವ್ಯಾಪಾ- ರಸ್ಥ ಕುಟುಂಬದಲ್ಲಿ ಜನಿಸಿದ ಇವರಿಗೆ ಬಾಲ್ಯದಿಂ ದಲೂ ಚಿತ್ರಕಲೆ, ಸಂಗೀತ ಎರಡರಲ್ಲೂ ಆಸಕ್ತಿ. ಹೈಸ್ಕೂಲ ಮುಗಿದ ಕೂಡಲೇ ಇವರ ಮದುವೆ- ಯಾಯಿತು. ಮುಂದೆ ಮುಂಬೈಯ ಜೆ.ಜೆ. ಸ್ಕೂಲ ಆಫ ಆರ್ಟದಲ್ಲಿ ಡಿಪ್ಲೊಮಾ. ಆರ್ಟ ಮಾಸ್ಟರ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿ ೧೯೩೧ರಲ್ಲಿ ಉಚ್ಚ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ತೆರಳಿದರು. ಖಂಡಿತವಾದಿಯಾದ ರಾಥೆನ್‌ಸ್ಟೈನ್ನರ ಮೆಚ್ಚಿನ ಶಿಷ್ಯರಾದರು. ೧೯೩೬ ರಲ್ಲಿ ಮುಂಬೈಗೆ ವಾಪಸ್ಸಾಗಿ ಅಲ್ಲಿ ೧೫ವರುಷ ನೆಲೆಸಿದರು. ಇಲ್ಲಿಯೇ ಅವರ ರಾಗಮಾಲಾ ಚಿತ್ರಗಳು ರೂಪುಗೊಂಡವು. ಮೂರುಸಾವಿರ ಮಠದ ಗುರುಸಿದ್ಧಸ್ವಾಮಿಗಳು ಅವರನ್ನು ಹುಬ್ಬಳ್ಳಿಗೆ ಬರಮಾಡಿಕೊಂಡು ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ ವನ್ನು ಪೋಷಿಸಿ ಬೆಳೆಸಲು ಅನುಕೂಲ ಮಾಡಿ ಕೊಟ್ಟರು. ಇಂದು ಇದು ಸುಸಜ್ಜಿತ ಸಲಕರಣೆ ಗಳಿಂದ ಕೂಡಿದ ತನ್ನದೇ ಆದ ಭವ್ಯ ಕಟ್ಟಡ ಹೊಂದಿದೆ. ನಿಸರ್ಗಚಿತ್ರ, ರಾಗಮಾಲಾ ಚಿತ್ರ ಗಳು, ಸಂಯೋಜನೆ, ಬಾದಾಮಿ ಭಿತ್ತಿಚಿತ್ರ, ಭಾವಚಿತ್ರ ಮೊದಲಾದವನ್ನೂ ರಚಿಸಿದ್ದಾರೆ.

ಒಂದು ಚಿತ್ರ ಹೇಗೆ ಹೃದಯದಲ್ಲಿ ನಾದ ತರಂಗಗಳನ್ನು ಎಬ್ಬಿಸುವದೋ ಹಾಗೇ ಒಂದು ರಾಗ ಒಂದು ಚಿತ್ರವನ್ನು ಕಣ್ಣಿಗೆ ಕಟ್ಟುತ್ತದೆ. ಇದು ಹಲವರ ಅಭಿಪ್ರಾಯ. ಹಲವರು ಇದನ್ನು ಅಲ್ಲಗಳೆಯುತ್ತಾರೆ. ಇದರ ಸತ್ಯಾಸತ್ಯತೆಯನ್ನು ಸ್ವಲ್ಪಮಟ್ಟಿಗಾದರೂ ವಿಶ್ಲೇಷಿಸಲು ಮಿಣಜಗಿ ಯವರೊಡನೆ ಈ ಸಂದರ್ಶನ.



ದುಂದುಬಿ, ಪುಷ್ಕರ ಮುಂತಾದ ವಾದ್ಯಗಳಿಂದ ಯುದ್ಧದ ಸಮಯದಲ್ಲಿ ಅತೀ ಘೋರವಾದ ಧ್ವನಿ ಮಾಡಲಾಗುತ್ತಿತ್ತು.

ಆ ಕಾಲದಲ್ಲಿ ಅನೇಕ ಪ್ರಕಾರದ ನೃತ್ಯಗಳು ರೂಢಿಯಲ್ಲಿದ್ದವು. ಪ್ರಾಚೀನಕಾಲದ 'ಲಾಸ್ಯ' ಎಂಬ ನೃತ್ಯ ಪ್ರಕಾರವಲ್ಲದೇ 'ರಾಸಲೀಲಾ ನೃತ್ಯ' ಎಂಬ ಮತ್ತೊಂದು ನೃತ್ಯ ಪ್ರಾರಂಭವಾಯಿತು. ರಾಜಸಭೆಗಳಲ್ಲಿ ಸಂಗೀತ ವಿದ್ವಾಂಸರಿಗೆ ಗೌರವಪೂರ್ಣ ಸ್ಥಾನವಿತ್ತು.

ಮಹಾಭಾರತದಲ್ಲಿ ಭಗವಾನ ಶ್ರೀಕೃಷ್ಣನನ್ನು ಸಂಗೀತದ ಮಹಾವಿದ್ವಾಂಸನೆಂದು ವರ್ಣಿಸಲಾಗಿದೆ. ಅವನ ಸಂಗೀತದ ಮುಖ್ಯಸ್ಥಳ 'ವ್ರಜಭೂಮಿ' ಯಾಗಿತ್ತು. ಯಮುನಾ ನದಿಯ ನೃತ್ಯಮಯ ಅಲೆಗಳಲ್ಲಿ ಗೋಪಿ-ಗೋಪಾಲರನ್ನು ತನ್ನ ವೇಣುವಾದನ ಹಾಗೂ ನೃತ್ಯದಿಂದ ಮಂತ್ರಮುಗ್ಧರಾಗಿ ಮಾಡುತ್ತಿದ್ದನೆಂದು ವರ್ಣನೆ ಇದೆ.

ಪಾಂಡು ಪುತ್ರ ಅರ್ಜುನನೂ ಸಹ ಮಹಾನ್ ಸಂಗೀತಜ್ಞನಾಗಿದ್ದನು. ಶ್ರೀಕೃಷ್ಣನ ವೇಣುವಾದನ ಎಷ್ಟುಮಧುರ ಹಾಗೂ ಅದ್ವಿತೀಯವಾಗಿತ್ತೋ ಅರ್ಜುನನ ವೀಣಾವಾದನವೂ ಕೂಡಾ ಅದ್ವಿತೀಯವಾಗಿತ್ತು. ಅವನಿಗೆ ನೃತ್ಯಕಲೆಯಲ್ಲಿಯೂ ಸಹ ಸಾಕಷ್ಟು ಪಾಂಡಿತ್ಯವಿತ್ತು. ಪಾಂಡವರ ಅಜ್ಞಾತವಾಸದಲ್ಲಿ ಅರ್ಜುನನು ಬೃಹನ್ನಳೆಯ ವೇಷ ಧರಿಸಿ ಸಂಗೀತ ಶಿಕ್ಷಕನೆಂದು ಕೆಲಸ ಮಾಡಿದನು.

ವೈದಿಕೋತ್ತರ ಕಾಲದ ನಂತರ ಭಾರತೀಯರ ಸಾಮಾಜಿಕ ಹಾಗೂ ಧಾರ್ಮಿಕ ಕಟ್ಟುಪಾಡುಗಳು ಹೆಚ್ಚಾದವು. ವರ್ಣವ್ಯವಸ್ಥೆಗಳ ನಿಯಮಗಳ ಹಾಗೂ ಧಾರ್ಮಿಕ ಕರ್ಮಕಾಂಡಗಳ ವೃದ್ಧಿಯಾಯಿತು. ಇದರ ಪರಿಣಾಮವಾಗಿ ಸಮಾಜದಲ್ಲಿ ಅವ್ಯವಸ್ಥೆ ಉಂಟಾಯಿತು. ಕರ್ಮಕಾಂಡದಲ್ಲಿಯ ಪಶುಹತ್ಯೆ ಹಾಗೂ ಅಂಧವಿಶ್ವಾಸ ಮುಂತಾದವುಗಳಿಂದ ಜನರಿಗೆ ಧರ್ಮದ ಮೇಲಿನ ವಿಶ್ವಾಸ ಕಡಿಮೆಯಾಗಲು ಪ್ರಾರಂಭಿಸಿತು. ಧಾರ್ಮಿಕ ಅವ್ಯವಸ್ಥೆ, ಕರ್ಮಕಾಂಡದಲ್ಲಿ ಹಿಂಸಾತ್ಮಕ ಕೃತ್ಯಗಳು ಮುಂತಾದವುಗಳ ನಿವಾರಣೆಗಳನ್ನು ಗೌತಮಬುದ್ಧ ಹಾಗೂ ಮಹಾವೀರ ಮುಂತಾದ ಮಹಾನ್ ವಿಭೂತಿಗಳು ಮಾಡಿದರು.

ಬೌದ್ಧಯುಗದಲ್ಲಿ ಸಂಗೀತ ಹಾಗೂ ನಾಟಕಕ್ಕೆ ರಾಜಾಶ್ರಯವಿತ್ತು. ರಾಜಸಭೆಯಲ್ಲಿ ಅನೇಕ ಗಾಯಕ, ವಾದಕ ಹಾಗೂ ನರ್ತಕಿಯರನ್ನು ನೇಮಿಸಲಾಗಿತ್ತು. ತಕ್ಷಶಿಲಾ, ವಿಕ್ರಮಶಿಲಾ, ಹಾಗೂ ನಾಲಂದ ಮುಂತಾದ ವಿಶ್ವವಿದ್ಯಾಲಯಗಳಲ್ಲಿ ಸಂಗೀತ ಬೋಧನೆಯ ಏರ್ಪಾಡಿತ್ತು. ಬೌದ್ಧವಾಙ್ಮಯದಲ್ಲಿ ಸಂಗೀತ ಸಲಕರಣೆಗಳ ಬಗ್ಗೆ ಉಲ್ಲೇಖ ಬರುತ್ತದೆ. ಅದು ಆ ಕಾಲದ ಸಂಗೀತದ ಪರಂಪರೆಯ ಬಗೆಗೆ ತಿಳುವಳಿಕೆ ಕೊಡಲು ಅತ್ಯಂತ ಸಹಾಯ ನೀಡುತ್ತದೆ. 'ಥೇರಿಗಾಥಾ' ಎಂಬ ಗ್ರಂಥವು ಬುದ್ಧಯುಗದ ಸಂಗೀತದ ಬಗೆಗಿರುವ ಒಂದು ಉತ್ಕೃಷ್ಟ ರಚನೆಯಾಗಿದೆ. ಈ ಗ್ರಂಥದಲ್ಲಿ ಬರುವ ರಾಗ ರಾಗಿಣಿಗಳಿಂದ ಅದರ ರಚನಾಕಾರರಿಗೆ ಸಂಗೀತದ ಪೂರ್ಣ ಜ್ಞಾನವಿತ್ತೆಂದು ಕಂಡುಬರುತ್ತದೆ.

ಕುಶಜಾತಕ ಎಂಬ ಬೌದ್ಧ ಗ್ರಂಥದಲ್ಲಿ ಮಹಾರಾಜಾ ಕುಶನ ಬಗೆಗೆ ಹಾಗೂ ಅವನ ಸಂಗೀತ ಪ್ರೇಮದ ಬಗೆಗೆ ಹಲವು ವರ್ಣನೆಗಳು ಬರುತ್ತವೆ. ಬುದ್ಧನ ಪೂಜೆ ಹಾಗೂ ಅಸ್ಥಿಪೂಜೆ ಮಾಡುವ ಸಮಯದಲ್ಲಿಯೂ ಸಂಗೀತದ ಬಳಕೆಯಾಗುತ್ತಿದ್ದ ಬಗೆಗೆ 'ದೀಘನಿಕಾಯ' ಎಂಬ ಗ್ರಂಥದಲ್ಲಿ ಪ್ರಮಾಣ ದೊರೆಯುತ್ತದೆ. ಬುದ್ಧನ ಮಹಾನಿರ್ವಾಣದ ನಂತರ ಕುಶನಗರದಲ್ಲಿಯ ಕೆಲವು ನರ್ತಕಿಯರು ಅವನ ಅಂತಿಮ ಸಂಸ್ಕಾರದ ಸಮಯದಲ್ಲಿ ಅವನ ಶರೀರದ ಹತ್ತಿರ ನೃತ್ಯ, ಗೀತ ಹಾಗೂ ವಾದನ ಮಾಡುತ್ತಿದ್ದರೆಂದು ಉಲ್ಲೇಖನ ಸಿಗುತ್ತದೆ.

'ಸಮಜ್ಜಾ' ಎಂಬ ಸಂಗೀತ ಸಮಾರಂಭ ಆ ಕಾಲದಲ್ಲಿ ಪ್ರಚಾರದಲ್ಲಿತ್ತು. ಆದರೆ ಬುದ್ಧ ಭಿಕ್ಷುಣಿಯರಿಗೆ ಇದರಲ್ಲಿ ಭಾಗವಹಿಸಲು ಅಧಿಕಾರವಿರಲಿಲ್ಲ. ಒಟ್ಟಾರೆ ಬುದ್ಧಯುಗದಲ್ಲಿ ಸಂಗೀತದ ವಿಕಾಸವೂ ಸಮಾಧಾನಕರ ರೀತಿಯಲ್ಲಿ ಮುಂದುವರೆದಿತ್ತು ಎಂದು ಸ್ಪಷ್ಟವಾಗುತ್ತದೆ.

---

# ರಾಗಮಾಲಾ: ಮಿಣಾಜಗಿಯವರದೃಷ್ಟಿ

ಸಂದರ್ಶನ. ಕೆ. ಹೇಮಾ

ಪ್ರ : ನೀವು ಇಂಗ್ಲಂಡಿನಲ್ಲಿ ಕಲಿತು ಬಂದ ಮೇಲೆ ರಾಗ ಮಾಲಾ ಚಿತ್ರಗಳನ್ನು ರಚಿಸಿದಿರಿ. ಅಲ್ಲಿಯ ಪ್ರಭಾವವು ರಾಗಮಾಲಾ ಚಿತ್ರಗಳ ಮೇಲೆ ಆಗಿರಲೇಬೇಕಲ್ಲ?

ಉ : ಹೌದು, ಆಗಿದೆ. ಆದರೆ ಇಂತಹುದೇ ರೀತಿಯಲ್ಲಿ ಎಂದು ಹೇಳಲು ಸ್ವಲ್ಪ ಕಷ್ಟವಾಗುತ್ತದೆ.

ಪ್ರಶ್ನೆ : ಬಾಲ್ಯದಿಂದಲೂ ನಿಮಗೆ ಚಿತ್ರಕಲೆ ಹಾಗೂ ಸಂಗೀತ ಎರಡರಲ್ಲೂ ಆಸಕ್ತಿಯಿತ್ತು ಆದರೂ ನೀವು ಚಿತ್ರಕಲೆಯತ್ತಲೇ ಒಲಿಯಲು ಕಾರಣ? ಅಂಥದೇನಾದರೂ ಘಟನೆನಡೆಯಿತೆ?

ಉತ್ತರ : ಹೌದು. ಇಂಟರಮೀಡಿಯಟ್ ಪರೀಕ್ಷೆಯಲ್ಲಿ ಮೊದಲಿಗನಾಗಿ ಬಂದಾಗ ನಮ್ಮ ಗುರುಗಳಾದ ಎನ್. ಎ. ಕುಲಕರ್ಣಿಯವರು ಬಹಳ ಸಂತೋಷ ಪಟ್ಟರು. ಚಿತ್ರಕಲೆ ಕಲಿಯುವಂತೆ ಪ್ರೋತ್ಸಾಹಿಸಿದರು. ಸಿದ್ದೇಶ್ವರ ದೇವಾಲಯದ ಗೋಪುರಕ್ಕೆ ಸ್ವತಃ ಬಣ್ಣವನ್ನು ತಯಾರು ಮಾಡಿ ಹಚ್ಚುತ್ತಿದ್ದರು. ಅವರು ಮಾಡುವದನ್ನು ಘಂಟೆಗಟ್ಟಲೇ ನೋಡುತ್ತ ನಿಲ್ಲುತ್ತಿದ್ದೆ. ಮನೆಗೆ ಬಂದು ಅವರಂತೆಯೇ ಬಣ್ಣ ತಯಾರಿಸಲು ಪ್ರಯತ್ನ ಮಾಡುತ್ತಿದ್ದೆ. ಇದೆಲ್ಲವೂ ನನ್ನ ಮೇಲೆ ವಿಶೇಷ ಪರಿಣಾಮ ಬೀರಿದವು.

ಪ್ರ : ರಾಗಮಾಲಾ ಚಿತ್ರಗಳನ್ನು ರಚಿಸಲು ಹೇಗೆ ಪ್ರೇರಣೆಯಾಯಿತು?

ಉ : ರಾವಬಹಾದ್ದೂರ ಸರೂಪ ಅವರ ಪುಸ್ತಕದಲ್ಲಿ ಯಾವ ರಾಗವು ಯಾವಭಾವವನ್ನು ಸೂಚಿಸುತ್ತದೆ ಎನ್ನುವದರ ಬಗೆಗೆ ವಿವರಣೆಯಿತ್ತು. ಅಲ್ಲದೇ 'ಮುಂಬೈಯ ಪ್ರಿನ್ಸ ಆಫ್ ವೇಲ್ಸ್' ಮ್ಯೂಸಿಯಂನಲ್ಲಿ ಅದರ ಬಗೆಗೆ ಅಧ್ಯಯನ ಮಾಡಿದೆ. ಮೊದಲಿನಿಂದಲೂ ನನಗೆ ಸಂಗೀತದ ಬಗೆಗೆ ಒಲವು ಇದ್ದೇ ಇದ್ದುದರಿಂದ ರಾಗಮಾಲಾ ಚಿತ್ರಗಳನ್ನು ರಚಿಸುವದಕ್ಕೆ ಪ್ರೇರಣೆಯಾಯಿತು.

ಪ್ರ : ನವರಸಗಳಲ್ಲಿ ಕೆಲವೊಂದು ರಸಗಳನ್ನಷ್ಟೇ ತೋರಿಸಿದ್ದಾರಲ್ಲ?

ಉ : ರಾಗಗಳು ಹೆಚ್ಚಾಗಿ ಶೃಂಗಾರ, ಶಾಂತ, ಕರುಣ ರಸಗಳನ್ನಷ್ಟೇ ಪ್ರತಿಪಾದಿಸುತ್ತವೆ. ಹೀಗಾಗಿ ಚಿತ್ರಗಳು ಆ ರಸಗಳನ್ನಷ್ಟೇ ಪ್ರತಿನಿಧಿಸುತ್ತವೆ. ಕೆಲವೊಂದು ರಸಗಳಷ್ಟೇ ಸಂಗೀತಕ್ಕೆ ಹೊಂದಿಕೆಯಾಗುತ್ತವೆ.

ಪ್ರ : ರಾಗಮಾಲಾ ಚಿತ್ರಗಳನ್ನು ಚಿತ್ರಿಸಿದವರಿಗೆ ರಾಗಗಳ ಗಂಧವೂ ಇರುವುದಿಲ್ಲ ಎಂದು ಪಾಶ್ಚಾತ್ಯ ಲೇಖಕರೊಬ್ಬರ ಅಭಿಪ್ರಾಯವಾಗಿದೆ. ನೀವು ಏನನ್ನುತ್ತೀರಿ?

ಉ : ಎಲ್ಲರೂ ಅಲ್ಲ. ಕೆಲವರಿಗೆ ಇರದೇ ಇರಬಹುದು ಈಗ ಆನಂದಕುಮಾರ ಸ್ವಾಮಿಯನ್ನೇ ತೆಗೆದುಕೊಳ್ಳಿ, ಅವರೇನು ಚಿತ್ರಕಲಾವಿದರಾಗಿರಲಿಲ್ಲ. ಆದರ ಒಳ್ಳೇ ವಿಮರ್ಶಕ



ತ್ಯಾಗರಾಜರು.



ಶ್ಯಾಮಾ ಶಾಸ್ತ್ರಿಗಳು



ಮುತ್ತು ಸ್ವಾಮಿ ದೀಕ್ಷಿತರು,

ಜೈನಯುಗವು ಒಂದು ಅಪೂರ್ವವಾದ ಮಾನಸಿಕ, ಆಧ್ಯಾತ್ಮಿಕ, ಹಾಗೂ ಕಲಾತ್ಮಕ ಕ್ರಾಂತಿಯ ಯುಗವಾಗಿತ್ತು ಎಂದು ಹೇಳಲಾಗಿದೆ. ಆದರಂತೆ ಆ ಕಾಲದ ಸಂಗೀತದಲ್ಲಿಯೂ ಅನೇಕ ಕ್ರಾಂತಿಕಾರಕ ಮಾರ್ಪಾಟುಗಳಾದವು. ಜೈನಧರ್ಮ ಗ್ರಂಥಗಳಲ್ಲಿ ಜೈನಯುಗದ ಸಂಗೀತ ಹಾಗೂ ಅದರ ವಿಕಾಸಕ್ರಮಗಳ ಬಗ್ಗೆ ಹೆಚ್ಚಿನ ವಿಷಯಗಳು ತಿಳಿದುಬರುತ್ತದೆ. ಜೈನ ವಿದ್ವಾಂಸರು ರಚಿಸಿದ ರಾಸ ಚೌದಾಯಿ ಮುಂತಾದ ಚರಿತ್ರ ಕಾವ್ಯಗಳಲ್ಲಿ 'ಸಾಜ್ಝಾಯ' ಹಾಗೂ 'ಗೀತ' ಮುಂತಾದ ರಚನೆಗಳಲ್ಲಿ ಆ ಸಮಯದಲ್ಲಿ ಪ್ರಚಾರದಲ್ಲಿದ್ದ ದೇಶೀ ಸಂಗೀತದ ಪ್ರಯೋಗವನ್ನು ಮಾಡಿದ್ದು ಕಂಡುಬರುತ್ತದೆ.

ಜೈನಯುಗದಲ್ಲಿ ಸಂಗೀತಕ್ಕೆ ರಾಜಾಶ್ರಯವಿತ್ತು, ಆಗಿನ ಕಾಲದ ರಾಜರುಗಳಲ್ಲಿ ಕೆಲವರು ಶ್ರೇಷ್ಠಮಟ್ಟದ ವಿದ್ವಾಂಸರೂ ಆಗಿದ್ದರು. 'ರಾಜಾ ಉದಯನ'ನು ಮಹಾ ಸಂಗೀತಜ್ಞನಾಗಿದ್ದನು. ಉದಯನನು ತನ್ನ ಪತ್ನಿ ನಾಟ್ಯ ಮಾಡುತ್ತಿದ್ದಾಗ ಹಿಮ್ಮೇಳದಲ್ಲಿ ವೀಣೆಯನ್ನು ನುಡಿಸುತ್ತಿದ್ದನು.

'ಸಂಖಿರಿ' ಅಥವಾ ,ಭೋಜ್ಯ' ಎಂಬ ಉತ್ಸವ

---

ರಾಗಿದ್ದರು. ಅವರಿಗೆ ಚಿತ್ರದ ಗಂಧವೇ ಇರಲಿಲ್ಲವೆಂದರೆ ಆಗುತ್ತದೆಯೇ? ಹಾಗೆ ಸಂಗೀತಕ್ಕೂ ಭಾವನೆಗೂ ನಿಕಟ ಸಂಬಂಧವಿದೆ. ಭಾವದಿಂದಲೇ ಚಿತ್ರವೂ ಮೂಡುವದು.

ಪ್ರ : ಅವ್ಯಕ್ತ ನಾದಕ್ಕೆ ವ್ಯಕ್ತ ರೂಪ ಕೊಡುವದು ಶುದ್ಧ 'ಅವಿವೇಕವೆನ್ನುತ್ತಾರಲ್ಲ?

ಉ : ಧರ್ಮ ಅವ್ಯಕ್ತ ತತ್ವವಾದರೆ ಸಮಾಜ ಅದರ ವ್ಯಕ್ತ ಸ್ವರೂಪ. ಧರ್ಮ ಸಮಾಜದ ನಾನಾ ಮುಖಗಳಲ್ಲಿ ಅಭಿವ್ಯಕ್ತವಾಗುತ್ತದೆ. ಭಾರತೀಯರು ಎಲ್ಲ ವಸ್ತುಗಳಲ್ಲಿಯೂ ದೇವತಾ ಸ್ವರೂಪವನ್ನು ಕಾಣುವರು ಅಂತೆಯೇ ಒಂದೊಂದು ರಾಗಕ್ಕೂ ಒಂದೊಂದು ರಸ, ಒಂದೊಂದು ಅಭಿಮಾನಿ ದೇವತೆ ಇವುಗಳನ್ನು ಕಲ್ಪಿಸಿದ್ದಾರೆ. ನಾಯಕ ನಾಯಿಕಾ ಭೇದ ಮೊದಲಾದ ಅಲಂಕಾರಗಳನ್ನೆಲ್ಲಾ ಸೇರಿಸಿ ಬರೀ ಶ್ರಾವ್ಯವೇ ಆದ ಸಂಗಿತವೂ ಆಗುವಂತೆ ನಿರ್ಮಿಸಿದ್ದಾರೆ. ಕವಿಯ ಸ್ಫೂರ್ತಿಯಂತೆಯೇ ಕಲೆಗಾರನ ಸ್ಫೂರ್ತಿ ಕೂಡ.

ಪ್ರ : ಕೆಲವೊಂದು ಚಿತ್ರಗಳಲ್ಲಿ ಪ್ರಖರ ವರ್ಣಗಳನ್ನೇ ಹೆಚ್ಚಾಗಿ ಉಪಯೋಗಿಸಿದ್ದರೂ ಚಿತ್ರ [illegible] ಹುಟ್ಟಿಸುವುದಿಲ್ಲ. ಬಣ್ಣಗಳ ಇಷ್ಟು ಮಧುರ ಹೊಂದಾಣಿಕೆ ಬೇರೆಲ್ಲಿಯೂ



ರಾಗ : ಬಿರಾಗ ಮಿಣಜಗಿಯವರ ಕೃತಿ.

ನೋಡಲು ಸಿಗುವದಿಲ್ಲ. ಬಣ್ಣಗಳನ್ನು ಹವಳ ಮುತ್ತು ಇತ್ಯಾದಿಗಳಿಂದಲೂ ಮಾಡುತ್ತಿದ್ದರಂತೆ!

ಉ : ಹಲವು ಬಗೆಯ ಮಣ್ಣು, ಕಲ್ಲು, ಚಿನ್ನ, ಬೆಳ್ಳಿ ಇವನ್ನೆಲ್ಲ ನುಣ್ಣಗೆ ಅರೆದು ಬಣ್ಣ ತಯಾರಿಸಿಕೊಳ್ಳುತ್ತಿದ್ದರು. ಹೊಳವು ಬರುವದಕ್ಕಾಗಿ ರಂಗೋಲಿಪುಡಿ, ಗಜ್ಜುಗ, ಕವಡೆ ತಿಕ್ಕುತ್ತಿದ್ದರು, ಅಭ್ರಕ, ಪಾರಜವನ್ನೂ ಉಪಯೋಗಿಸುತ್ತಿದ್ದರು. ದಿಲ್ಲಿಯ ಸೆಕ್ರೆಟರಿಯೆಟ್ ಹಾಲ್‌ನಲ್ಲಿ ಬರೆದ ಚಿತ್ರಕ್ಕೆ ಅಂಚು ಸೆರಗುಗಳಿಗೆ ನಿಜವಾದ ಚಿನ್ನವನ್ನೇ ಅರೆದು ಲೇಪಿಸಿದ್ದೇನೆ.

ಪ್ರ : ಒಂದೇ ರಾಗ ಬೇರೆ ಬೇರೆ ಚಿತ್ರಗಾರನ ಮೇಲೆ ಬೇರೆ ಬೇರೆ ಪರಿಣಾಮವನ್ನುಂಟು ಮಾಡುತ್ತದೆ. ಅವರು ತೆಗೆದ ಚಿತ್ರಗಳೂ ಬೇರೆ ಬೇರೆ ತರವಾಗಿರುತ್ತವೆ ಎಂದ ಮೇಲೆ ಈ ಚಿತ್ರವು ಇಂಥದೇ ರಾಗದ್ದೆಂದು ಹೇಳಲು ಬರುತ್ತದೆಯೇ?

ಉ : ಒಂದೊಂದು ರಾಗಕ್ಕೂ ಒಂದೊಂದು ಸಂಕೇತಗಳಿವೆ. ತೋಡಿರಾಗದಲ್ಲಿ ಜಿಗರೆ, ಮಿಯಾಮಲ್ಹಾರದಲ್ಲಿ ನವಿಲು. ಚಿತ್ರಕಾರ ಒಂದು ರಾಗದ ಮೇಲೆ ಚಿತ್ರ ರಚಿಸುವಾಗ ಹಾವಭಾವ, ಬಣ್ಣ, ರೂಪ ಇವುಗಳಲ್ಲಿ ವ್ಯತ್ಯಾಸ ಮಾಡಬಹುದು. ಆದರೆ ಮೂಲ ಉದ್ದೇಶಕ್ಕೆ ಚ್ಯುತಿ ತರುವದಿಲ್ಲ ಹೀಗಾಗಿ. ನಾವು ಈ ಚಿತ್ರವು ಇದೇ ರಾಗದ್ದೆಂದು ಗುರುತಿಸಬಹುದು.

ಗಳಲ್ಲಿ ಸಾಮೂಹಿಕ ಸಂಗೀತದ ಜೊತೆಗೆ ಸಾಮೂಹಿಕ ಭೋಜನ ಪದ್ಧತಿಯೂ ಆ ಕಾಲದಲ್ಲಿ ಪ್ರಚಾರವಿತ್ತು. ವೇದಕಾಲದಲ್ಲಿ ಪ್ರಚಾರದಲ್ಲಿದ್ದ ಸಂಗೀತದ ಬಗೆಗೆ ಯಾವ ಧಾರ್ಮಿಕ ಭಾವನೆಗಳಿದ್ದವೋ ಅವು ಈ ಜೈನಯುಗದಲ್ಲಿ ದೂರವಾಗಲು ಪ್ರಾರಂಭಿಸಿದವು. ವೇದಕಾಲದಲ್ಲಿಯ ಸಂಗೀತದ ಮೇಲೆ ಉಚ್ಚ ವರ್ಣೀಯರ ಏಕಮಾತ್ರ ಅಧಿಕಾರವಿತ್ತು. ಆದರೆ ಅದು ಜೈನಯುಗದಲ್ಲಿ ಜನಸಾಮಾನ್ಯರ ಕೈ ಸೇರಿತು.

ಜೈನ ಗ್ರಂಥಗಳಲ್ಲಿ ಜೈನಕಾಲೀನ ಸಂಗೀತ ವಾದ್ಯಗಳ ಉಲ್ಲೇಖ ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತದೆ. ವೀಣಾ, ವಿಪಂಚಿ, ವಲ್ಲಕ್ಕೀ, ಮಹತಿ, ಚಿತ್ರವೀಣೆ, ತುಂಬುರುವೀಣೆ, ನಕುಲ ಪರಿವಾದನಿ ಮುಂತಾದ ವೀಣೆಗಳ ಉಲ್ಲೇಖ ದೊರೆಯುತ್ತದೆ. ಸುಷಿರ ವಾದ್ಯಗಳಲ್ಲಿ ಶಿಂಬ, ವೇಣು ಮುಂತಾದವುಗಳ ಹಾಗೂ ಅವನದ್ಧ ವಾದ್ಯಗಳಲ್ಲಿ ಮೃದಂಗ, ನಂದಿ, ಮೃದಂಗ ಅಡಂಬರ, ಭಂಭಾ ಮುಂತಾದ ವಾದ್ಯಗಳ ಹೆಸರುಗಳು ಸಿಗುತ್ತವೆ.

ಠಾಣಾಂಗಸುತ್ತಿ ಎಂಬ ಜೈನ ಗ್ರಂಥದಲ್ಲಿ ಸ್ವರಗಳ ಉತ್ಪತ್ತಿ, ಸಪ್ತಸ್ವರಗಳು ಹಾಗೂ ಪ್ರಾಣಗಳ ಧ್ವನಿ ಜೊತೆಗೆ ಅವುಗಳ ಸಂಬಂಧ, ಮಾನವ ಸ್ವಭಾವದ ಜೊತೆಗೆ ಸಂಬಂಧ, ಗ್ರಾಮ ಮೂರ್ಚ್ಛನೆಗಳು, ಗೀತೆಗಳ ಗುಣ ದೋಷಗಳು ಇತ್ಯಾದಿಗಳ ವಿವೇಚನೆ ಮಾಡಲಾಗಿದೆ.

ನೃತ್ಯಕಲೆಗಳ ಪ್ರಚಾರವೂ ಸಹ ಆ ಯುಗದಲ್ಲಿ ಸಾಕಷ್ಟು ಆಯಿತು. ಸಾರ್ವಜನಿಕ ಸ್ಥಳಗಳಲ್ಲಿ ನೃತ್ಯಗಳ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ರಾಜದರ್ಬಾರದಲ್ಲಿಯೂ ಸಹ ನೃತ್ಯ ಕಾರ್ಯಕ್ರಮಗಳು ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿದ್ದವು. ಇಂಥ ಸಮಾರಂಭಗಳಲ್ಲಿ ನಾಗರಿಕರಾದ ಶ್ರೇಷ್ಠ ಕುಲದ ಕನ್ಯೆಯರು ಸಹ ಭಾಗವಹಿಸುತ್ತಿದ್ದರು.

ಮೊದಲನೆಯ ಶತಮಾನದಲ್ಲಿ ಸಂಗೀತದ ಶ್ರೇಷ್ಠ ಆಚಾರ್ಯರಾದ ಭರತ ಮುನಿ ಅವರು ಬರೆದ ನಾಟ್ಯಶಾಸ್ತ್ರ ಎಂಬ ಗ್ರಂಥ ನಾಟ್ಯಶಾಸ್ತ್ರವನ್ನು ಪ್ರತಿಪಾದಿಸುತ್ತಿತ್ತು. ಅದರ ೨೮, ೨೯, ಹಾಗೂ ೩೦ನೇ ಅಧ್ಯಾಯಗಳಲ್ಲಿ ಸಂಗೀತ ಶಾಸ್ತ್ರದ ಬಗೆಗೆ ಸ್ಥೂಲವಾಗಿ ವಿವೇಚನೆ ಮಾಡಲಾಗಿದೆ. ಭಾರತೀಯ ಸಂಗೀತದ ಒಂದು ಅಪೂರ್ವವಾದ ಗ್ರಂಥವೆಂದು ಈ ನಾಟ್ಯ ಶಾಸ್ತ್ರವನ್ನು ಪರಿಗಣಿಸಲಾಗಿದೆ. ನಾಟ್ಯಶಾಸ್ತ್ರದಲ್ಲಿ ರಸ, ಛಂದಸ್ಸು, ಭಾಷೆ, ರಂಗಮಂಚ, ವೇಷ ಭೂಷಣ, ಅಭಿನಯ ಹಾಗೂ ನೃತ್ಯ ಮೊದಲಾದ ವಿಷಯಗಳನ್ನು ಕುರಿತು ವಿವೇಚನೆ ಮಾಡಲಾಗಿದೆ. ಈ ಗ್ರಂಥವು ಭಾರತೀಯ ನಾಟ್ಯ ಹಾಗೂ ಸಂಗೀತ ಶಾಸ್ತ್ರಕ್ಕೆ ಅಪೂರ್ವ ಕಾಣಿಕೆಯಾಗಿದೆ.

ಗುಪ್ತರ ಕಾಲದಿಂದ ರಜಪೂತರ ಕಾಲದ ವರೆಗಿನ ಅವಧಿಯು "ಭಾರತೀಯ ಸಂಗೀತದ ಸುವರ್ಣ ಯುಗ" ಎಂದು ಕರೆಯಲ್ಪಡುತ್ತದೆ. ಈ ಕಾಲದಲ್ಲಿ ಭಾರತದ ಶ್ರೇಷ್ಠ ಕವಿಗಳೊಬ್ಬನಾದ ದತ್ತಿಲನು ಜನಿಸಿದನು. ಇವನು 'ದತ್ತಿಲಂ' ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದನು. ಇದರಲ್ಲಿ ಸ್ವರ, ಜಾತಿ ಮುಂತಾದವುಗಳ ವರ್ಣನೆ ಮಾಡಲಾಗಿದೆ. ಈ ಗ್ರಂಥದಲ್ಲಿ ಪ್ರತಿಪಾದಿಸಲಾದ ಕೆಲವು ವಿಚಾರಗಳು ಭರತನ ನಾಟ್ಯಶಾಸ್ತ್ರದ ವಿಚಾರದೊಂದಿಗೆ ಸಾಮ್ಯವಾಗಿ ತೋರಿ ಬರುತ್ತದೆ. ದತ್ತಿಲನು ತನ್ನ ಗ್ರಂಥದಲ್ಲಿ ಅವನ ಪೂರ್ವಕಾಲೀನ ಲೇಖಕರಾದ ನಾರದ, ಕೋಸಲ ಹಾಗೂ ವಿಶಾಖಿಲ ಇವರ ನಾಮೋಲ್ಲೇಖ ಮಾಡಿದ್ದಾನೆ. ಈ ಗ್ರಂಥವನ್ನು ಗುಪ್ತರ ಕಾಲದಲ್ಲಿ ಅತಿ ಶ್ರೇಷ್ಠ ಗ್ರಂಥವೆಂದು ಭಾವಿಸಲಾಗಿತ್ತು.

ಮೊದಲನೆ ಚಂದ್ರಗುಪ್ತನ ನಂತರ ಅವನ ಪುತ್ರನಾದ ಸಮುದ್ರಗುಪ್ತನು ಪಟ್ಟವೇರಿದನು. ಇವನ ಆಳ್ವಿಕೆಯು ಕಾಲ ಕ್ರಿ. ಶ. ೩೩೦-೩೮೦ರ ವರೆಗೆ ಎಂದು ಭಾವಿಸಲಾಗಿದೆ. ಸಮುದ್ರಗುಪ್ತನು ಮಹಾನ್ ಸಮ್ರಾಟ ಹಾಗೂ ಮಹಾನ್ ಸಂಗೀತ ತಜ್ಞ ಕವಿಯಾಗಿದ್ದನಲ್ಲದೇ ಶ್ರೇಷ್ಠ ವೀಣಾವಾದಕನೂ ಆಗಿದ್ದನು. ಇವನ ಕಾಲದಲ್ಲಿ ಶಾಸ್ತ್ರೀಯ ಸಂಗೀತದಲ್ಲಿಯೂ ಸಹ ಹಲವು ಬದಲಾವಣೆಗಳಾಗಿ ಅದರ ಪ್ರಚಾರ ಚೆನ್ನಾಗಿ ಆಗುತ್ತಿತ್ತು. ನೀರಿನಲ್ಲಿ ಬೆಂಕಿ ಹುಟ್ಟುವದು,

---

ಪ್ರ : ಹೆಚ್ಚಾಗಿ ಹೆಣ್ಣಿನ ಚಿತ್ರಗಳೇ ಇರಲು ಕಾರಣವೇನು? ಹೆಣ್ಣಿನ ವಿರಹದ ಹಲವು ಮುಖಗಳೇ ಚಿತ್ರದ ವಸ್ತುಗಳಾಗಲು ಕಾರಣ ವೇನು?

ಉ : ಶೃಂಗಾರ, ಕರುಣ, ಶಾಂತ ಇವು ಕೋಮಲ, ಹೆಣ್ಣು ಕೋಮಲತೆಯ ಪ್ರತೀಕ. ಅದಕ್ಕೇ ಹೆಚ್ಚಾಗಿ ಹೆಣ್ಣಿನ ಚಿತ್ರಗಳಿವೆ. ಭಾರತೀಯ ಚಿತ್ರಗಳು ಮನುಷ್ಯ-ಮನುಷ್ಯನಲ್ಲಿಯ ಮೋಹವನ್ನು ಚಿತ್ರಿಸಿಲ್ಲ ಹಾಗೂ ಮ್ಯಾಕ್ಸ್‌ಮುಲ್ಲರ ಹೇಳುವಂತೆ ಎದ್ದಾಗ ಕುಳಿತಾಗ ಎಲ್ಲ ಸಂದರ್ಭಗಳಲ್ಲೂ ಪೂಜ್ಯ ಭಾವನೆ ಎದ್ದು ಕಾಣುತ್ತದೆ. ಈ ವಿರಹವು ಮನುಷ್ಯನಿಗಾಗಿ ಅಲ್ಲ. ದೇವರಿಗಾಗಿ

ಪ್ರ: ಖ್ಯಾತ ಸಾಹಿತಿಯೊಬ್ಬರು ಚಿತ್ರಕಲೆಯ ಬಗೆಗೆ ಹೇಳುತ್ತಾ...ಜಗತ್ತಿನ ಚಿತ್ರಕಾರರು ವಿವಿಧ ಕಾಲದಲ್ಲಿ ಏಷ್ಟೆಲ್ಲ ಸಾಧಿಸಿದ್ದಾರೆ ಏನೆಲ್ಲ ಮಾಡಿದ್ದಾರೆ ಎಂಬುದನ್ನು ನೆನೆದರೆ ನಮ್ಮ ಕೊಡುಗೆ ಅಷ್ಟು ಕ್ಷುಲ್ಲಕವಲ್ಲದಿದ್ದರೂ ಅಂಥ ಮಹತ್ವದ್ದೇನೂ ಅಲ್ಲ ಎಂದಿದ್ದಾರಲ್ಲ ?

ಉ : ನಾನು ಒಪ್ಪುವದಿಲ್ಲ. ಏಕೆಂದರೆ ಪಾಶ್ಚಾತ್ಯರು ಇದ್ದುದನ್ನು ಇದ್ದಂತೆ ಚಿತ್ರಿಸುತ್ತಾರೆ. ಆದರೆ ನಾವು ಎಲ್ಲದರಲ್ಲಿಯೂ ದೈವತ್ವವನ್ನೇ ಕಲ್ಪಿಸಿ ನಮ್ಮ ಕಲ್ಪನೆಯಿಂದ ಚಿತ್ರ ರಚಿಸು






ಸಂಗೀತದಿಂದ ಮಳೆ ಬರಿಸುವದು ಮುಂತಾದ ಚಮತ್ಕಾರ ಹಾಗೂ ಅಪೂರ್ವ ಶಕ್ತಿಯುಳ್ಳ ಸಂಗೀತ ತಜ್ಞರು ಇವನ ಕಾಲದಲ್ಲಿ ಬಾಳಿದರು ಎಂದು ಹೇಳಲಾಗಿದೆ. ಸಮಾಜದಲ್ಲಿ ಸಂಗೀತಗಾರರಿಗೆ ಗೌರವವಿತ್ತು, ಹಾಗೂ ಅವರ ನೈತಿಕ ಒಲವೂ ಚೆನ್ನಾಗಿತ್ತು. ಜಾನಪದ ಗೀತೆಗಳ ಪ್ರಚಾರವೂ ಗುಪ್ತರಕಾಲದಲ್ಲಿ ಸಾಕಷ್ಟು ಇತ್ತು ಎಂದು ತಿಳಿದು ಬರುತ್ತದೆ. ಭಾರತೀಯ ಸಂಸ್ಕೃತಿ ಹಾಗೂ ಅದರ ಹಿರಿಮೆ ಮಾನವ ಜೀವನ, ನಿಸರ್ಗ ಸೌಂದರ್ಯ ಮುಂತಾದ ವಿಷಯಗಳು ಜನಪದ ಗೀತೆಗಳಲ್ಲಿ ನಿರೂಪಿತವಾಗಿವೆ. ಗ್ರಾಮ್ಯ ಜೀವಿಗಳು ಸಾಮಾಜಿಕ ನೃತ್ಯ ಹಾಗೂ ಜನಪದ ಗೀತ ಸಮಾರಂಭಗಳಲ್ಲಿ ಅತ್ಯಾನಂದದಿಂದ ಭಾಗ ವಹಿಸುತ್ತಿದ್ದರು. ಈ ಕಾಲದಲ್ಲಿ ಭಾರತೀಯ ಸಂಗೀತದ ಸರ್ವತೋಮುಖ ಪ್ರಗತಿ ಆಗಿತ್ತು. ಎಂದು ತಿಳಿದು ಬರುತ್ತದೆ.

ಗುಪ್ತರ ಕಾಲದಲ್ಲಿ ಭಾರತೀಯ ಸಂಗೀತ ಪ್ರಸಾರ ಪಾಶ್ಚಾತ್ಯ ದೇಶಗಳಲ್ಲಿಯೂ ಸಹ ಆಯಿತೆಂದು ಹೇಳಲಾಗುತ್ತದೆ. ವಿಕ್ರಮಾದಿತ್ಯನ ಕಾಲದಲ್ಲಿ 'ಫಾಹಿಯಾನ' ಎಂಬ ಚೀನಿ ಪ್ರವಾಸಿಯು ಈ ಬಗೆಗೆ ತನ್ನ ಗ್ರಂಥವೊಂದರಲ್ಲಿ ಉಲ್ಲೇಖಿಸಿದ್ದಾನೆ.

ಇದೇ ಕಾಲದಲ್ಲಿ ಅನೇಕ ಸುಪ್ರಸಿದ್ಧ ವಿದ್ವಾಂಸರು ಆಗಿಹೋದರು. ವಿಶೇಷವಾಗಿ ಕಾಳಿದಾಸ ನಾಟಕಕಾರರಾದ ಭಾಸ, ಶೂದ್ರಕ, ಭಾರವಿ, ವಿಶಾಖದತ್ತ ಮುಂತಾದವರ ಹೆಸರುಗಳು ಉಲ್ಲೇಖನೀಯ. ಇವರ ಕೃತಿಗಳಲ್ಲಿ ಭಾರತೀಯ ಸಂಗೀತದ ತತ್ವಗಳು ಅದರ ಪ್ರಯೋಗ, ಅದರ ಪ್ರಭಾವ ಮುಂತಾದ ಸಂಗತಿಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಈ ಎಲ್ಲ ಕೃತಿಗಳನ್ನು ಪರಿಶೀಲಿಸಿದರೆ ಆ ಕಾಲದಲ್ಲಿ ಸಂಗೀತದ ಜೊತೆಗೆ ಶಿಲ್ಪಕಲೆ, ಚಿತ್ರಕಲೆ, ಕಾವ್ಯ ಮುಂತಾದ ಲಲಿತ ಕಲೆಗಳು ಉಚ್ಚಮಟ್ಟದಲ್ಲಿದ್ದವು ಎಂದು ಕಂಡುಬರುತ್ತದೆ. ಆ ಸಂಗೀತ ಕಲೆಯು ರಾಜಮನ್ನಣೆ ಪಡೆದಿತ್ತು. ಮಾಲವಿಕಾ, ಶರ್ಮಿಷ್ಠಾ, ಹಂಸ, ಪದಿಕಾ ಮುಂತಾದ ಶ್ರೇಷ್ಠ ಕಲಾವಿದರು ಆಗ ಮನ್ನಣೆ ಪಡೆದರು.

ಸಂಗೀತ ಶಾಲೆಗಳ ಹೊರತಾಗಿ ಸಂಗೀತ ಶಿಕ್ಷಣದ ಏರ್ಪಾಡು ಗುರು-ಶಿಷ್ಯ ಪರಂಪರೆ ಪದ್ಧತಿಯೂ ಪ್ರಚಲಿತವಿತ್ತು. ಸಂಗೀತ ಶಿಕ್ಷಣ ಪ್ರಾರಂಭವಾಗುವ ಪೂರ್ವದಲ್ಲಿ ಸಂಗೀತ ಕಲೆಯ ಆರಾಧ್ಯ ದೇವತೆಯನ್ನು ಪೂಜಿಸುವ ಪದ್ಧತಿ ಇತ್ತು. ಸಂಗೀತ ಶಾಲೆಗಳಲ್ಲಿ ಸ್ವರ ವರ್ಣ, ಗೀತೆ, ಮೂರ್ಛನ, ತಾನ, ರಾಗ, ವಸ್ತು ಹಾಗೂ ಅಭಿನಯ ಮುಂತಾದ ಸಂಗತಿಗಳ ವಿಧಿವತ್ತಾದ ಶಿಕ್ಷಣ ಕೊಡಲಾಗುತ್ತಿತ್ತು. ಸಮಾಜದಲ್ಲಿ ಸಂಗೀತ ಸ್ಪರ್ಧೆ, ಸಾಮೂಹಿಕ ಸಂಗೀತ ಸಭೆಗಳು ಹಾಗೂ ನೃತ್ಯ ಕಾರ್ಯಕ್ರಮಗಳು ಏರ್ಪಡುತ್ತಿದ್ದವು.

ಗುಪ್ತರ ಕಾಲದಲ್ಲಿ ಭಾರತೀಯ ಸಂಗೀತದ ವಿಕಾಸವಾದಷ್ಟು ಬೇರೆ ಯಾವುದೇ ಕಾಲದಲ್ಲಿ ಆಗಲಿಲ್ಲ. ಈ ಕಾಲದಲ್ಲಿಯ ಸಂಗೀತದ ವೈಶಿಷ್ಟ್ಯ ಎಂದರೆ ಅದರ ಸಂರಕ್ಷಣ ಹಾಗೂ ವಿಕಾಸ ಯೋಗ್ಯ ವಿದ್ವಾಂಸರಿಂದ ಕ್ರಮವಾಗಿ ಆಯಿತು. ದೇಶದಲ್ಲಿಯ ಪರಿಸ್ಥಿತಿಯು ಸಹ ಅತ್ಯಂತ ಸಮಾಧಾನಕರವಾಗಿದ್ದು ಎಲ್ಲ ಜನರ ಜೀವನವು ಸುಖಕರವಾಗಿತ್ತು. ಅದ್ದರಿಂದ ಸಂಗೀತ ಹಾಗೂ ಸಾಹಿತ್ಯದ ವಿಶೇಷ ಉನ್ನತಿ ಈ ಕಾಲದಲ್ಲಿ ಸಾಕಷ್ಟು ಆಯಿತು.

ರಜಪೂತರು ಎಷ್ಟು ಯುದ್ಧಪ್ರಿಯರಾದ್ದರೋ ಅಷ್ಟೇ ಸಂಗೀತಪ್ರಿಯರಾಗಿದ್ದರು. ಅವರು ತಮ್ಮ ರಾಜದರ್ಬಾರಿನಲ್ಲಿ ಅನೇಕ ಸಂಗೀತ ತಜ್ಞರಿಗೆ ಆಶ್ರಯ ಕೊಟ್ಟು ಅವರ ಯೋಗಕ್ಷೇಮವನ್ನು ನೋಡುತ್ತಿದ್ದರು. ಆ ಕಾಲದ ಸಂಗೀತ ಪದ್ಧತಿಯು ಮೌರ್ಯ ಹಾಗೂ ಗುಪ್ತರಕಾಲದಲ್ಲಿದ್ದಂತೆ ಇರಲಿಲ್ಲ. ಸಂಗೀತದಲ್ಲಿಯ ಆಧ್ಯಾತ್ಮಿಕತೆಯ ಅಂಶ ಲೋಪವಾಗುತ್ತ ಬಂದು ಅದರ ಹಲವು ಮುಖಗಳ ವಿಕಾಸವು ಹೆಚ್ಚಾಗುತ್ತಾ ಬಂತು. ಇದರ ಪರಿಣಾಮವಾಗಿ ಸಂಗೀತವು ಅನೇಕ ಮಾರ್ಗಗಳಲ್ಲಿ ಹಂಚಿಹೋಗಿ ಅದರ ಸಾರ್ವಭೌಮತ್ವ ನಷ್ಟವಾಯಿತು.


ರಾಗ, ಕಲ್ಯಾಣಿ, ವಿಣಾಬಗಿಯುವರ ೬೬ ಕ್ಕ೨

ತ್ತೇವೆ. ಮೈಕೆಲೆಂಜಲೊ, ರೇಬೆನ್ಸ್ ಮುಂತಾದವರ ಚಿತ್ರಗಳನ್ನು ನೋಡಿದಾಗ ಅಥವಾ ಶೂಬರ್ಟ್ ಇತ್ಯಾದಿಗಳವರ ಗೇಯ-ಗಳನ್ನು ಕೇಳಿದಾಗ ಮನಸ್ಸು ಅಲ್ಲೋಲ ಕಲ್ಲೋಲವಾಗುತ್ತದೆ. ಅಜಂತಾ, ರಜಪೂತ ಚಿತ್ರಗಳನ್ನು ನೋಡಿದಾಗ ಮನಸ್ಸು ದಿನ ನಿತ್ಯದನೋವು ನಲಿವುಗಳನ್ನು ಮರೆತು ಒಂದು ರೀತಿಯ ಪ್ರಶಾಂತ ಸ್ಥಿತಿಯನ್ನು ತಲುಪುತ್ತದೆ.

ಪ್ರ : ಎಷ್ಟೋ ಸಂಘ ಸಂಸ್ಥೆಗಳಿಂದ, ಅಕೆಡಮಿಯಿಂದ ನಿಮಗೆ ಪುರಸ್ಕಾರ ಸಿಕ್ಕಿದೆ, ಬಿರುದುಗಳು ಸಿಕ್ಕಿವೆ, ಹಾಗೂ ಅಕೆಡಮಿ ನಿಮ್ಮ ಪುಸ್ತಕವನ್ನು ಪ್ರಕಟಿಸಿದೆ. ನಿಮಗೇನೆನಿಸುತ್ತದೆ ?

ಉ : ನನಗೆ ಬಹಳ ಸಂತೋಷವಾಗಿದೆ. ಆ ಪುಸ್ತಕದಿಂದ ಜನರಿಗೆ ಪ್ರಯೋಜನವಾದರೆ ಹೆಚ್ಚು ಸಂತೋಷವಾಗುತ್ತದೆ.

ಪ್ರ : ನವ್ಯಕಲೆಯ ಬಗೆಗೆ ನಿಮ್ಮ ಅಭಿಪ್ರಾಯ?

ಉ : ಯಾವುದು ಬದಲಾಗುತ್ತ ಹೋಗುತ್ತದೋ ಅದೇ ನವ್ಯಕಲೆ ಎನ್ನಿಸಿಕೊಳ್ಳುತ್ತದೆ. ಯಾವುದೇ ಶೈಲಿ ಅನುಸರಿಸಿದರೂ ಶ್ರದ್ಧೆಯಿಂದ ಅದರಲ್ಲಿ ದುಡಿಯಬೇಕು. ಅದಕ್ಕಾಗಿ ತ್ಯಾಗ ಮಾಡಬೇಕು. ಕಲಾಸೇವೆಯೇ ತಮ್ಮ ಗುರಿಯೆಂದು ತಿಳಿಯಬೇಕು.

ಬೇರೆ ಬೇರೆ ವರ್ಗದ ಜಾತಿಗಳಲ್ಲಿ ಸಂಗೀತದ ವಿಭಜನೆಯಾಗಿದ್ದರಿಂದ ಸಂಗೀತ ಕ್ಷೇತ್ರದ ಕಲಾಕಾರರಲ್ಲಿ ಸಂಕುಚಿತ ಮನೋಭಾವನೆ ಮೂಡಲು ಪ್ರಾರಂಭಿಸಿತು. ಸಂಗೀತಗಾರರು ತಮ್ಮದೇ ಆದ ಒಂದು ವೈಶಿಷ್ಟ್ಯವನ್ನು ಸೃಷ್ಟಿಸಿ ಬೆಳೆಸಿ ತಮ್ಮದೇ ಆದ ಸಂಗೀತದ ಘರಾಣೆ ಅಥವಾ ಪರಂಪರೆ ಮಾಡಿಕೊಳ್ಳುತ್ತಿದ್ದರು. ಈ ಪ್ರಕಾರ ಹಿಂದುಸ್ಥಾನಿ ಸಂಗೀತದ ಪದ್ಧತಿಯಲ್ಲಿ ಘರಾಣೆ ಎಂಬ ಶಬ್ದವು ರಜಪೂತರ ಕಾಲದಿಂದಲೇ ಪ್ರಾರಂಭವಾಗಿರಬೇಕು. ಈ ಕಾಲದಲ್ಲಿ ಸಂಗೀತದ ಅನೇಕ ಗ್ರಂಥಗಳು ರಚಿಸಲ್ಪಟ್ಟವು. ಇವುಗಳಲ್ಲಿ 'ನಾರದೀಯ ಶಿಕ್ಷಾ' ಎಂಬ ಗ್ರಂಥ ವಿಶೇಷ ಉಲ್ಲೇಖನೀಯ. ಈ ಗ್ರಂಥದಲ್ಲಿ ವೈದಿಕ ಹಾಗೂ ಲೌಕಿಕ ಈ ಎರಡು ಪ್ರಕಾರದ ಸಂಗೀತ ಪದ್ಧತಿಗಳು ಹೇರಳವಾಗಿ ಉಲ್ಲೇಖಿಸಲ್ಪಟ್ಟಿವೆ. ತತ್ಕಾಲೀನ ಸಂಗೀತಶಾಸ್ತ್ರದ ವಿವರವಾದ ಪರಿಚಯ ನಮಗೆ ಈ ಗ್ರಂಥದಲ್ಲಿ ದೊರೆಯುತ್ತದೆ.

೧೨ನೇ ಶತಮಾನದಲ್ಲಿ ರಜಪೂತರ ಕಾಲದಲ್ಲಿಯೇ ಭಾರತೀಯ ಸಂಗೀತದಲ್ಲಿ ಎರಡು ಪದ್ಧತಿಗಳು ಪ್ರಚಾರದಲ್ಲಿ ಬಂದವು. ಉತ್ತರ ಭಾರತದ ಹಿಂದುಸ್ಥಾನಿ ಸಂಗೀತ ಹಾಗೂ ದಕ್ಷಿಣ ಭಾರತದ ಕರ್ನಾಟಕ ಸಂಗೀತ ಎಂದು ಹೀಗೆ ಭಾರತೀಯ ಸಂಗೀತದಲ್ಲಿ ಎರಡು ವಿಧದ ಪದ್ಧತಿಗಳು ಪ್ರಚಾರದಲ್ಲಿ ಬಂದವು. ಕಾರಣವೇನೆಂದರೆ ೧೧ ನೇ ಶತಮಾನದಲ್ಲಿ ಪಠಾಣರ ಆಗಮನದಿಂದಾಗಿ ಉತ್ತರ ಭಾರತದಲ್ಲಿ ಪ್ರಚಾರದಲ್ಲಿದ್ದ ಸಂಗೀತದ ಮೇಲೆ ಮುಸಲ್ಮಾನರ ಸಾಕಷ್ಟು ಪ್ರಭಾವ ಆಯಿತು. ದಕ್ಷಿಣ ಭಾರತವು ಇಂತಹ ಆಕ್ರಮಣದಿಂದ ದೂರ ಉಳಿದಿತ್ತು. ಆದ್ದರಿಂದ ಅಲ್ಲಿಯ ಸಂಗೀತದ ಕಲೆ ಹಾಗೂ ಸಂಸ್ಕೃತಿ ಸುರಕ್ಷಿತವಾಗಿ ಉಳಿಯಿತು. ಇದೇ ಕಾಲದಲ್ಲಿ ಬಂಗಾಲದ ಶ್ರೇಷ್ಠಕವಿ ಹಾಗೂ ಸಂಗೀತಜ್ಞನಾದ ಜಯದೇವ ಕವಿಯು 'ಗೀತ ಗೋವಿಂದ' ಎಂಬ ಗ್ರಂಥವನ್ನು ವಿವಿಧ ರಾಗಗಳಲ್ಲಿ ಹಾಡುವಂತೆ ರಚಿಸಿದ್ದನು.

ಕ್ರಿ. ಶ. ೧೦೦೦ ವರ್ಷಗಳಿಂದ ೧೫೦೦ ರ ವರೆಗಿನ ಕಾಲದಲ್ಲಾದ ಮುಸಲ್ಮಾನರ ಆಕ್ರಮಣದಿಂದ ಭಾರತಕ್ಕೆ ತನ್ನ ರಕ್ಷಣೆ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಆ ಕಾಲದ ಸಂಗೀತವೂ ಪತನ ಮಾರ್ಗದಲ್ಲಿ ಸಾಗಿತ್ತು. ಭೋಗ ಪ್ರಧಾನ ಶೃಂಗಾರ ವಾತಾವರಣವು ಭಾರತೀಯ ಸಂಗೀತದಲ್ಲಿ ಸಮಾವೇಶವಾಗುತ್ತಿತ್ತು. ಇದರಿಂದ ಸಂಗೀತದ ರೂಪ ವಿರೂಪವಾಗಿ ಅದರಲ್ಲಿಯ ಪಾವಿತ್ರ್ಯ ಕಡಿಮೆಯಾಗಲು ಪ್ರಾರಂಭವಾಯಿತು. ಸಂಗೀತದ ಪರಂಪರೆ ಈ ಕಾಲದಲ್ಲಿ ಮಿಶ್ರಿತರೂಪ ಹೊಂದಿತು.

ಭೌಗೋಲಿಕ ಕಾರಣದಿಂದ ಹಾಗೂ ರಾಜನೀತಿ ಕಾರಣದಿಂದಾಗಲೀ ದಕ್ಷಿಣ ಭಾರತದಲ್ಲಿ ಮುಸಲ್ಮಾನರ ಆಕ್ರಮಣ ವಿಶೇಷವಾಗಲಿಲ್ಲ. ಪರಿಣಾಮವಾಗಿ ಉತ್ತರ ಭಾರತದಲ್ಲಿಯ ಅಭಿಜಾತಕಲೆಯ ಪತನದ ನಂತರವೂ ದಕ್ಷಿಣ ಭಾರತದಲ್ಲಿ ಸಂಗೀತಸಾಹಿತ್ಯ, ಕಲೆ, ಹಾಗೂ ವಿಜ್ಞಾನದ ಉನ್ನತಿಯಾಯಿತು. ಆ ಕಾಲದಲ್ಲಿಯ ಸಂಗೀತದ ಸ್ಥಿತಿ ಹಾಗೂ ವಿಕಾಸದ ಬಗ್ಗೆ ಮತ್ತು ಆ ಕಾಲದಲ್ಲಿ ರಚಿತವಾದ ಸಂಗೀತದ ಗ್ರಂಥಗಳ ವಿಕಾಸದ ಬಗ್ಗೆ ಅದೇ ಕಾಲದಲ್ಲಿ ಬರೆದ ಗ್ರಂಥಗಳಿಂದ ನಮಗೆ ದೊರೆಯುತ್ತದೆ.

೧೩ ನೇ ಶತಮಾನದಲ್ಲಿ ಅಲ್ಲಾ-ಉದ್-ದೀನ ಖಿಲ್ಜಿಯ ದರ್ಬಾರದಲ್ಲಿದ್ದ ಅಮೀರ ಖುಸ್ರು ಎಂಬ ಶ್ರೇಷ್ಠ ಪಾರ್ಸಿ ಕವಿ ಹಾಗೂ ಸಂಗೀತಜ್ಞನು ಉತ್ತರ ಭಾರತೀಯ ಸಂಗೀತದಲ್ಲಿ ಇರಾಣಿ ಹಾಗೂ ಪಾರ್ಸಿ ಸಂಗೀತದ ಪ್ರಭಾವವನ್ನು ಬೀರಿ ಒಂದು ಹೊಸ ಸಂಗೀತ ಶೈಲಿ ಪ್ರಸ್ಥಾಪಿಸಿದನು. ಇದುವೇ ಆಧುನಿಕ ಕಾಲದಲ್ಲಿ ಪ್ರಚಾರದಲ್ಲಿರುವ ಹಿಂದುಸ್ಥಾನಿ ಸಂಗೀತ ಎಂದು ಹೇಳಲಾಗುತ್ತದೆ.

ಅಮೀರ ಖುಸ್ರು ಭಾರತೀಯ ಸಂಗೀತದಲ್ಲಿ ಪ್ರಪ್ರಥಮವಾಗಿ ಖ್ಯಾಲ ಹಾಗೂ ಕವ್ವಾಲಿ ಹಾಡುಗಾರಿಕೆಯ ಶೈಲಿಗಳನ್ನು ಪ್ರಚಾರದಲ್ಲಿ ತಂದನು. ಅನೇಕ ಹೊಸ ರಾಗಗಳನ್ನು ರಚಿಸಿದನು. ಉದಾ:- ಉಷಾ,ಶಾಜಿಗಿರಿ.ರಿಷಲಫ್, ಯಮನ್ ಮುಂತಾದವು ಉಲ್ಲೇಖನೀಯವಾಗಿವೆ, ಸಂಗೀತ



ರಾಗ ಮೇಘ ಮಲ್ಹಾರ. ಮುಳಜಗಿಯವರ ಕೃತಿ

ವಾದ್ಯಗಳಲ್ಲಿಯೂ ಸಹ ಕ್ರಾಂತಿಕಾರಿ ಬದಲಾವಣೆಗಳನ್ನು ಮಾಡಿ, ಸೆಹತಾರ, (ಸಿತಾರ) ತಬಲಾ, ದಿಲ್‌ರುಬಾ, ಮುಂತಾದ ವಾದ್ಯಗಳನ್ನು ನಿರ್ಮಿಸಿದನು. ಇದೇ ಕಾಲದಲ್ಲಿ ದಕ್ಷಿಣ ಭಾರತದ 'ದೇವಗಿರಿ' ಯಲ್ಲಿ ಗೋಪಾಲ ನಾಯಕ ಎಂಬ ಶ್ರೇಷ್ಠ ಸಂಗೀತಗಾರನಿದ್ದನು. ಇವನ ಸಮಕಾಲೀನನಾದ ಆಚಾರ್ಯ ಸಾರಂಗ ದೇವನು 'ಸಂಗೀತ ರತ್ನಾಕರ' ಎಂಬ ಗ್ರಂಥವನ್ನು ರಚಿಸಿದನು.

ಪ್ರಾಚೀನ ಕಾಲದ ವಿದ್ವಾಂಸರಾದ ಭರತ, ಮಾತಂಗ, ಸೋಮೇಶ್ವರ ಹಾಗೂ ಹನುಮಾನ ಇವರು ಬರೆದ ಸಂಗೀತ ಗ್ರಂಥಗಳು ತಿಳಿಯಲು ಸಾಧ್ಯವಾಗದಿದ್ದರಿಂದ ಸಾರಂಗ ದೇವನು ಸಂಗೀತಾಚಾರ್ಯರ ಗ್ರಂಥಗಳ ಮಥನ ಮಾಡಿ 'ಸಂಗೀತರತ್ನಾಕರ' ಎಂಬ ಗ್ರಂಥ ರಚಿಸಿದನು. ಸಂಗೀತದಲ್ಲಿ ಉಪಲಬ್ಧವಿರುವ ಗ್ರಂಥಗಳಲ್ಲಿ ಸಂಗೀತರತ್ನಾಕರ ಎಂಬ ಗ್ರಂಥವು ಮುಕುಟ ಮಣಿಯಾಗಿದೆ, ಸಾರಂಗ ದೇವನು ತನ್ನ ಸಂಗೀತ ರತ್ನಾಕರ ಎಂಬ ಗ್ರಂಥವನ್ನು ಸ್ವರಾಧ್ಯಾಯ, ರಾಗಾಧ್ಯಾಯ,ಪ್ರಕೀರ್ಣಾಧ್ಯಾಯ,ತಾಲಾಧ್ಯಾಯ ವಾದ್ಯಾಧ್ಯಾಯ, ಹಾಗೂ ನೃತ್ಯಾಧ್ಯಾಯ, ಎಂಬ ೬ ಭಾಗಗಳಲ್ಲಿ ವಿಭಜಿಸಿದ್ದಾನೆ. ಇದರಲ್ಲಿ ಪ್ರಾಚೀನ ಕಾಲದ ಹಾಗೂ ಸಾರಂಗ ದೇವನ ಕಾಲದಲ್ಲಿದ್ದ ಸಂಗೀತ ವರ್ಣನೆ ಮಾಡಲಾಗಿದೆ.

ಇದೇ ಕಾಲದಲ್ಲಿ ಬರೆಯಲಾದ ಸಂಗೀತದ ಗ್ರಂಥಗಳಾದ 'ಚಾರುಮತಿ' ಎಂಬ ಕನ್ನಡ ಭಾಷೆಯಲ್ಲಿ ಬರೆದ ಗ್ರಂಥ, ಸಂಗೀತರತ್ನಾವಲಿ ಹಾಗೂ ಪಾರ್ಶ್ವದೇವನ ಸಂಗೀತಸಮಯಸಾರ ಎಂಬ ಗ್ರಂಥಗಳು ವಿಶೇಷ ಉಲ್ಲೇಖನೀಯವಾಗಿವೆ.

ಮೊಗಲರ ಆಳ್ವಿಕೆಯಲ್ಲಿ ವಿಶೇಷವಾಗಿ ಅಕ್ಬರನ ಕಾಲದಲ್ಲಿ ಭಾರತೀಯ ಸಂಗೀತದ ವಿಶೇಷತಃ ಹಿಂದುಸ್ತಾನಿ ಸಂಗೀತದ ಪ್ರಸಾರ ಭರದಿಂದ ಸಾಗಿತು. ಅಕಬರನು ಮಹಾನ್ ಸಂಗೀತ ಪ್ರೇಮಿಯಾಗಿದ್ದನು, ಪ್ರಸಿದ್ಧ ಪಾರ್ಸಿ ಇತಿಹಾಸಕಾರನಾದ 'ಅಬುಲ್‌ಫಜಲನು' ಬರೆದ 'ಐನೀ ಅಕ್ಬರಿ' ಎಂಬ ಗ್ರಂಥದಲ್ಲಿ ಅಕ್ಬರನ ಸಂಗೀತ ಪ್ರೇಮ ಹಾಗೂ ಅವನ ಕಾಲದಲ್ಲಿದ್ದ ಸಂಗೀತಕಾರರು ಹಾಗೂ ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಸಂಗೀತ ವಾದ್ಯಗಳ ಬಗೆಗೆ ಮಾಹಿತಿ ದೊರೆಯುತ್ತದೆ. ಅವನ ದರಬಾರದಲ್ಲಿದ್ದ ಪ್ರಮುಖ ಸಂಗೀತಗಾರರಲ್ಲಿ 'ಮಿಯಾ ತಾನ ಸೇನ' ಹಾಗೂ ಬೀನವಾದಕರಾದ'ಶಿಹಾಬಜಾನ' ಬಾಸುರಿವಾದಕರಾದ ಉಸ್ತವಜಾನ ಮುಂತಾದವರ ಹೆಸರು ಉಲ್ಲೇಖನೀಯವಾಗಿವೆ. ಅವನ ನಗಾರಖಾನೆಯಲ್ಲಿ ನಗಾರ, ಕರ್ನಾ, ಸಿಂಗ, ಮಂಚಿತಾ ಮುಂತಾದ ವಾದ್ಯಗಳು ಉಪಯೋಗಿಸಲ್ಪಡುತ್ತಿದ್ದವು. ಇವರ ಕಾಲದಲ್ಲಿಯೇ ತಾನಸೇನ, ಸ್ವಾಮಿ ಹರಿದಾಸ, ಸೂರದಾಸ, ಮೀರಾಬಾಯಿ ಮುಂತಾದ ಶ್ರೇಷ್ಠ ಸಂಗೀತ ವಿದ್ವಾಂಸರು ಆಗಿಹೋದರು.

ಇದಲ್ಲದೇ ಅಕ್ಬರನ ಕಾಲದಲ್ಲಿ ಮಂದಿರ ಸಂಗೀತ ಅಥವಾ ಹವೇಲಿ ಸಂಗೀತ ಎಂದು ಪ್ರಚಾರದಲ್ಲಿರುವ ಸಂಗೀತ ಕೂಡ ಪ್ರಚಾರದಲ್ಲಿತ್ತು. ಮಂದಿರದಲ್ಲಿ ಹಾಡಲ್ಪಡುವ ಸಂಗೀತದಲ್ಲಿ ಕೇವಲ ದೇವರ ಭಕ್ತಿಪರ ರಚನೆಗಳು ಮಾತ್ರ ಹಾಡಲ್ಪಡುತ್ತಿದ್ದವು. ಈ ರಚನೆಗಳು ವಿಷ್ಣುಪದ ಹಾಗೂ ಧ್ರುಪದದಂತಹ ಸಂಗೀತದ ಶ್ರೇಷ್ಠ ಶೈಲಿಗಳಲ್ಲಿ ಹಾಡಲ್ಪಡುತ್ತಿದ್ದವು.

ಸ್ವಾಮಿ ಹರಿದಾಸ, ಕೃಷ್ಣದಾಸ, ಕುಂಬನದಾಸ ಸೂರದಾಸ, ನಂದದಾಸ, ವಲ್ಲಭಾಚಾರ್ಯ, ಮುಂತಾದ ಭಕ್ತಕವಿಗಳ ರಚನೆಗಳು ಶಾಸ್ತ್ರೀಯ ಸಂಗೀತದಲ್ಲಿಯ ಉಚ್ಚ ಮಟ್ಟದ ರಚನೆಗಳಾಗಿವೆ. ಬಾದಶಹನ ದರಬಾರದಲ್ಲಿ ಕೇವಲ ರಾಜನ ಸ್ತುತಿಪರ ಮತ್ತು ಶೃಂಗಾರಪರ ರಚನೆಗಳನ್ನು ಒಳಗೊಂಡು ಸಂಗೀತ ನಡೆಯುತ್ತಿತ್ತು. ಹೀಗಾಗಿ ಆ ಕಾಲದಲ್ಲಿ ದರ್ಬಾರದಲ್ಲಿ ನಡೆಯುವಂಥ ಸಂಗೀತಕ್ಕೆ 'ದರಬಾರಿ ಸಂಗೀತ' ಮತ್ತು ದೇವಸ್ಥಾನದಲ್ಲಿ ನಡೆಯುವ ಸಂಗೀತಕ್ಕೆ 'ಹವೇಲಿ' ಸಂಗೀತ ಅಥವಾ ಮಂದಿರದ ಕೀರ್ತನ ಸಂಗೀತ ಎಂದು ಕರೆಯುತ್ತಿದ್ದರು.

ಔರಂಗಜೇಬನ ಕಾಲದಲ್ಲಿ ಸಂಗೀತಕ್ಕೆ ಅಷ್ಟು ಪ್ರೋತ್ಸಾಹ ದೊರೆಯಲಿಲ್ಲ. ಏಕೆಂದರೆ ಅವನಿಗೆ ಭಾರತೀಯ ಸಂಗೀತದ ಬಗೆಗೆ ಅತ್ಯಂತ ತಿರಸ್ಕಾರವಿತ್ತು. ಅವನ ದರಬಾರದಲ್ಲಿದ್ದ ಎಲ್ಲ ಸಂಗೀತಗಾರರನ್ನು ದೂರ ಅಟ್ಟಿದನು. ಅದರ ಪರಿಣಾಮವಾಗಿ ದರಬಾರದಲ್ಲಿದ್ದ ಶ್ರೇಷ್ಠ ಸಂಗೀತಗಾರರು ವೇಶ್ಯಾವೃತ್ತಿ ಮಾಡುವ ನೃತ್ಯಾಂಗನೆಯರ ಆಶ್ರಯ ಪಡೆಯಬೇಕಾಯಿತು. ಇದರಿಂದಾಗಿ ಸಂಗೀತದಲ್ಲಿ ಅಶ್ಲೀಲ ಶೃಂಗಾರಯುಕ್ತ ರಚನೆಯಾಗತೊಡಗಿದವು. ಹೀಗಾಗಿ ಈ ದರ್ಬಾರಿ ಸಂಗೀತದ ಬಗೆಗೆ ಜನರಲ್ಲಿ ಒಂದು ತರಹದ ತಿರಸ್ಕಾರ ಭಾವನೆ ಉಂಟಾಯಿತು. ಮುಂದೆ ಮಹಮ್ಮದ್‌ಶಾ ರಂಗಿಲೆ ಕಾಲದಲ್ಲಿ 'ಸದಾರಂಗ' ಮತ್ತು 'ಅದಾರಂಗ' ನಂತಹ ಶ್ರೇಷ್ಠ



ರಾಗ ಕೇದಾರ



ನಟಿ ರಾಗಿಣಿ

ಸಂಗೀತ ವಿದ್ವಾಂಸರಿಂದ ಸಂಗೀತಕ್ಕೆ ಪುನಃ ಚೈತನ್ಯಪ್ರಾಪ್ತವಾಯಿತು. 'ಸದಾರಂಗ' ಮತ್ತು 'ಅದಾರಂಗ' ಇವರು ಜಟಿಲವಾದ ದ್ರುಪದ ಗಾಯನದ ಬದಲಾಗಿ ಸೌಮ್ಯ ಹಾಗೂ ಮನೋಧರ್ಮವುಳ್ಳ ಖ್ಯಾಲ ಹಾಡುಗಾರಿಕೆಯ ಪ್ರಚಾರ ಮಾಡತೊಡಗಿದರು. ಇಂದಿಗೂ ಹಿಂದುಸ್ಥಾನಿ ಶಾಸ್ತ್ರೀಯ ಸಂಗೀತದಲ್ಲಿ ಅವರು ಮಾಡಿದ ರಚನೆಗಳು ಹಾಡಲ್ಪಡುತ್ತವೆ.

ದಕ್ಷಿಣ ಭಾರತದಲ್ಲಿ ಹಿಂದುಸ್ಥಾನಿ ಸಂಗೀತ ಕ್ಕಿಂತ ಕರ್ನಾಟಕಿ ಸಂಗೀತ ಭರದಿಂದ ಪ್ರಚಾರ ವಾಗತೊಡಗಿತು. ದಕ್ಷಿಣ ಭಾರತದ ಜನರು ಸಂಗೀತದಲ್ಲಿಯ ಪಾವಿತ್ರ್ಯ ಕಾಪಾಡಲು ತುಂಬ ಪ್ರಯತ್ನಿಸಿದರು. ಇದರಿಂದಾಗಿ ಭಾರತದಲ್ಲಿ ಸಂಗೀತದಲ್ಲಿಯ ಪಾವಿತ್ರ್ಯ ಹಾಗೂ ಘನತೆ ಕೇವಲ ದಕ್ಷಿಣ ಭಾರತದಲ್ಲಿ ಆ ಕಾಲದಲ್ಲಿ ಕಂಡು ಬರುತ್ತಿತ್ತು. ಕರ್ನಾಟಕಿ ಸಂಗೀತ ಬೆಳವಣಿಗೆ ಯಲ್ಲಿ ದಕ್ಷಿಣ ಭಾರತದಲ್ಲಿ ಉದಯಿಸಿದ ಅನೇಕ ವಿದ್ವಾಂಸರು ತಮ್ಮ ಸೇವೆಯನ್ನು ಸಲ್ಲಿಸಿದರು ಇವರಲ್ಲದೇ ವಿದ್ವಾಂಸರಾದ ಮಾರ್ಗದರ್ಶಿ ಶೇಷಯ್ಯಂಗಾರರು ಹಾಗೂ ತಂಜಾವೂರಿನ ಗೋವಿಂದರಾವ ದೀಕ್ಷಿತ ಇವರ ಹೆಸರುಗಳು ಉಲ್ಲೇಖನೀಯವಾಗಿವೆ. ಮಾರ್ಗದರ್ಶಿ ಶೇಷ ಯ್ಯಂಗಾರರು ದಕ್ಷಿಣ ಭಾರತದ ತಮಿಳುನಾಡಿನ ವರಾಗಿದ್ದರು. ಇವರು ಶ್ರೇಷ್ಠ ಸಂಗೀತಜ್ಞರು ಹಾಗೂ ಸಂಸ್ಕೃತ ಪಂಡಿತರಾಗಿದ್ದರು. ಇವರು 'ಕೋಸಲ' ಎಂಬ ಉಪನಾಮದಿಂದ ಅನೇಕ ಸಂಗೀತ ರಚನೆಗಳನ್ನು ರಚಿಸಿದರು. ಇವರ ಎಲ್ಲ ಕೃತಿಗಳು ಶಾಸ್ತ್ರಬದ್ಧವಾಗಿರುವದರಿಂದ ಜನರು ಇವರಿಗೆ 'ಮಾರ್ಗದರ್ಶಿ' ಎಂಬ ಬಿರುದುಕೊಟ್ಟು ಗೌರವಿಸಿದರು. ಕರ್ನಾಟಕ ಸಂಗೀತದಲ್ಲಿ ಇವರು ರಚಿಸಿದ ಕೀರ್ತನೆಗಳು ಅತ್ಯಂತ ಮಹತ್ವ ಪೂರ್ಣವಾಗಿವೆ.

ತಂಜಾವೂರಿನ ಪ್ರಸಿದ್ಧ ಸಂಗೀತ ವಿದ್ವಾಂಸ ರಾದ ಗೋವಿಂದ ದೀಕ್ಷಿತರು 'ಸಂಗೀತಸುಧಾ' ಎಂಬ ಕರ್ನಾಟಕ ಸಂಗೀತದ ಗ್ರಂಥವನ್ನು ರಚಿಸಿದರು. ಇದಲ್ಲದೇ ಗೋವಿಂದ ದೀಕ್ಷಿತರು 'ಜಯಂತ ಸೇನ' ಎಂಬ ಹೊಸ ರಾಗದ ಸೃಷ್ಟಿಯನ್ನು ಮಾಡಿದರು. ಇದೇ ಕಾಲದಲ್ಲಿ ಭಾವಭಟ್ಟ, ಪಂ. ವೆಂಕಟಮುಖಿ, ಅಕಳಂಕ, ವಿಕ್ರಮ, ಕ್ಷೇತ್ರಜ್ಞ ಮುಂತಾದ ಶ್ರೇಷ್ಠ ವಿದ್ವಾಂಸರು ಆಗಿಹೋದರು. ಭಾವಭಟ್ಟರು ಬಿಕಾನಿರದ ಅರಸರಾದ ಮಹಾ ರಾಜ 'ಅನುಪಸಿಂಹ' ಇವರ ಆಶ್ರಯದಲ್ಲಿದ್ದರು. ಇವರು ಅನುಪವಿಲಾಸ, ಅನುಪಸಂಗೀತರತ್ನಾಕರ ಅನುಪಾಂಕುಶ ಹಾಗೂ 'ಸಂಗೀತ ವಿನೋದ' ಎಂಬ ಸಂಗೀತ ಗ್ರಂಥಗಳನ್ನು ರಚಿಸಿದರು. ಈ ಗ್ರಂಥಗಳಲ್ಲಿ ಈಗ ಪ್ರಾಪ್ತವಾದ ಅನುಪಸಂಗೀತ ರತ್ನಾಕರದಲ್ಲಿ ಹಿಂದುಸ್ಥಾನಿ ಹಾಗೂ ಕರ್ನಾಟಕಿ ಸಂಗೀತದ ಬಗ್ಗೆ ವಿವೇಚನೆ ಮಾಡಲಾಗಿದೆ.

ಕ್ರಿ. ಶ. ೧೬೬೦ರಲ್ಲಿ ತಂಜಾವೂರಿನ ವಿಜಯ 'ರಾಘವರಾಯ' ಎಂಬ ಅರಸರ ಬಳಿ ಮಂತ್ರಿ ಯಾಗಿದ್ದ ಪ್ರಸಿದ್ಧ ಸಂಗೀತ ವಿದ್ವಾಂಸರಾದ ಪಂ. ವೆಂಕಟಮುಖಿಯವರು "ಚಂತುರ್‌ದಂಡಿ ಪ್ರಕಾಶಿಕಾ" ಎಂಬ ಗ್ರಂಥವನ್ನು ರಚಿಸಿದರು. ಈ ಗ್ರಂಥ ದಲ್ಲಿ ಅವರು 'ರಾಮಾಮಾತ್ಯರ' ಸ್ವರಮೇಳ ಕಲಾ ನಿಧಿಯ ಕಟುವಾದ ಟೀಕೆ ಮಾಡಿ ವೀಣೆ, ಶ್ರುತಿ, ಮೇಳ, ರಾಗ ಆಲಾಪನೆ, ಕಾಯಗೀತ ಪ್ರಬಂಧ ಹಾಗೂ ತಾಲಗಳ ಬಗೆಗೆ ವಿವೇಚನೆ ಮಾಡಿದ್ದಾರೆ. ಸಪ್ತಕದ ೧೨ ಸ್ವರಗಳಿಂದ ೭೨ ಮೇಳ ಗಳ ರಚನೆಗಳನ್ನು ಇವರು ಗಣಿತ ಪದ್ಧತಿಯನು ಸಾರವಾಗಿ ಮಾಡಿದ್ದಾರೆ. ಒಂದು ಮೇಳದಿಂದ ೪೮೪ ರಾಗಗಳ ಉತ್ಪತ್ತಿಯನ್ನು ಸಹ ಸಿದ್ಧ ಮಾಡಿದ್ದಾರೆ. ಇವರ ಕಾಲದಲ್ಲಿ ಪ್ರಚಾರದಲ್ಲಿದ್ದ ಅನೇಕ ರಾಗಾಂಗ, ಭಾವಾಂಗ, ಉದಾಂಗ ರಾಗಗಳ ಲಕ್ಷಣಗಳನ್ನು ಇವರು ನಿರೂಪಿಸಿದ್ದಾರೆ. ಕರ್ನಾಟಕ ಸಂಗೀತ ಶಾಸ್ತ್ರದ ನಿರೂಪಣೆ ಮಾಡಿದ ಶ್ರೇಯಸ್ಸು ಪಂ. ವೆಂಕಟಮುಖಿಯವರಿಗೆ ಸಲ್ಲುತ್ತದೆ.

ಪಂ. ವೆಂಕಟಮುಖಿಯರ ನಂತರ ತಮಿಳು ನಾಡಿನ ವಿದ್ವಾಂಸರಾದ ಅಕಳಂಕರು 'ಸಂಗೀತ ಸಾರ' ಎಂಬ ಗ್ರಂಥ ರಚಿಸಿದರು. ಇದರಲ್ಲಿ ೨೪ ಶೃತಿಗಳ ಬ್ರಹ್ಮ ವೀಣೆಯ ವಿಚಾರವಾಗಿ ಚರ್ಚಿಸ ಲಾಗಿದೆ. ಪಂ ವೆಂಕಟಮುಖಿಯ ಹಾಗೇ ಇವರೂ ಕೂಡ ಒಂದು ಹೊಸ ಮೇಳ ಪದ್ಧತಿಯ ರಚನೆ ಮಾಡಿದರು.

ಭಾರತೀಯ ಇತಿಹಾಸದಲ್ಲಿ ಕ್ರಿ. ಶ. ೧೬೦೧ ರಿಂದ ೧೯೪೭ ರ ವರೆಗಿನ ಕಾಲ ಬ್ರಿಟಿಷರ ಕಾಲ ಎಂದು ಭಾವಿಸಲಾಗುತ್ತದೆ. ಈ ಕಾಲದಲ್ಲಿಯ ಭಾರತೀಯ ಸಂಗೀತದಲ್ಲಿ ಅನೇಕ ಪರಿವರ್ತನೆ ಗಳು ಕಂಡುಬರುತ್ತವೆ. ಹಿಂದುಸ್ಥಾನಿ ಸಂಗೀತದ ಹೊಸ ಹೊಸ ಶೈಲಿಗಳ ಉಗಮವಾಯಿತು. ೧೮ ನೇ ಶತಮಾನದ ಪೂರ್ವಾರ್ಧದಲ್ಲಿ ಮಹ ಮ್ಮದಶಾ ಹರಂಗೀಲ್ ಮೊಗಲ್ ವಂಶದ ಕೊನೆಯ ಬಾದಶಹನಾಗಿದ್ದನು. ಇವನು ಅತ್ಯಂತ

ಸಂಗೀತ ಪ್ರೇಮಿಯಾಗಿದ್ದನು. ಇವನ ದರಬಾರಿನಲ್ಲಿ 'ನ್ಯಾಮತ್ ಖಾನ' ಎಂಬ ವೈಣಿಕನಿದ್ದನು. ಅವನು ಸದಾರಂಗಿಲೆ ಎಂಬ ಉಪನಾಮ ಧರಿಸಿ ಮಹಮದ ಶಹಾನ ವರ್ಣನೆಗಳನ್ನು ತನ್ನ ರಚನೆಗಳಲ್ಲಿ ಮಾಡಿ ಸಂಗೀತ ಕ್ಷೇತ್ರದಲ್ಲಿ ಅವನ ಹೆಸರನ್ನು ಅಮರಗೊಳಿಸಿದ್ದಾನೆ. ಅವನ ಪುತ್ರನಾದ ಫಿರೋಜ ಖಾನ ಅದಾರಂಗ ಎಂಬಹೆಸರನ್ನು ಧರಿಸಿ ಅನೇಕ ಖ್ಯಾಲಗಳನ್ನು ರಚಿಸಿ ಹಿಂದುಸ್ತಾನಿ ಖ್ಯಾಲ ಪದ್ಧತಿಯ ಪ್ರಸಾರ ಮಾಡಿದನು.

ಟಪ್ಪಾ ಎಂಬ ಗಾಯನ ಶೈಲಿಯ ಉಗಮ ಇದೇ ಕಾಲದಲ್ಲಿ ಆಯಿತು. ಲಖನೌದ 'ಮಿಯಾ ಶೋರಿ' ಎಂಬ ಗಾಯಕನು ಇದರ ಜನಕನಾಗಿದ್ದನೆಂದು ಹೇಳಲಾಗುತ್ತದೆ. ವಾಸ್ತವವಾಗಿಟಪ್ಪಾ ಗಾಯನ ಪ್ರಕಾರವು ಪ್ರಥಮವಾಗಿ ಪಂಜಾಬದ ಲೋಕ ಗೀತದ ಪ್ರಕಾರವಾಗಿದ್ದು ಉಸುಕಿನ ಪ್ರದೇಶದಲ್ಲಿ ಒಂಟೆಯ ಮೇಲೆ ಪ್ರವಾಸ ಮಾಡುವ ಜನರು ಈ ಗಾಯನ ಪ್ರಕಾರವನ್ನು ಬಳಸುತ್ತಿದ್ದರೆಂದು ಕೆಲವು ವಿದ್ವಾಂಸರಅಭಿಪ್ರಾಯ. ಮುಂದೆ ಮಿಯಾಶೋರಿ ಇವನು ಈ ಲೋಕ ಗೀತದಲ್ಲಿ ಕೆಲವು ಪರಿವರ್ತನೆಗಳನ್ನು ಮಾಡಿ ಅವುಗಳಿಗೆ ಶಾಸ್ತ್ರಬದ್ಧ ರೂಪವನ್ನು ಕೊಟ್ಟನು.

೧೮ನೇ ಶತಮಾನದ ಉತ್ತರಾರ್ಧದಲ್ಲಿ ಸಂಗೀತದ ಸಾಧನೆ ಹಾಗೂ ಅದರ ಬೆಳವಣಿಗೆ ಸಾಧಾರಣ ರೂಪದಿಂದ ನಡೆಯುತ್ತಿತ್ತು. ಮುಸಲ್ಮಾನರ ಶಕ್ತಿ ಕ್ಷೀಣಿಸುತ್ತ ಭಾರತದ ಮೇಲೆ ಬ್ರಿಟಿಷರ ಅಧಿಕಾರ ದಿನೇ ದಿನೇ ಹೆಚ್ಚುತ್ತಿದ್ದ ದುರ್ಧರ ಕಾಲದಲ್ಲಿ ಸಂಗೀತಕಲೆಯು ರಾಜಾಶ್ರಯದಿಂದ ಹೊರಬಂದು ಸ್ವತಂತ್ರ ರೂಪದಿಂದ ಸಣ್ಣ ಪುಟ್ಟ ಸಂಸ್ಥಾನದಲ್ಲಿ ಬೆಳೆಯಹತ್ತಿತು. ಈ ಕಾಲದಲ್ಲಿ ಹಿಂದುಸ್ತಾನಿ ಸಂಗೀತದಲ್ಲಿ ಹಿಂದು ಹಾಗೂ ಪಾರ್ಶಿ ಸಂಗೀತದ ಸಮ್ಮಿಶ್ರಣವಾದದ್ದು ಕಂಡುಬರುತ್ತದೆ.

ಫಾರ್ಶಿ ಶಾಸ್ತ್ರೀಯ ಸಂಗೀತದ ಕೆಲವು ಪ್ರಕಾರಗಳು ಪೂರ್ಣವಾಗಿ ಇದ್ದಕ್ಕಿದಂತೆ ಹಿಂದುಸ್ತಾನಿ ಸಂಗೀತದಲ್ಲಿ ಒಳಗೊಂಡವು. ಉದಾ :- ಕವ್ವಾಲಿ, ಕುರ್ಬಾನಾ, ಶೇಖತಾ, ಗಜಲ ಮುಂತಾದವು.

ಭಾರತಕ್ಕೆ ಯುರೋಪಿಯನ್ನರ ಆಗಮನದಿಂದ ಒಂದು ರೀತಿಯ ಅನೈತಿಕತೆ ಹಾಗೂ ಅಸ್ಥಿರತೆ ಹೆಚ್ಚಿತು. ಬ್ರಿಟಿಷರು ನಮ್ಮ ಸಂಗೀತದ ಕಡೆಗೆ ಒಳ್ಳೆಯ ಭಾವನೆಯಿಂದ ನೋಡುತ್ತಿರಲಿಲ್ಲ. ಸಂಗೀತದ ರೂಪವೂ ಸಹ ಅತ್ಯಂತ ಅಶ್ಲೀಲವಾಗಿತ್ತು. ಗಜಲ, ಠುಮರಿ, ಮುಂತಾದ ಗಾಯನ ಶೈಲಿಗಳಲ್ಲಿ ಶೃಂಗಾರವೇ ಹೆಚ್ಚಿರುತ್ತಿತ್ತು. ಸಂಗೀತವು ಕೇವಲ ಭೋಗ ವಿಲಾಸ ಎಂದು ತಿಳಿಯಲಾಗಿತ್ತು. ಪರಿಣಾಮವಾಗಿ ಸುಶಿಕ್ಷಿತ ಸ್ತ್ರೀ ಪುರುಷರು, ಹಿಂದುಸ್ತಾನಿ ಸಂಗೀತಗಾರರನ್ನು ಚಾರಿತ್ರ್ಯ ಹೀನರೆಂದು ಭಾವಿಸುತ್ತಿದ್ದರು. ಇದರಿಂದಾಗಿ ಸಂಗೀತದ ಗೌರವ ಕೆಳಮಟ್ಟಕ್ಕೆ ಇಳಿಯಲು ಪ್ರಾರಂಭವಾಯಿತು.

ಸುಗಮ ಸಂಗೀತ ಹಾಗೂ ನಾಟ್ಯ ಸಂಗೀತದ ಪ್ರಕಾರವು ಕರ್ನಾಟಕಹಾಗೂ ಮಹಾರಾಷ್ಟ್ರ ಪ್ರಾಂತಗಳಲ್ಲಿ ಇದೇ ಕಾಲದಲ್ಲುದಯಿಸಿತು. ಶಾಸ್ತ್ರೀಯ ಸಂಗೀತದಲ್ಲಿಯ ಶೃಂಗಾರ ರಚನೆಗಳಿಂದ ಬೇಸತ್ತ ಜನರು ನಿಸರ್ಗದ ಸುಂದರ ಚಿತ್ರಣ, ಪ್ರಸಂಗ ವಿಶೇಷದ ಚಿತ್ರಣ ಮುಂತಾದ ವಿಷಯಗಳನ್ನು ಜೋಡಿಸಿದ ಸುಗಮ ಹಾಗೂ ನಾಟ್ಯ ಸಂಗೀತದ ಕಡೆಗೆ ಆಕರ್ಷಿತರಾದರು.

ದಕ್ಷಿಣ ಭಾರತದಲ್ಲೂ ಕರ್ನಾಟಕ ಸಂಗೀತದ ಪ್ರಚಾರ ಕ್ಷಿಪ್ರ ಗತಿಯಲ್ಲಿ ನಡೆಯುತ್ತಿತ್ತು. ಈ ಕಾಲದಲ್ಲಿ ತಮಿಳುನಾಡು, ಆಂಧ್ರ ಹಾಗೂ ಕರ್ನಾಟಕದ ಭಾಗಗಳಲ್ಲಿ ಅನೇಕ ಹೆಸರಾಂತ ಸಂಗೀತ ವಿದ್ವಾಂಸರು ಆಗಿ ಹೋದರು. ಇವರಲ್ಲಿ ಪಲ್ಲವಿ ಗೋಪಾಲಯ್ಯರ್, ತುಳಜಾಜಿ ಮಹಾರಾಜ್, ರಾಮಸ್ವಾಮಿ ದೀಕ್ಷಿತರು, ಶ್ಯಾಮಶಾಸ್ತ್ರಿಗಳು, ತ್ಯಾಗರಾಜರು, ಮತ್ತುಸ್ವಾಮಿ ದೀಕ್ಷಿತರು, ಮಹಾರಾಜಾಸ್ವಾತಿ ತಿರುನಾಳ್ ಮುಂತಾದವರ ಹೆಸರುಗಳು ವಿಶೇಷ ಉಲ್ಲೇಖನೀಯವಾಗಿದೆ. ದಕ್ಷಿಣ ಭಾರತದ ಕರ್ನಾಟಕ ಸಂಗೀತದ 'ಸುವರ್ಣ ಯುಗ' ಇದೇ ಎಂದು ಹೇಳಲಾಗುತ್ತದೆ.

ಇದೇ ಸಮಯದಲ್ಲಿ ಶ್ರೀನಿವಾಸ ಪಂಡಿತ ಎಂಬ ವಿದ್ವಾಂಸರು 'ರಾಗ ತತ್ವ ವಿಬೋಧ' ಎಂಬ ಸಂಗೀತ ಗ್ರಂಥವನ್ನು ರಚಿಸಿದರು. ಈ ಗ್ರಂಥದಲ್ಲಿ ಅಧಿಕಾಂಶವು ಅಹೋಬಲನ ಗ್ರಂಥ 'ಸಂಗೀತ ಪಾರಿಜಾತ'ದ ಕೆಲ ಕ್ಲಿಷ್ಟ ತತ್ವಗಳನ್ನು ವಿಮರ್ಶಿಸಿದ್ದಾನೆ.

ಕರ್ನಾಟಕ ಸಂಗೀತ ಚರಿತ್ರೆಯಲ್ಲಿ ೧೮ ನೇ ಶತಮಾನದ ಉತ್ತರಾರ್ಧದಿಂದ ೧೯ ನೇ ಶತಮಾನದ ಉತ್ತರಾರ್ಧ ಕಾಲವು ಅತ್ಯಂತ ಮಹತ್ವಪೂರ್ಣ ಎಂದು ಹೇಳಲಾಗಿದೆ. ದಕ್ಷಿಣ ಭಾರತದಲ್ಲಿ ಕರ್ನಾಟಕ ಸಂಗೀತದ ಪ್ರಚಾರ ಹಾಗೂ ಅದರ ಬೆಳವಣಿಗೆ ಭರದಿಂದ ನಡೆದಿತ್ತು. ಧರ್ಮ ಹಾಗೂ ಆಧ್ಯಾತ್ಮದ ಹಿನ್ನೆಲೆಯಲ್ಲಿ ಜನರ



ರಾಗ ಸಾರಂಗ

## ಹಾರ್ದಿಕ ಶುಭಾಶಯುಗಳೊಂದಿಗೆ :



ಸ್ಥಾಪನೆ: ೧೯೧೯

# ಆರ್ಯ ವೈಶ್ಯ ಸಹಕಾರಿ ಬ್ಯಾಂಕ ನಿ.

ರಜಿಸ್ಟರ್ಡ ಕಚೇರಿ,
ಹೊಸೂರು,
ಹುಬ್ಬಳ್ಳಿ-೫೮೦ ೦೨೧
ದೂರವಾಣಿ : ೭೨೪೦೦



ಪ್ರಧಾನ ಕಚೇರಿ,
ಹಿರೇಪೇಟ,
ಹುಬ್ಬಳ್ಳಿ-೫೮೦ ೦೨೮
ದೂರವಾಣಿ : ೬೩೦೮೨

## : ಶಾಖೆಗಳು :

ಗದಗ, ಮುಂಡರಗಿ, ನರಗುಂದ, ಧಾರವಾಡ, ಹೊಸೂರು (ಹುಬ್ಬಳ್ಳಿ-೨೧), ಬಾಗಲಕೋಟ.

: ೩೦-೬-೧೯೮೬ ಕ್ಕೆ ಇದ್ದ ಬ್ಯಾಂಕಿನ ಆರ್ಥಿಕ ಸ್ಥಿತಿಯ ಪಕ್ಷಿನೋಟ (ರೂ. ಲಕ್ಷಗಳಲ್ಲಿ) :

| | | | |
|---|---|---|---|
| ಶೇರು ಬಂಡವಳು | ೬.೪೬ | ಕೈಯಲ್ಲಿಯ ಹಾಗೂ ಇತರ ಬ್ಯಾಂಕುಗಳಲ್ಲಿದ್ದ ಶಿಲ್ಕು | ೪೭.೭೨ |
| ಕಾಯ್ದಿಟ್ಟ ವ ಇತರ ನಿಧಿಗಳು | ೩೮.೧೭ | ಸಾಲ ವ ಮುಂಗಡಗಳು | ೨೪೨.೫೩ |
| ಠೇವುಗಳು | ೩೩೯.೬೧ | ಗುಂತಾಯಿಸಿದ ರಕಮು | ೧೦೧.೩೨ |

ನಿವ್ವಳ ಲಾಭ ೮.೨೩ (ರೂ. ಲಕ್ಷಗಳಲ್ಲಿ)
ದುಡಿಯುವ ಬಂಡವಾಳ ರೂಪಾಯಿ ನಾಲ್ಕು ಕೋಟಿಗೂ ಮಿಕ್ಕಿದೆ.

## : ನಿರ್ದೇಶಕ ಮಂಡಳಿಯ ಸದಸ್ಯರು :

ಅಶೋಕ ಯಲ್ಲಪ್ಪ ಹಂದ್ರಾಳ ಬಿ.ಕಾಮ್.
ವ್ಹಾ. ಚೇರಮನ್

ಮನೋಹರ ಕೃಷ್ಣಪ್ಪ ಕುಷ್ಟಗಿ ಬಿ.ಎ.
ಚೇರಮನ್

### : ನಿರ್ದೇಶಕರು :

೧) ವಿಶ್ವನಾಥ ರಾಮಚಂದ್ರಪ್ಪ ರೋಣದ, ಹುಬ್ಬಳ್ಳಿ
೨) ಮೋಹನ ಜೀವಪ್ಪ ಸವಣೂರ ಬಿ.ಕಾಮ್
೩) ಶಿವಾನಂದ ವೀರಪ್ಪ ಕಂಪ್ಲಿ, ಹುಬ್ಬಳ್ಳಿ ಬಿ.ಕಾಮ್.
೪) ರಾಘವೇಂದ್ರ ನರಸಪ್ಪ ಧಾರವಾಡ, ನವಲಗುಂದ
೫) ವೆಂಕಟೇಶ ಗೋವಿಂದಪ್ಪ ಹರಿಹರ, ನವಲಗುಂದ
೬) ಚಿದಾನಂದ ಶಿವಪ್ಪ ಘಂಟೆಣ್ಣನವರ ಎಂ.ಎ. ಧಾರವಾಡ
೭) ವಾಸಪ್ಪ ಓಂಕಾರಪ್ಪ ಕೋಳೂರ, ಗದಗ
೮) ಪಾಂಡಪ್ಪ ಯಮುನಪ್ಪ ಜವಳಗೇರಿ, ಕಲಕೇರಿ.

- ನರಗುಂದ ಹಾಗೂ ಹೊಸೂರು (ಹುಬ್ಬಳ್ಳಿ-೨೧) ಶಾಖೆಗಳಲ್ಲಿ ಸೇಫ್ ಡಿಪಾಜಿಟ್ ಲಾಕರಗಳ ಸೌಲಭ್ಯ ಪಡೆಯಿರಿ.
- ನಮ್ಮ ಬ್ಯಾಂಕು "ವಿಮಾ ಮಾಡಲ್ಪಟ್ಟ ಬ್ಯಾಂಕು" ಅಂತಾ ಠೇವು ವಿಮಾ ಕಾರ್ಪೋರೇಶನ್ (ಭಾರತ ಸರಕಾರ) ದಿಂದ ನೋಂದಾಯಿಸಲ್ಪಟ್ಟಿದೆ.
- ಠೇವುಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಶೇಕಡಾ ೧ ರೂ. ಹೆಚ್ಚಿಗೆ ಬಡ್ಡಿ ಕೊಡಲಾಗುವದು.
- ಎಲ್ಲ ನಮೂನೆಯ ಬ್ಯಾಂಕಿನ ವ್ಯವಹಾರಗಳಿಗಾಗಿ ನಮ್ಮ ಪ್ರಧಾನಕಚೇರಿ ಹಾಗೂ ನಿಮ್ಮ ಸಮೀಪದ ಶಾಖೆಗಳಿಗೆ ಸಂಪರ್ಕಿಸಿರಿ.

ನಾಗರಾಜ ರಾ. ಶಿದೇನೂರ
ಇನ್‌ಚಾರ್ಜ ಜನರಲ್ ಮ್ಯಾನೇಜರ



ರಾಗ ರಾಮಕಲಿ

ಹೃದಯದಲ್ಲಿ ಸಂಗೀತದ ಪ್ರಭಾವ ಅತೀ ಆಳವಾಗಿ ಬೇರೂರಿತ್ತು. ಸಂಗೀತ, ನೃತ್ಯ, ನಾಟಕ ಮುಂತಾದವುಗಳ ಪ್ರಸಾರ ದೇವಾಲಯಗಳಲ್ಲಿ, ಹೊಲಗದ್ದೆಗಳಲ್ಲಿ ಹಾಗೂ ಚಿಕ್ಕ ಗುಡಿಸಲುಗಳಲ್ಲಿಯೂ ಸಹ ನಡೆಯುತ್ತಿತ್ತು. ಕೆಲವು ಸಂಸ್ಥಾನಿಕರು ಹಾಗೂ ಧನಿಕರು ಶ್ರೇಷ್ಠ ಸಂಗೀತಜ್ಞರಿಗೆ ಉಚ್ಚ ಸ್ಥಾನ ಕೊಟ್ಟು ಕರ್ನಾಟಕ ಸಂಗೀತದ ಶ್ರೇಷ್ಠ ಪರಂಪರೆಯನ್ನು ಕಾಯ್ದುಕೊಳ್ಳುವಲ್ಲಿ ಸಹಾಯ ಮಾಡಿದರು. ಮನೆ ಮನೆಗಳಲ್ಲಿ ಚಿಕ್ಕ ಮಕ್ಕಳು ಹಾಗೂ ಸ್ತ್ರೀಯರಿಗೆ ಶ್ರೇಷ್ಠ ಕಲಾವಿದರ ಕೃತಿಗಳ ಮೂಲಕ ಶಿಕ್ಷಣವನ್ನು ನೀಡಲಾಗುತ್ತಿತ್ತು. ನೃತ್ಯದ ಪರಂಪರೆಯೂ ಸಹ ಸಂಗೀತದ ಜೊತೆಗೆ ಮುಂದುವರೆದಿತ್ತು. ಅನೇಕ ವಿಧದ ಸುಂದರವಾದ ಲೋಕ ನೃತ್ಯಗಳು ಆ ಕಾಲದಲ್ಲಿ ಪ್ರಚಾರದಲ್ಲಿದ್ದವು. ಶಾಸ್ತ್ರೀಯ ಸಂಗೀತದ ಹಾಗೇ ನೃತ್ಯಾರಾಧನೆ ಸಹ ಧಾರ್ಮಿಕತೆಯಿಂದ ಕೂಡಿತ್ತು.

ಭರತ ನಾಟ್ಯದ ಪರಂಪರೆಯಿಂದ ನೃತ್ಯ ನಾಟ್ಯದ ಜನ್ಮವೂ ಸಹ ಆಯಿತು. ತಂಜಾವೂರು, ಕುಚಪುಡಿ, ಮುಂತಾದ ಸ್ಥಳಗಳಲ್ಲಿ ಅರ್ಚಕರು ದೇವಾಲಯಗಳಲ್ಲಿ ನಾಟ್ಯವಾಡುತ್ತಿದ್ದರು. ಇಂಥ ಅರ್ಚಕರಿಗೆ ಭಾಗವತರು ಎಂದು ಹೇಳಲಾಗುತ್ತಿತ್ತು.

ಈ ಮಹತ್ವ ಪೂರ್ಣಕಾಲದಲ್ಲಿ ಕರ್ನಾಟಕ ಸಂಗೀತದ ಸುಪ್ರಸಿದ್ಧ ತ್ರಿರತ್ನಗಳಾದ ಶ್ಯಾಮಾ ಶಾಸ್ತ್ರಿ, ಆಚಾರ್ಯ ತ್ಯಾಗರಾಜರು, ಹಾಗೂ ಮುತ್ತುಸ್ವಾಮಿ ದೀಕ್ಷಿತರು ಆಗಿಹೋದರು.

ಇವರಿಂದ ಕರ್ನಾಟಕ ಸಂಗೀತದ ಪದ್ಧತಿಯ ಬೆಳವಣಿಗೆ ಅತ್ಯಂತ ಮಹತ್ವಪೂರ್ಣ ಕೊಡುಗೆ ನೀಡಲ್ಪಟ್ಟಿದೆ. ಈ ತ್ರಿರತ್ನಗಳು ಕರ್ನಾಟಕ ಸಂಗೀತದಲ್ಲಿ ಒಂದು ಹೊಸಯುಗ ಪ್ರಾರಂಭಿಸಿದರು.

ಭಕ್ತಿ, ಜ್ಞಾನ, ವೈರಾಗ್ಯ ಮುಂತಾದ ತತ್ವಗಳನ್ನು ಒಳಗೊಂಡಿದ್ದ ಅನೇಕ ಹೊಸ ರಚನೆಗಳನ್ನು ಇವರು ಸೃಷ್ಟಿಸಿದರು. ಸಂಗೀತದ ಪಾವಿತ್ರ್ಯ ಅದರ ತೇಜಸ್ಸು, ಅದರ ಶಕ್ತಿ ಮುಂತಾದವುಗಳ ಪರಿಚಯವನ್ನು ಜನರಿಗೆ ಮಾಡಿಕೊಟ್ಟರು. ಇಂದಿಗೂ ಸಮಸ್ತ ಭಾರತದೇಶವು ಈ ಮಹಾನ್ ಸಂಗೀತಜ್ಞರಿಗೆ ಚಿರಋಣಿಯಾಗಿದೆ. ಇದರಿಂದಾಗಿ ಭಾರತೀಯ ಸಂಗೀತದ ಗೌರವ ಹಾಗೂ ಘನತೆ ಉಚ್ಚ ಮಟ್ಟಕ್ಕೆ ಏರಿತು ಎಂದು ಹೇಳಬಹುದು.

ರಾಜಕೀಯ ಹಾಗೂ ಐತಿಹಾಸಿಕ ಪರಿವರ್ತನೆಯ ಜೊತೆಗೆ ಭಾರತೀಯ ಸಂಗೀತದಲ್ಲಿಯೂ ಸಾಕಷ್ಟು ಪರಿವರ್ತನೆಗಳಾದದ್ದು ಆಕಾಲದಲ್ಲಿ ಕಂಡು ಬರುತ್ತದೆ. ಉತ್ತರ ಭಾರತದಲ್ಲಿ ಸಂಗೀತಕ್ಕೆ ಪ್ರಾಪ್ತವಾದ ರಾಜಾಶ್ರಯವು ಬ್ರಿಟಿಷರ ಕಾಲದಲ್ಲಿ ದೂರವಾಯಿತು. ಏಕೆಂದರೆ ಭಾರತದಲ್ಲಿಯ ಸಂಸ್ಥಾನಗಳ ಮೇಲೆ ಬ್ರಿಟಿಶರ ಸಂಸ್ಕೃತಿಯ ಪ್ರಭಾವ ಬೀಳಲು ಪ್ರಾರಂಭವಾಯಿತು. ದಕ್ಷಿಣ ಭಾರತದಲ್ಲಿ ಕರ್ನಾಟಕ ಸಂಗೀತಕ್ಕೆ ಸಂಸ್ಥಾನಿಕರು ಹಾಗೂ ಹಲವಾರು ಧನಿಕರು ಆಶ್ರಯ ನೀಡಿದರು. ಹಿಂದೂಸ್ಥಾನಿ ಸಂಗೀತದ ಸ್ಥಿತಿಯು ಮಾತ್ರ ಅತ್ಯಂತ ಶೋಚನೀಯವಾಗಿತ್ತು. ಮೊಗಲರ ಅಂತಿಮ ಕಾಲದಲ್ಲಿಯೇ ಸಂಗೀತಕ್ಕೆ ಧರ್ಮದ ಜೊತೆಯಲ್ಲಿದ್ದ ಸಂಬಂಧವು ದೂರವಾಗಿತ್ತು. ಕೇವಲ ಶೃಂಗಾರಮಯ ರಚನೆಗಳು ಖ್ಯಾಲ, ಠುಮರಿ ಮುಂತಾದ ಶೈಲಿಗಳಲ್ಲಿ ಬಂದವು. ಐಷಾರಾಮಿ ಹಾಗೂ ವಿಲಾಸಿರಾಜರ ಸಂಪರ್ಕದಲ್ಲಿ ಬಂದು ಸಂಗೀತ ಕಲಾಕಾರರ ನೈತಿಕ ಚಾರಿತ್ರ್ಯವೂ ಸಹ ಇಳಿಮುಖವಾಯಿತು. ಇದರಿಂದಾಗಿ ಆ ಕಾಲದಲ್ಲಿ ಹಿಂದುಸ್ತಾನಿ ಸಂಗೀತವು ಗೌರವಾನ್ವಿತ ಮನೆಗಳಲ್ಲಿ ನಿಷಿದ್ಧವೆಂದು ಭಾವಿಸಲಾಗುತ್ತಿತ್ತು.

ಪಾಶ್ಚಾತ್ಯ ಸಂಗೀತ ಶಿಕ್ಷಣ ಪಡೆದ ಯುವಕ ಯುವತಿಯರು ಭಾರತೀಯ ಸಂಗೀತವನ್ನು ದೂರ ಮಾಡಿ ಪಾಶ್ಚಾತ್ಯ ಸಂಗೀತವನ್ನು ಅನುಸರಿಸಲು ಪ್ರಾರಂಭಿಸಿದರು.

ಈ ಪ್ರಕಾರ ಹಿಂದುಸ್ತಾನಿ ಸಂಗೀತವು ತನ್ನ ಪತನದ ಹಾದಿಯನ್ನ ಹಿಡಿಯಿತು. ಆದರೆ ಒಂದು ವಿಶೇಷತೆ ಏನೆಂದರೆ, ಭಾರತೀಯರು ಪಾಶ್ಚಾತ್ಯ ಸಂಗೀತದಲ್ಲಿ ಅಭಿರುಚಿಯನ್ನು ತೋರಿಸುತ್ತಿರುವಾಗ ಪಾಶ್ಚಾತ್ಯರು ನಮ್ಮ ಭಾರತೀಯ ಸಂಗೀತದಲ್ಲಿ ಅಭಿರುಚಿ ತೋರಿಸಲು ಪ್ರಾರಂಭಿಸಿದರು. ಭಾರತೀಯ ಸಂಗೀತದಿಂದ ಪ್ರಭಾವಿತರಾದ ಪಾಶ್ಚಾತ್ಯರು 'ಸರ್ ವಿಲಿಯಂ ಜಾನ್ಸ್, ಕ್ಯಾಪ್ಟನ್ ಡೇ, ಕ್ಯಾಪ್ಟನ್ ವಿಲಾರ್ಡ್ ಮುಂತಾದವರು ಭಾರತೀಯ ಸಂಗೀತದ ಅಧ್ಯಯನಮಾಡಿ ಕೆಲವು ಗ್ರಂಥಗಳನ್ನು ಬರೆದಿರುವರು. ಪರಿಣಾಮವಾಗಿ ಸುಶಿಕ್ಷಿತ ಜನರಲ್ಲಿ ಇವರ ಪ್ರಭಾವ ಬಿದ್ದು ಸಂಗೀತದ ಬಗ್ಗೆ ಅನಾದರ ಭಾವ ಕಡಿಮೆಯಾಗಲು ಪ್ರಾರಂಭವಾಯಿತು. ಇದರ ಹೊರತಾಗಿ ನಮ್ಮ ಭಾರತೀಯರೇ ಆದ ಪಂ. ಭಾತಖಂಡೆ, ಹಾಗೂ ಪಂ. ಪಲುಸ್ಕರ ಮುಂತಾದ ವಿದ್ವಾಂಸರು ಸಂಗೀ

ತದ ಪುನರುತ್ಥಾನ ಕಾಲದಲ್ಲಿ ಅತ್ಯಂತ ಆದರ ಣೀಯ ಕಾರ್ಯವನ್ನು ಮಾಡಿದ್ದಾರೆ. ಸಂಗೀತದ ಪ್ರಸಾರ ಕಾರ್ಯದಲ್ಲಿ ಶಾಸ್ತ್ರ, ಚರ್ಚಾಗೋಷ್ಠಿಗ ಳನ್ನು ಏರ್ಪಡಿಸುವದು, ಸ್ವರಲಿಪಿ ಪದ್ಧತಿಯನ್ನು ತಯಾರಿಸುವದು, ಪದ ಸಂಗ್ರಹ, ಜನರಲ್ಲಿ ಸಂಗೀತದ ಪ್ರಚಾರ, ಸಂಗೀತ ಶಿಕ್ಷಣಕ್ಕೆ ನಿಶ್ಚಿತ ರೂಪವನ್ನು ಕೊಡುವದು ಮುಂತಾದ ಕಾರ್ಯಗಳು ಪ್ರಾರಂಭವಾದವು. ಇದರಿಂದ ಜನರು ಪುನಃ ಹಿಂದೂಸ್ತಾನಿ ಸಂಗೀತದ ಕಡೆಗೆ ಆಕರ್ಷಿತರಾಗತೊಡಗಿದರು, ಪಂ. ಭಾತಖಂಡೆಯವರು ಹಿಂದುಸ್ತಾನಿ ಸಂಗೀತ ಪದ್ಧತಿ, ಹಿಂದುಸ್ತಾನಿ ಕ್ರಮಿಕ ಪುಸ್ತಕ ಮಾಲಿಕಾ, ಅಭಿನವರಾಗ ಮಂಜರಿ. 'ಶಾರ್ಟ್ ಹಿಸ್ಟಾರಿಕಲ್ ಸರ್ವೆ ಆಫ್ ಇಂಡಿಯನ್‌ಮ್ಯುಜಿಕ್' ಮುಂತಾದ ಗ್ರಂಥಗಳನ್ನು ರಚಿಸಿದರು. ಹಿಂದುಸ್ತಾನಿ ಸಂಗೀತ ಶಾಸ್ತ್ರದಲ್ಲಿ ಥಾಟ ಪದ್ಧತಿಯ ಪ್ರಸಾರವು ಕೂಡ ಇವರಿಂದಲೇ ಆಯಿತು. ಇವರು ಕರ್ನಾಟಕ ಹಾಗೂ ಹಿಂದುಸ್ತಾನಿ ಪದ್ಧತಿಗಳ ತುಲನಾತ್ಮಕ ಅಧ್ಯಯನದ ಪರಿಚಯ ಮಾಡಿಕೊಟ್ಟರು.

ಶ್ರೇಷ್ಠ ಗಾಯಕ ಬಾಲಕೃಷ್ಣ ಬುವಾ ಈಚಲಕರಂಜಿಕರರಶಿಷ ರಾದ ಪಂ. ವಿಷ್ಣು ದಿಗಂಬರ ಪಲುಸ್ಕರರೂ ಕೂಡ ಹಿಂದುಸ್ತಾನಿ ಸಂಗೀತದ ಪ್ರಸಾರದ ಕಾರ್ಯದಲ್ಲಿ ಅತೀ ಮಹತ್ವಪೂರ್ಣ ಕಾರ್ಯವನ್ನು ನಿರ್ವಹಿಸಿದ್ದಾರೆ.

ಸಂಗೀತದಲ್ಲಿದ್ದ ಶೃಂಗಾರ ಪೂರ್ಣ ರಚನೆಗಳ ಬದಲಾಗಿ ಅವರು ಭಕ್ತಿರಸ ಪೂರ್ಣ ಪದಗಳನ್ನು ಹಾಡಲು ಪ್ರಾರಂಭಿಸಿದರು. ಪರಿಣಾಮವಾಗಿ ಸಮಾಜದಲ್ಲಿ ಭಕ್ತಿಮಯ ವಾತಾವರಣ ಉಂಟಾಗಿ ಸಂಗೀತಕ್ಕೆ ಮತ್ತೊಮ್ಮೆ ಆದರದ ಸ್ಥಾನ ದೊರೆಯಲು ಪ್ರಾರಂಭಿಸಿತು. ಸಂಗೀತದ ಪ್ರಸಾರಕ್ಕಾಗಿ ಅವರು ಅನೇಕ ಸಂಗೀತ ವಿದ್ಯಾಲಯಗಳನ್ನು ಸ್ಥಾಪನೆ ಮಾಡಿದರು. ಇವುಗಳಲ್ಲಿ ಲಾಹೋರ ಮತ್ತು ಮುಂಬೈಯ 'ಗಾಂಧರ್ವ ಮಹಾವಿದ್ಯಾಲಯ' ಗಳು ಪ್ರಮುಖವಾಗಿವೆ.

ಪಂ. ಪಲುಸ್ಕರರ ಪದಗಳಲ್ಲಿ ಕೇವಲ ಭಕ್ತಿರಸ ಅಷ್ಟೇ ಅಲ್ಲದೇ ರಾಷ್ಟ್ರೀಯ ಭಾವನೆಯೂ ಸಹ ಗೋಚರವಾಗುತ್ತದೆ. ಬ್ರಿಟಿಷರ ಕಾಲದಲ್ಲಿ ಹಲವು ಶ್ರೇಷ್ಠ ಗಾಯಕರಾಗಿ ಹೋದರಲ್ಲದೇ ಶ್ರೇಷ ವಾದ್ಯ ವಾದನಕಾರರೂ ಆಗಿ ಹೋದರು. ಇವರಲ್ಲಿ ಬೀನವಾದಕರಾದ ಉಸ್ತಾದ ಬಂದೇ ಅಲಿಖಾನ ಹಾಗೂ ರಾಮಪುರ ಸಂಸ್ಥಾನದ ವಜೀರಖಾನ ಸಾಹೇಬರು ಹಾಗೂ ತಬಲಾ ವಾದಕರಾದ ಲಕ್ಷ್ಮಣ ರಾವ ಪರ್ವತೀಕರ ಮುಂತಾದವರು ವಿಶೇಷ ಉಲ್ಲೇಖನೀಯರಾಗಿದ್ದಾರೆ. ಇವರ ತರುವಾಯ ಅಬ್ದುಲ್ ಕರೀಮಖಾನ, ಉಸ್ತಾದ ಅಲ್ಲಾದಿಯಾ ಖಾನ, ಉಸ್ತಾದ ಇನಾಯತ ಖಾನ, ಶಂಕರ ಪಂಡಿತ, ಉಸ್ತಾದ ಮುರಾದ ಖಾನ, ಉಸ್ತಾದ ಅಲ್ಲಾಉದ್ದೀನ ಖಾನ ಮುಂತಾದ ಗಾಯಕ ವಾದಕರು ಆಗಿಹೋದರು.

ಇದೇ ಕಾಲದಲ್ಲಿ ಬಂಗಾಲದ ಕವಿಶ್ರೇಷ್ಠರಾದ



—ಪಿ. ಎನ್. ಭಾತಖಂಡೆ



ವಿಷ್ಣು ದಿಗಂಬರ ಪಲುಸ್ಕರ

ರವೀಂದ್ರನಾಥ ಠಾಕೂರರು ಒಂದು ಹೊಸ ಸಂಗೀತ ಪದ್ಧತಿಯನ್ನು ಸ್ಥಾಪಿಸಿದರು. ಈ ಪದ್ಧತಿಗೆ ಇಂದು "ರವೀಂದ್ರ ಸಂಗೀತ" ಎಂದು ಕರೆಯಲಾಗುತ್ತದೆ.

ಹಿಂದೂಸ್ತಾನಿ ಸಂಗೀತದಲ್ಲಿ ರಜಪೂತ ಕಾಲದಲ್ಲಿ ನಿರ್ಮಾಣವಾಗಿದ್ದ ವಿವಿಧ ಘರಾಣೆಗಳು ಅಂದರೆ ಮನೆತನಗಳು ಪೂರ್ಣವಾಗಿ ವಿಕಾಸ ಹೊಂದಿದವು. ಸಂಗೀತದಲ್ಲಿ ವೈಶಿಷ್ಟ್ಯ, ಸಾಮಾಜಿಕ ಘಟನೆಗಳು, ಅಭ್ಯಾಸ ಮಾಡುವ ಪದ್ಧತಿ, ಸ್ವರ ರಚನಾ ಭೇದ, ಸ್ವರಸಂಗ್ರಹ ಭೇಧ, ತಾಲ ಮತ್ತು ಲಯದ ವೈಶಿಷ್ಟ್ಯ ಇವುಗಳಿಂದಾಗಿ ಬೇರೆ ಘರಾಣೆಗಳು ಪ್ರಚಾರದಲ್ಲಿ ಬಂದವು.

ಹಿಂದುಸ್ತಾನಿ ಸಂಗೀತದಲ್ಲಿ ಘರಾಣಾ ಎಂಬ ಶಬ್ದಕ್ಕೆ ಬಂದು ವಿಶೇಷ ಮಹತ್ವವಿದೆ. ಘರಾಣೆ ಎಂದರೆ ಪರಂಪರೆ, ಪಂಥ, ಪಂಗಡ ಎಂದರ್ಥ.

ಮೂಲಧ್ಯೇಯ ಒಂದೇ ಇದ್ದರೂ ಪ್ರತಿಯೊಂದು ಕಲಾ ಪರಂಪರೆಯಲ್ಲಿ ಬೇರೆ ಬೇರೆ ವೈಶಿಷ್ಟ್ಯಗಳು ಕಂಡುಬರುತ್ತವೆ. ಅಂದರೆ ಬೇರೆ ಬೇರೆ ಮನೆತನಗಳಲ್ಲಿ ಕುಲಾಚಾರ, ಕುಲದೇವರು ಮುಂತಾದವುಗಳಲ್ಲಿ ಯಾವ ರೀತಿ ಭಿನ್ನತೆ ಕಂಡುಬರುತ್ತದೆಯೋ ಅದೇ ರೀತಿ ಸಂಗೀತ ಸಾಧಕರಲ್ಲಿಯೂ ಕೂಡಾ ಭಿನ್ನತೆ ಕಂಡು ಬರುತ್ತದೆ. ನಮ್ಮ ಪ್ರಾಚೀನ ಸಂಗೀತಗಾರರು ಬುದ್ಧಿ ಮತ್ತು ಭಾವನೆಗಳಲ್ಲಿ ಯಾವದಾದರೊಂದರ ಪ್ರಭಾವಕ್ಕೆ ಗುರಿಯಾಗಿ ಆ ಮಾರ್ಗದಲ್ಲಿಯೇ ಸಂಗೀತ ಸಾಧನೆಗೈದರು, ಕೆಲವರು ಸ್ವರ ಪ್ರಾಧಾನ್ಯವಾಗಿರುವ ಮಾರ್ಗದತ್ತ ನಡೆದರೆ, ಇನ್ನೂ ಕೆಲವರು ಲಯ ತಾಲದ ಬೌದ್ಧಿಕ ಅಭಿವ್ಯಕ್ತಿಗೆ ಲಕ್ಷ್ಯಕೊಟ್ಟರು. ಇನ್ನೂ ಕೆಲವರು ಸ್ವರ ಮತ್ತು ಲಯ ಈ ಎರಡೂ ಅಂಗಗಳ ಮಧುರ ಸಂಗಮದಲ್ಲಿ ಆನಂದ ಪಡೆದರು. ಈ ಪ್ರಕಾರ ಕೇವಲ ಸ್ವರದ ಆನಂದ ಪಡೆಯುವ, ಕೇವಲ ಲಯದ ಆನಂದ ಪಡೆಯುವ ಹಾಗೂ ಸ್ವರ ಮತ್ತು ಲಯ ಇವುಗಳ ಸಮನ್ವಯ ಸಾಧಿಸಿ ಆನಂದ ಪಡೆಯುವ ಬೇರೆ ಬೇರೆ ಪಂಥಗಳು ಅಂದರೆ ಘರಾಣೆಗಳು ನಿರ್ಮಾಣವಾದವು.

'ಖ್ಯಾಲ' ಎಂಬ ಹಾಡುಗಾರಿಕೆ ಶೈಲಿ ಪ್ರಚಾರದಲ್ಲಿ ಬರುವ ಮೊದಲು 'ಧ್ರುಪದ' ಎಂಬ ಗಾಯನದ ಪ್ರಕಾರವು ಪ್ರಚಾರದಲ್ಲಿತ್ತು. ಈ ಗಾಯನ ಪ್ರಕಾರದಲ್ಲಿ ಕೂಡ ಬೇರೆ ಬೇರೆ ವಾಣಿಗಳು ಅಂದರೆ ಶೈಲಿಗಳಿದ್ದವು. ಉದಾ:- ಗೋಬರ ಹಾರಿವಾಣಿ, ಸೌಹಾರವಾಣಿ, ಡಾಗುರವಾಣಿ, ಹಾಗೂ ಖಂಡಹಾರವಾಣಿ ಎಂಬ ಹೆಸರುಗಳಿಂದ ಅವು ಪ್ರಚಾರದಲ್ಲಿದ್ದವು. ಖ್ಯಾಲ ಗಾಯನದಲ್ಲಿ ಈ ಧ್ರುಪದ ವಾಣಿಗಳ ಆಧಾರದ ಮೇಲೆಯೇ ಬೇರೆ ಬೇರೆ ಘರಾಣೆಗಳ ಉತ್ಪತ್ತಿಯಾಯಿತೆಂದು ಹೇಳಲಾಗುತ್ತದೆ.

**ಘರಾಣೆಗಳ ಕೆಲವು ಲಕ್ಷಣಗಳು ಹೀಗಿವೆ**

೧. ಪ್ರತಿಯೊಂದು ಘರಾಣೆಗೆ ಸ್ವತಂತ್ರವಾದ ಒಂದು ಶೈಲಿ ಇರಬೇಕು. ಮತ್ತು ನಿರ್ಧಿಷ್ಟವಾದ ರೂಪ ರೇಷೆ ಇರಬೇಕು. ೨. ಘರಾಣೆಯ ವೈಶಿಷ್ಟ್ಯಗಳನ್ನು ಪ್ರಸ್ತುತ ಪಡಿಸುವ ಅನುಯಾಯಿ ಕಲಾವಿದ ಇರಬೇಕು. ೩. ನಿರ್ಧಿಷ್ಟವಾದ ಅಭ್ಯಾಸ ಕ್ರಮ, ರಾಗ ಪ್ರಸ್ತುತ ಪಡಿಸುವ ವೈಶಿಷ್ಟ್ಯ ಘರಾಣೆಯಲ್ಲಿ ಇರಬೇಕು.

ಹಿಂದುಸ್ತಾನಿ ಸಂಗೀತದಲ್ಲಿ ವಿವಿಧ ಘರಾಣೆಗಳು ಪ್ರಚಾರದಲ್ಲಿವೆ: ಗ್ವಾಲಿಯರ ಘರಾಣೆ, ಆಗ್ರಾ ಘರಾಣೆ, ಕಿರಾಣಾ ಘರಾಣೆ, ಜೈಪುರ ಘರಾಣೆ, ರಾಮಪುರ ಘರಾಣೆ, ಸಹಸ್ವಾನ ಘರಾಣೆ, ಭೆಂಡಿ ಬಜಾರ ಘರಾಣೆ ಹಾಗೂ ಮೇವಾಡ ಘರಾಣೆ ಮುಂತಾದ ಘರಾಣೆಗಳು ವಿಶೇಷ ಲೋಕಪ್ರಿಯವಾಗಿವೆ.

ಆಧುನಿಕ ಕಾಲದಲ್ಲಿ ಈ ಘರಾಣೆಗಳಲ್ಲಿ ಸು-ಮಧುರ ಸಾಮರಸ್ಯವಾದದ್ದು ನಾವು ಕಾಣುತ್ತೇವೆ. ಯಾವುದೇ ಒಂದು ಘರಾಣೆಗೆ ಅಂಟಿಕೊಳ್ಳದೆ ಆಧುನಿಕ ಕಲಾವಿದರು ಯಾವ ಘರಾಣೆಯಲ್ಲಿ

ಸುಂದರ ತತ್ವಗಳಿರುತ್ತವೆಯೋ ತಮ್ಮ ಗಾಯನ ಅಥವಾ ವಾದನದಲ್ಲಿ ಪೋಣಿಸಿ ಪ್ರಸ್ತುತ ಪಡಿಸುತ್ತಾರೆ.

ಗಾಯನದಂತೆ ಸಿತಾರ ಹಾಗೂ ತಬಲಾ ವಾದನದಲ್ಲಿಯೂ ಕೂಡಾ ನಮಗೆ ವಿವಿಧ ಘರಾಣೆಗಳು ಕಂಡುಬರುತ್ತವೆ. ಸಿತಾರದಲ್ಲಿ ದಿಲ್ಲಿ ಘರಾಣಾ, ಅಥವಾ ಸೇನಿ ಘರಾಣಾ, ರಾಮಪುರ ಘರಾಣಾ, ಬಂದೇಲಿ ಘರಾಣಾ ಮುಂತಾದನು, ತಬಲಾದಲ್ಲಿ ದಿಲ್ಲಿ ಘರಾಣಾ, ಅಜರಾಡಾ ಘರಾಣಾ, ಲಖನೌ ಘರಾಣಾ, ಬನಾರಸ ಘರಾಣಾ, ಘರೂಕಾಬಾದ ಘರಾಣಾ, ಪಂಜಾಬ ಘರಾಣಾ ಮುಂತಾದ ಘರಾಣೆಗಳು ಪ್ರಚಾರದಲ್ಲಿವೆ.

ಕರ್ನಾಟಕ ಸಂಗೀತದಲ್ಲಿಯೂ ಕೂಡಾ ಹಿಂದುಸ್ತಾನಿ ಸಂಗೀತದಂತೆ ವಿವಿಧ ಘರಾಣೆಗಳುಂಟು ಅವುಗಳಿಗೆ 'ಬಾನಿ' ಎಂದು ಕರೆಯುತ್ತಾರೆ.

ಬ್ರಿಟಿಷರ ಕಾಲದಲ್ಲಿ ಕರ್ನಾಟಕ ಸಂಗೀತದ ಅನೇಕ ಸಂಗೀತ ವಿದ್ವಾಂಸರು ಸಂಗೀತದ ವಿಕಾಸ ಕ್ರಮದಲ್ಲಿ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ, ಇವರಲ್ಲಿ ಶ್ರೀ ಮಹಾವೈದ್ಯನಾಥಯ್ಯರ್, ಪಟ್ಟಣದ ಸುಬ್ರಮಣ್ಯಂ ಅಯ್ಯರ್, ಪಲ್ಲವಿ ಶೇಷಯ್ಯರ, ರಾಮನಾಥ ಶ್ರೀನಿವಾಸ ಅಯ್ಯಂಗಾರ್, ವೀಣೆ ವೆಂಕಟದಾಸರು, ಮೃದಂಗಂ ನಾರಾಯಣ ಸ್ವಾಮಿಯಪ್ಪಾ, ತಂಜಾವೂರು ಕೃಷ್ಣಭಾಗವತರು, ಮುಂತಾದವರು ವಿಶೇಷ ಉಲ್ಲೇಖನೀಯರಾಗಿದ್ದಾರೆ.

ಇದೇ ಕಾಲದಲ್ಲಿ ಕರ್ನಾಟಕದಲ್ಲಿ ಸಂಗೀತದ ವಿಕಾಸಕ್ಕಾಗಿ ಮೈಸೂರು ಮಹಾರಾಜರು ಸಲ್ಲಿಸಿದ ಸೇವೆ ಅತ್ಯಂತ ಸ್ಮರಣೀಯವಾಗಿವೆ. ಕೃಷ್ಣರಾಜ ಒಡೆಯರ ಅವರು ಅನೇಕ ಹಿಂದುಸ್ತಾನಿ ಹಾಗೂ ಕರ್ನಾಟಕ ಸಂಗೀತಗಾರರಿಗೆ ಆಶ್ರಯವಿತ್ತಿದ್ದರು. ಅವರ ಅರಮನೆಯಲ್ಲಿ ಮೇಲಿಂದ ಮೇಲೆ ಸಂಗೀತ ಕಾರ್ಯಕ್ರಮಗಳು ಏರ್ಪಡುತ್ತಿದ್ದವು. ಇವರ ಆಸ್ಥಾನದಲ್ಲಿ ವೀಣೆ ಶೇಷಣ್ಣ, ವಾಸುದೇವಾಚಾರ್ಯ, ಟೈಗರ ವರದಾಚಾರ್ಯ, ಬಿಡಾರಂ ಕೃಷ್ಣಪ್ಪನವರು, ಮುತ್ತಯ್ಯ ಭಾಗವತರು ಮತ್ತು ರಾಮಾನುಜ ಅಯ್ಯಂಗಾರ್ ಮೊದಲಾದ ಕರ್ನಾಟಕ ಸಂಗೀತ ವಿದ್ವಾಂಸರು ಹಾಗೂ ಉಸ್ತಾದ ನತ್ಥನ್ ಖಾನ್ ಮತ್ತು ಉಸ್ತಾದ ಬಂದೇ ಅಲಿಖಾನ, ಉಸ್ತಾದ ವಿಲಾಯತ್ ಹುಸೇನಖಾನ, ಉಸ್ತಾದ ಫೈಯ್ಯಾಜ ಖಾನ್ ಮೊದಲಾದ ಹಿಂದುಸ್ತಾನಿ ಸಂಗೀತ ವಿದ್ವಾಂಸರು ಆಸ್ಥಾನ ವಿದ್ವಾಂಸರೆಂದು ಇದ್ದರು. ಇದೇ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತದ ಪ್ರಸಾರವೂ ಪ್ರಾರಂಭವಾಯಿತು. ಶ್ರೀ ಜಯಚಾಮರಾಜ ಒಡೆಯರ ಅವರು ಭಾರತೀಯ ಸಂಗೀತದಲ್ಲಿ ಅಷ್ಟೇ ಅಲ್ಲದೆ ಪಾಶ್ಚಾತ್ಯ ಸಂಗೀತದಲ್ಲಿಯೂ ಪಾಂಡಿತ್ಯ ಪಡೆದಿದ್ದರು. ಒಟ್ಟಾರೆ ಕರ್ನಾಟಕದಲ್ಲಿ ಹಿಂದುಸ್ತಾನಿ ಹಾಗೂ ಕರ್ನಾಟಕ ಸಂಗೀತ ಪದ್ಧತಿಗಳನ್ನು ಪ್ರಚಾರದಲ್ಲಿ ತಂದ ಶ್ರೇಯಸ್ಸು ಮೈಸೂರ ಅರಸರಿಗೆ ಸಲ್ಲುತ್ತದೆ.

ನಮ್ಮ ಸ್ವಾತಂತ್ರ್ಯದ ನಂತರ ನಮ್ಮ ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ಕ್ರಾಂತಿಕಾರಿ ಪರಿವರ್ತನೆ ಆಯಿತು. ಅದರಂತೆ ಸಂಗೀತದ ಕ್ಷೇತ್ರದಲ್ಲಿಯೂ ಕೂಡ ಸಾಕಷ್ಟು ಪರಿವರ್ತನೆ ಪ್ರಾರಂಭವಾಯಿತು. ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಹಿಂದುಸ್ತಾನಿ ಸಂಗೀತ ಪರಂಪರೆಯಲ್ಲಿಯು ಶೃಂಗಾರ ಭಾವಗಳನ್ನು ಪಂ. ಪಲುಸ್ಕರ ಹಾಗೂ ಪಂ. ಭಾತಖಂಡೆಯವರು ಬದಲಾಯಿಸಿ ಅದರ ಬದಲಾಗಿ ಭಕ್ತಿಪರ ರಚನೆಗಳು ಹಾಗೂ ಸ್ವರಲಿಪಿ ಪದ್ಧತಿ ಮುಂತಾದ ವಿಷಯಗಳ ಮೇಲೆ ತಮ್ಮ ಕಾಣಿಕೆಗಳನ್ನು ನೀಡಿದರು. ಇದರ ಪರಿಣಾಮವಾಗಿ ಜನರಲ್ಲಿ ಮತ್ತೊಮ್ಮೆ ಸಂಗೀತದತ್ತ ಒಲವು ಉಂಟಾಯಿತು. ಸ್ವಾತಂತ್ರ್ಯದ ನಂತರ ವಿವಿಧ ಸಂಸ್ಥಾನಗಳ ವಿಲೀನವಾಯಿತು. ಇದರಿಂದಾಗಿ ಸಂಗೀತ ವಿದ್ವಾಂಸರು ಸಂಸ್ಥಾನಗಳನ್ನು ಬಿಟ್ಟು ದೊಡ್ಡ ನಗರಗಳಲ್ಲಿ ವಾಸಿಸಲು ಪ್ರಾರಂಭಿಸಿದರು. ಅಲ್ಲಿ ಅವರಿಗೆ ಹೊಸ ಶ್ರೋತೃಗಳು ದೊರಕಿದರು. ಈ ಹೊಸ ಶ್ರೋತೃ ವರ್ಗಕ್ಕೆ ಶಾಸ್ತ್ರೀಯ ಸಂಗೀತ ಕೇಳುವ ರೀತಿ ಗೊತ್ತಿರಲಿಲ್ಲ. ಅವರು ಸಂಗೀತ ಸಭೆಗಳಿಗೆ ಮನಬಂದಂತೆ ಬರುವದು ಹಾಗೂ ಹೋಗುವದು ಅಥವಾ ತಿಂಡಿ ತಿನಿಸುಗಳನ್ನು ತಿನ್ನುವದು, ಪಾನೀಯ ಸೇವಿಸುವದು ತಮ್ಮ ಮಿತ್ರರೊಡನೆ ಕುಶಲ ಸಂಭಾಷಣೆ ನಡೆಸುವದು ಮುಂತಾದ ಕೆಲಸಗಳಲ್ಲಿ ಮಗ್ನರಾಗಿರುತ್ತಾರೆ.

ಇದರಿಂದಾಗಿ ಕಲಾಕಾರನ ಏಕಾಗ್ರತೆಯಲ್ಲಿ ವ್ಯತ್ಯಾಸ ಉಂಟಾಗಿ ಅವನ ಕಾರ್ಯಕ್ರಮವು ಯಶಸ್ವಿಯಾಗುವುದಿಲ್ಲ. ಜನರ ಅಭಿರುಚಿ ಶಾಸ್ತ್ರಿಯ ಸಂಗೀತದ ಕಡೆಗೆ ಕಡಿಮೆಯಾಗುತ್ತ ಬಂದು ಅದರ ಬದಲಾಗಿ ನಾಟ್ಯಸಂಗೀತ, ಸುಗಮ 'ಸಂಗೀತ ಲೋಕ, ಸಂಗೀತ' ಚಿತ್ರಪಟ ಸಂಗೀತ ಮುಂತಾದ ಸಂಗೀತ ಪ್ರಕಾರಗಳಿಗೆ ಮನ್ನಣೆ ಸಿಗಲು ಪ್ರಾರಂಭವಾಯಿತು. ಭಾರತೀಯ ಸಂಗೀತಕ್ಕೆ ಪುನಶ್ಚೇತನ ನೀಡುವ ಕಾರ್ಯದಲ್ಲಿ ನಮ್ಮ ಭಾರತ ಸರಕಾರವು ಉಲ್ಲೇಖನೀಯ ಕಾರ್ಯ ಮಾಡುತ್ತಲಿದೆ. ಆಕಾಶವಾಣಿ ಹಾಗೂ ದೂರದರ್ಶನ ಮೂಲಕ ಸಂಗೀತಗಾರರ ವಾಣಿ ಹಾಗೂ ಅವರ ಕಲೆ ಸರ್ವಸಾಧಾರಣ ಜನರಿಗೂ ಕೇಳುವಂತೆ ವ್ಯಾಪಕ ಕ್ಷೇತ್ರವನ್ನು ನಿರ್ಮಿಸಿದೆ. ಇದರಿಂದ ಸಂಗೀತ ಸಾಧಕರು ಹಾಗೂ ಶ್ರೋತೃಗಳಲ್ಲಿ ಹೆಚ್ಚಳವಾಯಿತಲ್ಲದೇ ಶಾಸ್ತ್ರೀಯ ಸಂಗೀತ ಹಾಗೂ ವಿಕಾಸ ಕಾರ್ಯದಲ್ಲಿಯೂ ಸಾಕಷ್ಟು ಸಹಾಯಕ ಕಾರ್ಯವಾಗಿದೆ. ಸಂಗೀತ ವಿಕಾಸ ಕಾರ್ಯಕ್ಕೆ ಸಂಗೀತ ನಾಟಕ ಅಕಾಡಮಿಗಳು ಸ್ಥಾಪಿತವಾಗಿವೆ. ಈ ಅಕಾಡಮಿಗಳು ತಮ್ಮದೇ ಆದ ವೈಶಿಷ್ಟ್ಯಪೂರ್ಣ ರೀತಿಯಲ್ಲಿ ಸಂಗೀತದ ರಕ್ಷಣೆ ಹಾಗೂ ಪ್ರಸಾರ ಕಾರ್ಯ ಮಾಡುತ್ತವೆ.

ಪ್ರಾಚೀನ ಕಾಲದಲ್ಲಿ ಸಂಗೀತ ಶಿಕ್ಷಣ ಗುರು ಶಿಷ್ಯ ಪರಂಪರೆಯಿಂದ ನಡೆಯುತ್ತಿತ್ತು. ಈ ಪದ್ಧತಿಯಲ್ಲಿ ವಿದ್ವಾಂಸರು ವಿದ್ಯಾರ್ಥಿಗಳನ್ನು ಬಾಲ್ಯದಿಂದಲೇ ಆರಿಸಿ ತಮ್ಮಲ್ಲಿ ೧೨ ವರ್ಷಗಳ ಕಾಲ ವಿದ್ಯಾಭ್ಯಾಸಕ್ಕಾಗಿ ಇರಿಸಿಕೊಳ್ಳುತ್ತಿದ್ದರು. ಈ ವಿಧಾನದಿಂದ ಸಂಗೀತದ ಕ್ಷೇತ್ರದಲ್ಲಿ ಶ್ರೇಷ್ಠ ಕಲಾವಿದರನ್ನು ತಯಾರಿಸುವದು ಈ ಗುರುಶಿಷ್ಯ ಪರಂಪರೆಯ ಏಕ ಮಾತ್ರ ಉದ್ದೇಶವಾಗಿತ್ತು. ಕಾಲಕ್ರಮೇಣ ಈ ಗುರು ಕುಲ ಪದ್ಧತಿ ಕಡಿಮೆಯಾಗಿ ಸಂಗೀತದ ಶಿಕ್ಷಣದಲ್ಲಿ ಹಲವಾರು ಬದಲಾವಣೆಗಳಾದವು. ಪಾಠಶಾಲಾ, ಮಹಾವಿದ್ಯಾಲಯ ಮತ್ತು ವಿಶ್ವವಿದ್ಯಾಲಯಗಳಲ್ಲಿ ಸಂಗೀತದ ಶಿಕ್ಷಣವನ್ನು ಕೊಡಲು ಪ್ರಾರಂಭವಾಯಿತು. ಸಾಮೂಹಿಕ ಶಿಕ್ಷಣ ಸಂಗೀತ ಪದ್ಧತಿಯಿಂದ ಸಂಗೀತ ಕಲೆಯ ಬೆಳವಣಿಗೆಗೆ ಅಷ್ಟೇ ಅಲ್ಲದೇ ರಾಷ್ಟ್ರೀಯ ಏಕ್ಯತೆ ಭಾವನೆ ಬೆಳೆಯಲೂ ಸಹ ಇದು ಸಹಾಯಕವಾಗಿದೆ. ಪಾಶ್ಚಾತ್ಯ ದೇಶಗಳಲ್ಲಿಯೂ ಸಹ ನಮ್ಮ ಭಾರತೀಯ ಸಂಗೀತವು ಅತ್ಯಂತ ಲೋಕಪ್ರಿಯವಾಗಿದೆ. ಪಾಶ್ಚಾತ್ಯರು ನಮ್ಮ ಭಾರತೀಯ ಸಂಗೀತದ ಕಡೆಗೆ ವಿಶೇಷ ಗೌರವದ ದೃಷ್ಟಿಯಿಂದ ನೋಡುತ್ತಾರೆ. ಪಂ. ರವಿಶಂಕರ, ಅಲ್ಲಾ ರಖಾ, ಉದಯಶಂಕರ, ಎಂ. ಸುಬ್ಬುಲಕ್ಷ್ಮಿ, ಪಂ. ಭೀಮಸೇನ ಜೋಶಿ, ಡಾ. ಗಂಗೂಬಾಯಿ ಹಾನಗಲ್ಲ ಮೊದಲಾದ ನಮ್ಮ ಶ್ರೇಷ್ಠ ಕಲಾವಿದರು ತಮ್ಮ ಕಲೆಯುನ್ನು ಪ್ರದರ್ಶಿಸಿ ಪಾಶ್ಚಾತ್ಯರ ಮನಸ್ಸನ್ನು ತಣಿಸಿದ್ದಾರೆ.

ಭಾರತ ಸರ್ಕಾರವು ಪ್ಯಾರಿಸ ಮತ್ತು ಅಮೇರಿಕಾ ದೇಶಗಳಲ್ಲಿ ಭಾರತೋತ್ಸವದಂಥ ಸಾಂಸ್ಕೃತಿಕ ಹಾಗೂ ಕಲಾತ್ಮಕ ಉತ್ಸವಗಳನ್ನು ಏರ್ಪಡಿಸಿ ನಮ್ಮ ಭಾರತೀಯ ಸಂಸ್ಕೃತಿ ಮತ್ತು ಕಲೆಯನ್ನು ಪ್ರದರ್ಶಿಸುವ ಸ್ತುತ್ಯಾರ್ಹ ಕಾರ್ಯವನ್ನು ಮಾಡುತ್ತಲಿದೆ.

ನಮ್ಮ ದೇಶದ ಶ್ರೇಷ್ಠ ಸಂಗೀತ ವಿದ್ವಾಂಸರಿಗೆ ಅವರು ಸಲ್ಲಿಸಿದ ಸಂಗೀತ ಸೇವೆಗಾಗಿ ಪದ್ಮಶ್ರೀ ಪದ್ಮಭೂಷಣ ಮುಂತಾದ ಗೌರವ ನೀಡುತ್ತಲಿದೆ. ಇದಲ್ಲದೇ ಸಂಗೀತದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಪರ ಚಟುವಟಿಕೆಗಳಿಗೆ ಅವಕಾಶ ಕಲ್ಪಿಸಿದೆ.

ಮಧ್ಯ ಪ್ರದೇಶದ ಸರ್ಕಾರವು ಮಹಾಕವಿ ಕಾಳಿದಾಸನ ಹೆಸರಿನಲ್ಲಿ ಭಾರತದ ಶ್ರೇಷ್ಠ ಸಂಗೀತಗಾರರಿಗೆ ಪ್ರಶಸ್ತಿಯನ್ನು ಕೊಟ್ಟು ಗೌರವಿಸುವಂತಹ ಸ್ತುತ್ಯಾರ್ಹ ಕಾರ್ಯ ಮಾಡುತ್ತಿದೆ. ಮೊದಲನೆಯದಾಗಿ ಈ ಪ್ರಶಸ್ತಿಯನ್ನು ಪಡೆಯುವ ಭಾಗ್ಯ ನಮ್ಮ ದೇಶದ ಶ್ರೇಷ್ಠ ಗಾಯಕರಾದ ಹಾಗೂ ನಮ್ಮ ಕರ್ನಾಟಕದವರೇ ಆದ ಡಾ. ಮಲ್ಲಿಕಾರ್ಜುನ ಮನಸೂರ ಅವರಿಗೆ ದೊರೆತ್ತಿದ್ದು ಹೆಮ್ಮೆಯ ವಿಷಯವಾಗಿದೆ.

ನಮ್ಮ ದೇಶದ ಜಾನಪದ ಸಂಗೀತ ಹಾಗೂ ಭಕ್ತಿ ಸಂಗೀತ ಕೂಡ ಅತ್ಯಂತ ಸಮೃದ್ಧವಾಗಿದೆ. ಧಪ್ರಾಚೀನ ಕಾಲದಿಂದಲೇ ಮಾನವನ ಸಂಬಂ



ದೀಪಾವಳಿಯ ಶುಭಾಶಯಗಳು



ದೂರವಾಣಿ : **20294**

ನೀವು ಗುಲ್ಬರ್ಗಾಕ್ಕೆ ಬಂದಾಗ

ಶುಚಿ ರುಚಿಯಾದ ಊಟ,
ಉಪಹಾರ ಮತ್ತು
ವಸತಿ ಗೃಹಕ್ಕೆ ಹೆಸರಾದ

# ಮೋಹನ್ ಲಾಡ್ಜ್

ಮಿಲ್ ರಸ್ತೆ ಗುಲ್ಬರ್ಗ-೫೮೫೧೦೨

ಸಂಸ್ಥಾಪಕರು : ಬಿ. ಪಾದೂರು ರಾಮಕೃಷ್ಣ ತಂತ್ರಿ

**MOHAN LODGE**

Mill Road,

GULBARGA

---

***With Best Compliments from :***

Phone : Office : 72461
72154
Resi. : 72574
Gram : MATHREJACO

Sudarshan Mathreja

## Shri Balaji Sai Steels

Dealers in Railway Scrap Materials,
Ferrous & Non-Ferrous Metal Scrap,
Raw Materials for Foundries, Furnaces
& Rolling Mills, Commission Agents.



**Hosur, Gokul Road,**

**HUBLI-580 021**

ನಿಸರ್ಗದೊಡನೆ ಅನ್ಯೋನ್ಯವಾಗಿದ್ದರಿಂದ ಅವನ ಪ್ರತಿಯೊಂದು ಕ್ರಿಯೆಯು ಪ್ರಾಕೃತಿಕವಾಗಿದ್ದು ಯಾವುದೇ ಪರಿಸ್ಥಿತಿಯಲ್ಲಿ ಅವನು ನಿಸರ್ಗದ ಮೊರೆ ಹೋಗುತ್ತಾನೆ. ಇದರಿಂದಾಗಿ ಅವನ ಮನೋ ಭಾವಗಳು ಸಂಗೀತದ ರೂಪ ಧರಿಸಿ ಹೊರ ಬರುತ್ತವೆ. ಇಂತಹ ಸಂಗೀತ ಸಹಜವಾಗಿರುತ್ತದೆ.

ಲೋಕ ಜೀವನದ ಅತ್ಯಂತ ಸುಂದರವಾದ ಪ್ರತಿಬಿಂಬವು ಜಾನಪದ ಸಂಗೀತದಲ್ಲಿ ಕಂಡು ಬರುತ್ತದೆ. ಏಕೆಂದರೆ ಜಾನಪದ ಗೀತೆಗಳಲ್ಲಿ ಶಬ್ದ ಹಾಗೂ ಸ್ವರಗಳ ಸಂಯೋಜನದಲ್ಲಿ ಕೃತ್ರಿಮತೆ ಇರುವದಿಲ್ಲ. ಗೀತೆಗಳಲ್ಲಿ ಲೋಕ ಜೀವನದ ಅತ್ಯಂತ ಸರಳವಾದ ಪರಿಚಯ ಇರುತ್ತದೆ.

ಜಾನಪದ ಗೀತೆಗಳು ವಿಶೇಷವಾಗಿ ನಾಲ್ಕು ಅಥವಾ ಐದು ಸ್ವರಗಳಲ್ಲಿ ಹಾಡಲ್ಪಡುತ್ತವೆ. ಲಯದ ವಿವಿಧ ಪ್ರಕಾರಗಳು ಇದರಲ್ಲೂ ಕಂಡು ಬರುತ್ತವೆ. ನಮ್ಮ ದೇಶದ ನಾನಾ ಪ್ರದೇಶಗಳಲ್ಲಿ ವಿವಿಧ ಜಾನಪದ ಸಂಗೀತದ ಪ್ರಕಾರಗಳು ಕಂಡು ಬರುತ್ತವೆ. ವಿಶೇಷವಾಗಿ ಕರ್ನಾಟಕದಲ್ಲಿ ಸುಗ್ಗಿ ಹಾಡುಗಳು, ಸಾಂಪ್ರದಾಯಕ ಹಾಡುಗಳು ರಾಜಸ್ಥಾನದಲ್ಲಿ ಲಾಲತ್, ಧಾಮಿರ ಕಾಶ್ಮೀರದಲ್ಲಿ ಶುಫಿಯಾನಾ ಭಕರ, ಹಿಮಾಚಲ ಪ್ರದೇಶದಲ್ಲಿ ನಾಚಿ, ಮಹಾರಾಷ್ಟ್ರದಲ್ಲಿ ಅಭಂಗ, ಓವಿ, ಲಾವಣಿ, ಅಂಗಾಯಿಗೀತ, ಮಧ್ಯಪ್ರದೇಶದಲ್ಲಿ ಬಾರ್, ಮಾನೆ, ಗನಗೌರ, ಮೊಹರಾ, ಸಾಜನ, ಕೇಶರಬಾಟ, ಕೇರಳದಲ್ಲಿ ವಂಚಿಪಟ್ಟು, ತುಂಬಿತುಳಲ್ ಮುಂತಾದ ಗೀತ ಪ್ರಕಾರಗಳು ವಿಶೇಷ ಉಲ್ಲೇಖನೀಯವಾಗಿವೆ. ಭಕ್ತಿ ಸಂಗೀತದಲ್ಲಿಯೂ ಕೂಡಾ ನಮ್ಮ ಭಾರತದೇಶವು ಉನ್ನತ ಮಟ್ಟ ಪಡೆದಿದೆ. ಜಯದೇವನ ಗೀತಗೋವಿಂದದಿಂದ ಹಿಡಿದು ಸ್ವಾಮಿ ಹರಿದಾಸ, ಸೂರದಾಸ ಮೀರಾಬಾಯಿ ಕೃಷ್ಣದಾಸ್, ತುಲಸೀದಾಸ, ನಾನಕ ಕಬೀರ, ನಾಮದೇವ, ತುಕಾರಾಮ, ಮುಂತಾದ ಶ್ರೇಷ್ಠ ಭಕ್ತರು ಅಲ್ಲದೇ ನಮ್ಮ ಕರ್ನಾಟಕದ ಶ್ರೇಷ್ಠ ಭಕ್ತ ಶಿರೋಮಣಿಗಳಾದ ಪುರಂದರದಾಸರು, ಕನಕದಾಸರು, ಮತ್ತು ಶರಣರಾದ ಬಸವಣ್ಣನವರು, ಅಕ್ಕಮಹಾದೇವಿ ಇವರ ಕೃತಿ ಹಾಗೂ ವಾಣಿಯಲ್ಲಿ ಭಕ್ತಿಯುತ ಭಾವನೆ ಅತ್ಯಂತ ಶ್ರೇಷ್ಠ ಮಟ್ಟದಲ್ಲಿ ಕಂಡು ಬರುತ್ತದೆ. ಇವರು ತಮ್ಮ ರಚನೆಗಳನ್ನು ಸಂಗೀತದ ಶ್ರೇಷ್ಠ ಶೈಲಿಯೊಂದರಲ್ಲಿ ಮಾಡಿದರೂ ಇವರ ಸಂಗೀತಕ್ಕೆ ಈಗಿನ ಕಾಲದಲ್ಲಿ ಭಕ್ತಿಯ ಸಂಗೀತ ಎಂದು ಪರಿಗಣಿಸಲಾಗುತ್ತದೆ. ಸಂಕ್ಷೇಪದಲ್ಲಿ ಹೇಳುವದಾದರೆ ನಮ್ಮ ಭಾರತೀಯ ಸಂಗೀತದ ಬೆಳವಣಿಗೆ ಕಾಲ ಕಾಲಕ್ಕೆ ಬದಲಾಗುತ್ತ ಬಂದಿದೆ.

ಯಾವ ಯಾವ ಕಾಲದಲ್ಲಿ ಯಾವ ತರಹದ ಸಂಗೀತದ ಪ್ರಚಾರವಿತ್ತೋ ಅದೇಪ್ರಕಾರ ಸಂಗೀತ ಶಾಸ್ತ್ರ ಕೂಡಾ ನಿರ್ಮಿತವಾಗಿದೆ. ಸಾಮಾಜಿಕ ಸ್ಥಿತಿಯ ಕಾರಣದಿಂದ ಸಂಗೀತದಲ್ಲಿ ಸಾಕಷ್ಟು ಪರಿವರ್ತನೆಗಳಾಗಿವೆ. ಅವುಗಳನ್ನೇ ಗ್ರಹಿಸಿ ತತ್ಕಾಲೀನ ಶಿಕ್ಷಣ ವ್ಯವಸ್ಥೆಯಲ್ಲಿ ಪರಿವರ್ತನೆ ಮಾಡಬೇಕಾಯಿತು. ಫಲಸ್ವರೂಪವಾಗಿ ಸಂಗೀತದ ಮೂಲ ಸಿದ್ಧಾಂತಗಳು ಮಾಯವಾಗಲು ಪ್ರಾರಂಭವಾದವು. ಸೌಂದರ್ಯ ಧರ್ಮವಿದ್ದು ಚಮತ್ಕಾರ ವಿಜ್ಞಾನವಾಗಿದೆ. ಈಗೀನ ಯುಗ ವೈಜ್ಞಾನಿಕ ಯುಗವಾದ್ದರಿಂದ ನಮ್ಮ ಸಂಗೀತವು ಕೂಡ ಚಮತ್ಕಾರ ಪ್ರಧಾನವಾಗಿದೆ. ಸಂಗೀತದಲ್ಲಿ ಸೌಂದರ್ಯ ದೃಷ್ಟಿ ಆಧುನಿಕ ಕಾಲದಲ್ಲಿ ಕಡಿಮೆಯಾಗುತ್ತಲಿದೆ. ವೈಜ್ಞಾನಿಕ ಯುಗದ ಕೊಡುಗೆಯಿಂದ ಕಳೆದ ೨೦–೩೦ ವರ್ಷಗಳಿಂದ ಸಂಗೀತದ ವಿಕಾಸವು ಬಹುವೇಗದಿಂದ ಆಗಿದೆ. ಧ್ವನಿಪ್ರಸಾರಕ ಯಂತ್ರಗಳಿಂದ ಉದಾ: ಆಕಾಶವಾಣಿ, ದೂರದರ್ಶನ, ಧ್ವನಿ ಸುರಳಿಗಳ ಮೂಲಕ ಭಾರತದ ಮೂಲೆ ಮೂಲೆಗೂ ಸಂಗೀತದ ಸ್ವರಗಳು ಝೇಂಕರಿಸುತ್ತವೆ. ಸಂಗೀತವು ಗುರು ಮುಖೇನ ಬರುವಂಥ ವಿದ್ಯೆ. ಇದರಲ್ಲಿ ಸಂದೇಹವೇ ಇಲ್ಲ. ಆದರೆ ವಿಜ್ಞಾನವು ಸಂಗೀತವನ್ನು ಕಂಪ್ಯೂಟರಾಯಿಸ್ಡ್ ಮಾಡಿದ್ದರಿಂದ ಅನೇಕ ಸಂಗೀತ ಶಿಷ್ಯರನ್ನು ತಯಾರಿಸಬಹುದೆಂದು ಊಹಿಸಲಾಗಿದೆ. ●

# ನಾನು-ಶೂನ್ಯವಾಗಿದ್ದೇನೆ



ಓ! ಎನ್ನ ಮೃತ್ಯುಂಜಯ
    ಜ್ಞಾನ-ಅಜ್ಞಾನ, ಅಹಂಕಾರ-ನಿರಹಂಕಾರ
ಬುದ್ಧಿ-ಭಾವ, ಮಾನ-ಅಪಮಾನ
    ಇವೆಲ್ಲವುಗಳಿಂದ ನಾನಿಂದು
ಮುಕ್ತನಾಗಿದ್ದೇನೆ !

●

ಆಡಂಬರ-ನಿರಾಡಂಬರ, ಸುಖ-ದುಃಖ
    ಕೀರ್ತಿ-ಅಪಕೀರ್ತಿ, ಆಚಾರ-ದುರಾಚಾರ
ಇವೆಲ್ಲವುಗಳ ಹಂಗು ಹರಿದಿದ್ದೇನೆ !

●

ಮೋಹ-ನಿರ್ಮೋಹ, ಸಂಸ್ಕೃತಿ-ಅಸಂಸ್ಕೃತಿ
    ವಿಚಾರ-ಅವಿಚಾರ, ಗರ್ವ-ನಿಗರ್ವ
ಇವು ಯಾವೂ ಇಲ್ಲದ 'ನಾನು'
    ಇಂದು ಶೂನ್ಯವಾಗಿದ್ದೇನೆ !

●

ಇವೆಲ್ಲವುಗಳ ಕಳೆದುಕೊಂಡು
    ನಿನ್ನ ವಾಸಕ್ಕಾಗಿ
ಈ 'ನನ್ನ'ನು ಬರಿದು ಮಾಡಿದ್ದೇನೆ !

●

ನಿನ್ನ ನಾಮಸ್ಮರಣೆಯೊಂದೇ
    ಜಡತೆಯಲ್ಲಿ, ಚೈತನ್ಯದಲ್ಲಿ
ತುಂಬಿ ತುಳುಕುತಿದೆ !

●

ನನ್ನ ವಿಶ್ವಾಸ, ನಾನು ತಾಳಿದ ಆದರ್ಶಗಳು
    ಉದ್ದೇಶಗಳು, ಬೇಕೆಂದ
ಸಕಲ ಭೋಗ ಭಾಗ್ಯಂಗಳು
    ಎಲ್ಲವೂ ಈಗ ಅರ್ಥ ಕಳೆದುಕೊಂಡಿವೆ.
ಓ ! ಎನ್ನ ಪ್ರಭು !

●

ಗುರುವೆ, ಪರಮ, ಕಲ್ಪತರುವೇ
    ನೀನೊಂದೇ ನನ್ನ ಗುರಿ, ನನ್ನ ಉದ್ದೇಶ
ನನ್ನ ಸಾಧನೆ, ನನ್ನ ಸಿದ್ಧಿ !

●

ಲೋಕ ನೀಡಿದ ನಂಜು
    ನನಗೆ ಗೈದ ಮೋಸ-ವಂಚನೆ
ನನಗೆ ನೀಡಿದ ಯಾತನೆ
    ಎದೆಯ ತುಂಬ ನಂಜಿನ ಬರ್ಚಿ
ಚುಚ್ಚಿಗೊಳಿಸಿದ ಘಾಯ
    ಇವೆಲ್ಲವನೂ ನಾನಿಂದು
ಮರೆತಿದ್ದೇನೆ ! ಓ ! ದೇವರೇ
    ನಾನಿಂದು ಸಂಪೂರ್ಣ
ಇಲ್ಲವಾಗಿದ್ದೇನೆ !

●

ನನ್ನ ಜೀವನ, ನಾನು ತಿಳಿದ ಸತ್ಯ-ಅಸತ್ಯ
    ಮಾಡಿದ ಒಪ್ಪು-ತಪ್ಪು ಇವೆಲ್ಲವುಗಳ ನಾಶ
ಇಂದು ನನ್ನ ಮೇಲೆ ಯಾವ
    ಪರಿಣಾಮವನ್ನೂ ಬೀರಲಾರವು !

●

ನಿನ್ನ ಬಗೆಗೆ ನಾನು ತಾಳಿರುವ ಆಸ್ಥೆ
    ಶ್ರದ್ಧೆ-ಭಕ್ತಿ ನಿಜ ಅಸಾಮಾನ್ಯವಾಗಿಲ್ಲ !
ನನ್ನ ಮೌನಸ್ಪಂದನದಲಿ
    ಝೇಂಕೃಗೊಳ್ಳುವ ನಾದ
ಅನಾದವಾಗಿರಲಿಕ್ಕಿಲ್ಲ
    ಆದರೂ ಸಕಲ ಇಂದ್ರಿಯುಗಳೂ
ನಿನ್ನ ನಾಮ ಸ್ಮರಣೆಯಲ್ಲಿಯೇ
    ಕಳೆದು ಹೋಗಿರುವಾಗ
'ನಾನು', 'ನನ್ನದು' ಎನ್ನುವುನೇನಿದೆ
    ಓ! ಪರಮ ಪುರುಷ
ನೀನು ಕೃಪೆಯಾಗು
ನೀನೆನಗೆ ರಕ್ಷೆಯಾಗು !

— ಡಾ. ಪಂಚಾಕ್ಷರಿ ಹಿರೇಮಠ

# ಕಲಾಭಿಮಾನಿ

ನಾಡಿಗರ್



ಗೋಡೆಯ ದೊಡ್ಡ ಬಿರುಕೊಂದು॥
ಮುಚ್ಚಬೇಕಾಗಿತ್ತು.....



ಎಷ್ಟು ನೈಸರ್ಗಿಕವಾಗಿದೆ!



ಅರ್ಥದಬಗ್ಗೆ ವಿಮರ್ಶಕರು
ತಲೆ ಕೆಡಿಸಿಕೊಳ್ಳಲಿ, ಬಿಡಿ!

 ದೀಪಾವಳಿಯು ಸಕಲರಿಗೂ ಸನ್ಮಂಗಳವನ್ನೀಯುಲೆಂದು ಹಾರೈಸುತ್ತೇವೆ 

# ಬಾಪೂಜಿ ವಿದ್ಯಾಸಂಸ್ಥೆ (ರಿ.) ದಾವಣಗೆರೆ.

## ಶೈಕ್ಷಣಿಕ ಹಾಗೂ ಇತರೆ ಸಂಸ್ಥೆಗಳು

ಜಗದ್ಗುರು ಜಯದೇವ ಮುರುಘರಾಜೇಂದ್ರ ವೈದ್ಯಕೀಯ ಕಾಲೇಜು
(ಭಾರತೀಯ ವೈದ್ಯಕೀಯ ಮಂಡಳಿಯಿಂದ ಮಾನ್ಯತೆ ಪಡೆದಿದೆ)
ಬಾಪೂಜಿ ಆಸ್ಪತ್ರೆ
ಬಾಪೂಜಿ ದಂತಚಿಕಿತ್ಸಾ ಕಾಲೇಜು ಮತ್ತು ಆಸ್ಪತ್ರೆ
ಬಾಪೂಜಿ ಇಂಜನಿಯರಿಂಗ್ ಮತ್ತು ತಾಂತ್ರಿಕ ಕಾಲೇಜು
ಧರ್ಮರತ್ನಾಕರ ರಾಜನಹಳ್ಳಿ ಮದ್ದೂರಾಯಪ್ಪ ವಿಜ್ಞಾನ ಕಾಲೇಜು
ಅಜ್ಜಂಪುರದ ರಂಗಪ್ಪ ಗೋವಿಂದಸ್ವಾಮಿ ಕಲಾ ಮತ್ತು ವಾಣಿಜ್ಯ ಕಾಲೇಜು
ಅಜ್ಜಂಪುರದ ವಿರುಪಾಕ್ಷಪ್ಪ ಕಮಲಮ್ಮ ಮಹಿಳಾ ಕಾಲೇಜು
ರಾಜನಹಳ್ಳಿ ಲಕ್ಷ್ಮಣಶೆಟ್ಟಿ ಕಾಯ್ದೆ ಕಾಲೇಜು
ಬಾಪೂಜಿ ವಿದ್ಯಾ ಸಂಸ್ಥೆಯ ಶಿಕ್ಷಣ ಕಾಲೇಜು
ಮಾಗನೂರು ಸರ್ವಮಂಗಳಮ್ಮ ಬಸಪ್ಪ ಸಂಜೆ ಕಾಲೇಜು
ಬಾಪೂಜಿ ವಿದ್ಯಾ ಸಂಸ್ಥೆ ಕಲಾ ಮತ್ತು ವಾಣಿಜ್ಯ ಕಾಲೇಜು
ಬಾಪೂಜಿ ವಿದ್ಯಾ ಸಂಸ್ಥೆ ಫಾರ್ಮಸಿ ಶಾಲೆ
ದಾದಿಯರ ತರಬೇತಿ ಶಾಲೆ
ಬಾಪೂಜಿ ವಿದ್ಯಾ ಸಂಸ್ಥೆಯ ಕೇಂದ್ರೀಯ ಶಿಶುವಿಹಾರ ಮತ್ತು ಪ್ರಾಥಮಿಕ ಶಾಲೆ
ಜಗದ್ಗುರು ಜಯದೇವ ಮುರುಘರಾಜೇಂದ್ರ ವೈದ್ಯಕೀಯ ಕಾಲೇಜು ವಿದ್ಯಾರ್ಥಿ ನಿಲಯ
ಬಾಪೂಜಿ ಇಂಜನಿಯರಿಂಗ್ ಮತ್ತು ತಾಂತ್ರಿಕ ಕಾಲೇಜು ವಿದ್ಯಾರ್ಥಿ ನಿಲಯ
ಬಾಪೂಜಿ ಇಂಜನಿಯರಿಂಗ್ ಮತ್ತು ತಾಂತ್ರಿಕ ಕಾಲೇಜು ವಿದ್ಯಾರ್ಥಿನಿಲಯ (ನ್ಯೂಕ್ಯಾಂಪಾಸ್)
ಶ್ರೀಮತಿ ರತ್ನಮ್ಮ ಧರ್ಮರತ್ನಾಕರ ಆರ್. ಮದ್ದೂರಾಯಪ್ಪ ಮಹಿಳಾ ವಿದ್ಯಾರ್ಥಿ ನಿಲಯ
ಬಾಪೂಜಿ ಮಹಿಳಾ ವಿದ್ಯಾರ್ಥಿ ನಿಲಯ
ಬಾಪೂಜಿ ಪ್ರೌಢಶಾಲೆ
ಬಾಪೂಜಿ ಪಾಲಿಟೆಕ್ನಿಕ್, ಶಾಬನೂರು ದಾವಣಗೆರೆ ತಾಲ್ಲೂಕು

**ಡಾ|| ಹೆಚ್. ಕೆ. ಕೃಷ್ಣಸ್ವಾಮಿ,**
ಅಧ್ಯಕ್ಷರು,

**ಶಾಮನೂರ ಶಿವಶಂಕರಪ್ಪ,**
ಗೌರವ ಕಾರ್ಯದರ್ಶಿಗಳು,

# ಯಕ್ಷಗಾನದ 'ಮಹಾಬಲ'

ಸಂದರ್ಶನ : **ಕೃಷ್ಣಮೂರ್ತಿ ಹೆಗಡೆ**

ಕೆರೆಮನೆ ಮಹಾಬಲ ಹೆಗಡೆ–ಯಕ್ಷಗಾನ ಕಲಾ-ಪ್ರಪಂಚದಲ್ಲಿ ಸುಪರಿಚಿತ ಹೆಸರು. ನಾಲ್ಕೂವರೆ ದಶಕಗಳ ಹಿಂದೆಯೆ ಈ ಕಲೆಗೆ ತಮ್ಮನ್ನು ಸಮರ್ಪಿಸಿ ಕೊಂಡಿರುವ ಹೆಗಡೆಯವರು ಸೇವಕನಿಂದ ರಾಜನವರೆಗಿನ ಎಲ್ಲ ಪಾತ್ರಗಳನ್ನು ಸಮರ್ಥವಾಗಿ ಅಭಿನಯಿಸಿ ಹೆಸರು ಮಾಡಿರುವ ಶ್ರೇಷ್ಠ ಕಲಾವಿದ. ಹಿಮ್ಮೇಳವಾದ ಮೃದಂಗ, ಚಂಡೆ, ಭಾಗವತಿಕೆ ಸೇರಿದಂತೆ ಯಕ್ಷಗಾನದ ಎಲ್ಲ ಅಂಗೋಪಾಂಗಗಳನ್ನೂ ಆಳವಾಗಿ ಅಧ್ಯಯನ ಮಾಡಿರುವ ಅವರು ಈ ಕಲೆಯ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲವರಲ್ಲಿ ಒಬ್ಬರು.

ಈ ಕಲೆಯ ವಿಷಯದಲ್ಲಿ ತಮಗೆ ತಿಳಿಯದೇ ಇರುವ ಅಂಶಗಳನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವ, ತಿಳಿದಿದ್ದನ್ನು ನಿರ್ಭಿಡೆಯಿಂದ ಪ್ರತಿಪಾದಿಸುವ ಪ್ರವೃತ್ತಿಯು ಹೆಗಡೆಯವರಿಗೆ ಅವರದೇ ಆದ ಸಿದ್ಧಾಂತವಿದೆ. ನಲವತ್ತೈದು ವರ್ಷಗಳಷ್ಟು ದೀರ್ಘವಾದ ತಮ್ಮ ಕಲಾ ಬದುಕಿನಲ್ಲಿ ಉಂಡನೋವು, ಅನುಭವಿಸಿದ ಆನಂದ, ಕಲಾಪ್ರೇಮಿಗಳಿಗೆ ನೀಡಿದ ನಲಿವುಗಳನ್ನು ಮೆಲಕು ಹಾಕುವಾಗ 'ಯಕ್ಷ'ಗಾನದ ಬಗ್ಗೆ ಅವರಿಗಿರುವ ಕಳಕಳಿ ಹೊರಹೊಮ್ಮುತ್ತದೆ. ಈ ಕಲೆ ಇಂದು ಸಂಪ್ರದಾಯದಿಂದ ದೂರಸರಿಯುತ್ತಿರುವ ಬಗ್ಗೆ ಹಳೆಯ ತಲೆಮಾರಿನ ಈ ಹಿರಿಯ ನಟನಿಗೆ ಕೊರಗು. ಸಂಪ್ರದಾಯದ ಚೌಕಟ್ಟಿನೊಳಗೇ ಅದಕ್ಕೆ ಆಧುನಿಕತೆಯ ಜೀವ ತುಂಬಬೇಕೆಂಬ ನಿಲುವು.

ಯಕ್ಷಗಾನ ಕಲೆಯ ಅಳಿವು–ಉಳಿವು, ಇತಿ–ಮಿತಿ, ನಟರ ನೋವು-ನಲಿವು ಮೊದಲಾದವುಗಳ ಕುರಿತು ಅವರು ಹೇಳಿದ ಅನುಭವ–ಅಭಿಪ್ರಾಯಗಳ ಪೂರ್ಣ ಪಾಠವಿದು.

ಪ್ರ: ಹೆಗಡೆಯವರೇ ನೀವು ಯಕ್ಷಗಾನ ರಂಗಕ್ಕೆ ಪದಾರ್ಪಣ ಮಾಡಿದ್ದು ಯಾವಾಗ?

ಉ : ನನಗೀಗ ೬೦ ವರ್ಷ ೧೪ನೇ ವಯಸ್ಸಿನಲ್ಲಿ ಈ ರಂಗಕ್ಕೆ ಬಂದೆ. ಚಿಕ್ಕತಂದೆ ಕೆರೆಮನೆ ಶಿವರಾಮ ಹೆಗಡೆಯವರ ಇಡಗುಂಜಿ ಮೇಳದ ಮೂಲಕ ರಂಗಪ್ರವೇಶವಾಯ್ತು. ಬಾಲ್ಯದಲ್ಲಿಯೇ ಹಾಡುವುದು, ನರ್ತಿಸುವುದು ಇತ್ಯಾದಿಗಳ ಸಂಬಂಧದಲ್ಲ ನನಗೆ ಒಲವು ಪ್ರಾಕೃತಿಕವಾಗಿಯೇ ಇತ್ತು. ನನ್ನ ಅಜ್ಜ ಕೂಡ ಯಕ್ಷಗಾನದ ಹಾಡುಗಳನ್ನು ಹಾಡುತ್ತಿದ್ದರು.

ಪ್ರ : ನಲವತ್ತೈದು ವರ್ಷಗಳ ಹಿಂದೆ ಈ ಕಲೆ ಯಾವ ಸ್ಥಿತಿಯಲ್ಲಿತ್ತು ? ಪ್ರೋತ್ಸಾಹ ಇಂದಿಗಿಂತ ಹೆಚ್ಚಿತ್ತೇ ಅಥವಾ ಕಡಿಮೆಯಿತ್ತೆ?

ಉ : ಒಂದು ರೀತಿಯಿಂದ ನೋಡಿದರೆ ಅಂದು ಈ ಕಲೆ ಇಂದಿಗಿಂತ ಉತ್ತಮ ಸ್ಥಿತಿಯಲ್ಲಿತ್ತು. ಆಂದಿನ ಪ್ರೇಕ್ಷಕವರ್ಗಕ್ಕೆ ಮಹಾಭಾರತ–ರಾಮಾಯಣಗಳ ವ್ಯಾಸಂಗದ ಬಲವಿತ್ತು. ನಟ ಹಸ್ತಾಭಿನಯದಲ್ಲಿ ತಪ್ಪಿದರೆ, ನೃತ್ಯಾಭಿನಯದಲ್ಲಿ ಅಸಂಬದ್ಧತೆ ಕಂಡುಬಂದರೆ ಅರ್ಥಗಾರಿಕೆ ಹಾಗೂ ಹಾಡುಗಾರಿಕೆಯಲ್ಲಿ ಸಾಹಿತ್ಯಿಕ ದೋಷವುಂಟಾದರೆ ಅದನ್ನು ಗುರುತಿಸಿ ಎಚ್ಚರಿಕೆ ನೀಡುವ ಪ್ರೇಕ್ಷಕರು ಇಂದಿಗಿಂತ ಅಂದು ಹೆಚ್ಚಿದ್ದರು. ಕಾರ್ಯಕ್ರಮದ ಸಂಖ್ಯೆಯಾದರೂ ಅಷ್ಟೆ. ವರ್ಷಕ್ಕೆ ಒಂದು ಮಂಡಳಿಯಿಂದ ಪರಮಾವಧಿ ೩೦-೪೦ ಆಟ ಆಗುತ್ತಿತ್ತು, ಪೌರಾಣಿಕ ಕಥಾವಸ್ತುವಿಗಷ್ಟೇ ಸೀಮಿತವಾಗಿರುತ್ತಿತ್ತು. ಇಂದು ದುರ್ದೈವದಿಂದ ಯಕ್ಷಗಾನದ ಸಂಪ್ರದಾಯಕ್ಕೆ ಒಗ್ಗದ ಯಾವ್ಯಾವುದೋ ಕಥೆಯನ್ನು ಹೆಣೆದು ಪ್ರದರ್ಶಿಸಲಾಗುತ್ತಿದೆ. ಅಂದಿನ ಕಲಾವಿದರಾದರೂ ಅಷ್ಟೇ, ಇಂದಿನವರಿಗಿಂತ ಬಹುಪಾಲು ಶ್ರೇಷ್ಠರಾಗಿದ್ದರೂ ಕಲೆಯ ಸಂಬಂಧದಲ್ಲಿ ಪ್ರಾಮಾಣಿಕವಾಗಿ ಹಾಗೂ ಆಳವಾಗಿ ಅಭ್ಯಾಸ ಮಾಡುತ್ತಿದ್ದರು. ಕಥಾವಸ್ತುವಿನ ಪರಿಕಲ್ಪನೆಯೂ ಸರಿಯಾಗಿರುತ್ತಿತ್ತು. ಇಂದಿನಂತೆ ಪ್ರತಿದಿನ ಕಾರ್ಯಕ್ರಮ ನಡೆಯುತ್ತಿರಲಿಲ್ಲ, ಇದರಿಂದಾಗಿ ನಟರು ಪಾತ್ರಗಳ ಬಗ್ಗೆ ಪರಸ್ಪರ ವಿಚಾರ ವಿನಿಮಯ ಮಾಡುತ್ತಿದ್ದರು. ಕಾರ್ಯಕ್ರಮ ಹೆಚ್ಚು ಪರಿಣಾಮಕಾರಿಯಾಗಿ ಪರಿಷ್ಕೃತವಾಗಿ ನಡೆಯುತ್ತಿತ್ತು.

ಪ್ರ: ಈ ಕಲೆಯಲ್ಲಿ ಇಂದು ಸಾಕಷ್ಟು ಬದಲಾವಣೆ ಆಗಿದೆಯಲ್ಲವೇ ?

ಉ : ಬದಲಾವಣೆ ಖಂಡಿತ ಆಗಿದೆ. ಅಷ್ಟೇ ಅಲ್ಲ, ತೀರಾ ಅನುಚಿತವಾದ ದಾರಿಯಲ್ಲಿ ಯಕ್ಷಗಾನ ಇಂದು ಸಾಗುತ್ತಿದೆ. ಇಂದು ಯಕ್ಷಗಾನ ಮೇಳಗಳ ಸಂಖ್ಯೆ ಹೆಚ್ಚಾಗಿರಬಹುದು. ಕಾರ್ಯಕ್ರಮಗಳು ಅಧಿಕವಾಗಿರಬಹುದು. ಆದರೆ ಕಲೆಯನ್ನು ಕೇವಲ ಸಂಖ್ಯಾಮಾಪನದಿಂದ ಅಳೆಯುವದು ಸರಿಯಲ್ಲ. ಹಿಮ್ಮೇಳ, ಅಭಿನಯ, ಮಾತುಗಾರಿಕೆ ಈ ಯಾವ ಅಂಗೋಪಾಂಗಗಳ ಕುರಿತೂ ಪೂರ್ವಭಾವಿ ವ್ಯಾಸಂಗ ಇಲ್ಲವೇ ಇಲ್ಲವೆನ್ನುವಷ್ಟರ ಮಟ್ಟಿಗೆ ಇಂದು ಈ ಕಲೆ ಶೂನ್ಯವಾಗತೊಡಗಿದೆ. ಭಾಗವತನಾದವನಿಗೆ ಪದ್ಯದ ಕಂಠಪಾಠವಿಲ್ಲದಿದ್ದರೆ ಅದರ ಸಾಹಿತ್ಯಾಂಶದ ಸ್ಫುಟತ್ವವಾಗಲಿ ರಾಗ–ತಾಳಗಳ ಖಚಿತತೆಯಾಗಲಿ ಅಸಾಧ್ಯ. ಹಿಂದಿನ ಕಾಲದ ಭಾಗವತರಿಗೆ ೪೦–೫೦ ಪ್ರಸಂಗಗಳ ಹಾಡುಗಳು ಕಂಠಪಾಠ

---

**ಎಳವೆಯಲ್ಲಿ 'ಕುಮಾರ ಮಹಾಬಲ' ಎಂದು ಜನಪ್ರಿಯವಾಗಿದ್ದ ಯಕ್ಷಗಾನ ಕಲಾವಿದ ಕೆರೆಮನೆ ಮಹಾಬಲ ಹೆಗಡೆ ಇಂದು 'ಯಕ್ಷಗಾನದ ಮಹಾಬಲ' ಎಂದೇ ಅನ್ವರ್ಥಕ ನಾಮ ಪಡೆದಿದ್ದಾರೆ. ನೃತ್ಯ, ಅಭಿನಯ ಹಾಗೂ ಮಾತುಗಾರಿಕೆಗಳ ಜೊತೆಗ್ಗೆ ಸಂಗೀತದಲ್ಲೂ ಅಪ್ರತಿಮರಾದ ಅವರು ಐದು ನೂರು ವರುಷಗಳ ಇತಿಹಾಸವಿರುವ ಈ ಜಾನಪದ ಕಲಾಪ್ರಕಾರದ ಪಾರಂಪರಿಕ ಪರಿಶುದ್ಧತೆಯನ್ನು ಕಾಯ್ದುಕೊಂಡು ಬಂದಿರುವ ಹಿರಿಯರಲ್ಲಿ ಪ್ರಮುಖರು. ದಶಾವತಾರದ ಆಖ್ಯಾನಗಳನ್ನಲ್ಲದೆ ಬೇರಾವ ಕಥಾನಕವೂ ಯಕ್ಷಗಾನಕ್ಕೆ ಹೊಂದುವದಿಲ್ಲವೆಂದು ನಂಬಿರುವ ಈ ಅರವತ್ತರ ಪಕ್ವ ಅನುಭವಿ ಈ ರಂಗದಲ್ಲಿ ಇಂದು ಆಗಿರುವ ಬದಲಾವಣೆಗಳ ಬಗೆಗೆ ತಮ್ಮ ಅಭಿಪ್ರಾಯ ನಿರೂಪಿಸಿದ್ದಾರೆ ಇಲ್ಲಿ......**

---

ವಿರುತ್ತಿದ್ದವು. ಆದರೆ ಇಂದಿನ ಬಹುತೇಕ ಭಾಗವತರು ಪ್ರಾರಂಭದ ಪ್ರಾರ್ಥನೆ ಪದ್ಯವನ್ನು ಕೂಡ ಪುಸ್ತಕ ನೋಡಿಕೊಂಡು ಹೇಳಬೇಕಾದ ಸ್ಥಿತಿಗೆ ಬಂದಿದ್ದಾರೆ. ಹಾಡಿನ ಸ್ಪಷ್ಟವಾದ ಉಚ್ಚಾರ ರಾಗ-ತಾಳಗಳ ಸರಿಯಾದ ಜ್ಞಾನ ಅವರಿಗಿಲ್ಲ. ಯಕ್ಷಗಾನ ವೇಷ-ಭೂಷಣಗಳು ಇಂದು ಚಿತ್ರ ವಿಚಿತ್ರವಾಗಿವೆ. ಕೆಲೆಂಡರುಗಳಲ್ಲಿ ಚಿತ್ರಿಸುವ ರಾಮ, ಕೃಷ್ಣ ಮೊದಲಾದವು ಇಂದು ಯಕ್ಷಗಾನ ವೇಷಗಳಾಗಿ ಬಿಟ್ಟಿವೆ. ಶ್ರೀ ಶಿವರಾಮ ಕಾರಂತರು ಹೇಳುವಂತೆ ಇಂದು ಕೆಲವು ಯಕ್ಷಗಾನ ಮಂಡಳಿಗಳಲ್ಲಿ ಸ್ತ್ರೀ ವೇಷಧಾರಿಗಳು ಸಮುಂಜಸವೆನ್ನಬಹುದಾದ ರೀತಿಯುಲ್ಲಿ ಬದಲಾವಣೆ ಮಾಡಿಕೊಂಡಿರುವದು ಕಾಣುತ್ತದೆ. ಆದರೆ ಹಿಂದಿದ್ದ ಅನೇಕ ವೇಷಗಳು ಇಂದು ಮರೆಯಾಗುತ್ತಲಿವೆ. ಉದಾಹರಣೆಗಾಗಿ ಸಾಂಪ್ರದಾಯಕವಾದ ದೈತ್ಯವೇಷ.

ಪ್ರ: ಸಮಾಜವೇ ಬದಲಾಗಿರುವಾಗ ಯಕ್ಷಗಾನ ಕಲೆ ಬದಲಾದರೆ ತಪ್ಪೇನು?

ಉ: ಯಾವ ಕಾಲದ ಸಮಾಜವೂ ತನ್ನ ಪರಂಪರಾಗತವಾದ ಕಲೆಯ ಮಾರ್ಗಬಿಟ್ಟು ಹೋಗಬೇಕೆಂದು ಹೇಳಿಕೊಂಡಿಲ್ಲ. ರಾಗಬಿಟ್ಟು ಪದ್ಯ ಹೇಳಬೇಕೆಂದು ಹೇಳಿಲ್ಲ. ಪ್ರಸಂಗವನ್ನು ಕಂಠಪಾಠ ಮಾಡಬಾರದು. ಪುಸ್ತಕ ನೋಡಿಕೊಂಡೇ ಹೇಳಬೇಕು. ಅಭಿನಯದ ಹೆಸರಿನಲ್ಲಿ ರಂಗಭೂಮಿಯ ಮೇಲೆ ಕಪಿಚೇಷ್ಟೆ ಮಾಡಬೇಕು ಎಂದು ನಿರ್ದೇಶಿಸಿಲ್ಲ. ನಮ್ಮಷ್ಟಕ್ಕೆ ನಾವೇ ಅವನ್ನೆಲ್ಲಾ ಮಾಡಿ ಸಮಾಜದ ಮುದ್ರೆಯನ್ನೊತ್ತುತ್ತಿದ್ದೇವೆ. ಇದು ಸರಿಯುಲ್ಲ. ಯಕ್ಷಗಾನದಲ್ಲಿ ಮಾರ್ಪಾಟು ಆಗಬಾರದೆಂದು ನಾನು ಹೇಳುತ್ತಿಲ್ಲ. ಆದರೆ ಸಂಪ್ರದಾಯದ ಚೌಕಟ್ಟಿನಲ್ಲಿ ಆಗಬೇಕು. ಕಲಾತ್ಮಕವಾದ ಮೌಲ್ಯವನ್ನು ಹೆಚ್ಚಿಸುವದು ಸುಧಾರಣೆ ಎನ್ನಿಸಿಕೊಳ್ಳುತ್ತದೆ.



## ಜೀವನ ಪರಿಚಯ

ಕೆರೆಮನೆ ಮಹಾಬಲ ಹೆಗಡೆಯುವರು ಉತ್ತರ ಕನ್ನಡಜಿಲ್ಲೆಯ ಹೊನ್ನಾವರ ತಾಲೂಕಿನ ಗುಣವಂತೆ ಗ್ರಾಮದವರು. ರಾಷ್ಟ್ರಪ್ರಶಸ್ತಿ ವಿಜೇತ ಕೆರೆಮನೆ ಶಿವರಾಮ ಹೆಗಡೆಯುವರ ಮೇಳದಲ್ಲಿ ಕುಮಾರನ ಪಾತ್ರ ಮಾಡುವ ಮೂಲಕ ಯಕ್ಷಗಾನ ರಂಗ ಪ್ರವೇಶಿಸಿದ ಹೆಗಡೆಯುವರಿಗೆ "ಕುಮಾರ ಮಹಾಬಲ" ಎಂಬ ಅನ್ವರ್ಥಕ ನಾಮವೂ ಉಂಟು. ಅವರು ಉತ್ತಮ ನಟರಾಗಿರುವುದರ ಜೊತೆಗೆ ಭಾಗವತರೂ ಹೌದು. ಶ್ರೀಪಾದರಾವ ಪಡುಕೋಣೆಯುವರಲ್ಲಿ ಹಿಂದುಸ್ತಾನಿ ಸಂಗೀತ ಅಭ್ಯಾಸ ಮಾಡಿದ್ದಾರೆ. ಹೆಗಡೆಯುವರ ಕಲಾಪ್ರತಿಭೆಗೆ ಪುರಸ್ಕಾರವಾಗಿ ರಾಜ್ಯಸರಕಾರ ಅವರಿಗೆ ಐದನೂರು ರೂಪಾಯಿಗಳ ಮಾಸಿಕ ಗೌರವಧನ ನೀಡುತ್ತಿದೆ. §

ಬೆಳ್ಳಿಯ ಕಿರೀಟ ಹಾಕಿಕೊಂಡ ಮಾತ್ರಕ್ಕೆ, ರಂಗಸ್ಥಳವನ್ನು ಬೆಳ್ಳಿಯಿಂದ ಅಲಂಕರಿಸಿದ ಮಾತ್ರಕ್ಕೆ, ಯಕ್ಷಗಾನ ಕಲೆಯು ಸುಧಾರಣೆ ಆಯಿತೆಂದು ಭಾವಿಸಿದರೆ ಅದು ತೀರಾ ಬಾಲಿಶವಾಗುತ್ತದೆ.

ಪ್ರ: ಇಂದು ಯಕ್ಷಗಾನದಲ್ಲಿ ಉತ್ತಮ ನಟರ ಸಂಖ್ಯೆ ಕಡಿಮೆಯಾಗುತ್ತಿರುವದಕ್ಕೆ ಕಾರಣ?

ಉ: ನಟರು ಮಾತ್ರವಲ್ಲ ಈ ಕಲೆಯ ಎಲ್ಲ ಅಂಗೋಪಾಂಗಗಳಲ್ಲಿ ಉತ್ತಮ ಕಸಬುದಾರರ ಸಂಖ್ಯೆ ಇಳಿಮುಖವಾಗಿದೆ. ಒಳ್ಳೆಯ ಮೃದಂಗಕಾರರು ಚಂಡೆವಾದಕರು ಭಾಗವತರು ಇಂದು ಬಹಳ ಕಡಿಮೆ. ಅಡಿಕೆತೋಟದಲ್ಲಿ ದೊಡ್ಡ ಮರದ ಮಧ್ಯೆ ಎಡಸಸಿ ಹಾಕುತ್ತಾರೆ. ದೊಡ್ಡ ಮರ ನಾಶವಾದ ಮೇಲೆ ಈ ಸಸಿ ಅದರ ಸ್ಥಾನ ತುಂಬಲಿ ಎಂಬ ಕಾರಣಕ್ಕಾಗಿ. ಆದರೆ ಇಂದು ಯಕ್ಷಗಾನದಲ್ಲಿ ಎಡಸಸಿಯಿಲ್ಲ. ಈ ವ್ಯವಸಾಯ ಮೊದಲಿಗಿಂತ ಹೆಚ್ಚು ಕಷ್ಟದಾಯಕವಾಗುತ್ತಿರುವುದೇ ಇದಕ್ಕೆ ಕಾರಣವೆಂದು ನನ್ನ ಅನಿಸಿಕೆ.

ಹಿಂದಿಗಿಂತ ಇಂದು ಯಕ್ಷಗಾನ ಕಲಾವಿದರಿಗೆ ಅಧಿಕ ಸಂಬಳ ದೊರೆಯುವುದೆಂಬುದು ನಿಜ. ಆದರೆ ಪ್ರತಿದಿನ ಕಾರ್ಯಕ್ರಮ. ದಿನಾಲೂ ನೂರಾರು ಮೈಲುಗಳ ಪ್ರವಾಸ. ಆಧುನಿಕ ಯುವಕರು ಇಷ್ಟೊಂದು ಕಷ್ಟ ಎದುರಿಸಲು ಬಯಸುವುದಿಲ್ಲವೆಂದು ನನ್ನ ಭಾವನೆ. ಬರಿ ಸಂಖ್ಯಾ ದೃಷ್ಟಿಯಿಂದಲೇ ನೋಡಿದರೆ ಇಂದು ಯಕ್ಷಗಾನ ನಟರ ಸಂಖ್ಯೆ ಮೊದಲಿಗಿಂತ ಹೆಚ್ಚಾಗಿದೆ. ಆದರೆ ಪ್ರಯೋಜನಕ್ಕೆ ಬರುವವರ ಸಂಖ್ಯೆ ಹೆಚ್ಚಿಲ್ಲ ಅಷ್ಟೇ. ಹಿಂದೆ ಯಕ್ಷಗಾನದಲ್ಲಿ ಶಾಸ್ತ್ರೀಯವಾಗಿ ತರಬೇತಿ ನೀಡುವ ಶಾಲೆಗಳಿರಲಿಲ್ಲ.

ಹಿರಿಯ ನಟರು ಬಿಡುವಿದ್ದಾಗ ತಮ್ಮ ಮನೆಯಲ್ಲೇ ನೃತ್ಯಾಭಿನಯ ಹಸ್ತಾಭಿನಯ ಮೊದಲಾದವುಗಳನ್ನು ಕಿರಿಯರಿಗೆ ಹೇಳಿಕೊಡುತ್ತಿದ್ದರು. ಅಂಥವರಲ್ಲಿ ಮೂಡಕಣಿ ನಾರಾಯಣ ಹೆಗಡೆಯವರೂ ಒಬ್ಬರು. ನಾನು ಅವರಲ್ಲಿಯೇ ಕೆಲಕಾಲ ಅಭ್ಯಾಸ ಮಾಡಿದ್ದೆ. ಮೊದಲೇ ಹೇಳಿದ ಹಾಗೆ ಹಿಂದಿನ ಜನರಿಗೆ ಕಲೆಯನ್ನು ಕಷ್ಟಪಟ್ಟಾದರೂ ಕಲಿಯಬೇಕೆಂಬ ಛಲವಿತ್ತು.

ಯಕ್ಷಗಾನ ಸಾಹಿತ್ಯಕ್ಕೆ ಐದುನೂರು ವರ್ಷಗಳ ಇತಿಹಾಸ ಉಂಟು. ಅಷ್ಟು ಹಿಂದಿನ ಯಕ್ಷಗಾನ ಪದ್ಯಗಳನ್ನು ಗಮನಿಸಿದರೂ ಒಂದೇ ಒಂದು ಪದ್ಯ ರಾಗತಾಳಗಳ ನಿರ್ದೇಶನವಿಲ್ಲದೆ ರಚಿತವಾದದ್ದು ಕಂಡುಬರುವುದಿಲ್ಲ. ಅಂದಿನ ಯಕ್ಷಗಾನ ಕವಿಗಳು ಈ ಕಲೆಯ ಬಗ್ಗೆ ಅಪಾರ ಜ್ಞಾನ ಹೊಂದಿದ್ದರೆಂಬುದು ಇದರಿಂದ ಖಚಿತವಾಗುತ್ತದೆ.

ಡಾ. ಶಿವರಾಮ ಕಾರಂತರು ಯಕ್ಷಗಾನದಲ್ಲಿ ೧೫೦ ಕ್ಕೂ ಹೆಚ್ಚು ರಾಗಗಳಿರುವುದನ್ನು ಗುರುತಿಸಿದ್ದಾರೆ. ೬೨ ರಾಗಗಳ ಶುದ್ಧ ಸ್ವರೂಪವನ್ನು ಕಲೆ ಹಾಕಿದ್ದಾರೆ. ಇದರಿಂದ ಬಹಳ ಹಿಂದೆಯೇ ಈ ಕಲೆಯಲ್ಲಿ ರಾಗ-ತಾಳಗಳ ಸಂಯೋಜನೆ ಇತ್ತೆಂಬುದು ಸಿದ್ಧವಾಗುತ್ತದೆ. ಆದರೆ ಬರಬರುತ್ತ ಅಭ್ಯಾಸ ಮಾಡುವ ಪ್ರವೃತ್ತಿ ಕಡಿಮೆಯಾಗಿ ಅನೇಕ ರಾಗ-ತಾಳಗಳು ನಶಿಸಿಹೋದವು. ಆದರೆ ಯಕ್ಷಗಾನದಲ್ಲಿ ಅಷ್ಟೊಂದು ರಾಗ-ತಾಳಗಳು ಹಿಂದಿಗೂ ಇರಲೇ ಇಲ್ಲವೆನ್ನುವ ಮಟ್ಟಕ್ಕೆ ನಾವಿಂದು ಬಂದಿದ್ದೇವೆ. ನಾನು ಚಿಕ್ಕಂದಿನಲ್ಲಿ ನೋಡಿದ್ದ ಅನೇಕ ನೃತ್ಯಪ್ರಕಾರಗಳು ವೇಷಭೂಷಣಗಳು ಕೂಡ ಇಂದು ನಷ್ಟವಾಗಿದೆ.

ಪ್ರ: ಡಾ। ಕಾರಂತರು ಪ್ರಯೋಗಿಸಿರುವ ಮೂಕ ಯಕ್ಷಗಾನದ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಉ: ಕಾರಂತರ ಈ ಪ್ರಯೋಗ ಯಶಸ್ವಿಯಾಗಿಲ್ಲ ಎಂಬ ಸಾಮಾನ್ಯ ಅಭಿಪ್ರಾಯವಿದೆ. ಆದರೆ ಯಶಸ್ವಿಯಾಗಲಾರದಷ್ಟು ಅಸಂಬದ್ಧ ಮಾರ್ಗ ಎಂದು ನನಗೆ ಅನ್ನಿಸುವುದಿಲ್ಲ. ಯೋಗ್ಯರಾದ ನಟರು ಸಿಕ್ಕಿದರೆ ಯಕ್ಷಗಾನವನ್ನು ಮಾತಿಲ್ಲದೆಯೂ ಪರಿಣಾಮಕಾರಿಯಾಗಿ ಪ್ರಭಾವಶಾಲಿಯಾಗಿ ಪ್ರದರ್ಶಿಸಲು ಸಾಧ್ಯ. ನಾನು ಕೆಲವರ್ಷಗಳ ಹಿಂದೆ ವಿದೇಶಕ್ಕೆ ಹೋದಾಗ ಅಲ್ಲಿ ಯಕ್ಷಗಾನ ಕಾರ್ಯಕ್ರಮವನ್ನು ಒಂದು ತಾಸಿಗೆ ಸೀಮಿತಗೊಳಿಸಲಾಗಿತ್ತು. ಇಡೀ ಕಾರ್ಯಕ್ರಮದಲ್ಲಿ ನಾಲ್ಕೈದು ವಾಕ್ಯ ಮಾತ್ರ ಮಾತಿತ್ತು. ಕಾರ್ಯಕ್ರಮ ಎಲ್ಲರಿಂದಲೂ ತುಂಬಾ ಮೆಚ್ಚುಗೆ ಪಡೆಯಿತು. ಈ ನಾಲ್ಕೈದು ವಾಕ್ಯಗಳು ಇರದೇ ಇದ್ದರೂ ತೊಂದರೆಯಾಗುತ್ತಿರಲಿಲ್ಲವೆಂಬ ಅನುಭವ ನನಗೆ ಆಗ ಆಯಿತು. ಒಂದು ದೃಷ್ಟಿಯಿಂದ ನೋಡಿದರೆ ಯಕ್ಷಗಾನ ಕಲೆ ದೇಶವ್ಯಾಪಿಯಾಗದಿರುವದಕ್ಕೆ ಅದರಲ್ಲಿರುವ ಮಾತುಗಾರಿಕೆಯೇ ಕಾರಣ ಎಂದರೆ ತಪ್ಪಾಗಲಿಕ್ಕಿಲ್ಲ. ಪರಭಾಷಾ ಪ್ರದೇಶವೊಂದರಲ್ಲಿ ಯಕ್ಷಗಾನ ಕಾರ್ಯಕ್ರಮ ನಡೆದಾಗ ಪಾತ್ರಗಳು ಸಂಭಾಷಣೆಯಲ್ಲಿ ತೊಡಗಿದಷ್ಟು ಸಮಯದಲ್ಲಿ ಪ್ರೇಕ್ಷಕರು ಯಾವ ಸಂವೇದನೆಗೂ ಒಳಗಾಗದೇ ನಿರ್ಜೀವಿಗಳಂತೆ ಕುಳಿತಿರುತ್ತಾರೆ. ಅವರಿಗೆ ತುಂಬಾ ಬೇಸರ ಬರುವದು ಸಹಜ. ಆದರೆ ಗಾನ, ನೃತ್ಯ ಹಾಗು ಅಭಿನಯದ ಕಾಲಕ್ಕೆ ಈ ಸಮಸ್ಯೆ ತಲೆದೋರುವದಿಲ್ಲ. ವೇಷಭೂಷಣಗಳು ಆಕರ್ಷಕವಾಗಿರುವುದರಿಂದ ಅವು ಪ್ರೇಕ್ಷಕರ ಮೇಲೆ ಪರಿಣಾಮ ಬೀರುತ್ತವೆ. ಆದಕಾರಣ ಪರಭಾಷಾ ಪ್ರದೇಶಗಳಲ್ಲಿ ಯಕ್ಷಗಾನವನ್ನು ಪ್ರದರ್ಶಿಸುವಾಗ ಮಾತನ್ನು ಕೈಬಿಡುವುದು ಸರಿಯೆಂದು ನನ್ನ ಅಭಿಪ್ರಾಯ. ನಿಜ ಹೇಳಬೇಕೆಂದರೆ ಪರಭಾಷಾ ಪ್ರದೇಶದಲ್ಲಿ ಮಾತ್ರವಲ್ಲ. ಕರ್ನಾಟಕದಲ್ಲಿ ಕೂಡ ದಕ್ಷಿಣೋತ್ತರ ಕನ್ನಡ ಜಿಲ್ಲೆ, ಶಿವಮೊಗ್ಗ ಜಿಲ್ಲೆಯ ಕೆಲಭಾಗವನ್ನು ಬಿಟ್ಟರೆ ಇತರ ಜಿಲ್ಲೆಗಳಲ್ಲಿ ಯಕ್ಷಗಾನ ಹೇಳಿಕೊಳ್ಳುವಷ್ಟು ಜನಪ್ರಿಯವಾಗಿಲ್ಲ. ಈ ಜಿಲ್ಲೆಗಳಲ್ಲಿ ಯಕ್ಷಗಾನ ಕಾರ್ಯಕ್ರಮ ಏರ್ಪಟ್ಟರೆ ಬರುವ ಪ್ರೇಕ್ಷಕರಲ್ಲಿ ಬಹುಪಾಲು ದಕ್ಷಿಣೋತ್ತರ ಕನ್ನಡ ಜಿಲ್ಲೆಯವರಾಗಿರುತ್ತಾರೆ. ಇದಕ್ಕೆ ಹಲವು ಕಾರಣಗಳಿವೆ. ಸಮಯದ ಮಿತಿಯಿಲ್ಲದೇ ಕಾರ್ಯಕ್ರಮ ನಡೆಯುವುದು ಮುಖ್ಯ ಕಾರಣ. ಯಕ್ಷಗಾನವನ್ನು ಕಾಲದ ಮಿತಿಗೊಳಪಡಿಸಿ ರಾಗ-ತಾಳಗಳನ್ನು ಪರಿಷ್ಕರಿಸಿ ಶ್ರವಣಯೋಗ್ಯವಾದ ಗಾನ ಪದ್ಧತಿಯನ್ನು ರೂಪಿಸಿ, ಆಕರ್ಷಕ ನೃತ್ಯಪದ್ಧತಿಯನ್ನು ಅಳವಡಿಸಿ ಪ್ರದರ್ಶಿಸಿದರೆ ನಾಡಿನ ಹಾಗೂ ಹೊರನಾಡಿನ ಯಾವುದೇ ಭಾಗಗಳ ಪ್ರೇಕ್ಷಕರನ್ನು ಅದು ಮೆಚ್ಚಿಸುವುದರಲ್ಲಿ ಸಂದೇಹವಿಲ್ಲ.



ಭೀಷ್ಮನ ಪಾತ್ರ

ಪ್ರ: ಉತ್ತಮ ನಟನಾಗಲು ಬೇಕಾದ ಅಂಶಗಳಾವವು?

ಉ: ' ಮೈಕಟ್ಟು ಸುಂದರ

ಹೊಂದ ಮುಖ, ಕಣ್ಣು, ಮಧುರವಾದ ಕಂಠ ಇರಬೇಕು. ಲಯ-ತಾಳಗಳ ಪರಿಕಲ್ಪನೆ, ಸಾಹಿತ್ಯದ ವ್ಯಾಸಂಗ, ಶಬ್ದಗಳ ಸ್ಪಷ್ಟ ಉಚ್ಚರಣೆ, ಶಬ್ದಾರ್ಥದ ಅರಿವು ಅತ್ಯಗತ್ಯ. ಯಕ್ಷಗಾನದ ಅತಿಮುಖ್ಯ ಅಂಗವಾದ ಹಿಮ್ಮೇಳದ ಬಗ್ಗೆ ಕೂಡ ನಟನಾದವನಿಗೆ ಪರಿಣತಿಯಿಲ್ಲದಿದ್ದರೂ ಪರಿಜ್ಞಾನ ಇರಲೇಬೇಕು. ಏಕೆಂದರೆ ಮೃದಂಗದಲ್ಲಿ ಏನನ್ನು ನುಡಿಸಲಾಗುತ್ತಿದೆ, ಭಾಗವತ ಯಾವ ರಾಗವನ್ನು ಹಾಡುತ್ತಾನೆ, ಯಾವ ತಾಳ ಬಾರಿಸುತ್ತಾನೆ ಅದಕ್ಕನುಗುಣವಾಗಿ ಹೇಗೆ ಅಭಿನಯಿಸಬೇಕು, ಹೇಗೆ ನರ್ತಿಸಬೇಕು ಎಂಬುದನ್ನು ಪಾತ್ರಧಾರಿ ಅರಿತಿರದಿದ್ದರೆ ಆತ ತಾನು ಮಾಡಿರುವ ಪಾತ್ರವನ್ನು ಯಶಸ್ವಿಗೊಳಿಸುವಲ್ಲಿ ವಿಫಲನಾಗುತ್ತಾನೆ. ಹಿಮ್ಮೇಳದ ಜೋದನೆ ಪ್ರೇರಣೆಯ ಪ್ರಮಾಣಕ್ಕೂ ನಟನ ಕಲಾಭಿವ್ಯಕ್ತಿಗೂ ನಿಕಟವಾದ ಸಂಬಂಧವಿದೆ. ಆದಕ್ಕಾಗಿಯೇ ಯಕ್ಷಗಾನ ಮಂಡಳಿಗೆ 'ಮೇಳ' ಎಂದು ಕರೆಯಲಾಗುತ್ತಿದೆ. ಮೇಳ ಎಂದರೆ ಎಲ್ಲರೂ ಒಂದಾಗಿರುವದು. ಯಾರು ಏನು ಮಾಡುತ್ತಾರೆ ಎಂಬುದರ ಅರಿವು ಎಲ್ಲರಿಗೂ ಇರುವುದು ಎಂದರ್ಥ. ಕೆಲವೊಮ್ಮೆ ಉತ್ತಮ ನಟನಾಗಿದ್ದರೂ ಹಿಮ್ಮೇಳ ಸರಿಯಾಗಿ ಇರದಿದ್ದರೆ ಅಥವಾ ಸಹಕರಿಸದಿದ್ದರೆ ಆತ ಪ್ರೇಕ್ಷಕರ ದೂಷಣೆಗೊಳಗಾಗಬೇಕಾಗುತ್ತದೆ.

ಪ್ರ: ಯಕ್ಷಗಾನದಲ್ಲಿ ಸ್ತ್ರೀಪಾತ್ರಕ್ಕೆ ಸ್ತ್ರೀಯರನ್ನೇ ಏಕೆ ಆಯ್ಕೆಮಾಡಿಕೊಳ್ಳಬಾರದು? ಇತರ ಪಾತ್ರಗಳನ್ನು ಕೂಡ ಸ್ತ್ರೀಯರು ನಿಭಾಯಿಸಬಹುದಲ್ಲವೆ? ಹಿಮ್ಮೇಳದಲ್ಲೂ ಅವರಿಗೆ ಅವಕಾಶ ನೀಡಬಹುದಲ್ಲ.

ಉ : ಸ್ತ್ರೀಯರು ಯಕ್ಷಗಾನರಂಗ ಪ್ರವೇಶಿಸಬಾರದೆಂಬ ಶಾಸನವೇನೂ ಇಲ್ಲ. ಅವರು ಪ್ರವೇಶ ಮಾಡಿದರೆ ಈ ಕಲೆ ನಿರ್ನಾಮವಾಗುವುದೆಂದಾಗಲೀ ಅಥವಾ ಮೈಲಿಗೆಯಾಗುವುದೆಂಬುದೆಂದಾಗಲೀ ಯಾರೂ ಭಾವಿಸಿಕೊಂಡಿಲ್ಲ. ಹೆಣ್ಣುಮಕ್ಕಳೇ ಮುಂದಾಗಿ ಬಾರದಿದ್ರೆ ಯಾರೇನು ಮಾಡಬೇಕು? ಸ್ತ್ರೀಯರು ಈ ಕಲೆಯಲ್ಲಿ ಪ್ರವೇಶಮಾಡದಿದ್ದುದಕ್ಕೆ ಅದರ ವ್ಯವಸ್ಥೆಯೇ ಕಾರಣವೆಂದು ನನ್ನ ಅನಿಸಿಕೆ. ರಾತ್ರಿಯಿಡೀ ನಿದ್ದೆಗೆಡಬೇಕು. ಪ್ರತಿದಿನವೂ ಕುಣಿದು ಕಾಲು ನೋಯಿಸಿಕೊಳ್ಳಬೇಕು. ನೂರಾರು ಮೈಲಿ ಪ್ರವಾಸಮಾಡಬೇಕು. ಇಷ್ಟೊಂದು ಕಷ್ಟಸಹಿಸಿಕೊಳ್ಳಲು ಯಾವ ಹೆಣ್ಣುಮಕ್ಕಳು ಸಿದ್ಧರಾದಾರು? ಅಲ್ಲದೆ ಕಷ್ಟಸಹಿಸಿಕೊಳ್ಳುವ ಸಾಮರ್ಥ್ಯ ಅವರಲ್ಲಿರುವುದೂ ಇಲ್ಲ. ಅಷ್ಟೇ ಅಲ್ಲ, ಹೆಣ್ಣುಮಕ್ಕಳಾದ ಮಾತ್ರಕ್ಕೆ ಸ್ತ್ರೀಪಾತ್ರವನ್ನು ಚೆನ್ನಾಗಿ ಮಾಡುತ್ತಾರೆಂದು ಭಾವಿಸುವುದು ತಪ್ಪು.

ಪ್ರ: ನೀವು ಯಕ್ಷಗಾನ ತರಬೇತಿ ಶಾಲೆಯನ್ನು ತೆರೆಯುವ ಯೋಚನೆ ಹೊಂದಿದ್ದೀರಾ? ಅಥವಾ ಸರಕಾರವಾದರೂ ಇದಕ್ಕೆ ಮುಂದಾಗಬೇಕೆಂದು ಭಾವಿಸುವಿರಾ?

ಉ : ನಾನೆಂತೂ ಆ ಬಗ್ಗೆ ಯೋಚಿಸಿಲ್ಲ. ಸರಕಾರ ಮಾಡುವುದೂ ಸುಲಭವಲ್ಲ. ಶಾಲೆ ತೆರೆಯಲು ಯಾರಾದರೂ ಮುಂದೆ ಬಂದರೆ ಸಹಾಯಧನ ನೀಡಬಹುದಷ್ಟೇ. ಆದರ ಸರಕಾರದಿಂದ ಸಹಾಯಧನ ಪಡೆಯುವ ಉದ್ದೇಶದಿಂದಲೇ ಯಾರಾದರೂ ತರಬೇತಿ ಶಾಲೆ ತೆರದರೆ ಅದರಿಂದ ಯಕ್ಷಗಾನಕ್ಕೆ ಒಳ್ಳೆಯದಾಗುವ ಬದಲು ಇನ್ನಷ್ಟು ಕೆಡಕಾಗಬಹುದು. ಏಕೆಂದರೆ ತರಬೇತಿ ಶಾಲೆಯೆಂದರೆ ಅದಕ್ಕೆ ಯೋಗ್ಯ ತರಬೇತಿದಾರರು ಬೇಕು, ಯಕ್ಷಗಾನದ ಎಲ್ಲ ಅಂಗೋಪಾಂಗಗಳ ಬಗೆಗೂ ತರಬೇತಿ ನೀಡುವಂತಿರಬೇಕು. ಕನಿಷ್ಠ ಎರಡುವರ್ಷದ ತರಬೇತಿ ಅಗತ್ಯ.

ಪ್ರ: ಇನ್ನೆಷ್ಟು ವರ್ಷ ನೀವು ಪಾತ್ರ ಮಾಡಬಲ್ಲಿರಿ? ನಿಮ್ಮ ಕಲಾಬದುಕಿನಲ್ಲಿ ನಿಮಗೆ ತೃಪ್ತಿ ತಂದಪಾತ್ರಗಳು ಯಾವವು?

ಉ : ನನಗೀಗ ೬೦ ವರ್ಷವಾಗಿದೆ. ಮೊದಲಿನಂತೆ ಕುಣಿಯಲು ಆಗುತ್ತಿಲ್ಲ. ಆದರೆ ಕಲಾಭಿಮಾನಿಗಳು ಬಿಡುತ್ತಿಲ್ಲ. ಕಾರ್ಯಕ್ರಮದ ಸಂಖ್ಯೆಯನ್ನು ಕಡಿಮೆ ಮಾಡಿದ್ದೇನೆ. ನನ್ನ ಅನುಕೂಲಕ್ಕನುಗುಣವಾಗಿ ಕಾರ್ಯಕ್ರಮ ಏರ್ಪಟ್ಟರೆ ಇನ್ನೂ ಕೆಲವರ್ಷ ರಂಗದಲ್ಲಿ ಇರಬಹುದೆಂಬ ಭರವಸೆಯಿದೆ.

ನಾನು ಪೌರಾಣಿಕ ಕಥಾವಸ್ತುವಿನ ಯಕ್ಷಗಾನದ ಎಲ್ಲಾ ಪ್ರಸಂಗಗಳ ಎಲ್ಲಾ ಪಾತ್ರ ಮಾಡಿದ್ದೇನೆ. ಸುಧನ್ವ, ಕೃಷ್ಣ, ದುಷ್ಟಬುದ್ಧಿ, ಶಲ್ಯ, ಅಶ್ವತ್ಥಾಮ, ಜಮದಗ್ನಿ, ರಾಮ, ಭೀಷ್ಮ ಪರ್ವದ ಭೀಷ್ಮ ಮೊದಲಾದವುಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಮಾಡಿದ್ದೇನೆ. ಒಂದೊಂದುಸಂದರ್ಭದಲ್ಲಿ ಒಂದೊಂದು ಪಾತ್ರ ತೃಪ್ತಿ ನೀಡಿದೆ. ●



ಮಧ್ಯರಾತ್ರಿಯ ನೀರವ ವಾತಾವರಣವನ್ನು ಸೀಳಿ, ದಾಪುಗಾಲುಹಾಕುತ್ತ ಸಾಗಿದ್ದ ಆನಂದನ ಎದೆ ಹೊತ್ತಿ ಉರಿಯತೊಡಗಿತ್ತು. ಅಂತರಂಗದ ಜ್ವಾಲಾಮುಖಿ ಉಮ್ಮಳಿಸಿ ಕತಕತನೆ ಕುದಿಯತೊಡಗಿತ್ತು. ಈ ಹೇಯ ಜಗತ್ತಿನ ಹೇಸಿ ಜನಗಳ ಕಣ್ಣುಗುಡ್ಡೆಗಳಲ್ಲಿ ಕಚಪಚನೆ ಟಾಚಣಿ ಚುಚ್ಚಬೇಕೆನ್ನಿಸಿತು ಅವನಿಗೆ. ನುಂಗಿದ ಅವಮಾನದ ಕರಗಸ, ಅವನ ಕರಳನ್ನು ಕತ್ತರಿಸುತ್ತ ಸಾಗಿತ್ತು. ಅಲ್ಲೊಂದು ಇಲ್ಲೊಂದು ಹತ್ತಿ ಉರಿಯುತ್ತಿದ್ದ ಬೀದಿದೀಪದ ಮಂದ ಬೆಳಕಿನಲ್ಲಿ ಮಾನಿನಿಯ ಸೀರೆ ಸೆಳೆದು ಬೆತ್ತಲೆ ಎಸೆದಂತೆ ತಾರ್ ರಸ್ತೆ ಅಂಗಾತ ಬಿದ್ದಿತ್ತು.

ಆನಂದನ ಮೈಯಲ್ಲಿ ಎಚ್ಚರವೇ ಇರಲಿಲ್ಲ. ನಿಷ್ಪ್ರಾಣಂತ ಕಾಲುಗಳು ಅವನನ್ನು ಎಳೆದುಕೊಂಡು ಮನೆಗೆ ತಂದು ಮುಟ್ಟಿಸಿದವು. ಕೈಗಳು ತಂತಾನೆ ಬಾಗಿಲುತಟ್ಟಿದವು.

ಗಂಡನ ದಾರಿಯನ್ನೇ ಕಾಯುತ್ತ ಕುಳಿತ್ತಿದ್ದ ಸಂಧ್ಯಾ ಓಡಿಹೋಗಿ ಬಾಗಿಲನ್ನು ಪರನೆ ಹರಿಯುತ್ತ ಕುಸಿದುಕುಳಿತ. ಸಂಧ್ಯಾ ಮಧ್ಯಪ್ರವೇಶಿಸಿ ಅವುಗಳನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದ್ದೂ ವಿಫಲವಾಯಿತು. ಅವಳ ಕಂಗಳ ಅಂಚಿನಲ್ಲಿ ನೀರು ಒತ್ತರಿಸಿನಿಂತವು.

"ಇವತ್ತ ಏನಾಗೇದ ನಿಮಗ? ಹಿಂಗ್ಯಾಕ ಮಾಡ್ತೀರಿ, ನಿಮ್ಮಕಲಾಸೃಷ್ಟಿ; ನಿಮ್ಮ ಪ್ರಾಣ ಅವು, ಅವ್ನ ಯಾಕ ಹರದ ಹಾಕೀರ್ರಿ ಹೇಳ್ರೀ..." ಎನ್ನುತ್ತ ಅವನ ಮುಂಗುರುಳು ನೇವರಿಸುತ್ತ ಕೇಳಿದಳು.

"ಇಲ್ಲ ಸಂಧ್ಯಾ, ನಾ ಇನ್ನ ಕಲಾವಿದ ಅಲ್ಲ ಹೊಟ್ಟೆಪಾಡಿಗೆ ಬದುಕಬೇಕಾದ ಪಶು-ಅಷ್ಟs..."

"ಆನಂದ! ನಾ ನಿಮ್ಮ ಹೆಂಡತಿ, ಅರ್ಧಾಂಗಿ-ನಿಮ್ಮ ದುಃಖದೊಳಗ ನನ್ಗೂ ಪಾಲು ಅದs ನನ್ನ ಆಣಿ ಆದ-ಕಿರಣನ ಆಣಿ ಆದ ಹೇಳ್ರಿ ಏನಾಯಿತು.?–" ಎಂದು ಸಂಧ್ಯಾ ಮುಖಕೆಳಗೆ ಹಾಕಿ ಸೆರಗಿನ ಅಂಚನ್ನು ಬಾಯಲ್ಲಿರಿಸಿಕೊಳ್ಳುತ್ತ ಅಳಹತ್ತಿದಳು.

ಅವನ ಕುಂಚಸ್ಪರ್ಶದಿಂದ ಜಾಹೀರಾತುಗಳು ಜೀವಕಳೆ ತುಂಬಿ ನಳನಳಿಸತೊಡಗಿದವು. ಕಂಪನಿಯ ಮುಂದೆ ಜಾಹೀರಾತುದಾರರ ಸಾಲು ನಿಂತಿತು.

'ರಂಜನಾ' ಜಾಹೀರಾತು ಕಂಪನಿಯ ನಿರ್ದೇಶಕರಾದ ಶಾಮಣ್ಣನವರಿಗಾದ ಆನಂದ ಅಚ್ಚುಮೆಚ್ಚು. ಆನಂದನ ಬಗೆಗೆ ಅವರ ಅಭಿಮಾನ ತುಂಬಿ ತುಳುಕಿತು.

ಆದರೆ ಕರುಬುವ ಕಿಲುಬುಮನಗಳಿಗೇನು ಕೊರತೆ ಇಲ್ಲ. ಆನಂದನ ಕೈಕೆಳಗೆ ಕೆಲಸ ಮಾಡುವ ಸಹಾಯಕ ಕಲಾವಿದ ಕರುಪ್ಪ

# ರಾಜೀನಾಮೆ

## ಡಾ| ಶ್ರೀನಿವಾಸ ಕುಲಕರ್ಣಿ

ಸ್ವಾಮಿ ಕಸವಿಸಿಗೊಂಡಿದ್ದ. ಗೊಮ್ಮಟನ ಮುಂದೆ ಅವನು ಕರಿ ಇರುವೆಯಾಗಿದ್ದರೂ, ಆನಂದನನ್ನು ಆ ಜಾಗದಿಂದ ಇಳಿಸಿ, ತಾನು ಆ ಪಟ್ಟವೇರಬೇಕೆಂಬ ಹೀನ ಪಿಪಾಸೆ ಅವನದು.

ಅಂದಿನ ಘಟನೆ—

ಪ್ರಸಿದ್ಧ ವ್ಯಾಪಾರಿ ಕಾಂತಿಲಾಲ, ಆನಂದನ ಕೋಣೆಯೊಳಗೆ ನಡೆದಾಗ, ಕರುಪ್ಪಸ್ವಾಮಿ ಕೆಟ್ಟಗಣ್ಣು ಬೀರಿ, ಮೆಲ್ಲಗೆ ಅವನ ಹಿಂದೆಯೇ ಹೋಗಿ, ಬಾಗಿಲು ಮರೆಯಲ್ಲಿ ಅವಿತು, ಸಂದಿಯೊಳಗಿಂದ ಏನು ನಡೆಯುತ್ತದೆ ಎಂದು ನೋಡತೊಡಗಿದ.

ಆನಂದ ಆತ್ಮೀಯ ಸ್ವಾಗತ ನೀಡಿ, ಕಾಂತಿಲಾಲನನ್ನು ಒಳ ಮಾಡಿಕೊಂಡು, ತನ್ನ ಎದುರಿಗಿದ್ದ ಖುರ್ಚಿಯ ಮೇಲೆ ಕೂಡಿಸಿದ,

ಕಾಂತಿಲಾಲ ನಸುನಗೆ ಬೀರುತ್ತ—

"ಆನಂದರಾವ್, ನಿಮ್ಮ ಕೈಯಾಗ ಸ್ವತಃ ಕಲಾಸರಸ್ವತಿ ಇದ್ದಾಳ ನೋಡ್ರಿ. ನೀವು ತಗದ ನಮ್ಮ ಅಂಗಡಿ ಜಾಹೀರಾತು ಚಿತ್ರ ನಮ್ಮ ವ್ಯಾಪಾರನ್ನ ನಾಲ್ಕು ಪಟ್ಟು ಹೆಚ್ಚುಸ್ತು..." ಎಂದ.

"ಏನೋ ನಿಮ್ಮ ಅಭಿಮಾನ ಹಂಗ ಆಡಸ್ತದ..." ಎಂದ ಆನಂದ.

ತೆರೆದಳು. ವಿವರ್ಣಗೊಂಡ ಆನಂದನ ಮುಖ ನೋಡಿ ಗಾಬರಿಗೊಂಡಳು.

"ಯಾಕ ಏನಾತು? ಹಿಂಗ್ಯಾಕ ಇದ್ದೀರಿ ಮೈಯಾಗ ಆರಾಮ ಅದನೋ ಇಲ್ಲೊ?" ಒಂದೇ ಉಸಿರಿನಲ್ಲಿ ವಿಚಾರಿಸುತ್ತ ಗಂಡನ ಮೈದಡವಿದಳು. ಆನಂದನ ಮೈ ಕೆಂಡವಾಗಿತ್ತು.

"ಅಯ್ಯೋದೇವ್ರ ಏನಾಗೇದ ಹೇಳ್ರಿ ನಿಮಗ ಅಂದ್ರ" – ಎನ್ನುತ್ತ ಆನಂದನನ್ನು ಅಲ್ಲಿಯೇ ಇದ್ದ ಆರಾಮ ಖುರ್ಚಿಯ ಮೇಲೆ ಕೂಡಿಸುತ್ತ ಕೇಳಿದಳು.

ಆನಂದ ಖುರ್ಚಿಯಲ್ಲಿ ಕುಸಿದ. ಕಣ್ಣರಳಿಸಿ ಗೋಡೆಯತ್ತ ನೋಡಿದ. ಗೋಡೆಗೆ ತೂಗುಬಿಟ್ಟ ಅವನ ತೈಲವರ್ಣದ ಚಿತ್ರಗಳು–"ನೀನು ಸ್ವಾಭಿಮಾನಿ ಕಲಾವಿದನೆ, ಥೂ ಹೇಡಿ!......" ಎಂದು ಹಂಗಿಸುತ್ತ ಅವನ ಕಣ್ಣ ಮುಂದೆ ಕೊಳ್ಳಿದೆವ್ವಗಳಾಗಿ ಕುಣಿಯತೊಡಗಿದವು.

ಆನಂದನ ಕಣ್ಣುಗಳು ಕಿಡಿಕಾರಿದವು. ಸರ್ರನೆ ಅವುಗಳತ್ತ ಸಾಗಿ, ಎರಡೂ ಕೈಗಳಿಂದ ಪರ

ಆನಂದ ಮೆಲ್ಲನೆ ಅವಳತ್ತ ಬಾಗಿ ಗಟ್ಟಿಯಾಗಿ ತಬ್ಬಿಕೊಂಡು ಚಿಕ್ಕ ಮಕ್ಕಳಂತೆ ಅತ್ತುಬಿಟ್ಟ. ಮನಹಗುರವಾಯಿತು. ಸಂಧ್ಯಾಳ ಗದ್ದ ಹಿಡಿದೆತ್ತಿ, ಅವಳ ಮುಖದಲ್ಲಿ ಅಡಗಿದ್ದ ಕಂಗಳಲ್ಲಿ ಇಣುಕಿ ನೋಡಿದ.

●

ಆನಂದ ನಗರದ ಅತಿ ದೊಡ್ಡ 'ರಂಜನಾ' ಜಾಹೀರಾತು ಕಂಪನಿಯಲ್ಲಿ ಮುಖ್ಯ ಕಲಾವಿದನಾಗಿದ್ದ. ಜಾಹೀರಾತಿನಂಥ ವ್ಯಾಪಾರಿ ಕಲೆಯಲ್ಲೂ ತನ್ನ ಸ್ವಂತಿಕೆಯನ್ನು ಬೆಳೆಸಿದ್ದ.

**ಕಲಾವಿದ ಆನಂದನ ಕಲೆಯನ್ನು ನಿರ್ದೇಶಕ ಶ್ಯಾಮಣ್ಣ ಮೆಚ್ಚಿಕೊಂಡಿದ್ದರು. ಆನಂದನ ನಿಸ್ಪೃಹತೆ ಅವರಿಗೆ ಅಭಿಮಾನ ಹೆಚ್ಚಿಸಿತ್ತು. ಆದರೆ ಎಲ್ಲೆಡೆ ಕರುಬುವಜನವಿರುವದು ಸಹಜ. ಅಂತಹರ ಒಳಸಂಚಿಗೆ ಆನಂದ ಬಲಿಯಾದ—ಇಂತಹ ಕಥೆ ಅನೇಕ ಕಚೇರಿ ಆಫೀಸುಗಳಲ್ಲಿ ಎಂದೆಂದಿಗೂ ನಡೆಯುತ್ತಿರುತ್ತದೆ.**

ಕಾಂತಿಲಾಲ, ಸ್ವಲ್ಪ ಆಳಕುತ್ತಲೇ, ಮುಖ-ದಲ್ಲಿ ನಗೆ ತಂದು ಕೊಳ್ಳುತ್ತ, ಒಂದು ಕವರನ್ನು ಮುಂದೆಚಾಚುತ್ತ-

"ಆನಂದರಾವ, ಒಂದು ಮಾತು ನೀವು ಬ್ಯಾಡ ಅನಬಾರದ್ದು ಇದು ನಮ್ಮ ಕ್ಷಾಣಿಕ ಪ್ರೀತಿಯಿಂದ ಕೊಟ್ಟೇವಿ ತಗೋಬೇಕು..."

"ಏನದು?"

"ಐದುನೂರು ರೂಪಾಯಿ"

"ನೋಡ್ರಿ ಕಾಂತಿಲಾಲ್, ನಾನು ಈ ಕಂಪನಿ ಕಲಾವಿದ, ನನಗ ಕಂಪನಿ ಪಗಾರ ಕೊಡ್ತದ ನೀವು ಏನು ಕೊಡೋದಿದ್ದರ ನಮ್ಮ ಡೈರೆಕ್ಟರ ಅವರಿಗೆ ಕೊಡ್ರಿ."

ಎಂದು ಖಡಾಖಂಡಿತವಾಗಿ ಹೇಳಿಕಳುಹಿಸಿದ.

ಈ ಘಟನೆಯನ್ನು ಅರಿಸಿದ ಶಾಮಣ್ಣನವರ ಮೈ ಉಬ್ಬಿ ಹೋಯಿತು. ಆನಂದನ ಬಗೆಗಿದ್ದ ಅಭಿಮಾನ ನೂರ್ಮಡಿಸಿತು. ತಮ್ಮ ಕೋಣೆಗೆ ಅವನನ್ನು ಕರೆಯಿಸಿ ಮೆಚ್ಚುಗೆ ಸೂಚಿಸಿ, ಅಭಿನಂದಿಸಿದರು.

ಆದರೆ ಕುರುಪ್ಪಸ್ವಾಮಿಯ ಕುರುಚಲಮನ, ಈ ಘಟನೆಗೆ ವಿಕೃತರೂಪನೀಡಿತು. ಡಾಬಿನಲ್ಲಿ ಅದ್ದಿ ತೆಗೆದಿದ್ದ ಅವನ ಮುಖ, ಮನ ಎರಡು ಡಾಂಬರ್...

ದಿನಗಳು ಉರುಳಿದವು ಮುಂಬಯಿಯಲ್ಲಿದ್ದ ರಾಜನಾಜಾಹೀರಾತ ಕಂಪನಿಯ ಹೆಡ್ ಆಫೀಸಿಗೆ, ಆನಂದನ ವಿರುದ್ಧದ ಮೂಕರ್ಜಿಗಳು, ಆರೋಪಗಳ ಸರಮಾಲೆಗಳು ತಲುಪಿದವು ಜನರಲ್ ಮ್ಯಾನೇಜರ್ ದೇಶಪಾಂಡೆ ಅಸಮಾಧಾನಗೊಂಡರು,

ಪರಿಸ್ಥಿತಿಯನ್ನು ತಾವೇ ಸ್ವತಃ ಅಧ್ಯಯನ ಮಾಡಲು ನಿರ್ಧರಿಸಿ, ತಮ್ಮ ಆಪ್ತ ಕಾರ್ಯದರ್ಶಿಯೊಂದಿಗೆ ಹುಬ್ಬಳ್ಳಿಗೆ ಭೇಟಿ ನೀಡುವ ಸಂದೇಶವನ್ನು ಶ್ಯಾಮಣ್ಣನವರಿಗೆ ಕಳುಹಿಸಿದರು.

ಸಂದೇಶ ತಲುಪುತ್ತಲೇ, ಶ್ಯಾಮಣ್ಣನವರು ಆನಂದನನ್ನು ಕರೆಯಿಸಿ- "ನೋಡ್ರಿ ಆನಂದ, ಜಿ. ಎಂ. ನಾಳೆ ಮುಂಜಾನೆ ಫ್ಲೈಟಿಗೆ ಬರ್‍ತಾರಂತೆ, ಏರಪೋರ್ಟಿಗೆ ಹೋಗಬೇಕು. ಏಳು ಗಂಟೆಗೆ ನಮ್ಮ ಮನೆಗೆ ಬಂದು ಬಿಡ್ರಿ. ಅಲ್ಲಿಂದ ಇಬ್ಬರೂ ಹೋಗೋಣ"

—ಎಂದು ಹೇಳಿದರು. ಆಗಲಿ ಎಂದು ಆಜ್ಞೆ ಸ್ವೀಕರಿಸಿ ಆನಂದ ಮನೆಗೆ ಮರಳಿದ.

ಆಗ ರಾತ್ರಿ೯ ಗಂಟೆಯಾಗಿತ್ತು. ಕಿಟಕಿಯಲ್ಲಿ ನಿಂತು, ಆನಂದರ ಬರುವಿಕೆಯನ್ನೇ ನೋಡುತ್ತಿದ್ದ ಸಂಧ್ಯಾ, ಬಾಗಿಲು ತೆರೆದಳು. ಒಳಗೆ ಕಾಲಿಡುತ್ತಲೇ, ನಾಲ್ಕುವರುಷದ ಮುದ್ದು ಮಗು ಕಿರಣನನ್ನು ಕರೆಯುವ ರೂಢಿ ಆನಂದನದು "ಕಿರಣ"— ಎಂದು ಕೂಗಿದ.

## ವಿಪರ್ಯಾಸ

ಇಲ್ಲಿ ಬೈಗಾದರೂ ಎಲ್ಲೋ ಬೆಳಗಿರಬಹುದು
ಎಲ್ಲಿ ಸುಮ್ಮಾನ ಮೆರೆದರು ಇಲ್ಲಿ ದುಮ್ಮಾನವಿರಬಹುದು—
ಅಲ್ಲೂ ಇಲ್ಲೂ ಇಹುದು ಇನ್ನೆಲ್ಲೋ ಇದ್ದಿರದು
ಗುಲ್ಲು ನೆಮ್ಮದಿ ತರದೋ…ಮಣ್ಣಿನ ಮಗ !

–ದೊಡ್ಡ ರಂಗೇಗೌಡ

"ಕಿರಣಗೆ ಜ್ವರಾ ಬಂದಾವ" ಎಂದು ಸಂಧ್ಯಾ ಹೇಳುವದೊಂದೇ ತಡ, ಆನಂದ ಕೋಣೆಯೊಳಗೆ ಓಡಿ, ಮಗನ ಹಣೆಯ ಮೇಲೆ ಕೈಯಾಡಿಸುತ್ತ ಹೇಳಿದ—

"ಬಾಳ ಇನಿಲ್ಲ— ಸ್ವಲ್ಪ ಜ್ವರಾ ಅದ."

"ಸಾಲಿಯಿಂದ ತೊಯ್ಸಿಗೊಂಡು ಮನೆಗೆ ಬಂದ. ಕಷಾಯಿ ಮಾಡಿ ಕೊಟ್ಟೀನಿ ನಾಳಿಗೆ ಕಡಿಮೆ ಆಗಬಹುದು."

ಸಂಧ್ಯಾ ಗಂಡನಿಗೆ ಸಮಾಧಾನ ಹೇಳಿದಳು.

ಆನಂದ ಜಿ.ಎಂ. ಬರುವ ವಿಷಯವನ್ನು ತಿಳಿಸಿ ಬೆಳಗ್ಗೆ ಬೇಗ ಹೊರಡುವದಾಗಿ ಹೇಳಿದ ಇಬ್ಬರೂ ಊಟದಶಾಸ್ತ್ರ ಮುಗಿಸಿ ಮಲಗಿದರು.

ಆನಂದ ಬೇಗ್ಗ ಎದ್ದಾಗ ಕಿರಣಗೆ ವಿಪರೀತ ಜ್ವರ. ಆ ರಭಸಕ್ಕೆ ಏನೇನೋ ಬಡಬಡಿಸತೊಡಗಿದ. ಸಂಧ್ಯಾ ಗಾಬರಿಗೊಂಡಳು. ಬೇಗನೆ ಆಸ್ಪತ್ರೆಗೆ ಕರೆದುಕೊಂಡು ಹೋಗುವದು ಒಳಿತೆಂದು ಇಬ್ಬರೂ ಭಾವಿಸಿದರು.

"ಸಂಧ್ಯಾ ಯೋಚಿಸಬ್ಯಾಡ ಡೈರಕ್ಟರಿಗೆ ಫೋನ ಮಾಡಿ ಹೇಳ್ತೇನಿ, ಏರ್‌ಪೋರ್ಟಿಗೆ ನಾನು ಹೋಗೊದಿಲ್ಲ. ಕರುಪ್ಪಸ್ವಾಮಿಯನ್ನ ಕರಕೊಂಡ ಹೋಗ್ತಾರ. ನಾನು ಆಮ್ಯಾಲೆ ಹೋಗಿ ಜಿ. ಎಂ.ನ್ನ ಭೇಟ್ಟಿ ಆಗ್ತೇನಿ."

ಎಂದು ಹೇಳಿ ಆನಂದ, ಪಕ್ಕದ ಮನೆಯವರಲ್ಲಿದ್ದ ಫೋನಿನ ಮೂಲಕ ಶಾಮಣ್ಣನವರಿಗೆ ಸಮಾಚಾರ ತಿಳಿಸಿದ, ಶಾಮಣ್ಣನವರು, ಆನಂದನಿಗೆ ಸಮಾಧಾನ ಸೂಚಿಸಿ ಮಗುವಿನ ಆರೋಗ್ಯ ನೋಡಿಕೊಳ್ಳಲು ಹೇಳಿದರು.

ಏರಪೋರ್ಟಿನಿಂದ ಹೊರಬರುತ್ತಲೇ "ಆನಂದ ಯಾಕ ಬರಲಿಲ್ಲ" — ಎಂದು ದೇಶಪಾಂಡೆ ಪ್ರಶ್ನಿಸಿದರು, ಶಾಮಣ್ಣನವರು ನೀಡಿದ ವಿವರಣೆ ಸಮಾಧಾನ ನೀಡುವ ಬದಲು ಅವರ ಶಂಕೆಗೆ ಉತ್ತೇಜನ ನೀಡಿತು.

ಕರುಪ್ಪಸ್ವಾಮಿ ಅದರ ಲಾಭ ಪಡೆದ. ಗೆಸ್ಟ ಹೌಸ್‌ನಲ್ಲಿ ಉಳಿದಿದ್ದ ಅವರ ಬಳಿ ಸಾಗಿ ಕಿವಿ ಕಚ್ಚಿದ. ಕೊನೆಗೂ ಗೆದ್ದ.

ಆಫೀಸ ಪ್ರಾರಂಭವಾಗುತ್ತಲೇ ದೇಶಪಾಂಡೆ ಬಂದರು. ಶಾಮಣ್ಣನವರು ಎದ್ದು ತಮ್ಮ ಆಸನವನ್ನು ಬಿಟ್ಟುಕೊಟ್ಟರು. ದೇಶಪಾಂಡೆ ಫೈಲಿನಲ್ಲಿಯ ಪತ್ರಗಳನ್ನು ತಿರುವಿ ಹಾಕುತ್ತ –"ಶಾಮಣ್ಣ, ಆನಂದನನ್ನು ಕಲಾವಿಭಾಗದಿಂದ ತೆಗದು ರಿಸೆಪ್ಶನ್ ಇನ್‌ಚಾರ್ಜ ಮಾಡ್ರಿ ಎಂದರು.

ಶಾಮಣ್ಣ ಹಾವು ತುಳಿದವರಂತೆ ಬೆಚ್ಚಿಬಿದ್ದರು. "ಯಾಕ್ ಸರ್!- ಆನಂದ ಒಳ್ಳೇ ಕಲಾವಿದ ನಿಷ್ಠಾವಂತ ಪ್ರಾಮಾಣಿಕ ಅವನಿಂದಾನ ನಮ್ಮ ವ್ಯಾಪಾರ ಹೆಚ್ಚೇದ..." ದೇಶಪಾಂಡ ಮುಖ ಕೂಡ ಮೇಲೆತ್ತಲಿಲ್ಲ.

"ನಾನು ಹೇಳಿದಷ್ಟು ಕೇಳ್ರಿ. ಆತನ ಜಾಗಕ್ಕ ಕರುಪ್ಪಸ್ವಾಮಿನ್ನ ಅಪಾಯಿಂಟ್ 'ಮಾಡ್ರಿ, ಇವತ್ತs ಈ ಸರ್ಧ್ಯೇನ ಆಗಬೇಕು."

ಶಾಮಣ್ಣನವರಿಗೆ ಏನು ಮಾಡಬೇಕು ತೋಚಲಿಲ್ಲ ಬರೀತಲೆ ಹಾಕಿ ಹೊರಟುಹೋದರು.

ಆನಂದ ಆಫೀಸಿಗೆ ಬಂದಾಗ ಆಘಾತಕಾದಿತ್ತು. ತನ್ನ ತಿರುಗು ಖುರ್ಚಿಯ ಮೇಲೆ ಕರುಪ್ಪಸ್ವಾಮಿ ಕುಳಿತು, ಗರಗರನೆ ತಿರುಗಿಸುತ್ತ ಗಹಗಹಿಸಿ ನಗುತ್ತ ಜವಾನ ನಜೀರ್‌ನಿಗೆ ಚಹಾ ತರಲು ಹೇಳತೊಡಗಿದ್ದ, ಆನಂದನಿಗೆ ಕೋಪ ಉಕ್ಕಿ ಬಂತು- ಸರಸರನೆ ಡೈರೆಕ್ಟರ್ ರೂಮಿಗೆ ನಡೆದುಧಡಾರನೆ ಬಾಗಿಲು ತೆರೆದು ಒಳಗೆನುಗ್ಗಿದ.

ಡೈರೆಕ್ಟರ್ ಖುರ್ಚಿಯಲ್ಲಿ ಕುಳಿತು ತ್ರಾಗುಯ್ಯಾಲೆಯಾಡುತ್ತಿದ್ದ ಜಿ. ಎಂ. ಅವರನ್ನು ನೋಡಿ ಆನಂದ ರಭರ್ರನೆ ಇಳಿದು ಹೋದ. "ಆನಂದ! ಇವತ್ತಿನಿಂದ ನೀವು ರಿಸೆಪ್ಶನ್ ಸೆಕ್ಷನ್ನಿಗೆ ಇನ್‌ಚಾರ್ಜ-ನಿಮ್ಮನ್ನ ಆರ್ಟಿಸ್ಟ್‌ವಿಂಗ್‌ನಿಂದ ತಗದದ"

"ಯಾಕ್ ಸಾರ್... ಹಿಂಗ್ಯಾಕ್... ನಾನೂ ಒಬ್ಬ ಕಲಾವಿದ. ನಾನು ಸುಖೀಆಗಿ ಇರಬೇ

ಕಾದ್ರ, ಆ ಜಾಗಾದಾಗ ಅಲ್ಲಿ ಸಾರ್"

"ನಾ ಹೇಳಿದಷ್ಟುಕೇಳ್ರೀ... ಕೆಲಸ ಬೇಕಾಗಿ ದ್ದರ್ರ ತಿಳೀತ್ತ" ಎನ್ನುತ್ತಿದ್ದಾಗ ಶಾಮಣ್ಣನವರೂ ಒಳಗೆ ಬಂದಿದ್ದರು. ಆನಂದ ಅವರ ಮುಖದತ್ತ ನೋಡಿದ ಅವರ ಮುಖ ಕೆಳಗಾಯಿತು.

"ಆಗಲಿ ಸಾರ್"- ಎಂದು ಹೇಳಿ ಹೊರಡುವ ಷ್ಟರಲ್ಲಿ ದೇಶಪಾಂಡೆ ಹೇಳಿದರು.—

"ನೋಡ್ರಿ ಆನಂದ, ಇವತ್ತ ಸಂಜೀಮುಂದ ಪಾರ್ಟೀ ಅದ. ಫಾರೆನ್ ಲಿಕ್ಕರ್ ಇರಬೇಕು. ಸರಿಯಾಗಿ ವ್ಯವಸ್ಥೆಮಾಡ್ರಿ ಓಕೆ."

"ಆಗಲಿ ಸಾರ್..." ಎಂದವನೆ ಧಡಾರನೆ ಬಾಗಿಲೂ ತೆರೆದುಕೊಂಡು ರಿಸೆಪ್ಶನ್ ರೂಮಿಗೆ ಬಂದು ಕುರ್ಚಿಯ ಮೇಲೆ ಕುಸಿದ. ಸಹಸ್ರಚೇಳು ಕಟಕಿದಂತಾಗಿತ್ತು ಅವನ ಸ್ಥಿತಿ. ಶಾಮಣ್ಣನವರು ಎಷ್ಟೇ ಸಂತೈಸಿದರೂ ಅವನ ಮನದ ಹೊಯ್ದಾಟ, ಭುಗಿಲೆದ್ದ ಜ್ವಾಲೆ ಸ್ಥಿಮಿತಕ್ಕೆ ಬರಲಿಲ್ಲ.

ಸಂಜೆ ಸರಿದಂತೆ ಆನಂದ ಮೆಲ್ಲನೆ ಎದ್ದು ತನ್ನ ಕೋಣೆಯಲ್ಲಿದ್ದ ಕುಂಚಗಳನ್ನೆಲ್ಲ ಎತ್ತಿ ಕಿಟಕಿ ಆಚೆ ಬಿಸುಟಿ ವಿದೇಶಿ ಮದ್ಯವನ್ನಿರಿಸಿ ಹೊರಟ.

ಒಂದುಹನಿ ಮದ್ಯವನ್ನು ಸವಿಯದ ಆನಂದ ನಿಗೆ ಅದರ ಸರಬರಾಜಿನ ವ್ಯವಸ್ಥೆ ತನ್ನ




ಪಾಲಿಗೆ ಬಿದ್ದುದಕ್ಕೆ ಮುಜುಗರವೆನ್ನಿಸಿತು. ನಿರ್ವಾಹವಿಲ್ಲದೆ ಕೆಲಸಕ್ಕೆ ಅಣಿಯಾದ.

ಸಂಜೆ ಏಳು ಗಂಟೆಗೆ ಪಾರ್ಟಿ ಪ್ರಾರಂಭ ವಾಯಿತು. ಗ್ಲಾಸುಗಳಿಗೆ ಮದ್ಯಸುರುವಿ, ಮಧ್ಯದಲ್ಲೇ ಹೊರಗೆನುಸುಳಿ ಹೊರಟುಹೋದ.

ರಾತ್ರಿ ಸುಮಾರು ಹನ್ನೆರಡು ಗಂಟೆಯಾಗುತ್ತ ಬಂದರೂ ಇನ್ನೂ ಪಾರ್ಟಿಮುಗಿದಿರಲಿಲ್ಲ. ರಾತ್ರಿಏರುತ್ತಿದ್ದಂತೆ ಚಳಿಗಾಳಿಯೂ ಬೀಸ ತೊಡಗಿತು. ಹೊರಗಡೆ ಮರದಡಿ ನಡಗುತ್ತ ಕುಳಿತು ಮೆಲ್ಲನೆ ಎದ್ದು ಪಾರ್ಟಿನಡೆಯುತ್ತಿದ್ದ ಸ್ಥಳದತ್ತ ಸಾಗಿದ. ಮಂಜುಮುಸುಕಿದ ಕಿಟಕಿ ಗಾಜನ್ನು ಒರೆಸಿ ಇಣುಕಿ ನೋಡಿದ. ಹುಚ್ಚು ಹೊಳೆಯಲ್ಲಿ ಉನ್ಮತ್ತ ಜನ ಹೆಣ್ಣು-ಗಂಡು ಎಂಬ ಭೇದವಿಲ್ಲದೆ ಓಲಾಡುತ್ತಿದ್ದುದು ಆನಂದ ನಿಗೆ ಅಸಹ್ಯವೆನಿಸಿತು. ಅಂತೂ ಪಾರ್ಟಿ

## ಜನತಾ ಪ್ರತಿನಿಧಿ

ಬಡತಽನ ಕಳಿಯಾಂವ ಭಾಷಣ ಮಾಡೀದ
ಬರಿ ಮೈಲೆ ನಿಂತ ಬಡ ಮಂದಿ ! ಕೂಗಿದರ
ಬೆಂಗ್ಳೂರ ಬಿಟ್ಟು ಬರಲಿಲ್ಲ ॥

—ಶ್ಯಾಮ ಹುದ್ದಾರ

ಮುಗಿಯಿತು. ಸೋಕಾಲ್ಡ ಪ್ರತಿಷ್ಠಿತರು ತೊಗಾಡುತ್ತ, ತೂರಾಡುತ್ತ ತಮ್ಮ ತಮ್ಮ ವಾಹನಗಳನ್ನೇರಿ ಮನೆಗಳತ್ತ ಹೊರಟರು. ಆನಂದನಿಗೆ ಉಸಿರುಗಟ್ಟಿಸುವ ಗುಹೆಯಿಂದ ಹೊರಬಂದಂತೆ ಭಾಸವಾಯಿತು. ಅಳಿದುಳಿದ ಮದ್ಯವನ್ನು ಕೆಲಸದವರಿಗೆ ಹಂಚಿ ಮನೆಯತ್ತ ನಡೆದ.

●

ಸಂಧ್ಯಾ ಆನಂದನ ಬಾಹುಗಳನ್ನು ಮೆಲ್ಲಗೆ ಬಳಸಿಕೊಂಡಳು. "ಹೇಳು ಸಂಧ್ಯಾ ಈಗ ನೀನ ಹೇಳು-ಇಂಥ ಅವಮಾನ ಸಹಿಸಿಕೊಂಡು ನಾನು ಈ ಕಂಪನಿಯೊಳಗ ಇರಲ್ಯಾ ಒಬ್ಬ ಕಲಾವಿದನ್ನ ಇವತ್ತ ಹೆಂಡಾ ಹಂಚಲಿಕ್ಕ ಹೇಳಿದ್ರು- ನಾಳೆ ಹೆಣ್ ಸಪ್ಲೈ ಮಾಡಲಿಕ್ಕ ಹೇಳ್ತಾರ- ಹಣದ ಮದದಿಂದ ಕೊಬ್ಬಿದ ಈ ಶ್ರೀಮಂತರು ಇವ್ರಿಗೆ ಕಲೆಗೂ ಬೆಲೀ ಇಲ್ಲ- ಬಡವರ ಜೀವಕ್ಕೂ ಬೆಲೀ ಇಲ್ಲ...."

ಇನ್ನೂ ಆನಂದ ಮಾತು ಮುಗಿಸಿರಲಿಲ್ಲ. ಸಂಧ್ಯಾ ಅವನ ಬಾಯಿ ಮೇಲೆ ಬೆರಳು ಇರಿಸಿ ಮುಚ್ಚಿಸಿದಳು. "ನಿಮ್ಮ ಮನಸ್ಸಿನ ಮ್ಯಾಲೆ ಆದ ಆಘಾತದ ಅರ್ಥ ನನಗ ಆಗ್ತದ. ಇನ್ನ ಆ ಕಂಪನಿಯೊಳಗ ಕಾಲ ಇಡಬ್ಯಾಡ್ರಿ"

"ಅಂದ್ರ ಸಂಸಾರ ಹ್ಯಾಂಗ ಸಾಗಬೇಕು ಸಂಧ್ಯಾ. ಬ್ಯಾರೆ ಕೆಲಸ ಎಲ್ಲಿ ಸಿಗ್ತದ. ಕಲಾವಿದರು ಈ ಜಗತ್ತಿನ್ಯಾಗ ಬದಕೋದ ಕಷ್ಟ."

"ಏನ ಆಗಲಿ! ನಾವು ಉಪವಾಸ ಸತ್ತರೂ ಚಿಂತಿ ಇಲ್ಲಾ. ನೀವು ಈ ಕೆಲಸಕ್ಕ ಒಪ್ಪಬ್ಯಾಡ್ರಿ. ಬಂದದ್ದು ಬರಲಿ. ದೇವರಿದ್ದಾನ..."

ಸಂಧ್ಯಾ ಆನಂದನ ವಿಶಾಲವಕ್ಷದಲ್ಲಿ ತಲೆ ಇರಿಸಿ ಧೈ... ನಿಸ್ಸಂಕಳಾಗಿ ಹೇಳಿದಳು,

ಹೆಂಡತಿಯ ಸ್ಫೂರ್ತಿಯ ನುಡಿಗಳು ಆನಂದನಲ್ಲಿ ಚೈತನ್ಯ ತುಂಬಿದವು. ಅವಳು ಮುಖವನ್ನು ತನ್ನತ್ತ ತಿರುಗಿಸಿಕೊಂಡು ''ನಂಗ ಗೊತ್ತಿತ್ತು ನೀನು ಹಿಂಗ ಹೇಳ್ತಿ ಅಂತ. ಸಂಧ್ಯಾ ನಾಳೆ ಜಿ. ಎಂ. ನ ಮುಖದ ಮ್ಯಾಲೆ ರಾಜೀನಾಮೆ ಪತ್ರ ಒಗದ ಬರತೀನಿ''— ಎಂದ ಆನಂದ ದಣಿದ ಮನದಿಂದ.

''ಅಂಧಂಗ ಈಗ ಕಿರಣಗ ಹ್ಯಾಂಗ ಅದ...''

''ಸ್ವಲ್ಪ ಆರಾಮ ಆಗೇದ. ಮಲಗ್ಯಾನ''

ಆನಂದ, ಸಂಧ್ಯಾ, ಊಟ ಮುಗಿಸಿ ಕಿರಣನನ್ನು ತಮ್ಮ ನಡುವೆ ಮಲಗಿಸಿಕೊ... ಸಂಧ್ಯಾಳಿಗೆ ಬೇಗ ನಿದ್ದೆ ಆವರಿಸಿತು. ಆದರೆ ಆನಂದ ಬಹಳ ಹೊತ್ತಿನ ವರೆಗೆ ಎಚ್ಚರವಾಗಿಯೇ ಇದ್ದ. ಹೆಂಡತಿ ಮಗನತ್ತ ದೃಷ್ಟಿ ಹರಿಸಿ ಇವರ ಸುಖಕ್ಕಾಗಿಯೇ ಅಲ್ಲವೆ ನಾನು ಬದುಕಿದ್ದು ಎಂದುಕೊಳ್ಳುತ್ತ ಹಾಗೆ ನಿದ್ರಾಪರವಶನಾದ.

●

ರಾಜೀನಾಮೆ ಪತ್ರ ಕೈಯಲ್ಲಿ ಹಿಡಿದುಕೊಂಡೇ ಆನಂದ ಆಫೀಸಿನತ್ತ ಸಾಗಿದ. ದಾರಿಯುದ್ದಕ್ಕೂ ಸಂಧ್ಯಾ-ಕಿರಣರ ಮುಗ್ಧ ಮುಖಗಳು ಕಣ್ಣ... ಮುಂದೆ ಸುಳಿಯತೊಡಗಿದವು. ನನಗೆ ಬೇರೆ... ಕೆಲಸ ಸಿಕ್ಕಬಹುದೆ ? ಸಿಕ್ಕದೇ ಹೋದರೆ.... ನನ್ನನ್ನೆ ನಂಬಿದ ಈ ಎರಡುಜೀವಗಳ... ಪರಿತಪಿಸುವಂತೆ ಮಾಡಬೇಕೆ ? ಕಲೆ ಅಷ್ಟ... ಜೀವನವು ಮಹತ್ವದ್ದಲ್ಲವೆ ?— ಛೇ ಉಪ... ಜೀವನಕ್ಕಾಗಿ ಕಲೆಯನ್ನು ಬಲಿಕೊಡಬೇಕೆ ?

ಮತ್ತೆ ಆನಂದನ ಮನದಲ್ಲಿ ಬಿರುಗಾಳಿ... ಎದ್ದಿತು. ಆಫೀಸು ತಲುಪಿದ. ಏನೆ ಇರಲಿ... ರಾಜೀನಾಮೆ ಪತ್ರವನ್ನು ಜಿ. ಎಂ. ನ ಮುಖದ... ಮೇಲೆ ಎಸೆದು ಬಿಡಬೇಕೆಂದು ನಿರ್ಧರಿಸಿದ. ಧಡಾರನೆ ಬಾಗಿಲು ತೆರೆದು ಒಳಗೆ ನುಗ್ಗಿದ

ಕಿಟಕಿಯತ್ತ ಮುಖ ಮಾಡಿದ್ದ ಜಿ. ಎಂ. ತಿರುಗು ಖುರ್ಚಿಯನ್ನು ಗರ್ರನೆ ಅವನತ್ತ ತಿರುಗಿಸಿ ಮೊನಚುದೃಷ್ಟಿ ಬೀರಿ, ಗಡಚು ಧ್ವನಿಯಲ್ಲಿ— ''ಬರ್ರಿ ಆನಂದ ! ನಿನ್ನೆ ಪಾರ್ಟಿ ಭಾಳ ಛೊಲೋ ಇತ್ತು. ಆ ಯ್ಯಾಮ್ ವೆರಿ ಹ್ಯಾಪಿ ! '' ಇವತ್ತು ಫಾರೆನ್ ಡೆಲಿಗೇಟ್ಸ... ಬರ್ತಾರಾ ಇನ್ನೂ ಫಸ್ಟ ಕ್ಲಾಸ್ ಇರಬೇಕು. ಸಂಜಿ ಪಾರ್ಟಿ ಓ. ಕೆ.''- ಎಂದಾಗ ಆನಂದ ಸ್ತಂಭಿಭೂತನಾಗಿ ನಿಂತುಬಿಟ್ಟ.

''ಯಾಕೆ— ಆನಂದ ಏನಾಯಿತು ?''— ಎಂದು ಜಿ. ಎಂ. ಎಚ್ಚರಿಸಿದಾಗ ಆನಂದ ಪೆಟ್ಟು... ಬಿದ್ದವನಂತೆ ಎಚ್ಚತ್ತು ''ಆಗಲಿ ಸಾರ್''— ಎನ್ನುತ್ತಾ ಕೋಣೆಯಿಂದ ಹೊರಬಿದ್ದ. ಆನಂದನ ಕಣ್ಣುಗಳು ಹನಿ ತುಂಬಿದವು. ತನ್ನ ಕೈಯಲ್ಲಿದ್ದ ರಾಜೀನಾಮೆ ಪತ್ರವನ್ನು ಚೂರು ಚೂರಾಗಿ ಹರಿದು ಗಾಳಿಯಲ್ಲಿ ತೂರಿಬಿಟ್ಟ. ●



# ಕ್ಯಾಮರಾ ಚಾಲೂ,



ಮಂತ್ರಿಗಳಾಗ್ಲೇ ಬಂದಾರೆ... ಆದರೆ ಕ್ಯಾಮರಾ ಸ್ವಲ್ಪ ಕೈಕೊಟ್ಟಿದೆ... ಮೆಕ್ಯಾನಿಕ್‌ನಿಗಾಗಿ ಕಾಯ್ತಾ ಇದ್ದೇವೆ.




ಕ್ಯಾಮರಾ ಚಾಲೂ ಮಾಡ್ಲಿಕ್ಕೆ ನಾನು ಬರಬೇಕಾ? ನನ್ನನ್ನೇನು ಮೆಕ್ಯಾನಿಕ್ ಅಂತಾ ತಿಳಿದಿರೇನ್ರೀ..?



ಶೂಟಿಂಗ್ ನೋಡ್ಲಿಕ್ಕೆ ಮಜವಾಗಿರುತ್ತೆ ಅಲ್ವಾ ಗುರುಗಳೇ?... ಅದಕ್ಕಿಂತ್ಲೇ ನಿಮ್ಮನ್ನ ನಾನು ಒತ್ತಾಯಿಸಿದ್ದು,..... ಕ್ಯಾಮರಾ ಚಾಲೂ ಮಾಡಲು ಒಪ್ಪಿಕೊಳ್ಳುವಂತೆ..!

ಎಚ್. ಬಿ. ಮಂಜುನಾಥ್

### ಜನಪ್ರಿಯತೆಯ ತುತ್ತತುದಿಯಲ್ಲಿ

# ಒಡಿಸ್ಸಿ ನೃತ್ಯ ಸಂಪ್ರದಾಯ

ಲಕ್ಷ್ಮೀಕಾಂತ ಸಾವಕಾರ

**ಭಾರತದ ಹಲವು ನೃತ್ಯ ಪ್ರಕಾರಗಳಲ್ಲಿ ಒಡಿಸ್ಸಿ ನೃತ್ಯಕ್ಕೆ ವಿಶಿಷ್ಟ ಸ್ಥಾನವಿದೆ. ಪ್ರಾಚೀನ ನೃತ್ಯ ಸಂಪ್ರದಾಯವಾದ ಒಡಸ್ಸಿ ನೃತ್ಯವನ್ನು ಪುನರುಜ್ಜೀವನ ಗೊಳಿಸಲಾಗಿದೆ. ಅಷ್ಟೇ ಅಲ್ಲ ಅದರ ಜನ ಪ್ರಿಯತೆಯೂ ಇದೀಗ ಹೆಚ್ಚುತ್ತಿದೆ.**



ಮಾಧವಿ ಮುದಗಲ್ಲ

ನೃತ್ಯಪ್ರಕಾರಗಳಲ್ಲಿಯೆ ಅತ್ಯಂತ ನಯನ ಮನೋಹರವೆಂದು ವರ್ಣಿಸಲಾಗುವ ಒಡಿಸಿ ನೃತ್ಯ ಕಲೆ ಒಡಿಸಾದ ಇತಿಹಾಸದ ಏಳು ಬೀಳುಗಳೊಡನೆಯೇ ಬೆಳೆದುಬಂದಿದೆ.

ಕ್ರಿಸ್ತಶಕ ಎರಡನೆ ಶತಮಾನಕ್ಕೂ ಒಂದೆಯೆ ಒಡಿಸಿ ನೃತ್ಯ ಶಾಸ್ತ್ರಸಂಪನ್ನವಾಗಿ ಬೆಳೆದು ಬಂದಿತ್ತು. ೧೬ನೆ ಶತಮಾನದ ಹೊತ್ತಿಗೆ ಒಡಿಸಾದ ರಾಜರು ತಮ್ಮ ಕಳೆದುಕೊಂಡು ರಾಜ್ಯವು ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಿದ್ದಂತೆಯೇ ಉತ್ಕರ್ಷದಲ್ಲಿದ್ದ ಈ ಕಲೆಗೆ ಮೋಡ ಕವಿಯಿತು. ಹೊರ ದೇಶ ಹಾಗೂ ಹೊರ ರಾಜ್ಯದ ಪ್ರಖ್ಯಾತಿಗಳಾದ ಭಾರತೀಯ ನೃತ್ಯಾಸಕ್ತ ಡಾ॥ ಚಾರ್ಲ್ಸ್ ಫೆಬ್ರಿ, ಖ್ಯಾತ ಸಾಹಿತಿ ಡಾ॥ ಮುಲ್ಕರಾಜ ಆನಂದ, ಶ್ರೀಮತಿ ಇಂದ್ರಾಣಿ ಮುಯಿಜರ್ಜಿ ಮೋಹನ ಖೋಕರ ಮುಂತಾದವರ ಪ್ರಯತ್ನ ಹಾಗೂ ಪ್ರಚೋದನೆಯ ಫಲವಾಗಿ ಬೆರಳೆಣಿಕೆಯಷ್ಟು ಪಂಡಿತರು ಹಾಗೂ ಮನೆಗಳಿಗೆ ಸೀಮಿತವಾಗಿದ್ದ ಈ ನೃತ್ಯ ೧೯೫೦ರ ನಂತರ ಮತ್ತೆ ಬೆಳಕಿಗೆ ಬರುವಂತಾಯಿತು. ಒಡಿಸಿ ನೃತ್ಯಪಂಡಿತ ಹಾಗೂ ಗುರುವಾದ ಕೇಳೂಚರಣ ಮಹಾಪಾತ್ರ, ಪಂಕಜ ಚರಣದಾಸ್, ದೇವ್‌ಪ್ರಸಾದ ದಾಸ್, ಗೋಟಿಪೂವಾ ಪರಂಪರೆಯ ಬಿ. ಕಪಿ, ಚಂದ್ರ, ಕಾಳಿಚರಣ ಪಟನಾಯಕ, ಓರೇಂದ್ರನಾಥ ಪಟನಾಯಕ. ಮಾಯಾಧರ ಮಾನಸಿಂಗ್ ಮೊದಲಾದವರು ಉಜ್ವಲ ಪರಂಪರೆಯ ಈ ನೃತ್ಯಕ್ಕೆ ಮತ್ತೆ ನೀರೆರೆದವರು.

ಭಾರತೀಯ ನೃತ್ಯಕಲೆಯ ಅತಿ ಪುರಾತನ ಗ್ರಂಥವಾದ (ಕ್ರಿ. ಶ. ಎರಡನೆ ಶತಮಾನ) ಭರತ ಮುನಿಯ "ನಾಟ್ಯಶಾಸ್ತ್ರದಲ್ಲಿ" ಒಡಿಸಿ ನೃತ್ಯದ ಉಲ್ಲೇಖವಿದೆ. ಓಢ್ರ ಮಾಗಧಿ ನೃತ್ಯ ಅಂಗ,ವಂಗ, ಕಳಿಂಗ. ವತ್ಸ, ಓಢ್ರ, ಪಾಂಡ್ರು ಮುಂತಾದ ಪೂರ್ವ ಪ್ರದೇಶದ ಭಾಗಗಳಲ್ಲಿ ಪ್ರದರ್ಶಿಸಲಾಗುತ್ತದೆ, ಎಂದು ಭರತಮುನಿ ತನ್ನಗ್ರಂಥದಲ್ಲಿ ಬರೆದಿದ್ದಾನೆ.

ಕಳಿಂಗ ಹಾಗೂ ಓಢ್ರಗಳೆಂದರೆ ಇಂದಿನ ಒಡಿಸಾ ಅಥವಾ ಉತ್ಕಲ. ಓಢ್ರ – ಮಾಗಧಿ ನೃತ್ಯ ಒಡಿಸಿ ನೃತ್ಯವೆಂದು ಜನಪ್ರಿಯವಾಗಿ ಬೆಳೆಯಿತು. ಮೊದಲು ಆಂಧ್ರ (ಪಾಂಡ್ರ) ವಂಗ (ಬಂಗಾಳ) ಮುಂತಾದ ಪೂರ್ವ ಕರಾವಳಿಯ ಭಾಗದಲ್ಲಿ ಕೂಡ ಪ್ರಚಲಿತವಿದ್ದ ಓಢ್ರ – ಮಾಗಧಿ ನೃತ್ಯ ಮುಂದೆ ಒಡಿಸಾಕ್ಕೆ ಮಾತ್ರ ಸೀಮಿತವಾಗಿ ಬೆಳೆದಿರಬೇಕು. ಅದಕ್ಕೆಂದೆ ಈ ನೃತ್ಯಕ್ಕೆ ಓಢ್ರ – ಮಾಗಧಿ ಎಂಬ ಹೆಸರು ಹೋಗಿ ಒಡಿಸಿ ಎಂಬ ಹೆಸರು ಬಂದಿರ ಬೇಕು.

ಉದಯಗಿರಿಯ ಹಾಥಿಗುಂಫದಲ್ಲಿ ಎರಡನೆ ಶತಮಾನದ ಕಾಲಕ್ಕೆ ಖಿರವೇಲ ರಾಜ ಜೈನ ಮುನಿಗಳಿಗಾಗಿ ನಿರ್ಮಿಸಿದ ಗುಹೆಗಳಲ್ಲಿ ಒಡಿಸಾದ ಸಂಗೀತ



ಸಂಯುಕ್ತಾ ಪಾಣಿಗ್ರಾಹಿ

ನೃತ್ಯ ಪರಂಪರೆಯ ಬಗ್ಗೆ ಉಲ್ಲೇಖವಿದೆ. ಪ್ರಜೆಗಳ ಮನೋರಂಜನೆಗಾಗಿ ದೊರೆ ಖರವೇಲನು ನೃತ್ಯ ಸಂಗೀತ ಮಹೋತ್ಸವವನ್ನು ಏರ್ಪಡಿಸಿದ್ದನೆಂಬ ಕುರಿತು ಶಿಲಾಲೇಖವಿದೆ. ಉದಯಗಿರಿಯ ರಾಣಿ ಗುಂಫ ಗುಹೆಗಳಲ್ಲಿ ನೃತ್ಯದಲ್ಲಿ ನಿರತರಾದ ಸ್ತ್ರೀ ಪುರುಷರ ಚಿತ್ರಗಳನ್ನು ಕೆತ್ತಲಾಗಿದೆ. ಈ ನರ್ತನ ನರ್ತಕಿಯರ ಭಾವ-ಭಂಗಿಗಳು ಒಡಿಸಿ ನೃತ್ಯದ ಭಾವ-ಭಂಗಿಗಳಂತೆಯೆ ಇವೆ.

ಒಡಿಸಿ ನರ್ತನದ ಭಂಗಿಗೆ ನರ್ತಕಿಯರ ನೂಪುರಗಳ ಕರ್ಣಾನಂದಕರ ನಿನಾದಕ್ಕೆ ಖರವೇಲನ ನಂತರದ ದೊರೆಗಳೆಲ್ಲ ಮರುಳಾದರು ಎಂಬುದನ್ನು ಈ ರಾಜ್ಯದ ಇತಿಹಾಸದ ಪದರು ಪದರುಗಳೆಲ್ಲ ಉಲ್ಲೇಖಿಸುತ್ತವೆ. ಇಷ್ಟೇ ಅಲ್ಲ ಒಡಿಸಾದ ದೇವಾಲಯಗಳಿಗೆ ಈ ನೃತ್ಯವು ಲಯಬದ್ಧ ಸುಸಂಬದ್ಧತೆಯನ್ನು ಒದಗಿಸಿತೆಂದೂ ವ್ಯಕ್ತವಾಗುತ್ತದೆ.

ಖರವೇಲನ ನಂತರದ ಅವಧಿಯಲ್ಲಿ ೩ನೇ ಶತಮಾನದಿಂದ ಎಂಟನೆ ಶತಮಾನದವರೆಗೆ ಒಡಿಸಾದಲ್ಲಿ ಬೌದ್ಧ ಮತ ಪ್ರಾಬಲ್ಯಕ್ಕೆ ಬಂತು. ಮುಂದೆ ೭ನೇ ಶತಮಾನದಿಂದ ೮ನೇ ಶತಮಾನದ ಅವಧಿಯಲ್ಲಿ ನಿರ್ಮಿಸಲಾದ ಗುಡಿ ಗುಂಡಾರಗಳಲ್ಲಿ ತ್ರಿಭಂಗ ದ್ವಿಭಂಗಿಯ ಶಿಲ್ಪಗಳನ್ನೂ ಹಾಗೂ ಮನಮೋಹಕ ನರ್ತಕಿಯರ ಶಿಲ್ಪಗಳನ್ನೂ ಕೆತ್ತಲಾಗಿದ್ದು ದುಕಂಡು ಬರುತ್ತದೆ. ೭ – ೮ ಶತಮಾನದ ಅನೇಕ ದೇವಾಲಯಗಳು ನಾಶವಾದ ಸ್ಥಿತಿಯಲ್ಲಿವೆ. ಅವುಗಳಲ್ಲಿ ತೋರಣ ಕನ್ಯೆಯರು ಅಳಸ ಕನ್ಯೆಯರು. ... ಮಾಲಿಕೆಯರು ಇಂದಿಗೂ ಗಮನ ಸೆಳೆಯುತ್ತಾರೆ.

ಒಡಿಸಿ ನೃತ್ಯದ "ಚೌಕ" ಭಂಗಿಯಲ್ಲಿರುವ ಕೆಲವು ಕಲಾಕೃತಿಗಳಂತೂ ಅತ್ಯಂತ ಆಕರ್ಷಣೀಯವಾಗಿವೆ. ನಟರಾಜ, ಗಣೇಶ ಪಾರ್ವತಿ ಮುಂತಾದ ದೇವಾನುದೇವತೆಗಳ ನರ್ತನಭಂಗಿಗಳು ಕಂಡು ಬರುತ್ತವೆ.

ಕ್ರಿ. ಶ. ೧೨೫೦ರ ಸುಮಾರಿಗೆ ನಿರ್ಮಿಸಲ... ಕೋಣಾರ್ಕ ದೇವಾಲಯದ ನರ್ತನ ಶಿಲ್ಪ... ಗಳಂತೂ ಇಡಿ ವಿಶ್ವದ ಕಲಾಸಕ್ತರ ಗ... ಸಳೆದಿವೆ. ಈ ಇಡೀ ದೇವಾಲಯವೆ ಶಿ... ಕಲೆಯಿಂದ ಸಂಪನ್ನವಾಗಿದೆ. ದೇವಾಲಯದ ... ಪಾಯ ಗೋಡೆ ಶಿಖರ, ವಿಮಾನ ಮುಂತಾ... ಗಳ ಮೇಲೆಲ್ಲ ಒಡಿಸಿ ನರ್ತಕ-ನರ್ತಕಿಯರ ಭ... ಭಂಗಿಗಳನ್ನು ಯಥಾವತ್ತಾಗಿ ಕಟೆಯಲಾಗಿ... ಮನುಷ್ಯಾಕೃತಿಗಿಂತಲೂ ದೊಡ್ಡದಾದ ಶಿ... ಮೂರ್ತಿಗಳನ್ನು ಹೊಂದಿದ ದೇಶದಲ್ಲಿಯ ... ಮೇವ ದೇವಸ್ಥಾನವಿದು.

ಕಿನ್ನರ ಲೋಕದ ಗಂಧರ್ವರು ತಾಳ, ಮದ್ದ... ವೀಣೆ, ವೇಣುಗಳನ್ನು ನುಡಿಸುತ್ತಿರುವಂತೆ ಹಾ... ಬಾಟು ನೃತ್ಯದಲ್ಲಿ ನಿರತರಾಗಿರುವಂಥ ಈ ಶಿ... ಕಲೆ ರಸಿಕರೆದುರು ಅಲೌಕಿಕ ಲೋಕವನ್ನು ನಿ... ದಂತೆ ಭಾಸವಾಗುತ್ತದೆ. ಈ ಶಿಲ್ಪದಲ್ಲಿ... "ಪೋಜುಗಳು" ಇಂದಿನ ಒಡಿಸಿ ನರ್ತಕಿಯ... ಮಾದರಿಯಾಗುವಂತಿವೆ! ಇಲ್ಲಿಯ ಇನ್ನೊಂ... ವಿಶೇಷ ಏನೆಂದರೆ ಆಗಿನ ನೃತ್ಯ ಗುರು ಸೌ... ಶ್ರೀ ದೇವನ ಮೂರ್ತಿಯನ್ನು ನಿರ್ಮಿಸಿ ಅ... ಬಗ್ಗೆ ಶಿಲಾಲೇಖನವನ್ನು ಕೆತ್ತಲಾಗಿ... ಆದರೆ ಕೋಣಾರ್ಕ ದೇವಾಲಯವನ್ನು ನಿರ್ಮಿ... ನರಸಿಂಹ ದೇವ ದೊರೆಯ ಉಲ್ಲೇಖ ಮಾ... ಎಲ್ಲಿಯೂ ಇಲ್ಲ! ರಾಜರು ಕಲೆಗೆ ಎ... ಪ್ರಾಮುಖ್ಯತೆ ನೀಡಿದ್ದರೆಂಬುದು ಇದರಿ...



ವ್ಯಕ್ತವಾಗುತ್ತದೆ.

ಉತ್ಕಲದ ಇತಿಹಾಸದೊಡನೆ ಹಾಸು ಹೊಕ್ಕಾದ ಈ ನೃತ್ಯವು ದೇವಸ್ಥಾನದ ಸಂಪ್ರದಾಯದೊಡನೆಯೆ ಬೆಳೆದು ಬಂತು. ಆದ ಕ್ಕಾಗಿಯೆ ದೇವದಾಸಿಯರ (ಉರಿಯಾ ಭಾಷೆ ಯಲ್ಲಿ "ಮಹಾರಿಗಳು") ಇತಿಹಾಸಕ್ಕೂ ಒಡಿಸಿ ನೃತ್ಯಕ್ಕೂ ನೇರವಾದ ಸಂಬಂಧವಿದೆ. ಆದರೆ ಒಡಿಸಾದಲ್ಲಿ ಯಾವ ಕಾಲಕ್ಕೆ ದೇವದಾಸಿ ಪದ್ಧತಿ ಪ್ರಾರಂಭವಾಯಿತು ಎಂಬುದು ಸ್ಥಿರವಾಗಿ ತಿಳಿದು ಬಂದಿಲ್ಲ.

ಬೌದ್ಧ ಸ್ಥವಿರರು ಹಾಗೂ ಥೇರರಿಂದಲೆ ದೇವದಾಸಿ ಪದ್ಧತಿ ಬೆಳೆದಿರಬೇಕು. ಮೋಕ್ಷ ಸಾಧನೆಗಾಗಿ ನೃತ್ಯ ಸಂಗೀತವನ್ನು ಬಳಸುವ ಪದ್ಧತಿ ಕೂಡ ಬೌದ್ಧರಿಂದಲೇ ಪ್ರಾರಂಭವಾಗಿರ ಬೇಕೆಂದು ಭಾವಿಸಲಾಗಿದೆ. ಆಮೇಲೆ ಅದೇ ಹಿಂದು ಸಂಪ್ರದಾಯದ ಅಂಗವಾಯಿತಂ.

ದೇವದಾಸಿ ನರ್ತಕಿಯರ ಬಗ್ಗೆ ೯ನೆ ಶತಮಾನದ ಉದ್ಯೋತ ಕೇಸರಿ ಕಾಲದ ಶಿಲಾ ಶಾಸನವೊಂದಿದೆ. ಬೌದ್ಧಧರ್ಮದ ಪ್ರಭಾವ ಅಳಿದಂತೆ ಹಿಂದುಧರ್ಮದ ಪ್ರಭಾವ ಬಲ ಗೊಂಡಿತು. ಅದರೊಂದಿಗೆ ಒಡಿಸಾದಲ್ಲಿ (ಪುರಿ) ಜಗನ್ನಾಥ ಸಂಸ್ಕೃತಿ ಕ್ರಿ. ಶ. ೧೦೦೦ರ ನಂತರ ಪ್ರಬಲಗೊಂಡಿತು. ಕೇಸರಿ ದೊರೆಯ ನಂತರ ಗಂಗರು ತಮ್ಮ ರಾಜ್ಯ ಸ್ಥಾಪನೆ ಮಾಡಿದರು.

ಕ್ರಿ. ಶ. ೧೦೭೭ರಲ್ಲಿ ಸಿಂಹಾಸನಕ್ಕೆ ಬಂದ ಚೌಡಗಂಗ ದೇವನು ಪುರಿ ಜಗನ್ನಾಥ ದೇವಾಲಯ ವನ್ನು ಕಟ್ಟಲು ಪ್ರಾರಂಭಿಸಿದನು. ಮುಂದೆ ಪಟ್ಟಕ್ಕೆ ಬಂದ ಒಂದನೆ ಹಾಗೂ ಎರಡನೆ ಅನಂಗ ಭೀಮದೇವ ದೊರೆಗಳು ಅದನ್ನು ಪೂರ್ತಿಗೊಳಿ ಸಿದರು. ಎರಡನೆ ಅನಂಗಭೀಮ ದೇವನೆ ಜಗ ನ್ನಾಥ ದೇವಾಲಯದ ನಾಟ್ಯಮಂದಿರವನ್ನು ಕಟ್ಟಿದನು. ಗಂಗರ ಈ ಕಾಲದಲ್ಲಿಯೆ ಮಹಾರಿ

# 'ಕೋಮಲೆಯರ ಕಾವ್ಯ'

''ಒಡಿಸಿ ನೃತ್ಯವನ್ನು ನಿತಂಬಿನಿಯರೆ ಮಾಡ ಬೇಕು'' ಎಂಬ ಉಕ್ತಿ ಇದೆ.

ಶಿಲ್ಪಕಲಾಸದೃಶ ಭಾವ, ಭಂಗಿ, ಹಾಗೂ ಅಂಗಾಂಗ ಚಲನೆಯ ಕಾವ್ಯಮಯ ಗತಿಯ ವೈಶಿಷ್ಟ್ಯವನ್ನು ಹೊಂದಿದ ಈ ನೃತ್ಯ ಶೈಲಿ ಕೋಮಲೆಯರಿಗೆ ಹೇಳಿ ಮಾಡಿಸಿದಂಥದು. ಅದ ಕ್ಕಾಗಿಯೇ ಈ ಉಕ್ತಿ ಬಳಕೆಗೆ ಬಂದಿರಬೇಕು.

ಭಾವಭರಿತ ಕಾವ್ಯದಂತೆ, ಗರಿಗೆದರಿದ ಮಯೂರ ಲಾಸ್ಯದಂತೆ, ಒಡಿಸಿ ನೃತ್ಯ ಮನಸೂರೆ ಗೊಳ್ಳುವದಕ್ಕೆ ಅದರ ಕೋಮಲ ಚಲನೆ ಕಾರಣ. ಈ ನೃತ್ಯ ಯಾವದೆ ವಿಶಿಷ್ಟ ಶೈಲಿಯ ಚೌಕಟ್ಟಿಗೆ ಒಳಪಡದೆ ಸುನೀತ (ಇಂಗ್ಲಿಷಿನ ಸಾನೆಟ್) ಕಾವ್ಯ ಗಳ ರೀತಿಯಲ್ಲಿ ಓತಪ್ರೋತವಾಗಿ ಪ್ರವಹಿಸು ವಂಥದಾಗಿದೆ.

ಒಡಿಸಿ ನರ್ತನದ ಮುಖ್ಯ ಭಂಗಿಗಳು ಎರಡು. ತ್ರಿಭಂಗ ಹಾಗೂ ಚೌಕ. ಇದಲ್ಲದೆ ಎಂಟು ಪ್ರಾಥಮಿಕ ಭಂಗಿಗಳಿವೆ, ಅವು ಹೀಗಿವೆ ಉಥ, ಬೈಠ, ಸ್ಥಾನಕ, ಚಾಲಿ, ಬುಧ, ಭಾಸ, ಭಾವುನರಿ ಹಾಗೂ ಪಾಲಿ

ತ್ರಿಭಂಗದ ಕಾಲಕ್ಕೆ ಒಂದು ಪಾದದ ಮೇಲೆ ಶರೀರದ ಭಾರವನ್ನು ಹಾಕಿ ನಿತಂಬವನ್ನು ಮತ್ತೊಂದು ಬದಿಗೆ ಚಲಿಸಲಾಗುತ್ತದೆ. ನರ್ತನದ ಒಟ್ಟು ಚಲನೆಯ ಪ್ರಕ್ರಿಯೆಯ ಅಂಗವಾಗಿ ನಡೆ ಯುವ ಸೂಕ್ಷ್ಮ ನಿತಂಬ ಚಲನೆ ಒಡಿಸಿ ನೃತ್ಯಕ್ಕೆ ವಿಶಿಷ್ಟತೆಯನ್ನು ತಂದು ಕೊಟ್ಟಿದೆ. ಕಟಿಯ ಮೇಲ್ಭಾಗದ ಚಲನೆ ಕೂಡ ವಿಶಿಷ್ಟತೆಯಿಂದ ಕೂಡಿರುತ್ತದೆ.

ಒಡಿಸಿ ನೃತ್ಯ ಪ್ರದರ್ಶನವು ಸಾಮಾನ್ಯವಾಗಿ ಐದು ಭಾಗಗಳನ್ನು ಒಳಗೊಂಡಿರುತ್ತದೆ.

**ಮಂಗಲಾ ಚರಣ:**

ಪ್ರಾರಂಭದಲ್ಲಿ ಪ್ರದರ್ಶಿಸಲಾಗುವ ಈ ಭಾಗವು ದೇವಸ್ತುತಿ ಅಥವಾ ಪ್ರಾರ್ಥನೆಯ ಅಂಗ ಆಗಿರು ತ್ತದೆ.

**ಬಾಟು(ಸ್ಥಾಯಿ)**

ಶಿಲ್ಪಕಲಾಕೃತಿಗಳ ಭಾವ ಭಂಗಿಗಳನ್ನು ಒಳ ಗೊಂಡ ಭಾಗವು ಶುದ್ಧ ನರ್ತನ ಭಾಗವೆನಿಸಿದೆ.

**ಪಲ್ಲವಿ**

ಅತ್ಯಂತ ಕಾವ್ಯಮಯ ನರ್ತನವೆನಿಸುವ ಈ ಅಂಗದಲ್ಲಿ ರಾಗ ತಾಳಕ್ಕೆ ಪ್ರಾಮುಖ್ಯ ಇರುತ್ತದೆ.

**ಅಭಿನಯ**

ಹಾಡುಗಳ ಭಾವನೆಗೆ ತಕ್ಕಂತೆ ಹಾವ ಭಾವ ಗಳನ್ನು ಪ್ರದರ್ಶಿಸುವ ಭಾಗವಿದು.

**ಮೋಕ್ಷ:**

ತೀವ್ರಗತಿಯಲ್ಲಿ ಬದಲಾಗುತ್ತ ಹೋಗುವ ಲಯದ ಗತಿಗೆ ತಕ್ಕಂತೆ ಪ್ರದರ್ಶಿಸಲಾಗುವ ಅತ್ಯಂತ ಶುದ್ಧ ನರ್ತನದ ಕೊನೆಯ ಭಾಗವಿದು

ಅಭಿನಯದ ಭಾಗದಲ್ಲಿ ಜಯದೇವ ಕವಿಯ ಗೀತ ಗೋವಿಂದ (ಸಂಸ್ಕೃತ) ವನ್ನಾಗಲಿ ಇಲ್ಲವೆ ಒಡಯಾ ಕವಿಗಳಾದ ವನಮಾಲಿ, ಕವಿ ಸೂರ್ಯರ ಕೃತಿಗಳನ್ನಾಗಲಿ ಬಳಸಲಾಗುತ್ತದೆ. ಹೊಸ ಪೀಳಿ ಗೆಯ ನರ್ತಕರು ಬೇರೆ ಬೇರೆ ಕವಿಗಳು ಹಾಡು ಗಳನ್ನೂ ಬಳಸಿಕೊಳ್ಳುತ್ತಿದ್ದಾರೆ. ತೀರ ಇತ್ತೀಚಿ ನವರೆಗೆ ಒಡಿಸಿ ನೃತ್ಯದ ವೈಶಿಷ್ಟ್ಯವಾದ ಥಾಲಿ ನೃತ್ಯವನ್ನು ಯಾರೂ ಪ್ರದರ್ಶನ ಮಾಡುತ್ತಲೆ ಇರಲಿಲ್ಲ. ಒಡಿಸಿ ನರ್ತನ ಪಟು ಹಾಗೂ ಗುರು ವಾದ ಪಂಕಜ ಚರಣದಾಸರು ಈ ಭಾಗವನ್ನು ತಮ್ಮ ಶಿಷ್ಯೆ ಹಾಗೂ ಖ್ಯಾತ ಒಡಿಸಿ ನರ್ತಕಿ ಅಹಲ್ಯಾ ಅವರಿಂದ ಮತ್ತೆ ಊರ್ಜಿತಗೊಳಿಸಿ ದರು" ಥಾಲಿ (ಪರಾತದಂಥ ಪಾತ್ರ)ಯ ಅಂಚಿನ ಮೇಲೆ ಅತ್ಯಂತ ಕುಶಲ ರೀತಿಯಲ್ಲಿ ಸಮತೋಲನ ಕಾಯ್ದುಕೊಳ್ಳುತ್ತ ನರ್ತಿಸುವದು ರೋಮಾಂಚಕ ಅನುಭವ ನೀಡುತ್ತದೆ. ಎರಡು ಅಂಗೈಗಳಲ್ಲಿ ಕೂಡ ಎರಡು ಥಾಲಿಗಳನ್ನು ಹಿಡಿದು ನರ್ತಿಸುವದು ಈ ನರ್ತನಕ್ಕೆ ಮತ್ತಷ್ಟು ಆಕರ್ಷಣೆ ಒದಗಿಸುತ್ತದೆ. ಕುಚಿಪುಡಿಯಲ್ಲಿ ಕೂಡ ಇಂಥದೊಂದು ಪ್ರಕಾರ ವಿದೆ. ಅದಕ್ಕೆ "ತರಂಗಂ" ಎನ್ನುತ್ತಾರೆ. ಅಲ್ಲಿ ಅದು ದೇವರನ್ನು ಒಲಿಸಿಕೊಳ್ಳುವ ಪ್ರಮುಖ ಹಾಗೂ ಕೊನೆಯ ನೃತ್ಯವಾಗಿರುತ್ತದೆ. ಒಡಿಸಿಯಲ್ಲಿ ಮಾತ್ರ ಥಾಲಿ ನೃತ್ಯಕ್ಕೆ ಆ ಸ್ಥಾನವಿಲ್ಲ.

ಒಡಿಸಿ ನರ್ತಕರು ಮೂಲವಾಗಿ ಒಡಿಸಾದ ವರ್ಣಮಯ ರೇಶಿಮೆ ಸೀರೆಗಳನ್ನು ಪ್ರದರ್ಶನ ಕಾಲಕ್ಕೆ ಧರಿಸುತ್ತಾರೆ. ಈ ನಯನ ಮನೋಹರ ಸೀರೆಗಳನ್ನು ಧರಿಸುವದರಲ್ಲಿ ಕೂಡ ಮಹಾರಿ ಹಾಗೂ ಗೋಟಿಪುವಾ ಎಂಬ ಎರಡು ವಿಧಾನ ಗಳಿವೆ. ನರ್ತಕರು ಒಡಿಸಾದ ಆಭರಣಗಳನ್ನು ಧರಿಸುತ್ತಾರೆ.

ಆಂದೋಲಿತ ಸ್ವರ ಪ್ರಾಧಾನ್ಯವಾದ ವಿಶಿಷ್ಟ ಸಂಗೀತವನ್ನು ಈ ನೃತ್ಯಕ್ಕೆ ಹಿನ್ನೆಲೆಯಾಗಿ ಬಳಸ ಲಾಗುತ್ತದೆ. ಆದರೆ ಒಡಿಸಿ ನೃತ್ಯದ ಈ ವಿಶಿಷ್ಟ ಸಂಗೀತದ ಬದಲು ಈಗೀಗ ಯಾವದೆ ಬಗೆಯ ಸಂಗೀತವನ್ನು ನರ್ತಕರು ಬಳಸುತ್ತಿದ್ದು ಅದು ಸಂಪ್ರದಾಯಸ್ಥರನ್ನು ಕಂಗೆಡಿಸಿದೆ.



ಅಹಲ್ಯಾ

ಗಳು ಅಥವಾ ದೇವ ದಾಸಿಯರ ನರ್ತನ ಸೇವೆ ಜಗನ್ನಾಥನ ಸನ್ನಿಧಿಯಲ್ಲಿ ಜಾರಿಗೆ ಬಂತು ಎಂದು ಭಾವಿಸಲಾಗಿದೆ. ಕ್ರಿ. ಶ. ೧೫೦೦ರ ಪ್ರಾರಂಭ ಕಾಲದ ವರೆಗೆ ಗಂಗರ ಆಳಿಕೆ ಇತ್ತು.

ಗಂಗರ ಕಾಲದಲ್ಲಿಯೇ ಜಯದೇವ ಕವಿ ೧೨ನೆ ಶತಮಾನ ಪ್ರಸಿದ್ಧ "ಗೀತ ಗೋವಿಂದ" ಸಂಸ್ಕೃತ ಕಾವ್ಯವನ್ನು ಬರೆದನು. ಮಹೇಶ್ವರ ಮಹಾಪಾತ್ರ ಒಡಿಸಿ ನೃತ್ಯಶಾಸ್ತ್ರವೆಂದು ಇಂದಿಗೂ ಪರಿಗಣಿಸಲ್ಪಡುವ "ಅಭಿನಯ ಚಂದ್ರಿಕೆ" ಎಂಬ ಗ್ರಂಥವನ್ನು ಇದೆ ಅವಧಿಯಲ್ಲಿ ಬರೆದನು.

ಕ್ರಿ. ಶ. ೧೪೩೬ರಲ್ಲಿ ಸೋಳರ ಆಳ್ವಿಕೆಯನ್ನು ಪ್ರಾರಂಭಿಸಿದ ಕಪಿಲೇಂದ್ರನೂ ಲಲಿತಕಲೆಗಳಲ್ಲಿ ಆಸ್ಥೆ ಹೊಂದಿದ್ದನು. ಇವನು ಸಹ ಜಗನ್ನಾಥ ದೇವಾಲಯದಲ್ಲಿ ದಿನಕ್ಕೆರಡು ಬಾರಿ ದೇವದಾಸಿಯರಿಂದ ನರ್ತನ ಪೂಜೆಯನ್ನು ಏರ್ಪಡಿಸುತ್ತಿದ್ದನು. ಇವನ ನಂತರ ಅಧಿಕಾರಕ್ಕೆ ಬಂದ ಪುರುಷೋತ್ತಮ ದೇವನೂ ಕೂಡ ಒಡಿಸಿ ನೃತ್ಯದಲ್ಲಿ ತೀವ್ರ ಆಸ್ಥೆ ಹೊಂದಿದವನಾಗಿದ್ದನು. ಇವನು ಕಂಚಿಪುರದ ರಾಜನನ್ನು ಸೋಲಿಸಿ ಅವನ ಪುತ್ರಿ ಪದ್ಮಾವತಿಯನ್ನ್ನು ವರಿಸಿದನು. ಕವಿಯೂ ಆದ ಪುರುಷೋತ್ತಮನು "ಅಭಿನವ ಗೀತ ಗೋವಿಂದ" ವನ್ನು ಬರೆದರೆ ಪತ್ನಿ ಪದ್ಮಾವತಿ ದೇವದಾಸಿಯಾಗಿ ನೃತ್ಯಕ್ಕೆ ತನ್ನನ್ನೆ ಅರ್ಪಿಸಿಕೊಂಡಳು.

ಸಂಸ್ಕೃತ ಗೀತಗೋವಿಂದವನ್ನು ಮಾತ್ರ ಜಗನ್ನಾಥನೆದುರು ಹೇಳಬೇಕೆಂದು ಮುಂದೆ ಅಧಿಕಾರಕ್ಕೆ ಬಂದ ಪ್ರತಾಪ ರುದ್ರದೇವನು ಕಟ್ಟಪ್ಪಣೆ ಮಾಡಿದನೆಂದು ಪ್ರತೀತಿ ಇದೆ. ತೆಲಂಗ ಆಂಧ್ರ ಸಂಪ್ರದಾಯದ ದೇವದಾಸಿಯರು ಸಂಸ್ಕೃತದ ಗೀತಗೊವಿಂದದೊಡನೆ ನೃತ್ಯ ಮಾಡುತ್ತಿದ್ದರು. ಉರಿಯಾ (ಒಡಿಸಾದವರು) ನರ್ತಕಿಯರಿಗಿಂತ ತೆಲಂಗ ದೇವದಾಸಿಯರ ಪ್ರಭಾವದಿಂದಲೆ ದೊರೆ ಹೀಗೆ ಮಾಡಿದನೆಂದು ಮಹಾರಿಗಳು ಇಂದಿಗೂ ಕಥೆ ಹೇಳುತ್ತಾರೆ.

ಕ್ರಿ. ಶ. ೧೫೦೦ರ ಸುಮಾರು ಪುರಿಗೆ ಬಂದ ಚೈತನ್ಯ ಮಹಾಪ್ರಭುಗಳು ವೈಷ್ಣವ ಸಂಪ್ರದಾಯದ ಪ್ರಭಾವ ಬೀರಿದರು. ಅವರ ಬೆನ್ನಿಗೆ ಬಂದು ಪಂಚಸಖರೆಂದು ಖ್ಯಾತರಾದ ಜಗನ್ನಾಥ ದಾಸ, ಬಲರಾಮದಾಸ, ಅನಂತ, ಅಚ್ಯುತಾನಂದ ಹಾಗೂ ಯಶೋವಂತರು ವೈಷ್ಣವ ಸಾಹಿತ್ಯವನ್ನು ಬೆಳಸಿದರು. ಪ್ರತಾಪರುದ್ರನ ಸಚಿವನಾದ ರಾಯ ರಮಾನಂದನು ಚೈತನ್ಯರ ಶಿಷ್ಯನಾದನು ಅವನೆ ಒಡಿಸಿ ನೃತ್ಯದಲ್ಲಿ "ಗೋಟಿಪುವಾ" ಅಥವಾ "ಆಖಾಡಪಿಲಾ" ಪದ್ಧತಿಯನ್ನು ಬೆಳೆಸಿದನು.

ಎಳೆಯ ತರುಣರು ಜವ್ವನೆಯರಂತೆ ವೇ ಧರಿಸಿ ಜಗನ್ನಾಥ ದೇವಾಲಯದ ಎದುರು ನೃತ್ ಮಾಡುವದು "ಗೋಟಿಪುವಾ" ಪದ್ಧತಿಯಾ ಬೆಳೆಯಿತು. ಬನಮಾಲಿ, ಗೋಪಾಲಕೃಷ್ಣ, ಕ ಸೂರ್ಯ ಬಲದೇವರಾಥ ಮುಂತಾದ ಕವಿಗಳು ಇ ಅವಧಿಯಲ್ಲಿ ರಾಧಾ ಕೃಷ್ಣರ ಸರಸ–ವಿರಸ ಮೇಲೆ ಸುಂದರ ಕಾವ್ಯಗಳನ್ನು ರಚಿಸಿದರು.

ಈ ಕಾವ್ಯಗಳಿಂದಾಗಿ ಈ ಅವಧಿಯಲ್ಲಿಯೆ ಒಡಿಸಿ ನೃತ್ಯದಲ್ಲಿ ಹಾಡುಗಾರಿಕೆಯ ಹಿಮ್ಮೇ ದೊಡನೆ ಅಭಿನಯ ಅಂಗಕ್ಕೂ ಪ್ರಾಧಾನ್ಯ ಬಂತು.

೧೬ ನೇ ಶತಮಾನದ ನಂತರದ ಅವಧಿಯಲ್ಲಿ ಭೋಯಿಗಳು,ಮೊಗಲರು, ಮರಾಠರು ಕೊನೆಯ ದಾಗಿ ಬ್ರಿಟಿಶರ ಆಳಿಕೆಗೆ ಒಳಪಟ್ಟು ಸ್ವಾತಂತ್ರ್ಯ ಕಳೆದುಕೊಂಡ ಒಡಿಸಾದಲ್ಲಿ ಅದರ ಕಲಾ ಸಂಸ್ಕೃತಿ ಪರಂಪರೆಯ ಜೀವ ಜೀವಾಳವಾದ ಒಡಿಸಿ ನೃತ್ಯದ ಉಸಿರೂ ಕಟ್ಟಿತ್ತು. ಆದರೆ ಇದೇ ಶತಮಾನದ ಮಧ್ಯಭಾಗದಲ್ಲಿ ಕೆಲಪ್ರತಿಭಾವಂತ ಗುರು–ಪಂಡಿತ ರಿಂದ ವಿನಾಶದ ಅಂಚಿನಲ್ಲಿದ್ದ ಈ ಉಜ್ವಲ ಕಲೆಗೆ ಜೀವದಾನವಾಗಿದೆ. ಒಡಿಸಿ ನೃತ್ ನೂಪುರದ ಗುಂಜಾರವ ಲಯಬದ್ಧವಾಗಿ ವ್ಯಾಪಿ ಸುತ್ತಿದೆ. ರಸಿಕರನ್ನು ಆವರಿಸುತ್ತಿದೆ. ●



# ಪೂರ್ಣಜ್ಞ ವಚನಗಳು

ಶ್ರೀಪೂರ್ಣಜ್ಞ

೧

ಶ್ರೇಷ್ಠನೀನಾಗುವೊಡೆ । ಶ್ರೇಷ್ಠಜನರೊಡನಾಡು
ದುಷ್ಟ ಸಂಗವು ಮೊದಲು ಮೃಷ್ಟಾನ್ನ; ಕೊನೆಗೆ
ಕೆಟ್ಟವಿಷದನ್ನ ಪೂರ್ಣಜ್ಞ

೨

ನಡೆ ನುಡಿಯು ಒಂದಿರದ । ಕಡುಕಷ್ಟಕೊಡುತಿರುವ
ಜಡಮತಿಗಳೊಡನೆ ಮಾತು ಮಸೆದಾಡಿದರೆ
ಸಿಡಿಲು ಬಡಿದಂತೆ ಪೂರ್ಣಜ್ಞ

೩

ಚಿಂತೆಗಳ ಸಂತೆಯಲಿ । ಶಾಂತಿ ಸಿಗದಾಗಿಹುದು
ಕಂತುಹರ ! ನಿನ್ನ ಸೇವೆ ಮಾಳ್ಪರನು ನೀ–
ನಿಂತಿರಿಸಬೇಕೆ? ಪೂರ್ಣಜ್ಞ

೪

ಉತ್ತಮರ ಮಾತುಗಳ । ಚಿತ್ತವಿಟ್ಟಾಲಿಸದ
ಸ್ವಾರ್ಥಾಂಧರೆಲ್ಲ ಬೀಳುವರು ತೆಗ್ಗಿನಲಿ
ಮತ್ತೇಳದಂತೆ ಪೂರ್ಣಜ್ಞ

೫

ಶೀಲವಿಲ್ಲದನರನು। ಸೀಳು ಬಿಟ್ಟಿಹ ಗಡಿಗೆ
ಮೇಳವಿಲ್ಲದ ಸಂಸ್ಥೆ ಇವು ಮೂರು ಕೆಟ್ಟ
ಹಾಳು ಸುರಿಯುವವು ಪೂರ್ಣಜ್ಞ

೬

ಕರದಲ್ಲಿ ಜಪಮಾಲೆ । ಉರದಲ್ಲಿ ಭವಮಾಲೆ
ಸ್ಮರಿಸುತ್ತ ಎಣಿಸಿದರೆ ಗಿಡವೇರಿ ತಾನು
ಧರೆಗೆ ಬಿದ್ದಂತೆ ಪೂರ್ಣಜ್ಞ

೭

ಬುದ್ಧಿ ಬೆಳೆಯುತ್ತಿರಲಿ । ಸದ್ಗುಣ ಜೊತೆಗೂಡಿ
ಬುದ್ಧಿಯಲಿ ದುರ್ವಿದ್ಯೆ ಬೆಳದಲ್ಲಿ ಜಗದಲ್ಲಿ
ಗುದ್ದಾಟ ನಿಲದು ಪೂರ್ಣಜ್ಞ

೮

ಮಾತಿನಲಿ ಮಾಧುರ್ಯ । ಕೃತಿಯಲ್ಲಿ ಸೌಂದರ್ಯ,
ಖ್ಯಾತಿಯಲಿ ನಿಃಸ್ಪೃಹತೆ ಇರುವ ಮನುಜಂಗೆ
ಯಾತರದು ಭೀತಿ ? ಪೂರ್ಣಜ್ಞ

೯

ಬಳಕೆ ಮಾಡದದ ದುಡ್ಡು । ಹುಳ ತಿಂದು ಹೋದೀತು !
ಜಲವ ಕುಂಭದಿ ತುಂಬಿ, ಬಳಸದಿದ್ದರದು
ಮಲೆತು ನಾತಂತೆ ಪೂರ್ಣಜ್ಞ

೧೦

ಹಿಡಿದ ಕೆಲಸವ ಬಿಡದೆ । ಕಡುಜವದಿ ಮಾಡಿದರೆ
ತೊಡಕುಗಳು ದೂರಹವು, ಸುಖಶಾಂತಿ ದೊರೆತು
ಜಡತೆ ತೊಲಗುವದು ಪೂರ್ಣಜ್ಞ

೧೧

ಕೊಲ್ಲುವದು ಪಶುಧರ್ಮ । ಬಲ್ಲವರು ಪೇಳಿವರು
ಕೊಲ್ಲದಲೆ ಇರುವ ಧರ್ಮವದು, ನಿಜಧರ್ಮ
ಎಲ್ಲಕ್ಕೂ ಮಿಗಿಲು ಪೂರ್ಣಜ್ಞ

೧೨

ಅರಿವುಗೇಡಿಯಕೈಗೆ । ಹಿರಿತನವ ನೀಡಿದರೆ
ಕರಿಕಾಗೆ ಕೈಯ್ಯಲ್ಲಿ ಕೊಟ್ಟಂತೆ ಕೊನೆಗೆ
ಕೊರಗಹುದು ಮನಕೆ ಪೂರ್ಣಜ್ಞ

೧೩

ಮುಂದಾಗುವರಕಂಡು ದಂದುಗವ ಪಡುತಿಹರು,
ಹಿಂದೆ ನಿಂದಿಪರು, ಮತ್ಸರದ ಕಿಚ್ಚಿನಲಿ
ಬೆಂದು ಹೋಗುವರು । ಪೂರ್ಣಜ್ಞ




ರಾಜಶೇಖರ ಭೂಸನೂರಮಠ

"ಸಂತೆಯೊಳಗೊಂದು ಮನೆಯ ಮಾಡಿ
ಶಬುದಕ್ಕೆ ನಾಚಿದೊಡೆಂತಯ್ಯಾ?"

●

ಅಂಚೆಯಾತ ನಸುಗುಲಾಬಿ ಲಕೋಟೆ ಒಗೆದು ಹೋದಾಗ ನನ್ನ ಎದೆ ಕುಟ್ಟಿಕೊಳ್ಳ ತೊಡಗಿತು. ಅಯ್ಯೋ ದೇವರೇ! ಇರಲಾರದು. . . . ಇರಬಾರದು! ಸುಷಮಾಳ ಕಾಗದವೇ?

ಶಾಂತಂ ಪಾಪಂ !

ಆದರೆ ಆಗುವದನ್ನು, ವಿಶೇಷತಃ ಆದದ್ದನ್ನು ಯಾರು ತಪ್ಪಿಸಬಲ್ಲರು?



ದೀಪಾವಳಿಯ ಹಾರ್ದಿಕ ಶುಭಾಶಯಗಳು !

ಕೊಲ್ಹಾಪುರದಲ್ಲಿ ಈಗ ಹೆಚ್ಚು ಆಧುನಿಕ ಪದ್ಧತಿಯಲ್ಲಿ ನಿರ್ಮಾಣಗೊಂಡು ತಮ್ಮ ಸೇವೆಗೆ ಅಣಿಯಾಗಿದೆ,



# ಹೋಟೆಲ್ ಗೋಕುಲ

## ಲಾಜಿಂಗ್ ಉಪಹಾರಗೃಹ

ಗ್ರಾಮ : ಗೋಕುಲ ಸ್ಟೇಷನ್‌ರೋಡ್, ಕೊಲ್ಹಾಪುರ ಫೋನ: 2392

ನಮ್ಮ ವೈಶಿಷ್ಟ್ಯಗಳು

- ಸರ್ವರೀತಿಯಿಂದ ಸುಸಜ್ಜಿತಗೊಂಡ ಸಿಂಗಲ್, ಡಬಲ್ ಮತ್ತು ಫ್ಯಾಮಿಲಿ ರೂಮುಗಳು.
- ದಕ್ಷಿಣ ಮತ್ತು ಉತ್ತರ ಭಾರತೀಯ ಶುಚಿ - ರುಚಿಯಾದ ಊಟ, ವಿನಮ್ರ ಸೇವೆ.

"ಗೋಕುಲ"ದಲ್ಲಿ ಇಳಿಯುವುದು ನಿಮಗೆ ಅಪೂರ್ವ ಅನುಭವ."

ಮ್ಯಾ. ಪಾರ್ಟ್‌ನರ್, ಎಂ. ಆರ್. ಪ್ರಭು



ದೀಪಾವಳಿಯ ಶುಭಾಶಯಗಳು

# ಮುಖ ಶುದ್ಧಿಗಾಗಿ ಚಮನ

"ಚಮನ ಅತ್ಯಂತ ಸ್ವಾದಿಷ್ಟ ರುಚಿಕರ ಅಲ್ಲದೇ ಮಹಾ ಸುಗಂಧಿತ ಚೂರ್ಣವಿದೆ, ಇದರ ಸೇವನೆಯಿಂದ ಬಾಯಿಗೆ ರುಚಿ ಬರುವುದು ಮುಖವು ಸುಗಂಧಮಯವಾಗುವದು,

## ಚಮನದಲ್ಲಿ ಏನಿರುವುದು ?

ಚಮನದಲ್ಲಿ ಜೇಷ್ಠಮಧು, ಕೇಸರಿ, ಕಸ್ತೂರಿ, ಲವಂಗ, ಏಲಕ್ಕಿ ಜಾಯಪತ್ರಿ, ಕಂಕೋಳ, ಬಡೆಸೋಪು ಹಾಗೂ ಮೆಂಥಾಲ, ಮುಂತಾದ ನಾನಾ ಪ್ರಕಾರಗಳ ಸುಗಂಧಿತ ಮತ್ತು ರುಚಿಕರ ವಸ್ತುಗಳನ್ನು ಶಾಸ್ತ್ರೀಯ ಪದ್ಧತಿಯಂತೆ ಮಿಶ್ರಮಾಡಿರುವುದರಿಂದ ಅಬಾಲವೃದ್ಧರು ಇದನ್ನು ಸೇವಿಸಬಹುದು.

**—: ಸಂಗ್ರಾಹಕರು :—**

ಬೆಂಗಳೂರು :

೧. ಸಿಟಿ ಮೆಡಿಕಲ್ ಅ್ಯಂಡ್ ಜನರಲ್ ಸ್ಟೋರ್ಸ ಚಿಕ್ಕಪೇಟೆ.

೨. ಕಲ್ಕತ್ತಾ ಪಾನಹೌಸ ಚಿಕ್ಕಪೇಟೆ ಕ್ರಾಸ್.

೩. ಎಸ್. ವೆಲ್ಲಾಯುಚಾಮಿ ಅ್ಯಂಡ್ ಸನ್ಸ್, ಅವಿನ್ಯೂ ರಸ್ತೆ.

ಮೈಸೂರು : ಲಕ್ಷ್ಮೀಸ್ಟೋರ್ಸ, ಶ್ರೀರಾಮಪೇಟೆ.

ಹುಬ್ಬಳ್ಳಿ : ನ್ಯೂ ಕರ್ನಾಟಕ ಏಜನ್ಸೀ, ಸಿದ್ಧೇಶ್ವರ ರೋಡ. ಅತುಲ ಏಜನ್ಸೀ.

ಧಾರವಾಡ : ಎಚ್. ಎ. ಮಹೇಂದ್ರಕರ ಅ್ಯಂಡ್ ಸನ್ಸ. ಮೇನರೋಡ.

ಬಳ್ಳಾರಿ : ಫ್ರುಟ್ ಸೇಲ್ ಪಾನ ಮಹಲ ಕಾರಸ್ಟ್ರೀಟ್.

ಹೊಸಪೇಟೆ : ಆರ್. ಸೋಮಪ್ಪ ಶೆಟ್ಟಿ ಅ್ಯಂಡ್ ಸನ್ಸ, ಮೇನ್ ರೋಡ.

**ಸ್ವಾರ ಕಂಪನಿ, ಬೆಳಗಾವಿ.**

ಕೈ ಯಾಂತ್ರಿಕವಾಗಿ ಕವರನ್ನು ಒಡೆದು ಕಾಗದವನ್ನು ಕಣ್ಣನೆದುರಿಗೆ ಹಿಡಿಯಿತು. ಹೌದು! ಆಗಬಾರದ್ದು ಆಗಿದೆ!

ಸುಷಮಾ ಮತ್ತೇಕೆ ಬರೆದಿದ್ದಾಳೆ?

●

ಹತ್ತು ವರ್ಷಗಳ ಹಿಂದಿನ ಮಾತು. ನಾನು ಇಸ್ರೋದ ಸ್ಪೇಸ್‌ಲಿಂಗ್ವಾ ವಿಭಾಗದಲ್ಲಿ ಎಂಜನೀಯರ್ ಆಗಿ ಸೇರಿದ ಹೊಸತು. ನನಗೆ ಎಲೆಕ್ಟ್ರಾನಿಕ್ಸ್/ಟೆಲಿಕಮ್ಯುನಿಕೇಷನ್ ಪದವಿಯಲ್ಲದೆ ಸ್ಪೇಸ್ ಲಿಂಗೋದಲ್ಲಿ ವಿಶೇಷ ಡಿಪ್ಲೋಮಾ ಇದೆ. ಬಹುಶಃ ಈ ಕ್ವಾಲಿಫಿಕೇಶನ್ ಇದ್ದವರು ನಮ್ಮ ದೇಶದಲ್ಲಿ ಇನ್ನೊಬ್ಬರಿರಲಾರರು.

ಆಗ ನಮ್ಮ ವಿಭಾಗಕ್ಕೆ ಹೊಸದಾಗಿ ಬಂದ ಸ್ಟೆನೋಳೇ ಸುಷಮಾ!

ನಮ್ಮಿಬ್ಬರ ಪ್ರೇಮಪ್ರಕರಣ ನಮ್ಮ ವಿಭಾಗದಲ್ಲೇ ಬಿರುಗಾಳಿ ಎಬ್ಬಿಸಿತ್ತು. ನಾವು ಹದ್ದು ಮೀರಿ ವರ್ತಿಸಿದ್ದೇವೆಂದರೂ ಸರಿ, ಮದುವೆಯಾದವರೇ ನಾಚುವಂತೆ ಓಡಾಡಿದರೆ ಯಾರು ಹುಬ್ಬು ಏರಿಸುವದಿಲ್ಲ? ನಮ್ಮ ಇಲಾಖೆಯಲ್ಲಿ ನಾನು ಎಷ್ಟು ಅನಿವಾರ್ಯವಾಗಿದ್ದೆನೆಂದರೆ — ಎಲ್ಲರೂ ಕಂಡೂಕಾಣದವರಂತೆ ಸುಮ್ಮನಿದ್ದರು.

ನನ್ನದು ತಪ್ಪೆಂದು ಒಪ್ಪುತ್ತೇನೆ. ಮನೆಯಲ್ಲಿ ಹಿರಿಯರ ವಿರೋಧ ಬರುವುದೆಂದೂ ನನಗೆ ಚೆನ್ನಾಗಿ ಗೊತ್ತಿತ್ತು. ಆದರೂ ಏನೋ ಹುಚ್ಚು ಧೈರ್ಯ! "ಕಾಮಾತುರಾಣಾಂ ನ ಲಜ್ಜಾ ನ ಭಯಂ"—ಸುಳ್ಳೇ ಮತ್ತೆ?

ಆಕೆ ಸುಳ್ಳು ಹೇಳಿರಲಿಕ್ಕಿಲ್ಲ, ಒಂಟಿಯಾಗಿ ಇರುತ್ತಿದ್ದಳು. ತಂದೆ-ತಾಯಿ ಅಥವಾ ಸಮೀಪದ ಬಂಧುಗಳು ಯಾರು ಇಲ್ಲವೆಂದು ಹೇಳಿದ್ದಳು. ನನ್ನ ತಂದೆ-ತಾಯಿ ಸಂಪ್ರದಾಯಸ್ಥರು. ಅವರನ್ನು ಎದುರಿಸಲು ಧೈರ್ಯ ಸಾಲದೆ ಹಾಗೂ

**ಸ್ಪೇಸ್ ರಿಕಾರ್ಡರಿನಲ್ಲಿ ಇತರ ಗ್ರಹಗಳ ಬುದ್ಧಿಜೀವಿಗಳ ಮಾತುಗಳನ್ನು ಕೇಳುವದು ಎಂಥ ವಿಸ್ಮಯ! ಆದರೆ ವಿಜ್ಞಾನದ ಜೊತೆಗೆ ಪ್ರೇಮವೂ ಸೇರಿಕೊಂಡು ಎಂಥ ಅನಾಹುತ ಆಗಿ ಹೋಯಿತು!?**

ಹೀಗೂ ಕಾಲ ನೂಕಿ ಸುಷಮಾಳೊಡನೆ ಸರಸವಾಡಿದ್ದೇ ಆಡಿದ್ದು. ಆಕೆ ಕೂಡ ಅಷ್ಟು ಗಂಭೀರಳಾಗಿ ಮದುವೆಯ ವಿಚಾರ ಎತ್ತುತ್ತಿರಲಿಲ್ಲ.

ಆದರೆ ಮುಂದೊಂದು ದಿನ— ಅಂದರೆ ಎಂಟು ವರ್ಷಗಳ ಹಿಂದೆ — ಆಕೆ ನೌಕರಿಗೆ ರಾಜೀನಾಮೆ ಕೊಟ್ಟು ಹೊರಟು ಬಿಟ್ಟಾಗ ನನಗಾದ ಆಘಾತ ಅಷ್ಟಿಷ್ಟಲ್ಲ.

ಸುಷಮಾಳ ಒಂದು ಕೆಟ್ಟ ಸ್ವಭಾವವೆಂದರೆ ಮಿತಭಾಷಿಣಿಯಾಗಿರುವುದು ಮತ್ತು introvert ಇದ್ದದ್ದು. ಹೆಣ್ಣೇ ಒಗಟು ಎನ್ನುತ್ತಾರೆ. ಅಂಥದರಲ್ಲಿ ಸುಷಮಾಳಂತೂ ದೊಡ್ಡ ಒಗಟು.

ನೌಕರಿ ಏಕೆ ಬಿಟ್ಟಳು? ನಮ್ಮ ಭವಿಷ್ಯವೇನು? ಮುಂತಾದ ಪ್ರಶ್ನೆಗಳ ಬಗ್ಗೆ ಆಕೆ ಅಷ್ಟು ತಲೆ ಕೆಡಿಸಿಕೊಂಡಂತೆ ಕಾಣಲಿಲ್ಲ.

ತಾನು ನಿಯಮಿತವಾಗಿ ಪತ್ರ ಬರೆಯುತ್ತೇನೆಂದು ಮಾತು ಕೊಟ್ಟಳು.

ಅದೇ ಈ ಗುಲಾಬಿ ಲಕೋಟೆಗಳ ಪರಂಪರೆಗೆ ನಾಂದಿ.

ಮೊದಲ ನಾಲ್ಕಾರು ತಿಂಗಳು ದಿನಕ್ಕೊಂದರಂತೆ ಪತ್ರ ಬಂದವು. ಅಷ್ಟಿ ಇಷ್ಟ— ಮಿತಭಾಷಿಣಿಯಾದರೂ ಮಿತಲೇಖಿಯಲ್ಲ ಎಂದು ಸಮಾಧಾನ ಪಟ್ಟೆ.

ಮುಂದಿನ ನಾಲ್ಕಾರು ತಿಂಗಳು ವಾರಕ್ಕೊಂದು ಬಂದವು.

ಮುಂದೊಂದು ದಿನ ಪತ್ರಗಳು ನಿಂತೇ ಹೋದವು.

ದೂರದ ನೆಂಟರಿಂದ ತನಗೆ ದೊಡ್ಡ ಆಸ್ತಿ ಬಂದದ್ದಾಗಿಯೂ, ತಾನು ಮದುವೆಯಾದದ್ದಾಗಿಯೂ ಆಕೆ ಕೊನೆಯ ಪತ್ರದಲ್ಲಿ ತಿಳಿಸಿ ಬಾಂಬನ್ನೇ ಒಗೆದಿದ್ದಳು. ವಿಚಿತ್ರವೆಂದರೆ ಆ ಪತ್ರದಲ್ಲಿ ಕೂಡ ಆಕೆ ನಾಚಿಕೆ ಬಿಟ್ಟು ನನ್ನ ಬಗ್ಗೆ ಜೀವಂತವಿರುವ ತನ್ನ ಪ್ರೇಮಕಾಮಗಳನ್ನು ತೋಡಿಕೊಂಡಿದ್ದಳು!

ಅದರೂ ತನಗೆ ಪತ್ರ ಬರೆಯಬಾರದೆಂದು ತಿಳಿಸುವಷ್ಟಾದರೂ ವ್ಯವಹಾರಜ್ಞಾನ ತೋರಿಸಿದ್ದಳು.

ನಾನು ಆಕೆಯನ್ನು ಮರೆಯುವಂತಿರಲಿಲ್ಲ. ಹೆಚ್ಚುಕಡಿಮೆ ಎರಡು ವರ್ಷ ಆಕೆಯ ಫ್ಲ್ಯಾಟಿನಲ್ಲಿ ನಾವಿಬ್ಬರೂ 'ಸಂಸಾರ' ಮಾಡಿದ್ದನ್ನು ಹೇಗೆ ಮರೆಯಲು ಸಾಧ್ಯ?

ಕಾಲಮಹಿಮೆಯೋ? ಅಥವಾ ಗಂಡಸಾದ ನನ್ನ ಸ್ವಾರ್ಥವೋ? ಅಂತೂ ನಾನು ಮುಂದೆ ಒಂದು ದಿನ ಎಲ್ಲರಂತೆ ಮದುವೆಯಾದೆ.

ಮತ್ತು ಸಂಸಾರದಲ್ಲಿ ಅಷ್ಟು ತಲೆಕೆಡಿಸಿಕೊಳ್ಳದೆ ನನ್ನ ನೌಕರಿಗೇ ಸಂಪೂರ್ಣ ಮಹತ್ವ ಕೊಟ್ಟೆ.

ನನಗೆ ಪ್ರಮೋಷನ್‌ಗಳೂ, ಇತರ ಸೌಲಭ್ಯಗಳೂ ಬೇಗ ಬೇಗ ಸಿಕ್ಕು ಕಳೆದ ವರ್ಷವಷ್ಟೇ ನಮ್ಮ ವಿಭಾಗದ ಮುಖ್ಯಸ್ಥನಾದೆ.

ಈಗ ಒಂದು ಭಾರಿ ಯೋಜನೆಯ ಭಾರವೆಲ್ಲ ನನ್ನ ಮೇಲೆ ಬಿದ್ದಿತ್ತು. ಅದು ರಹಸ್ಯ ಯೋಜನೆಯಾಗಿದ್ದರಿಂದ— ಮತ್ತು ನಮ್ಮ ಇಲಾಖೆಯ ಪ್ರತಿಷ್ಠೆಯ ಯೋಜನೆಯಾಗಿದ್ದರಿಂದ— ನಾನು ಹೆಚ್ಚು-ಕಡಿಮೆ ಎಷ್ಟು ಖರ್ಚು ಮಾಡಿದರೂ ಯಾರೂ ಕೇಳುತ್ತಿರಲಿಲ್ಲ ಮತ್ತು ಉಳಿದ ನೌಕರರಿಗಿರುವ ಯಾವ ನಿಬಂಧನೆಗಳೂ ನನಗೆ ಅನ್ವಯವಾಗುತ್ತಿರಲಿಲ್ಲ.

●

ಹುಚ್ಚು ಸುಷಮಾ! ನಾವು ಮತ್ತೆ ಕೂಡಲು ಸಾಧ್ಯವಿಲ್ಲವೆಂದು ತಿಳಿಯದಷ್ಟು ಅಪ್ರಬುದ್ಧಳೇ ಆಕೆ? ನನಗಂತೂ ಆಕೆಯ ಬಗೆಗೆ ಏನೂ ಇಚ್ಛೆ ಉಳಿದಿರಲಿಲ್ಲ. ಎಷ್ಟೆಂದರೂ ಪರಸತಿ.

ಆದರೆ ಆಕೆ ಈಗ ಒಕ್ಕಣಿಸಿದ್ದೇನು? ತನ್ನ ಗಂಡ ವಿದೇಶಕ್ಕೆ ಹೋಗಿರುವವದಾಗಿಯೂ, ತನಗೆ ಮಕ್ಕಳೇ ಆಗಿಲ್ಲವೆಂದೂ, ಇಂಥ ಊರಲ್ಲಿ ಇಂಥ ಗೆಸ್ಟ್‌ಹೌಸಿಗೆ ಇಂಥ ದಿನ ತಪ್ಪದೇ ಬರಬೇಕೆಂದೂ ಆಹ್ವಾನಿಸಿದ್ದಾಳೆ!



ಎಂಥ ಧೈರ್ಯ! ನಿರಾಶೆಗೊಳಿಸಿದರೆ ಆತ್ಮ ಹತ್ಯೆ ಮಾಡಿಕೊಳ್ಳುವುದಾಗಿ ಬೆದರಿಕೆ ಬೇರೆ!

ಏನು ಮಾಡಲಿ ?

ಹಾಂ! ವಿಭಾಗದ ಮುಖ್ಯಸ್ಥನಲ್ಲವೇ ನಾನು ? ಸಂಪೂರ್ಣ ಸ್ವಾತಂತ್ರ್ಯವೂ ಇದೆ ಯಲ್ಲವೆ ? ನನ್ನ ಪ್ರೊಜೆಕ್ಟಿನ ಅಂಗವಾಗಿ ಗುಟ್ಟಾಗಿ ಹೋಗುವ ಹಕ್ಕು ನನಗೆ ಇದ್ದೇ ಇದೆ. ಹೆಂಡತಿ ಮಕ್ಕಳಿಗೆ ಕೂಡ ಸಂಶಯ ಬಾರದು. ಬೇಕಾದಷ್ಟು ದುಡ್ಡು ಖರ್ಚು ಮಾಡ ಬಹುದು ಕೂಡ.

ಹಿಂದಿನ ರಸಗಳಿಗೆಗಳು ಮರುಕಳಿಸಿದರೆ ಬೇಡವೆನ್ನಲು ನಾನೇನು ಸನ್ಯಾಸಿಯೇ ?

ಸುಷಮಾ ಕೊಟ್ಟ ಊರು ಪಟ್ಟಣವೂ ಅಲ್ಲ, ಹಳ್ಳಿಯೂ ಅಲ್ಲ. ಒಂದು ಐತಿಹಾಸಿಕ ಕೋಟೆಯ ಸುತ್ತ ಹಬ್ಬಿದ ಊರು, 'ದುರ್ಗ' ಎಂದು ಕರೆಯೋಣ.

ಅರಸುತ್ತಿರುವ ಬಳ್ಳಿ ಕಾಲ್ತೊಡಕಾದಂತೆ ನನಗೆ ಇನ್ನೊಂದು ನೆಪವೂ ಅನುಕೂಲವಾಗಿ ಸಿಕ್ಕಿತು. ದುರ್ಗದ ಹತ್ತಿರ ಕೆಲವು ದಿನಗಳಿಂದ ಹಾರುವ ತಟ್ಟೆಗಳು ಕಾಣಸಿಕೊಳ್ಳುತಿದ್ದ ವದಂತಿ ಪೇಪರುಗಳಲ್ಲಿ ಪ್ರಕಟವಾಗಿತ್ತು.

ನಾನು ಸ್ಪೇಸುಲಿಂಗೋತಜ್ಞ ನೋಡಿರಿ; ಪರ ಲೋಕದ ಬುದ್ಧಿಜೀವಿಗಳೊಡನೆ ಸಂಭಾಷಣೆ ಮಾಡುವ ತಂತ್ರಕ್ಕಾಗಿ ಇಸ್ರೋ ನನ್ನನ್ನು ಅವ ಲಂಬಿಸಿತ್ತು. ಅದೇ ನನ್ನ ಪ್ರೊಜೆಕ್ಟ್ ಕೂಡ.

ಆಯಿತು ನಾನು ಆವಿಷ್ಕರಿಸಿದ ಸ್ಪೇಸ್ ರೆಕಾರ್ಡರನ್ನು ಟೆಸ್ಟು ಮಾಡಲು ಇದು ಅನುಕೂಲ ಸನ್ನಿವೇಶವೆಂದು ಮೇಲಿನವರಿಗೆ **'confidential'** ರೀತಿಯಲ್ಲಿ ತಿಳಿಸಿ ಜಾಗ ಬಿಟ್ಟೆ.

●

ಸ್ಪೇಸ್ ರೆಕಾರ್ಡರ್ ಎಂದರೆ ಸರಳ ಭಾಷೆ ಯಲ್ಲಿ 'ಮನುಷ್ಯೇತರ ಬುದ್ಧಿಜೀವಿಗಳ ಅವ್ಯಕ್ತ ಆಲೋಚನೆಯನ್ನು ಅವುಗಳ ಮಸ್ತಿಷ್ಕ ತರಂಗಗಳ ಸಹಾಯದಿಂದ ರೆಕಾರ್ಡ್ ಮಾಡಬಹುದಾದ ಸಾಧನ'— ಅಥವಾ ಹಾಗೆ ನಾನು ತಿಳಿದಿದ್ದೆ. ಅದಿನ್ನೂ ವಿವಿಧ ಪರೀಕ್ಷೆಗಳಿಗೊಳಪಡಬೇಕು



ನೋಡಿರಿ. ಆ ಮೇಲೆ ಅದರ ಕಾರ್ಯದ ಬಗ್ಗೆ ನಿಖರವಾದ ವಿವರ ಕೊಡಬಹುದು.

ಟೆಲೆಪತಿ ಅಥವಾ ದೂರಮನಃ ಸ್ಪರ್ಶ ಗೊತ್ತಲ್ಲ? ಇದು ಸುಮಾರು ಅದೇ ತಂತ್ರದ್ದು— ಆದರೆ ಸಂಪೂರ್ಣ ಬೇರೆ ಕ್ಷೇತ್ರದ್ದು. ಇದರ ಸಿಲೆಕ್ಟಿವಿಟಿ ಮತ್ತು ಸೆನ್ಸಿಟಿವಿಟಿ (ಕ್ಷಮಿಸಿರಿ, ಇಂಗ್ಲೀಷ ಪದಗಳ ಜಾರ್ಗನ್ ನನಗೆ ಅಭ್ಯಾಸ- ವಾಗಿದೆ) ಅತಿಶಯವಾಗಿವೆ. ಸೂಕ್ಷ್ಮದರ್ಶಕ ಅಥವಾ ದೂರದರ್ಶಕಗಳು ಹೇಗೆ ಅಗೋಚರ ವಾದದ್ದನ್ನು ನಮ್ಮ ಕಣ್ಣಮುಂದೆ ತಂದು ನಿಲ್ಲಿ- ಸುತ್ತವೆಯೋ ಆ ರೀತಿ ಸ್ಪೇಸ್ ರೆಕಾರ್ಡರ್ ಅಮಾನುಷರ ಆಲೋಚನೆಗಳನ್ನು ಮನುಷ್ಯ- ಗ್ರಾಹಿಯಾಗುವಂತೆ ಪರಿವರ್ತಿಸಿ ಮುದ್ರಿಸುತ್ತದೆ. ಇರಲಿ.

ಅರ್ಧ ತಪ್ಪಿತಸ್ಥನಾದ ನಾನು ಆತುರದಲ್ಲಿಯೇ ದುರ್ಗ ತಲುಪಿದೆ. ಸುಷಮಾ ತಿಳಿಸಿದ ಗೆಸ್ಟ್ ಹೌಸಿಗೆ ನೆಟ್ಟಗೆ ಧಾವಿಸಿದೆ.

ಸುಷಮಾ ! ಓ ನನ್ನ ಸುಷಮಾ !! ಸ್ವಲ್ಪ ಸ್ಥೂಲಕಾಯಿಯಾದ ಅಂಶವನ್ನು ಬಿಟ್ಟರೆ ಏನೂ ಬದಲಾಗಿಲ್ಲ ! ಎಂಟುವರ್ಷಗಳ ಕಾಲಸೇತುವೆ ದಾಟಿ ನಾನು ಮತ್ತೆ ಮೊದಲಿನ ರಾಮಾಚಾರಿ ಯಾಗಿ ಅಭಿಸಾರಿಕೆ (ಯಾರು?) ಯನ್ನು ಸೇರಿದ್ದೆ.

ನನ್ನನ್ನು ದಂಗುಪಡಿಸಿದ ಅಂಶವೆಂದರೆ ಸುಷುಮಾಳ ನಿರ್ಲಜ್ಜತೆ. ತಾನೀಗ ಮತ್ತೊ- ಬ್ಬನ ಹೆಂಡತಿ ಎಂದು ಆಕೆ ಯಾವಕಾರಣ ಪೂರ್ವಕವಾಗಿಯೂ ಬಿಟ್ಟುಕೊಡಲಿಲ್ಲ. ಕುಡುಕ ನಂತೆ ನಾನುಕೂಡ ಎಲ್ಲ ಸಂಕೋಚ ಬಿಟ್ಟು ಹಳೆಯ ರಾಮಾಚಾರಿಯಾಗಿಯೇ ರಾಜಾರೋಷ- ವಾಗಿ ಆಕೆಯೊಡನಿದ್ದೆ.

[ಅಯ್ಯೋ ದೇವರೇ ! ನನ್ನ ಮುಗ್ಧ ಹೆಂಡ- ತಿಗೆ ದ್ರೋಹ ಮಾಡುತ್ತಿದ್ದೇನಲ್ಲ?]

ದುರ್ಗಕ್ಕೆ ಬಂದು ನಾಲ್ಕು ದಿನಗಳೇ ಕಳೆ ದಿದ್ದವು. ಆಕೆಗಂತೂ ತಿಂಗಳುಗಟ್ಟಲೆ ಹೋದರೂ ಏನೂ ವ್ಯತ್ಯಾಸವಾಗುತ್ತಿರಲಿಲ್ಲ. ಆಕೆಯ ಗಂಡ (ಗಂಡು ಸವತಿಗೆ ಏನು ಪದ ಹುಡುಕಲಿ ?) ಬಹಳ ಲಿಬರಲ್ ಅಂತೆ. ಸುಷಮಾಳಿಗೆ ಪೂರ್ಣ ಸ್ವಾತಂತ್ರ್ಯ ('ಸ್ವೇಚ್ಛೆ' ಅಲ್ಲವೇ ?) ಕೊಟ್ಟಿ ದ್ದಾನಂತೆ.

ನನ್ನ ಸ್ಪೇಸ್ ರೆಕಾರ್ಡರ್ ಇನ್ನೂ ಪೆಟ್ಟಿಗೆ ಯಿಂದ ಹೊರದೆಗೆದಿದ್ದಿಲ್ಲ. ಸುಷಮಾ ನನ್ನ ಪ್ರೊಜೆಕ್ಟಿನಲ್ಲಿ ವಿಶೇಷ ಆಸಕ್ತಿ ತೋರಿಸಿದ್ದರಿಂದ ಐದನೆಯ ದಿನ ಪೆಟ್ಟಿಗೆ ತೆಗೆದು ರೆಕಾರ್ಡರ್ ಸಜ್ಜು ಮಾಡಿದೆ.

ನಾಲ್ಕು ದಿನ ಗೆಸ್ಟ್‌ಹೌಸ್ ಬಿಟ್ಟು ನಾವು ಹೊರಗೆ ಕಾಲಿಟ್ಟಿದ್ದಿಲ್ಲ ಕೂಡ. ಗೆಸ್ಟ್‌ಹೌಸ್ ದುರ್ಗದ ಹೊರಗೆ ಏಕಾಂತಸ್ಥಾನದಲ್ಲಿದ್ದುದು ಅನುಕೂಲವೇ ಆಗಿತ್ತು. ನಾನು ದೊಡ್ಡ ಅಧಿಕಾರಿ, ಸುಷಮಾ ಭಾರಿ ಶ್ರೀಮಂತಳು. ಮೇಲಾಗಿ ನಾವು ದಂಪತಿಗಳೆಂದು ಹೆಸರು ಬರೆಸಿದ್ದೆವು. ಯಾರಿಗೆ ಸಂಶಯ ಬಂದೀತು ?

ಐದನೆಯ ದಿವಸದಿಂದ ನಾವು ಸ್ಪೇಸ್ ರೆಕಾರ್ಡರ್ ಪರೀಕ್ಷಿಸುವ ನಿರ್ದಿಷ್ಟ ಕಾರ್ಯ ಕ್ರಮ ಹಮ್ಮಿಕೊಂಡೆವು. ನಮ್ಮ ಟೆಸ್ಟ್ ಯಶಸ್ವಿಯಾಗಬೇಕಾದರೆ ಆ ಹಾರಾಡುವ ತಟ್ಟೆಯವರು ಬೇಕಲ್ಲ? ಅವರೇನು ನಾವು ಕರೆದಾಗ ಬರುವಂಥವರೇ ?

●

ಊರ ಹತ್ತಿರವೇ ಹಾರಾಡುವ ತಟ್ಟೆ ಕಂಡಿದ್ದವೆಂದು ಊರಜನ (ದನಗಾಹಿಗಳು!) ಹೇಳಿದರು. ನನ್ನ ರೆಕಾರ್ಡರ್ ಪರೀಕ್ಷಿಸಲು ಕೋಟೆಯೇ ಸೂಕ್ತಸ್ಥಳವೆಂದು ನಿರ್ಧರಿಸಿದೆ.

## ಸ್ವರ್ಗ ಸುಖ

ಬಗಲಾಗ ಬೆಂಗಳೂರು, ಹೆಗಲೀಗೆ ಹೊಸದಿಲ್ಲಿ
ಮತ್ತs ಕಿಸೆದಾಗ ಕಂಟ್ರಾಕ್ಟು ಇರುವಾಗ ।
ಸ್ವರ್ಗಕ್ಕೆ ಕಿಚ್ಚು ಹಚ್ಚಂದ ॥

—ಶ್ಯಾಮ ಹುದ್ದಾರ

ಮೇಲಾಗಿ ಹಾಳು ಬಿದ್ದ ಆ ಕೋಟೆಯೊಳಗೆ ಇನ್ನಷ್ಟು ಮೈಚಳಿ ಬಿಟ್ಟು ಓಡಾಡಬಹುದು.

ಸ್ಪೇಸ್ ರೆಕಾರ್ಡರನಲ್ಲಿ ಆಡಿಯೋ/ವಿಡಿಯೋ/ಲಿಥೋ ಎಂದು ಮೂರು ವಿಭಾಗಗಳನ್ನು ಅಳವಡಿಸಿದ್ದೇನೆ. ನಾನು ಮನಸ್ಸಿನಲ್ಲಿ ನಮ್ಮ ರಾಷ್ಟ್ರಗೀತೆಯ ನೆನಪು ಮಾಡಿಕೊಂಡರೆ ಆಡಿಯೋ ವಿಭಾಗವು 'ಜನಗಣಮನ........' ಇತ್ಯಾದಿ ನನ್ನ ಧ್ವನಿಯಲ್ಲಿ ಮುದ್ರಿಸಿಕೊಳ್ಳಬೇಕು. ನಾನು ಮನಸ್ಸಿನಲ್ಲಿ ತಾಜಮಹಲನ್ನು ನೆನಪಿಸಿದರೆ, ವೀಡಿಯೋ ವಿಭಾಗವು ತಾಜಮಹಲಿನ ಚಿತ್ರ ಮೂಡಿಸುತ್ತದೆ. ಮತ್ತು ನಾನು ಸಿಟ್ಟು-ಸೆಡವುಗಳಂಥ ಅಮೂರ್ತ ಭಾವನೆಗಳನ್ನು ಮನಸ್ಸಿನಲ್ಲಿ ತಂದರೆ ಲಿಥೋ ವಿಭಾಗವು ನನ್ನ ಆಲೋಚನೆಗಳನ್ನು ಮುದ್ರಿಸುವದು.

ಹಾಂ, ತಡೆಯಿರಿ ನನ್ನ ಸ್ಪೇಸ್ ರೆಕಾರ್ಡರ್ ಅಮಾನುಷರಿಗಾಗಿದ್ದುದರಿಂದ ಮೇಲೆ ನಾನು ಹೇಳಿದ ರೀತಿ ಮುದ್ರಿಸುವದು ಸಾಧ್ಯವಿಲ್ಲ. ನಾನು ಮನುಷ್ಯನಲ್ಲವೇ ? ಆದರೆ ಅಮಾನುಷರ—ನಮ್ಮ ಗಮನದಲ್ಲಿದ್ದದ್ದು ಅನ್ಯ ಲೋಕಗಳ ಬುದ್ಧಿಜೀವಿಗಳು—ವಿಚಾರಗಳನ್ನು ಧ್ವನಿ—ಛಾಯೆ—ಭಾವನೆಗಳ ಮೂಲಕ ನನ್ನ ರೆಕಾರ್ಡರ್ ಸೆರೆಹಿಡಿಯಬಲ್ಲುದು; ಅಥವಾ ಹಾಗೆ ನಾನು ಅಂದುಕೊಂಡಿದ್ದೇನೆ. ಇನ್ನೂ ಪರೀಕ್ಷೆಗೊಳಪಟ್ಟು ದೃಢಪಡಬೇಕಷ್ಟೇ ?

ಮಧ್ಯಾಹ್ನ ದಾಟಿದೆ. ಕಾರನ್ನು ಕೋಟೆಯ ಹೊರಗೆ ಬಿಟ್ಟು (ಇಬ್ಬರೂ ದುರ್ಗಕ್ಕೆ ಕಾರುಗಳನ್ನು ತಂದಿದ್ದೇವೆ. ಈಗ ನಾವು ಬಂದದ್ದು ಸುಷಮಾಳ ಕಾರಿನಲ್ಲಿ.) ರಾಯನ ಮಂಟಪದಲ್ಲಿ ಕುಳಿತಿದ್ದೇವೆ. ದುರ್ಗದ ನಾಯಕರು ಈ ಶಿಲಾ ಮಂಟಪದಲ್ಲಿ ರಾಣಿಯರೊಡನೆ ಕುಳಿತು ಚಕ್ಕಂದವಾಡುತ್ತಿದ್ದರಂತೆ.

ಸ್ಪೇಸ್ ರಿಕಾರ್ಡರದ ಪರೀಕ್ಷೆಯು ವಿವಿಧ ಹಂತಗಳಲ್ಲಿ ನಡೆಯಬೇಕಾಗಿದೆ. ಆಡಿಯೋ ಬಟನ್ ಒತ್ತಿ ಶೂನ್ಯಕ್ಕಿಡುತ್ತೇನೆ. ಕಿವಿಯಲ್ಲಿ ಬಟನ್ ಫೋನ್ ಇಟ್ಟುಕೊಂಡಿದ್ದೇನೆ.

ಧ್ವನಿಲೋಕ ಒಮ್ಮೆಲೆ ಸ್ತಬ್ಧ! ಹಕ್ಕಿಪಕ್ಕಿಗಳ ಚಿಲಿಪಿಲಿ ಕೂಡ ನಿಂತು ಬಿಡುತ್ತದೆ. ಸುಷಮಾಳ ನಗು ಕೂಡ ಧ್ವನಿರಹಿತ. ಸಾವಕಾಶವಾಗಿ ವಾಲ್ಯೂಮ್ ಹೆಚ್ಚಿಸುತ್ತೇನೆ. ಸುಂಯ್ ಸುಯ್ ಸದ್ದು ಪ್ರಾರಂಭವಾಗುತ್ತದೆ.

ಸಿಲೆಕ್ಟಿವಿಟಿ ಸ್ವಿಚ್ಚನ್ನು ಒಂದು ನಿರ್ದಿಷ್ಟ ರೇಂಜಿಗಿಡುತ್ತೇನೆ. ಪರಿಣಾಮ ಅದ್ಭುತ! ಹೊಸದೊಂದು ಧ್ವನಿಲೋಕವೇ ಪ್ರತ್ಯಕ್ಷವಾಗುತ್ತದೆ.! ಸಂತೆಯ ಗದ್ದಲದಂತೆ! ಆದರೆ ಮನುಷ್ಯರ ಸಂತೆಯಲ್ಲ.

ಒಂದು ಗುಬ್ಬಿ ರೆಕಾರ್ಡರಿನ ಹತ್ತಿರ ಹಾರಿ ಬಂದಿದೆ. ಆದರ 'ಚಿಂವ್ ಚಿಂವ್' ನನಗೆ 'ಚಿಂವ್ ಚಿಂವ್' ಆಗಿ ಕೇಳಿಸದೆ, 'ನನಗೆ ಹೊಟ್ಟೆ ಹಸಿದಿದೆ' ಎಂದಂತೆ ಭಾಸವಾಗುತ್ತದೆ.

ನನಗೋ ದಿಗಿಲು! ಸುಷಮಾಳ ಕಿವಿಗೆ ಬಟನ್ ಫೋನ್ ಸೇರಿಸಿದಾಗ, ಆಕೆಗೆ ಖುಷಿಯೋ ಖುಷಿ! ' ಯುರೇಕಾ! ' ಎಂದು ಚೀರಿದವಳೆ ನನ್ನನ್ನು ತಬ್ಬಿಕೊಂಡು ಬಿಡುತ್ತಾಳೆ.

ಜಾನಪದ ಕಥೆಗಳಲ್ಲಿ ಪಶು-ಪಕ್ಷಿಗಳ ಭಾಷೆ ತಿಳಿಯುತ್ತಿದ್ದ ಕೆಲವರ ವರ್ಣನೆ ಬರುತ್ತದೆ. ಈಗ ನಾನು ಆ ಅದ್ಭುತವನ್ನು ಸಾಧಿಸಿದ್ದೆ. ಆದರೆ ಸ್ಪೇಸ್ ರೆಕಾರ್ಡರ್ ಮಹಾತ್ಮೆ ಇಷ್ಟಕ್ಕೆ ಮುಗಿಯಲಿಲ್ಲ. [ಮುಗಿದಿದ್ದರೆ ಎಷ್ಟು ಚನ್ನಾಗಿತ್ತು!]

ಸ್ವಿಚ್ ಇನ್ನೊಂದು ರೇಂಜಿಗಿಟ್ಟೆ. ಏನು ಗೊಂದಲವೆಂದು ತಿಳಿಯಲೇ ಇಲ್ಲ, ವಿಚಿತ್ರ ಸಂಭಾಷಣೆ ಕೇಳಿಸತೊಡಗಿತು. ಸುತ್ತ ಮುತ್ತ ಗುಬ್ಬಿಯಂಥ ಮತ್ತಾವ ಜೀವಿಗಳಿದ್ದಾರೆಂದು



ಪರೀಕ್ಷಿಸಿದೆ. ಊಹುಂ! ಸಂಭಾಷಣೆ ಮನುಷ್ಯರದೇ!

ರೆಕಾರ್ಡರನ್ನೇ ಎತ್ತಿಕೊಂಡು ಎದ್ದು ಹತ್ತಾರು ಹೆಜ್ಜೆ ಅತ್ತಿತ್ತ ಓಡಾಡಿದೆ. ಸಂಭಾಷಣೆಯಲ್ಲಿ ಕೂಡ ವ್ಯತ್ಯಾಸವಾಯಿತು.

ಇದೇನೆಂದು ಹೊಳೆಯಲೇ ಇಲ್ಲ. ಬಟನ್ ಫೋನನ್ನು ಸುಷಮಾಳಿಗೆ ಕೊಟ್ಟೆ, ಆಕೆಯೂ ದಿಗಿಲು ಬಿದ್ದಳು. ಇರಲಿ ನೋಡೋಣವೆಂದು ಸ್ವಿಚ್ಚನ್ನು ಮೂರನೆಯ ರೇಂಜಿಗೆ ತಿರುವಿದೆ.

ಈ ಬಾರಿ ಏನೂ ಸದ್ದು ಬರಲಿಲ್ಲ. ವಾಲ್ಯುಮ್ ಹೆಚ್ಚು ಮಾಡುತ್ತ ಹೋದೆ—ಪಿಸುಪಿಸುಡಿಗಳು 'ಕೇಳತೊಡಗಿದವು. ಅವು ಮನುಷ್ಯ ಮೂಲದ್ದಲ್ಲವೆಂದು ಗೊತ್ತಾದರೂ, ಮನುಷ್ಯರಂಥ ಬುದ್ಧಿಜೀವಿಗಳವೆಂದು ಗೊತ್ತಾಯಿತು.

ಒಂದರ್ಥದಲ್ಲಿ ನನ್ನ ಸ್ಪೇಸ್‌ರೆಕಾರ್ಡರ್ ಗುರಿ ಸಾಧಿಸಿತ್ತು. ಈ ಮೂರನೆಯ ರೇಂಜಿನ ಶಬ್ದಗಳು ಬೇರೆ ಲೋಕಗಳ ಬುದ್ಧಿಜೀವಿಗಳದಿರಬೇಕೆಂದು ಬಲವಾಗಿ ನಂಬಿದೆ.

ಆದರೆ ಅವು/ಅವರು ಎಲ್ಲಿದ್ದಾರೆ ? ಸುಷಮಾಳಿಗೆ ಕೂಡ ಈ ಪ್ರಶ್ನೆ ಕೇಳಿದೆ. ಆಕೆ ಸಹಜವಾಗಿ, 'ಹಾರುವ ತಟ್ಟೆಗಳಲ್ಲಿ ಬಂದು ಹೋಗಿರಬಹುದು' ಎಂದಳು. ನನ್ನ ತಲೆಯಲ್ಲಿ ಒಮ್ಮೆಲೆ ಬೆಳಕು ಬಿದ್ದಿತು ! ಎರಡನೆಯ ರೇಂಜಿನ ರಹಸ್ಯವೂ ಹೊಳೆದಂತಾಗಿ ಮೈಯಲ್ಲಿ ನಡುಕ ಬಂದಿತು.

ಅಂದರೆ ನನ್ನ ಸ್ಪೇಸ್‌ರೆಕಾರ್ಡರ್ ಟೈಮ ರೆಕಾರ್ಡರೂ ಆಗಿದೆ! ನಾನು ಕೇಳಿದ ಶಬ್ದಗಳು ಗತಕಾಲದ್ದೇ ಸರಿ. ಅರ್ಥಾತ್ ನಾನು ಈ ಶಿಲಾ ಮಂಟಪದಲ್ಲಿ ಕುಳಿತು ಇಲ್ಲಿಯ ಭೂತಗಳ ಮಾತುಕತೆ ಆಲಿಸತೊಡಗಿದ್ದೇನೆ !

ಇನ್ನು ಟೇಪ್‌ರೆಕಾರ್ಡರಿನ ವೀಡಿಯೋ ಸೆಕ್ಷನ್ ಪರೀಕ್ಷಿಸಬೇಕು. ವೀಡಿಯೋ ಬಟನ್ ಒತ್ತಿದೆ. ಅಂಗೈ ಅಗಲದ ಪರದೆಯ ಮೇಲೆ ವರ್ಣಗಳು ನಾಟ್ಯವಾಡತೊಡಗಿದವು;

ಸಿಲೆಕ್ಟಿವಿಟಿ ಸ್ವಿಚ್ಚು ಮೂರನೆಯ ರೇಂಜಿನ ಮೇಲೆಯೇ ಇದ್ದಿತು. ಸ್ವಲ್ಪ ಹೊತ್ತು ಏನೂ ವಿಶೇಷ ಕಾಣಲಿಲ್ಲ.

ಒಮ್ಮೆಲೆ ಪರದೆಯ ಮೇಲೆ ವಿಕೃತರೂಪಿಯೊಂದು ಪ್ರತ್ಯಕ್ಷವಾಯಿತು. ಅದು ಒಂದು ಅನ್ಯಗ್ರಹ ಜೀವಿಯೆಂದು ನನಗೆ ಯಾರೂ ಹೇಳಬೇಕಿರಲಿಲ್ಲ!

ಸುಷಮಾ ಚಿಟ್ಟನೆ ಚೀರಿ ಎಚ್ಚರದಪ್ಪಿದಾಗಲೇ ನನಗೆ ಆಕೆಯತ್ತ ಲಕ್ಷ್ಯ ಹೋದದ್ದು.

ಒಂದು ನಿಜವಾದ ಹಾರುವತಟ್ಟೆ ಸುಂಯೆಂದು ಹೋದಾಗಲೇ (ಪರದೆಯ ಮೇಲಲ್ಲ) ನನಗೆ ಪರಿಸ್ಥಿತಿಯ ಅರಿವಾಯಿತು.

ಸುಷಮಾ ಗಾಬರಿಯಾಗಿದ್ದು ಪರದೆಯ ಮೇಲಿನಚಿತ್ರವನ್ನು ನೋಡಿ ಅಲ್ಲ; ಆಕೆ ಹಾರುವ ತಟ್ಟೆಯನ್ನು ನೋಡಿದ್ದಳೆಂಬುದು ಖಚಿತವಾಯಿತು.

ಅಂದಿನ ಪ್ರಯೋಗವನ್ನು ಅಷ್ಟಕ್ಕೇ ಮುಗಿಸಿ, ಎಚ್ಚೆತ್ತ ಸುಷಮಾಳನ್ನು ಸಮಾಧಾನ ಪಡಿಸುತ್ತ, ಹೇಗೊ ಗೆಸ್ಟ್‌ಹೌಸಿಗೆ ವಾಪಸ್ಸಾದೆ.

●

ರಾತ್ರಿಯಲ್ಲಿ ಸುಷಮಾ ಬಡಬಡಿಸುತ್ತಿದ್ದಳು. ಸುಡುವ ಜ್ವರ ಬೇರೆ, ಡಾಕ್ಟರನ್ನು ಕರೆಯುವದು ಬೇಡವೆಂದಳು. ಆಸ್ಪಿರಿನ್ ಕೊಟ್ಟು ಮಲಗಿಸಿದೆ.

ನಸುಕಿನಲ್ಲಿ ಜ್ವರ ಇಳಿದಿತ್ತು. ನಾನು ಸುಸ್ತಾಗಿ ನಿದ್ದೆ ಹೋದೆ.

ಎಚ್ಚರಾದಾಗ ಬಿಸಿಲೇರಿತ್ತು. ಸುಷಮಾ ಹಾಸಿಗೆಯಲ್ಲಿಲ್ಲ. ವರಾಂಡದಲ್ಲಿ ಕುಳಿತಿರಬಹು

...ದೆನೋ ಎಂದು ಎದ್ದು ಹೋಗಿ ನೋಡಿದೆ. ಅಲ್ಲಿಯೂ ಇಲ್ಲ. ಗಾಬರಿಯಾಗಿ ಅತ್ತಿತ್ತ ಓಡಾಡಿ ನೋಡಿದೆ.

ಊಹುಂ! ಸುಷಮಾಳ ಸುಳುವಿಲ್ಲ. ವಾಚ್ ಮನ್ನನನ್ನು ಕರೆದು ಕೇಳಿದೆ. 'ಬಾಯೀ ಸಾಹೇಬರು ಅರ್ಧ ಗಂಟೆಯ ಹಿಂದೆ ಹೋಗಿದ್ದಾರೆ, ಒಂದು ಪೆಟ್ಟಿಗೆ ಕೈಯಲ್ಲಿತ್ತು', ಎಂದ ವಾಚಮನ್.

ಪೆಟ್ಟಿಗೆ? ಈ ಗದ್ದಲದಲ್ಲಿ ನನ್ನ ಸ್ಪೇಸ್ ರಿಕಾರ್ಡರ್ ನೆನಪೇ ಇರಲ್ಲಿಲ್ಲ. ಅದೂ ನಾಪತ್ತೆ! ಸುಷಮಾಳ ಕಾರು? ಅದೂ ಇಲ್ಲ!

ಈ ಹುಚ್ಚಿ ಮತ್ತೆ ರಾಯನ ಮಂಟಪಕ್ಕೆ ಹೊಗಿರಬಹುದೆಂದು ಊಹಿಸಿ, ವಾಚಮನ್‌ನಿಗೆ ನಿಗಾ ಇಟ್ಟಿರಲು ಹೇಳಿ, ನನ್ನ ಕಾರಿನಲ್ಲಿ ರಾಯನ ಮಂಟಪಕ್ಕೆ ಹೋದೆ. ಅಲ್ಲಿ ಕೂಡ ಸುಷಮಾ ಇಲ್ಲ! ಅಯ್ಯೋ ದೇವರೇ ಏನು ಮಾಡಲಿ? ಸುಷಮಾ ಹೋದರೆ ಹೋಗಲಿ, ನನ್ನ ಅದ್ಭುತ ಸಂಶೋಧನೆಯಾದ ಸ್ಪೇಸ್ ರೆಕಾರ್ಡರನ್ನೂ ಒಯ್ದಿದ್ದಾಳಲ್ಲ?

ಆಕೆ ಕರೆದಲ್ಲಿ ನಾನು ಬಂದದ್ದೇ ತಪ್ಪಾಯಿತು. ವಿಜ್ಞಾನವನ್ನೂ ಕಾಮವನ್ನೂ ಬೇರೆಸಬಾರದಾಗಿತ್ತು.

ಸುಷಮಾ ನಾಪತ್ತೆಯಾದ ವಿಚಾರ ಪೊಲೀಸರಿಗೆ ತಿಳಿಸಲು ಬರುವಂತಿಲ್ಲ. ಹಾಗೇನಾದರೂ ಮಾಡಿದರೆ ನನ್ನ ಬಣ್ಣವೂ ಬಯಲಾಗುತ್ತದೆ. ಜ್ವರದಿಂದ ಬಳಲಿದ ಆಕೆ ಸ್ವತಃ ಓಡಿ ಹೋಗಿರಲಾರಳು.

ಈ ರಹಸ್ಯದ ಹಿಂದೆ ಯಾರ ಕೈವಾಡವಿರಬಹುದು?

ಮತ್ತೊಂದು ಸ್ಪೇಸ್ ರೆಕಾರ್ಡರ್ ರಚಿಸಿದರಾಯಿತೆಂದು ನಿರ್ಧರಿಸಿ, ಇನ್ನೆರಡು ದಿನ ಸುಷಮಾಳ ಹಾದಿ ನೋಡಿ, ಊರಿಗೆ ಮರಳಿದೆ.

●

ನಾಲ್ಕಾರು ತಿಂಗಳುಗಳುರುಳಿದವು. ನಾನು ಮತೊಂದು ಸ್ಪೇಸ್ ರೆಕಾರ್ಡ್‌ರ್ ಸಿದ್ಧಪಡಿಸತೊಡಗಿದ್ದೆ. ಅದಿನ್ನೂ ಪೂರ್ಣಗೊಂಡಿಲ್ಲ. ಒಂದು ದಿನ ಇದ್ದಕ್ಕಿದ್ದಂತೆ ಅನಾಮಧೇಯ ಪತ್ರವೊಂದು ನನ್ನ ಮನೆಯ ವಿಳಾಸಕ್ಕೆ ಬಂದಿತು. ಪುಣ್ಯಕ್ಕೆ ನನ್ನ ಹೆಂಡತಿ ಅದನ್ನು ಒಡೆದು ಓದಿರಲಿಲ್ಲ.

ಆ ಪತ್ರದಲ್ಲಿ ನಮ್ಮ ಗೆಸ್ಟ್‌ಹೌಸ್ ಪ್ರಕರಣದ ವರ್ಣನೆ ಇದ್ದಿತು. ಆಯಿತು, ಇದೊಂದು ಬ್ಲಾಕ್‌ಮೇಲ್ ಎಂದು ಸ್ಪಷ್ಟವಾಯಿತು, ಆದರೆ ಪತ್ರ ಬರೆದವರ ಉದ್ದೇಶ ಸ್ಪಷ್ಟವಿರಲಿಲ್ಲ.

ಮುಂದಿನ ವಾರ ಮತ್ತೊಂದು ಅಂಥದೇ ಪತ್ರ. 'ರಾಮಾಚಾರೀ, ರಾಯನ ಮಂಟಪದ



ಹತ್ತಿರವೇ ನಿನ್ನ ಸುಷಮಾ ಉರಲು ಹಾಕಿಕೊಂಡು ಸತ್ತದ್ದು ನಿನಗೆ ಹೇಗೆ ಗೊತ್ತಾಗಲಿಲ್ಲ?' ಎಂದು ಕೇಳಿತ್ತು. ಅಂದರೆ? ಸುಷಮಾ ಇನ್ನಿಲ್ಲ! ದೇವರೆ, ನಮ್ಮ ಪಾಪಗಳನ್ನು ಕ್ಷಮಿಸು, ಅವಳ ಆತ್ಮಕ್ಕೆ ಶಾಂತಿ ಸಿಗಲಿ!

'ರಾಮಾಚಾರೀ ಈಗ ನೀನು ನಿರ್ಮಿಸಿದ ಇನ್ನೊಂದು ಸ್ಪೇಸ್‌ರೆಕಾರ್ಡರನ್ನೂ, ಅದರ ಬ್ಲೂಪ್ರಿಂಟನ್ನೂ ನಾಶಪಡಿಸದಿದ್ದಲ್ಲಿ, ನಿನ್ನ ಹೆಂಡತಿಗೆ ನಿನ್ನ ಇತಿಹಾಸವನ್ನೆಲ್ಲ ತಿಳಿಸುತ್ತೇವೆ' ಎಂಬರ್ಥದ ಮೂರನೆಯ ಪತ್ರ ಬಂದಿತು.

ನನಗೆ ಮತ್ತಷ್ಟು ಪೇಚಿಗಿಟ್ಟುಕೊಂಡಿತು. ಈ ಬ್ಲಾಕ್‌ಮೇಲ್ ವಿಚಾರ ಮನೆಯಲ್ಲಿ ತಿಳಿಸಿದರೆ ಹೇಗೆ? ಅಥವಾ ನಮ್ಮ ಡೈರೆಕ್ಟರರಿಗೆ?

ಇನ್ನೂ ಒಂದು ವಾರ ಉರುಳಿತು. ಹೊಸ ಸ್ಪೇಸ್ ರೆಕಾರ್ಡರ್ ನಾಶ ಪಡಿಸಿದ್ದೆ. ಬ್ಲೂಪ್ರಿಂಟನ್ನು ಸುಡಲು ಮನಸ್ಸು ಬರಲಿಲ್ಲ. ಏನು ಮಾಡಬೇಕೆಂದು ಚಿಂತಿಸತೊಡಗಿದೆ.

ಮರುದಿನ ಡೈರೆಕ್ಟರರ 'ಬುಲಾವ್' ಬಂದಿತು. ಅವರ ಚೇಂಬರಿನಲ್ಲಿ ಯಾರೋ ಆಗಂತುಕ ಅವರನ್ನು ಎಲ್ಲಿಯೋ ನೋಡಿದಂತೆನಿಸಿತು. 'ವಿಜಿಟ್ ಡಾಕ್ಟರ್......' ಎಂದು ಡೈರೆಕ್ಟರರು ಪರಿಚಯಿಸತೊಡಗಿದರು. ಆಗ ಒಮ್ಮೆಲೆ ನನಗೆ ನೆನಪಾಯಿತು.

ಎಳ್ಳಷ್ಟೂ ಸಂಶಯವಿಲ್ಲ! ಆ ವ್ಯಕ್ತಿಯೇ ಸುಷಮಾಳ ಗಂಡ!

●

ಮರುದಿನ ನನಗೊಂದು ಮೆಮೋ ಬಂದಿತು ನಿರ್ಮಾಣ ಹಂತದಲ್ಲಿದ್ದ ಸ್ಪೇಸ್ ರೆಕಾಡರ್ ಎಲ್ಲಿದೆ ಎಂದು ವಿವರಣೆ ಕೇಳಲಾಗಿತ್ತು.

ಮುಂದಾದ ಘಟನೆಗಳು ತುಂಬಾ ನಾಟಕೀಯ. ಸುಷಮಾಳ ಪತಿಯೂ ನನ್ನಂತೆ ಸ್ಪೇಸ್‌ಲಿಂಗ್ವಿಸ್ಟ್ ಎಂದು ನನಗೆ ಗೊತ್ತೇ ಇರಲಿಲ್ಲ! ನನ್ನ ವಿರುದ್ಧ ಆಪಾದನೆಗಳ ಪಟ್ಟಿ (ಚಾರ್ಜ್‌ಶೀಟ್) ಸಿದ್ಧವಾಯಿತು.

ಸ್ಪೇಸ್ ರೆಕಾರ್ಡರನ್ನೂ, ಬ್ಲೂಪ್ರಿಂಟನ್ನೂ ವೈರಿ ದೇಶಕ್ಕೆ ಮಾರಲು ಪ್ರಯತ್ನಿಸಿದ್ದೆನೆಂದು ಸಾಕ್ಷ್ಯಾಧಾರವಾಗಿ ಸಿದ್ಧಪಡಿಸಿದ್ದರು. ಸುಷಮಾ ತೆಗೆದುಕೊಂಡು ಹೋಗಿದ್ದ ಸ್ಪೇಸ್ ರೆಕಾರ್ಡರ್ ಆಕೆಯ ಪತಿಯ ಹತ್ತಿರವಿದ್ದದ್ದು ಗೊತ್ತಾದಾಗ ನನಗೆ ಎಷ್ಟು ಹೊಟ್ಟೆ ಉರಿದಿರಬೇಡ!

ಸುಷಮಾಳ ಮೇಲೆ ಸಂಶಯಪಟ್ಟ ಗಂಡ, ನಮಗರಿವಿಲ್ಲದಂತೆ ನಮ್ಮನ್ನು ಬೆಂಬತ್ತಿ ಆಕೆಯನ್ನು ಮುಗಿಸಿ, ಸ್ಪೇಸ್‌ರೆಕಾರ್ಡರನ್ನು ಅಪಹರಿಸಿದ್ದ. ಸುಷಮಾ ಅಂದು ಬೇರೆ ಗ್ರಹದವರನ್ನು ನೋಡಿ ಮೂರ್ಛೆ ಹೋಗಿದ್ದಳೆಂದು ನಾನು ತಿಳಿದಿದ್ದೆನಷ್ಟೆ, ಆದರೆ ಆಕೆ ತನ್ನ ಗಂಡನನ್ನು ನೋಡಿರಬಹುದೆಂದು ನನಗೆ ಕಲ್ಪಿಸಲು ಸಾಧ್ಯವಿಲ್ಲ. ಈಗ ಮೇಲಿನವರ ಆದೇಶದಂತೆ ಅದರ ಬ್ಲೂಪ್ರಿಂಟಿನ ಸ್ವಾಮ್ಯವನ್ನೂ ನಾನು ಕಳೆದುಕೊಂಡಿದ್ದೆ. ಹೋಗಲಿ, ಸಧ್ಯ ಆ ಅನಾಮಧೇಯ ಪತ್ರಗಳು ನಿಂತವಲ್ಲ, ಅಷ್ಟೇ ಸಾಕು. ●

## ಬಿತ್ತೆಲ್ಲ ಭರವಸೆಯುಲ್ಲ

ಹೊತ್ತು ಹೊತ್ತಿಗೆ ಕರುಳು ಕೂಗದೆ ಇರದು
ಗತ್ತು ಇದ್ದರೂ ಕೂಡ ಗೆಲವು ಸಿಗದು;
ಹುತ್ತ ಇದ್ದಲ್ಲೆಲ್ಲಾ ಹಾವು ಇದ್ದಿರಲಾರದು
ಬಿತ್ತೆಲ್ಲ ಭರವಸೆಯುಲ್ಲ···ಮಣ್ಣಿನ ಮಗ!

–ದೊಡ್ಡರಂಗೇಗೌಡ



# ನೋಯಬೇಕು, ರಾಮನ ನೆನೆಯ ಬೇಕು.

ಡಾ. ಸಿದ್ಧಯ್ಯ ಪುರಾಣಿಕ

**ನಿರೂಪಕ :** ಹದಿನಾಲ್ಕನೆಯ ಶತಮಾನದ ಉಷಃಕಾಲ. ವಾರಣಾಸಿ ಆಗ ಮಹಾತ್ಮಾ ರಮಾನಂದರ ವಾಣಿಗೆ ಕಿವಿಗೊಟ್ಟಿತ್ತು. ದೂರ ದೂರದ ವರೆಗೆ ಅವರ ಕೀರ್ತಿ ಹರಡಿತ್ತು. ನಿತ್ಯ ಪ್ರಾತಃಕಾಲದಲ್ಲಿ ಗಂಗಾಸ್ನಾನಮಾಡಿ ಮುಂದಿನ ಕಾರ್ಯಗಳನ್ನು ಆರಂಭಿಸುತ್ತಿದ್ದರು ಅವರು. ಒಂದು ದಿನ ಹೊತ್ತಾರೆ ಎದ್ದು ಗಂಗಾತೀರಕ್ಕೆ ಬಂದಿದ್ದಾರೆ: ಗಂಗಾಸ್ತೋತ್ರ ಪಠಿಸುತ್ತ ಗಂಗಾಘಾಟದ ಮೆಟ್ಟಲುಗಳನ್ನಿಳಿಯ ತೊಡಗಿದ್ದಾರೆ.

(ಗಂಗಾತರಂಗ ಸಂಗೀತದ ತೆರೆಗಳೊಡನೆ ತೇಲಿ ಬಂದ ಹಾಗೆ ಸ್ತವನ ಗಾಯನ)

**ರಮಾನಂದ :** ದೇವಿ ಸುರೇಶ್ವರಿ ಭಗವತಿ ಗಂಗೇ
ತ್ರಿಭುವನ ತಾರಿಣಿ ತರಲ ತರಂಗೇ
ಶಂಕರಮೌಲಿ ವಿಹಾರಿಣಿ ವಿಮಲೇ
ಮಮಮತಿರಾಸ್ತಾಂ, ತವ ಪದಕಮಲೇ
ಭೋ ಭುವನೇಶ್ವರಿ ಪುಣ್ಯೇ ಧನ್ಯೇ

ದೇವಿ ದ್ರವಮಯಿ ಮುನಿವರ ಕನ್ಯೆ...(ಬೆಚ್ಚಿ) ಇದಾರ ಮೇಲೆ ಕಾಲಿಟ್ಟು ಬಿಟ್ಟೆ ನಾನು? ಮನುಜ ಶರೀರದ ಮೇಲೆಯೇ ಕಾಲಿಟ್ಟಿರು ವಂತಿದೆಯಲ್ಲ! (ಕಾಲನ್ನು ಆಚೆ ತಳ್ಳಿದ ಶಬ್ದ; ಮೆಟ್ಟಿಲಿನ ಮೇಲೆ ಮಲಗಿದ್ದವನನ್ನು ಹಿಡಿದೆತ್ತಿದ ಶಬ್ದ) ಯಾರು ನೀನು ಬಾಲಕ? ನಿನ್ನ ಮೇಲೆಯೇ ಕಾಲಿರಿಸಿ ಬಿಟ್ಟೆನಲ್ಲ; ರಾಮ ರಾಮ!

**ಬಾಲಕ :** ನನ್ನ ಗುರುಗಳು ನನಗೆ ದೊರೆತರು, ಮಾನ್ಯನಾದೆ; ರಾಮ ನಾಮ ಮಂತ್ರ ನನಗೆ ದೊರೆಯಿತು, ಧನ್ಯನಾದೆ:

**ರಮಾನಂದ :** ನೀನು ಯಾರೆಂದು ನನಗೆ ಹೇಳದೆಯೇ ನನ್ನನ್ನು ಗುರುವೆಂದು ಗ್ರಹಿಸಿಬಿಟ್ಟೆಯಾ ಬಾಲಕ? ನಿನಗಿಷ್ಟವಾದವರನ್ನು ಗುರುವೆಂದು ಸ್ವೀಕರಿಸುವ ಸ್ವಾತಂತ್ರ್ಯ ನಿನಗಿರುವ ಹಾಗೆ ನನಗಿಷ್ಟವಾದವರನ್ನೇ ಶಿಷ್ಯನನ್ನಾಗಿ ಸ್ವೀಕರಿಸುವ ಸ್ವಾತಂತ್ರ್ಯ ನನಗೂ ಇದೆಯಷ್ಟೆ? ನೀನಾರು ಹೇಳು;

**ಬಾಲಕ :** ನಾನಾರೆಂಬುದು ನನಗೇ ತಿಳಿದಿಲ್ಲ ಗುರುಗಳೆ; ಅದನ್ನು ತಿಳಿದುಕೊಳ್ಳಲೆಂದೇ ತಮ್ಮ ಶಿಷ್ಯನಾಗಿದ್ದೇನೆ. ಇಂದು ಈ ಪವಿತ್ರ ಗಂಗಾಮಾತೆಯ ಪಾವನತೀರದಲ್ಲಿ, ಮನವನ್ನು ಬೆಳಗುವ ಈ ಬೆಳಗಿನ ಜಾವದಲ್ಲಿ ನನಗೆ ಗುರು ದೊರತುದು ನನ್ನ ಭಾಗ್ಯ!

**ರಮಾನಂದ :** ನಿನ್ನ ವಯಸ್ಸಿಗೆ ಮೀರಿದ ಜಿಜ್ಞಾಸೆ ನಿನ್ನಲ್ಲಿ ಅಂಕುರಿಸಿರುವುದು ಆಶ್ಚರ್ಯ, ಬಾಲಕ; ನಿನ್ನಂಥವರನ್ನು ಶಿಷ್ಯರನ್ನಾಗಿ ಸ್ವೀಕರಿಸಲು ಯಾವ ಗುರುವಿಗೂ ಆಕ್ಷೇಪವಿರಲಾರದು. ಆದರೂ ನಿನ್ನ ತಂದೆ ತಾಯಿಗಳ ಬಗ್ಗೆ ತಿಳಿದುಕೊಳ್ಳಬೇಡವೆ ನಾನು? ನೀನು ನನ್ನ ಶಿಷ್ಯನಾಗಲು ಅವರ ಒಪ್ಪಿಗೆ ಇದೆಯೆ, ಇಲ್ಲವೆ-ಎಂಬುದನ್ನು ಅರಿತುಕೊಳ್ಳಬೇಡವೆ ನಾನು?

**ಬಾಲಕ :** ತಮಗೆ ತಿಳಿಯದುದೂ ಇದೆಯೆ ಗುರುದೇವ? ತಮ್ಮ ಒಳಗನ್ನೇ ಕೇಳಿ ತಿಳಿದುಕೊಳ್ಳಲಾರಿರಾ? ತಾವು ಕರೆದರೆ ತಮ್ಮ ಕಣ್ಮುಂದೆ ಸುಳಿಯದಿರುವುದೆ ನನ್ನ ಹುಟ್ಟು ಬೆಳವುಗಳ ಪುಟ್ಟ ಘಟನೆಗಳು?

**ರಮಾನಂದ :** (ಕನಿಕರಿಸಿ) ಇವು ಕಟುಘಟನೆಗಳೇ ಇರಬೇಕು. ಅಂತೆಯೇ ಅವುಗಳನ್ನು ವಿವರಿಸಲು ಸಂಕೋಚ ನಿನಗೆ. ಆಗಲಿ, ಅಂತರಂಗದ ಅಕ್ಷಿಯನ್ನು ತೆರೆದು ನಾನೇ ಕಂಡುಕೊಳ್ಳುವೆನು.

× × ×

**ನೀರ :** ವರನ ನೀವಿಯೆಂದರೆ ನಮ್ಮ ನೀರೂನಂತಿರಬೇಕು. ನೋಡು ನೂರ.





**ನೂರ:** ಠೀವಿ ಸಹಜ ಪೀರ, ನೀಮಾನಂಥ ಪತ್ನೀರತ್ನ ಸಿಕ್ಕವರಿಗೆ.

**ಪೀರ:** ಈ ದಿಬ್ಬಣದಲ್ಲೆ ನೂರಾರು ಜನರಿದ್ದೇವೆ. ಯಾರಿಗೆ ಇಂಥ ಸೌಭಾಗ್ಯ ಸಿಕ್ಕಿದೆ?

**ನೂರ್:** ಹೊಸ ಹೆಂಡತಿಯೊಡನೆ ಮೊದಲ ಸಲ ಹೊರಟಾಗ ಯಾವ ಗಂಡನಿಗೂ ಠೀವಿ ಸಹಜ. ನೀರೂನಿಗೋ, ನಾರೀಮಣಿಯೇ ಹೆಂಡತಿಯಾಗಿ ದೊರೆತಿದ್ದಾಳೆ. ಠೀವಿಗೆ ಕೊಡುಮೂಡವೆ?

**ನೀರೂ:** ನಿಮ್ಮೆದುರು ನನ್ನ ಠೀವಿಯೆ, ಗೆಳೆಯರೆ? ಗೆಳೆಯರಿಗಿಂತ ಹಿರಿದಾದುದೇನಿದೆ ಲೋಕದಲ್ಲಿ?

**ಪೀರ:** ನೀಮೂ ನಮ್ಮ ಗೆಳೆತನದ ಒರೆಗಲ್ಲಾಗಿ ನಿನ್ನ ಮನೆ ಸೇರಲಿದ್ದಾಳೆ. ಕಾದು ನೋಡೋಣ ನಮ್ಮ ಗೆಳೆತನ ಎಷ್ಟು ಗಟ್ಟಿ ಎಂಬುದನ್ನು.

**ನೂರ್:** ಇದೋ ಲಹರ್ ತಾರಾ ಕುಂಟೆ ಬಂದಿತು. ಇಲ್ಲೇ ನೀರು ಕುಡಿದು, ಸ್ವಲ್ಪ ವಿಶ್ರಮಿಸಿಕೊಂಡು ಮುಂದೆ ಸಾಗೋಣ.

**ಪೀರ:** ಹಾಗೆಯೇ ಆಗಲಿ (ನೀರು ಕಲಕಿದ, ಸದ್ದು) ಎಷ್ಟು ತಂಪಾಗಿದೆ ನೀರು.

**ನೂರ್:** (ನೀರು ಕುಡಿದ ಶಬ್ದ) ಸೀಯಾಳದಂತೆ ಸಿಹಿಯೂ ಆಗಿದೆ ಪೀರ.

**ನೀರೂ :** ನೂರ್, ಪೀರ್, ಅದೇನು ಆ ಜೊಂಡಿನ ಮಧ್ಯದಲ್ಲಿ ಚಿಂದಿ ಸುತ್ತಿದ ಜೀವ? ಆಹಾ, ಮುದ್ದಾದ ಮಗು; ಇಂಥ ಹಾಲುಗಲ್ಲದ ಹಸುಳೆಯನ್ನು ಹೀಗೆ ತೊರೆದು ಹೋದವರು ಯಾರೇ ಇರಲಿ, ಅವರು ಅಭಾಗ್ಯರೇ ಸರಿ.

**ನೂರ್ :** ಇದು ಅಲ್ಲಾಹನು ನಿನಗಿತ್ತಿರುವ ಮದುವೆಯ ಕಾಣಿಕೆ ನೀರೂ, ಏನೊಂದೂ ತೊಂದರೆಯಿಲ್ಲದೆ ತಂದೆಯಾಗಿ ಬಿಟ್ಟೆ ನೀನು; ಕೋ, ಕಂದನನ್ನು.

**ನೀರೂ :** ನೀಮಾ ಒಪ್ಪಿದರೆ; . . . .

**ನೀಮಾ :** ಅನಾಥ ಮಕ್ಕಳ ಪಾಲನೆಪೋಷಣೆ ಅಲ್ಲಾನಿಗೆ ಪ್ರಿಯವಾದುದು. ತಂದುಕೊಡಿ ಕಂದನನ್ನು, ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನೆಂದೇ ಸಾಕಿ ಬೆಳೆಸುವೆನು.

**ನೀರೂ :** ತಾಯ್ತನವೇ ತನುತೊಟ್ಟು ಬಂದಂತಿರುವೆ ನೀನು, ನೀಮಾ;

**ನೀಮಾ :** ಮದುವೆಯಾಗುತ್ತಲೇ ನನ್ನನ್ನು ತಾಯಿಯನ್ನಾಗಿ ಮಾಡಿದ ಅಲ್ಲಾಹನು ದೊಡ್ಡವನು.

**ನೀರೂ :** ಅಲ್ಲಾ ಹೊ ಅಕಬರ್;

**ನೀಮಾ :** ಅಂತೆಯೇ ನನ್ನ ಮಗನನ್ನು ಕಬೀರನೆಂದು ಕರೆಯಬೇಕೆಂದಿದ್ದೇನೆ.

**ನೀರೂ :** ಬಹುತ್ ಅಚ್ಛಾ; ಬಹಳ ಒಳ್ಳೆಯ ಹೆಸರು. ಕಬೀರ್ ಕಬೀರ್, ಕಬೀರ್ (ಮುತ್ತಿಟ್ಟ ಸದ್ದು).

× × ×

(ಮತ್ತೆ ಮುನ್ನಿನ ನೋಟ—ಗಂಗಾತೀರದಲ್ಲಿ)

**ರಮಾನಂದ :** ನಿನ್ನ ಜನ್ಮದಾತರು ಯಾರೆಂಬುದು ತಿಳಿಯದಿದ್ದರೂ ನಿನ್ನ ಸಾಕು ತಾಯಿ ತಂದೆಯರಾರೆಂಬುದು ತಿಳಿಯಿತು ಬಾಲಕ ಕಬೀರ. ಬಹಳ ಒಳ್ಳೆಯ ಸಾಕುತಾಯಿ-ತಂದೆಯರ ವಾತ್ಸಲ್ಯವನ್ನುಂಡು ಬೆಳೆದಿರುವ ನೀನು ಜಿಜ್ಞಾಸುವೂ, ಮುಮುಕ್ಷುವೂ, ಭಗವದ್ಭಕ್ತನೂ ಆಗಿರುವುದು ಅಚ್ಚರಿಯೇನಲ್ಲ. ನಿನ್ನನ್ನು ಸಂತೋಷದಿಂದ ಶಿಷ್ಯನನ್ನಾಗಿ ಪರಿಗ್ರಹಿಸಿದ್ದೇನೆ.

**ಕಬೀರ :** ಧನ್ಯನಾದೆ ಗುರುವರ. ನನ್ನ ಕುಲವನ್ನು ನೋಡದೆ ಒಲವನ್ನು ನೋಡಿ ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿದ ತಾವು ನಿಜವಾಗಿಯೂ ಮಹಾತ್ಮರು. ನನಗೆ ತಮ್ಮ ಸನ್ನಿಧಿಯಲ್ಲಿಯೇ ಇದ್ದು ತಮ್ಮ ಸೇವೆ ಮಾಡಲು ಅನುಮತಿ ನೀಡಬೇಕೆಂದು ಬೇಡಿಕೊಳ್ಳುವೆ.

**ರಮಾನಂದ :** ಬೇಡ ಕಬೀರ, ನೀನೂ ಸನ್ಯಾಸಿಯಾಗುವುದು ಬೇಡ. ಸನ್ಯಾಸಿಯಾಗದೆ ಸದ್ಗತಿಯಿಲ್ಲವೆಂಬ ಭಾವನೆ ಸಂಸಾರಿಗಳಲ್ಲಿ ತಲೆದೋರಬಾರದು. ನೀನು ಸಂಸಾರದಲ್ಲಿದ್ದೇ ಸ್ವಪರ ಸದ್ಗತಿ ಸಾಧಿಸಿ ಸಂಸಾರಿಗಳಿಗೆ ಆದರ್ಶವಾಗಬೇಕು. ನೀನು ನಿನ್ನ ತಂದೆ ತಾಯಿಯರೊಡನೆಯೇ ಇದ್ದು ಅವರೊಡನೆ ನೇಯಬೇಕು, ರಾಮನ ನೆನೆಯಬೇಕು.

**ಕಬೀರ :** ರಾಮಭಕ್ತಿ ಗುರಿ, ಸಂಸಾರ ದಾರಿ, ಗುರಿ, ದಾರಿ-ಎರಡನ್ನೂ ತೋರಿದ ಗುರುದೇವ, ತಾವು ತೋರಿದ ದಾರಿಯಲ್ಲಿಯೇ ನಡೆದು. ತಾವು ತಿಳಿಸಿದ ಗುರಿಯನ್ನು ಮುಟ್ಟಲು ಪೂರ್ಣಪ್ರಯತ್ನ ಮಾಡುವೆನು. ತಮ್ಮ ಆಶೀರ್ವಾದದ ಶ್ರೀರಶ್ಮಿ ಸದಾ ನನ್ನನ್ನು ಸನ್ಮಾರ್ಗದಲ್ಲಿ ನಡೆಸುತ್ತಿರಲಿ.

**ರಮಾನಂದ :** ಶ್ರೀರಾಮನೇ ನಿನಗೆ ಶ್ರೀರಕ್ಷೆ. ಸಾಧಕನಾಗು, ಸಿದ್ಧನಾಗು, ಸಂಬುದ್ಧನಾಗು,

**ಕಬೀರ :** ಅನುಗ್ರಹೀತನಾದೆನು, ಹೋಗಿ ಬರುವೆ; ಮತ್ತೆ ಮತ್ತೆ ಬರುವೆ ಗುರುವಿನ ಬಳಿಗೆ.

**ರಮಾನಂದ :** ನೀನೇ ಗುರುವಾಗಲಿರುವಿ ಕಬೀರ. ಅದುವರೆಗೆ ಬೇಕೆನ್ನಿಸಿದಾಗ ಬಾ ಇಲ್ಲಿಗೆ, ನೀನೆಲ್ಲಿದ್ದರೂ ನಾನು ನಿನ್ನೊಡನೆಯೇ ಇರುವೆನೆಂದು ತಿಳಿ. ಇರುವ ತನಕ ನೀನು ನೇಯ ಬೇಕು, ರಾಮನ ನೆನೆಯ ಬೇಕು.

**ಕಬೀರ :** ನೇಯುವೆ, ರಾಮನ ನೆನೆಯುವೆ; ನೇಯುವೆ. ರಾಮನ ನೆನೆಯುವೆ; (ಹೋಗುವನು)

× × ×

**ನಿರೂಪಕ :** ತುಂಬ ಪ್ರಸನ್ನಚಿತ್ತನಾಗಿ ಮನೆಗೆ ಮರಳಿದ ಕಬೀರ. "ಹೀರಾ ಪಾಯೊ ಗಾಂಠಿ ಗಠಿಯಾಯೋ. . . ಬಾರ್ ಬಾರ್ ವಾಕೋ ಕ್ಯೋಂ ಖೋಲೆ?" ಎಂದರೆ, "ವಜ್ರವೇ ಸಿಕ್ಕಿತು; ಗಂಟು ಕಟ್ಟಿ ಇಟ್ಟುಕೊಂಡೆ. ಮತ್ತೆ ಮತ್ತೆ ತೆರೆದೇಕೆ ನೋಡಲಿ ಅದನ್ನು?" ಎಂದು ಹಾಡಿಕೊಂಡ. ಗುರುಗಳ ಆದೇಶದಂತೆ ನೇಯುವುದು. ರಾಮನನ್ನು ನೆನೆಯುವುದೂ ಜೊತೆ ಜೊತೆಯಾಗಿ ನಡೆದವು. ತಂದೆ ತಾಯಿಯರಿಗೆ ಮಗನ ಕಾಯಕನಿಷ್ಠೆ ಹಿರಿ ಹಿರಿ ಹಿಗ್ಗುವಂತೆ ಮಾಡಿದರೂ ಅವನ ರಾಮಭಕ್ತಿ ಆತಂಕಕಾರಿಯೆನಿಸಿರಬಹುದು. ತಂದೆ ನೀರೂ, ತಾಯಿ ನೀಮಾರೊಡನೆ ಈ ರೀತಿ ವಾದ ನಡೆದಿದ್ದರೂ ನಡೆದಿರಬಹುದು.

× × ×

ನೀಮಾ : ಬೇಟಾ, ಮನೆಯ ಕಾಯಕವಾದ ನೇಕಾರಿಕೆಯಲ್ಲಿ ನಿನಗಿರುವ ನಿಷ್ಠೆ ನಮಗೆ ಹಿಗ್ಗಿನ ಬುಗ್ಗೆಯೆನಿಸಿದೆ; ಆದರೆ ರಹೀಮನನ್ನು ನೆನೆಯ ಬೇಕಾದ ನೀನು ರಾಮನನ್ನು ನೆನೆಯುತ್ತಿರುವುದು ನಮ್ಮ ಕುಗ್ಗಿಗೆ ಕಾರಣವಾಗಿದೆಯಲ್ಲ.

ಕಬೀರ : ಅಮ್ಮೀಜಾನ್, ರಾಮ-ರಹೀಮರು ಒಂದೇ. ಅವರಲ್ಲಿ ನನಗೆ ಭೇದವೇ ತೋರುತ್ತಿಲ್ಲ. ಇಬ್ಬರು ಜಗದೀಶರು ಎಲ್ಲಿಂದ ಬಂದರು? ಜಗದೀಶನೊಬ್ಬನೇ. ಅವನು ಅಲ್ಲಾ, ರಾಮ, ಕರೀಮ, ಕೇಶವ, ಹರಿ ಹಜರತ ಎಂಬ ಹಲವು ಹೆಸರು ತಳೆದನು. ಚಿನ್ನ ಒಂದೇ, ಆಭರಣಗಳು ಅನೇಕ. ಅದರಂತೆ ದೇವರು. ಬೇರೆಯೆಂಬ ಭಾವವಿಲ್ಲ. ಆ ಭಾವ ಸಲ್ಲ. ಹೇಳಲಿಕ್ಕೆ ಎರಡು, ಕೇಳಲಿಕ್ಕೆ ಎರಡು-ಎಂದು ಅಂಗೀಕರಿಸಲಾಯಿತಾಗಲಿ ವಾಸ್ತವಿಕವಾಗಿ ಎರಡಿಲ್ಲ. ಒಂದೇ ಸಮಾಜ. ಒಂದೇ ಪೂಜೆ. ಭೇದವಿಲ್ಲ. ಅವನು ಒಬ್ಬನೇ. ಅವನೇ ಮಹಾದೇವ ಅವನೇ ಮಹಮ್ಮದ, ಅವನೇ ಬ್ರಹ್ಮ, ಅವನೇ ಆದಮ್ ಅ ಎಂದು ತಿಳಿ. ಒಬ್ಬನಿಗೆ ಹಿಂದೂ ಎನ್ನುತ್ತಾರೆ. ಒಬ್ಬನಿಗೆ ತುರುಕ ಎನ್ನುತ್ತಾರೆ. ಇಬ್ಬರೂ ಒಂದೇ ಭೂಮಿಯ ಮೇಲೆ ಇರುತ್ತಾರೆ. ವೇದ ಓದುವವರು ಕೆಲವರು; ಕುರಾಣ ಓದುವವರು ಕೆಲವರು. ಅವರು ಪಂಡಿತರು; ಇವರು ಮೌಲಾಗಳು. ಇಬ್ಬರೂ ಭ್ರಮಿಸಿದ್ದಾರೆ, ಮರತಿದ್ದಾರೆ. ಯಾರಿಗೂ ರಾಮನಾಗಲಿ ರಹೀಮನಾಗಲಿ ಸಿಕ್ಕಿಲ್ಲ.

ನೀರೂ : ದಾರಿ ತಪ್ಪಿ ಮಾತನಾಡ ಬೇಡ, ಬೇಟಾ; ಪಂಡಿತರಿಗೂ ಮೌಲಾಗಳಿಗೂ ದೇವರು ದೊರೆಯದಿದ್ದರೆ ಯಾರಿಗೆ ದೊರೆಯುವ ನೆಂದು ತಿಳಿದಿರುವೇ.?

ಕಬೀರ : ನನ್ನ ಗುರುಗಳು ಹೇಳಿರುವಂತೆ ನೇಯುತ್ತಲೇ ರಾಮನನ್ನು ನೆನೆಯುತ್ತ ಹೋದರೆ ನಿನಗೂ ದೊರೆಯುವನು ಅಬ್ಬಾಜಾನ್, ರಾಮನನ್ನು ನೆನೆಯಲು ಸಂಕೋಚವೆನಿಸಿದರೆ ರಹೀಮನನ್ನು ನೆನೆ.

ನೀರೂ : ದೇವರನ್ನು ಪಡೆಯುವುದು ಇಷ್ಟು ಸುಲಭವೇ, ಬೇಟಾ ? ಇದು ನಮ್ಮಂಥ ಸಂಸಾರಿಕರಿಗೆ, ಪಾಮರರಿಗೆ ಸಾಧ್ಯವಲ್ಲದ ವಿಷಯ ವೆಂದು ನಾನು ತಿಳಿದಿದ್ದೆ.

ಕಬೀರ : ಹಾಗೆ ನಾವು ತಿಳಿಯುವಂತೆ ಮಾಡಿದವರೇ ಪಂಡಿತರು, ಮೌಲಾಗಳು. ತಮ್ಮ ಪ್ರತಿಷ್ಠೆಯನ್ನು ಬೆಳೆಸಿಕೊಳ್ಳಲು, ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳಲು ಅವರುದೇವರೆಂದರೆ ಸಾಮಾನ್ಯರಿಗೆ ದುರ್ಲಭವೆಂದು ಪ್ರಚಾರ ಮಾಡಿದ್ದಾರೆ. ನಿಜವಾಗಿ ನೋಡಿದರೆ, ಜೀವಿಗೆ ದೇವನಷ್ಟು ಸಮೀಪವಿರುವವರುಇನ್ನಾರೂ ಇಲ್ಲ; ಹಡೆದು ತಂದೆ ತಾಯಿಗಳಾದ ನೀವೂ ಸ್ವಲ್ಪ ದೂರದಲ್ಲಿಯೇ ಕುಳಿತಿರುವಿರಿ; ಆದರೆ ನನ್ನ ರಾಮ ನನ್ನಲ್ಲಿಯೇ ನನ್ನ ಉಸಿರಿನ ಉಸಿರಾಗಿ, ಕರೆದರೆ ಸಾಕು "ಓ" ಎನ್ನುವ ಕರುಣಾಳುವಾಗಿ ಕುಳಿತಿದ್ದಾನೆ. ನಿನ್ನಲ್ಲಿಯೂ ಹಾಗೆಯೇ, ಅಮ್ಮೀಜಾನ್‌ನಲ್ಲೂ ಹಾಗೆಯೇ.

ನೀರೂ : ಮನೆಯಲ್ಲಿದ್ದುಕೊಂಡೇ, ಮನೆಗೆಲಸ ಮಾಡುತ್ತಲೇ ದೇವರನ್ನು ಕಾಣಬಹುದೆಂದರೆ ನಂಬದಾಗಿದೆ ನನ್ನ ಮನ,

ಕಬೀರ : ಮನೆ ಬಿಟ್ಟು ಹೋದವರೇ ದಾರಿ ತಪ್ಪುವರು ಅಬ್ಬಾಜಾನ್, ದಾರಿ ತಪ್ಪಿದವರನ್ನು ಮನೆಗೆ ಕರೆದುಕೊಂಡು ಬರುವವರೇ ನಮಗೆ ಪ್ರಿಯರು. ಮನೆಯಲ್ಲಿಯೇ ಯೋಗ, ಮನೆಯಲ್ಲಿಯೇ ಭೋಗ. ಮನೆಯನ್ನು ಬಿಟ್ಟು ವನಕ್ಕೆ ಹೋಗಬೇಕಿಲ್ಲ. ವನಕ್ಕೆ ಹೋದರೆ ದುಃಖ ಜನಿಸುವುದು. ಅದನ್ನೆಲ್ಲಿಡುವಿರಿ ? ಮನೆಯಲ್ಲಿ ಮುಕ್ತಿ. ಮನೆಯಲ್ಲಿ ವಸ್ತು, ವಸ್ತುವಿನಲ್ಲಿ ಮನೆ. ಮನೆಯಲ್ಲಿಯೇ ವಸ್ತುವನ್ನು ದೊರಕಿಸಿರಿ. ನೇಯಿರಿ, ನೆನೆಯಿರಿ, ಉಳಿದ ವಿಚಾರ ಗಳನ್ನು ಬಿಡಿರಿ.

ನೀರೂ : ಅಲ್ಲಾನನ್ನು ಪಡೆಯುವುದು ಇಷ್ಟು ಸುಲಭವಾದುದೆಂಬು ದನ್ನು ನಿನಗೆ ತೋರಿಸಿಕೊಟ್ಟ ನಿನ್ನ ಗುರು ನಿಜವಾಗಿಯೂ ಸದ್ಗುರು. ನಮಗೂ ಅವರು ತೋರಿದ ದಾರಿ ಗೊತ್ತಾಯಿತು. ಇನ್ನು ನಮಗೂ ಇದೇ ದಾರಿ.

ನೀಮಾ : ಅಡುಗೆ ಮಾಡುತ್ತ ಅಲ್ಲಾನನ್ನು ನೆನೆಯುವೆ; ನೂಲುತ್ತ ರಹೀಮನನ್ನು ನೆನೆಯುವೆ; ನೇಯುತ್ತ ಕರೀಮನನ್ನು ನೆನೆಯುವೆ. ಎಂಥ ದೊಡ್ಡಗುರಿಗೆ ಎಂಥ ಸುಲಭದಾರಿ;

× × ×

ನಿರೂಪಕ : ಕಬೀರನ ಸದ್ದಿಲ್ಲದ ಸಾಧನೆ ಸಾಗಿತು ಅಷ್ಟೇ ಸದ್ದಿಲ್ಲದೆ ಅವನ ಬೆಳ್ಳಸವೂ ಬೆಳೆಯತೊಡಗಿತು. ಕಬ್ಬಿಗೆ ಜೇನಿಟ್ಟಂತ ಕುರಿತೋದದ ಕಬೀರ ಅಪ್ರಯತ್ನಿತವಾಗಿ 'ದೋಹಾಗಳನ್ನೂ' 'ಸಬದ' ಗಳನ್ನೂ, 'ರಮೈನೀ' ಗಳನ್ನೂ ಉಸಿರತೊಡಗಿದ. ದೋಹಾಗಳು ಅನುಭವ ಸೂಕ್ತಿಗಳು. 'ಸಾಖಿ' ಎಂದೂ ಇವುಗಳನ್ನು ಕರೆಯಲಾಗಿದೆ. 'ಸಬದ' ಗಳು ಹಾಡುಗಬ್ಬಗಳು, 'ರಮೈನಿ' ಗಳು ಕಬೀರನ ಕಾವ್ಯ ಪ್ರತಿಭೆಯ ಪತಾಕೆಗಳು, ಭಕ್ತನ ಹೃದಯದ ಭಾವಪರವಶತೆ ಹೃದ ಯಂಗಮವಾಗಿ ಹೊರಹೊಮ್ಮಿದ ಈ ಭಜನೆಗಳಲ್ಲಿ ಅವನ ಅನುಯಾ ಯಿಗಳು ಇವುಗಳನ್ನು ಶ್ರದ್ಧೆಯಿಂದ ಬರೆದಿಟ್ಟುಕೊಂಡರು. ಇವುಗಳ ಪರಿಣಾಮರಮಣೀಯತೆಗೆ ಮಾರುಹೋದ ಶ್ರೀ ಸಾಮಾನ್ಯರು ಇವು ಗಳನ್ನು ಹಾಡಿ ಹಿಗ್ಗತೊಡಗಿದರು ಹೀಗೆ;

ಕೂಡು ಹಾಡು : (ಮೂಲ :- ತೋಕೋ ಪೀವ ಮಿಲೇಂಗೆ ಘುಂಘಟ ಖೋಲರೇ ದ ಕನ್ನಡ ಅನುವಾದ)

ಖಂಡಿತ ಕಾಣುವೆ ನನ್ನ ಪ್ರಿಯನ ನೀ
ತೆರೆ ತೆರೆ ಅಂತರ ಪಟವ
ಒಡೆಯನಿರುವನು ಎಲ್ಲರಲ್ಲಿಯೂ
ಏಕೆ ನುಡಿವೆ ಕಟುವಚನ ?
ಯಾಕೆ ಹಣದ, ಹರೆಯದ ಹೆಮ್ಮೆ
ಪಂಚರಂಗಿ ತನು ಮಿಥ್ಯ
ಜ್ಯೋತಿ ಬೆಳಗಿಸು ಶೂನ್ಯ ಮಹಲಿನಲಿ
ಅಲೆಯ ಬೇಡ ಅಳಲುತ್ತ;
ರಂಗಮಹಲಿನಲಿ ಹುಡುಕಿಬಿಟ್ಟೆನು
ನನ್ನಮೂಲ್ಯ ಪ್ರಿಯನನ್ನು
ಕುಬೀರ ಹೇಳುವ : ಇದೆ ಆನಂದವು,
ಕೇಳುವೆ ಅನಹದ ಧ್ವನಿಯನ್ನು

ನಿರೂಪಕ : ಕಬೀರನ ರಚನೆಗಳು ಜನಪ್ರಿಯವಾಗಲು ಅನೇಕ ಕಾರಣಗಳಿವೆ. ಮೊದಲನೆಯದಾಗಿ ಭಾರತದ ಭಕ್ತಿಮಾರ್ಗ, ಸೂಫೀ ಪಂಥ, ನಾಥಪಂಥ ಯೋಗದರ್ಶನ ಇತ್ಯಾದಿಗಳ ಸಾರವನ್ನು ಹೀರಿ ಸಿದ್ಧವಾಗಿದ್ದ ಅವನ ಸಮನ್ವಯದರ್ಶನ, ಸಮತ್ವದೃಷ್ಟಿ, ಸುವರ್ಣ ಮಧ್ಯಮ ಮಾರ್ಗಗಳು : ಎರಡನೇಯದಾಗಿ ಮುನ್ನಿನ ದಾರ್ಶನಿಕ- ಧಾರ್ಮಿಕ ಪ್ರಭಾವಗಳಿಗೆ ಒಳಗಾಗಿಯೂ ನಿರಂಕುಶ ಮತಿತ್ವವನ್ನುಳಿಸಿ



ಬೆಳೆಸಿಕೊಂಡು, ಸ್ವತಂತ್ರ ಚಿಂತನೆಯ ಕಾಂತಿಯಿಂದ ಕಳಕಳಿಸುವ ಅವನ ಕೃತಿಗಳ ಕಾಣಿಕೆ : ಮೂರನೆಯದಾಗಿ ಧರ್ಮಾಡಂಬರಗಳು, ಅಂಧವಿಶ್ವಾಸಗಳು ಸ್ಪರ್ಶಾಸ್ಪರ್ಶ ಭಾವನೆಯು. ಕಪಟಾಚರಣೆಗಳು ಎಲ್ಲಿಯೇ ಕಂಡರೂ ಖಂಡಿಸಿದ ಕೆಚ್ಚು : ನಾಲ್ಕನೇಯದಾಗಿ ನಿಷ್ಕಾಮಭಕ್ತಿಯ, ಸಹನಶೀಲತೆಯ, ಸತ್ಸಂಗದ, ಮಾನವೀಕರಣದ, ಅಂತರ್‌ಜಾತಿಯ ಸಾಮರಸ್ಯದ ಪ್ರಭಾವಪೂರ್ಣ ಪ್ರಚಾರ; ಐದನೇಯದಾಗಿ ವ್ರಜ, ರಾಜಸ್ಥಾನಿ, ಖಡೀಬೋಲಿ, ಅವಧಿ, ಭೋಜಪುರಿ ಇತ್ಯಾದಿ ಭಾಷಾಭೇದಗಳ ಸಮುಚಿತ ಬಳಕೆಯಿಂದ ವಿನೂತನ ಭಾಷಾಶೈಲಿಯೊಂದನ್ನು ಸೃಷ್ಟಿಸಿಕೊಂಡುದು : ಆರನೆಯದಾಗಿ ಕಣ್ಣಾರೆ ಕಂಡದ್ದನ್ನು–ಹೇಳಿದುದು, ಸರಳವಿದ್ದುದನ್ನು ಜಟಿಲವಾಗಿಸದೆ, ತೊಡಕಾಗಿದ್ದುದನ್ನು ಬಿಡಿಸಿ ಹೇಳಿದುದು, ಧರ್ಮದ ದಳ್ಳಾಳಿಗಳ ಕರಾಳ ಕಪಿಮುಷ್ಟಿಯಿಂದ ಮುಗ್ಧಜನರನ್ನು ಪಾರುಮಾಡಿ ತಮ್ಮ ತಮ್ಮ ಮನೆಗಳಲ್ಲಿಯೇ ತಮ್ಮ ತಮ್ಮ ಕಾಯಕ ಮಾಡುತ್ತಲೇ ಸದ್ಗತಿ ಪಡೆವ ದಾರಿಯನ್ನು ಅವರಿಗೆ ತೋರಿದುದು; ಕೊನೆಯದಾಗಿ ತನ್ನದೇ ಆದ ಮತವನ್ನೋ ಪಂಥವನ್ನೋ ಪ್ರವರ್ತಿಸಲು ಪ್ರಯತ್ನಿಸದಿದ್ದುದು ಇಲ್ಲಿ ಕೇಳಿ?

**ಕೂಡು ಹಾಡು :** ಧರ್ಮಿಯಲ್ಲ ನಾ —

ನಧರ್ಮಿಯಲ್ಲ ನಾ,
ಅಲ್ಲ ಸಂನ್ಯಾಸಿ ಕಾಮುಕನು
ಒಡೆಯನಲ್ಲ ನಾ
ಗುಲಾಮನಲ್ಲ ನಾ
ಅಲ್ಲ ಸ್ವತಂತ್ರ — ಬಂಧಿತನು
ವಿರಕ್ತನಲ್ಲ ನಾ
ಲೋಭಿಯಲ್ಲ ನಾ
ಅಲ್ಲಸಂಗಿ–ನಿಸ್ಸಂಗಿ
ಹೋಗೆನು ಸ್ವರ್ಗಕೆ
ಹೋಗೆನು ನರಕಕೆ
ಕ್ರಿಯಾತೀತನಾ ಕ್ರಿಯೆಮಾಡಿ'
ವಿರಳವೀ ಪರಿಯ
ಆತ್ಮದ ಅರಿವು
ಯಾರಿಗಿದೆಯೊ ಅವನಮರ
ಪ್ರಸಾರ ಮಾಡನು
ಹೊಸತು ಮತವನು
ಇರುವುದ ಕೆಡಿಸ ಕಬೀರ.





**ನಿರೂಪಕ :** ಕಬೀರನ ಮನೆಯೆ ಮತವಾಯಿತು. ಬೆಳಗಿನಿಂದ ಸಂಜೆ ವರೆಗೆ ಸತ್ಸಂಗ. ಹಗಲೂಟ ಆದರೆ ಆಯಿತು, ಇಲ್ಲವಾದರೆ ಇ ಊಟಕ್ಕೆ ಕರೆದರೆ ಆಗ ಹಾಜರಿರುವ ಎಲ್ಲರನ್ನೂ ತನ್ನ ಪತಿ ಊಟ ಕರೆಯುಉವನೆಂಬುದನ್ನು ಅರಿತಿದ್ದ ಅವನ ಹೆಂಡತಿ ಜನರಿರುವ ಅವನನ್ನು ಊಟಕ್ಕೆ ಕರೆಯುತ್ತಿರಲಿಲ್ಲ. ಕಬೀರನ ಸುತ್ತುಮು ಜನರಿಲ್ಲದೆ ಸಮಯವೂ ಇರುತ್ತಿರಲಿಲ್ಲ. ಅವನ ಹೆಂಡತಿ ಒ ಗೊಳಗೇ ತಳಮಳಿಸುತ್ತಿದ್ದಳು. ಎಲ್ಲರನ್ನು ಎಬ್ಬಿಸಿದರೆ ಅವರೆಲ್ಲ ಸಾಲುವಷ್ಟು ಆಹಾರ ಮನೆಯೊಳಗಿಲ್ಲ; ಎಬ್ಬಿಸದಿದ್ದರೆ ಪ ಉಪವಾಸ, ಒಂದುದಿನ ಬೆಳಗಿನಿಂದ ರಾತ್ರಿಯವರೆಗೆ ಜನರು ಬಂ ಬಂದರು. ಇನ್ನು ಪತಿಯನ್ನು ಊಟಕ್ಕೆ ಎಬ್ಬಿಸಬೇಕೆನ್ನುವಷ್ಟರ ಇನ್ನೊಬ್ಬ ದುಃಖಿ ಬಂದನು - ಯಾರನ್ನು ನೋಡಿದರೂ ದುಃ ಗಳನ್ನೇ ನೋಡಿದೆನೆಂದು ನುಡಿದಿರುವ ಕಬೀರ ಅಪರಾತ್ರಿಯಲ್ಲಿಯ ಆ ದುಃಖಿಯನ್ನು ನಗೆಮೊಗದೊಡನೆಯೇ ಸ್ವಾಗತಿಸಿದ. ಮುಂ ನಡೆದುದು ಹೀಗೆ;

**ಕಬೀರ :** ಬಾ, ಬಂಧು; ಇಷ್ಟು ಅಪರಾತ್ರಿಯಲ್ಲೆ ಬರಬೇಕಾದ ಯಾವುದೋ ಕಠಿಣ ಸಮಸ್ಯೆ ಎದುರಾಗಿರಬೇಕು ನಿಮಗೆ.

**ಕಬೀರ ಪತ್ನಿ :** ನಿಮಗೆ ಎಲ್ಲರ ಸಮಸ್ಯೆಗಳ ಬಗೆಗೂ ಸಹಾನುಭೂ ಇದೆ. ನನ್ನ ಸಮಸ್ಯೆಯ ಬಗ್ಗೆ ಒಮ್ಮೆಯಾದರೂ ವಿಚಾರಿಸಿರುವಿರಾ

**ಕಬೀರ :** ಹಗಲಿರುಳೂ ಇಲ್ಲಿಯೇ ಇರುತ್ತೇನೆ. ನಿನ್ನ ಸಮಸ ಯಾವುದೆಂಬುದನ್ನು ನೀನು ನನಗೆ ಹೇಳಲೇ ಇಲ್ಲವಲ್ಲ;

**ಕಬೀರ ಪತ್ನಿ :** ಹೇಳದಿದ್ದರೆ ತಿಳಿಯದಂಥ ಸಮಸ್ಯೆಯೇನಲ್ಲ ನನ್ನದು ಯಾವಾಗ ತಿಳಿದುಕೊಳ್ಳುವಿರೋ ತಿಳಿದುಕೊಳ್ಳಿರಿ. (ಸಿಡುಕಿನಿಂದ ಹೋಗುವಳು)

**ಕಬೀರ :** ಹೇಳು ಬಂಧು. ಯಾವ ಪ್ರಶ್ನೆ ನಿಮ್ಮ ತಲೆ ತಿನ್ನುತ್ತಿದೆ?

**ಆಗುಂತುಕ :** ಅಷ್ಟೊಂದು ಮಹತ್ವದ ಪ್ರಶ್ನೆಯೆನಿಲ್ಲ ಸಂತಶಿರೋ ಮಣಿ ಆದರೂ ಅದಕ್ಕೆ ಉತ್ತರ ದೊರೆತರೆ ನನ್ನ ಬಾಳಿ ನೆಮ್ಮದಿ.

**ಕಬೀರ :** ಉತ್ತರ ಹುಡುಕೋಣ, ಆದರೆ ಉತ್ತರ ದೊರೆಯುವುದಿಲ್ಲ ವೆಂದು ನೆಮ್ಮದಿ ಕಳೆದುಕೊಳ್ಳುವುದು ಬೇಡ. ಈ ಜಗತ್ತೇ ಹೀಗೆ; ಜೀವನವೇ ಹೀಗೆ; ಈ ಕ್ಷಣ ಉಪ್ಪು, ಮರುಕ್ಷಣದಲ್ಲಿ ಸಿಹಿ.

**ಕಬೀರ ಪತ್ನಿ :** (ನೇಪಥ್ಯದಲ್ಲಿಯೇ) ಇದರ ಪರೀಕ್ಷೆ ಮಾಡಿಯೇ ಬಿಡುವೆ. ಹೇಗೂ ಎರಡು ಬಟ್ಟಲು ಹಾಲಿದೆ. ಇದರಲ್ಲೆ ಸಾಕಷ್ಟು

ಉಪ್ಪುಬೆರೆಸಿ, ಕೊಟ್ಟು ಇವರನ್ನು ಒನಗೆ ಹಚ್ಚಿಬಿಡುವೆ. (ಪ್ರಕಟ) ಯೋಗಿಗಳೇ ಇದಿಷ್ಟು ಹಾಲನ್ನಾದರೂ ಕುಡಿದು ನಿಮ್ಮ ಎಂದೂ ಮುಗಿಯದ ಮಾತನ್ನು ಮುಂದುವರಿಸಿರಿ (ಹಾಲಿಟ್ಟುಹೋಗುವಳು)

ೀರ : ಹಾಲು ಕುಡಿ ಬಂಧು.

ಗಂತುಕ : (ಸ್ವಲ್ಪ ಕುಡಿದು ಸ್ವಾಗತ) ಎಷ್ಟು ಕಹಿಯಾಗಿದೆ ಇದು! ಹೇಗೆ ಕುಡಿಯುವುದಪ್ಪ! ಕಬೀರದಾಸರೇನೋ ಹರ್ಷಚಿತ್ತರಾಗಿಯೇ ಕುಡಿಯುತ್ತಲಿದ್ದಾರೆ. ಮರೆತು ನನ್ನ ಹಾಲಿನಲ್ಲಿ ಮಾತ್ರ ಸಕ್ಕರೆಗೆ ಬದಲಾಗಿ ಇನ್ನೇನನ್ನಾದರೂ ಬೆರೆಸಿ ಬಿಟ್ಟಿರಬಹುದೆ ?

ೀರ ಪತ್ನಿ : ಸಕ್ಕರೆ ಸಾಕಾಯಿತೆ ?

ಬೀರ : ನನಗಂತೂ ಸಾಕಷ್ಟಿತ್ತು. ಅವರನ್ನು ಕೇಳು.

ಬೀರ ಪತ್ನಿ : ಕೇಳುವುದೇನು, ಅವರ ಬಟ್ಟಲಲ್ಲಿ ಹಾಲು ಹಾಗೆಯೇ ಇದೆ. ಸಕ್ಕರೆ ಕಡಮೆಯಾಗಿರಲೇ ಬೇಕು. ಕೊಳ್ಳಿ (ಮತ್ತಷ್ಟು ಉಪ್ಪು ಬೆರೆಸಿ ಹೋಗುತ್ತ) ಇಂಥ ಪುಂಡ ಪೋಕರಿಗಳಿಗೆ, ಹೆಂಡತಿ ಯೊಡನೆ ಬಾಳುವೆ ಮಾಡಲಾಗದ ಹೇಡಿಗಳಿಗೆ ಈ ಮನೆಯೊಂದು ಮಠವಾಗಿದೆ; ಯಾರು ಉಂಡರೇನು, ಉಪವಾಸವಿದ್ದರೇನು ಇವರಿಗೆ ಇಲ್ಲಿ ನಡೆಯಬೇಕು ಉಪಚಾರ;

ಬೀರ : ನಿಮ್ಮ ಪ್ರಶ್ನೆಗೆ ಉತ್ತರ ದೊರೆಯಿತೆ ?

ಂತುಕ : ದೊರೆಯಿತು ಸ್ವಾಮಿ ಸತ್ಸಂಗ ಸೇರದ, ಸದಾ ದುರು ಗುಟ್ಟುವ ಚಂಡಿಯಂಥ ಸತಿಯೇ ನನ್ನ ಪ್ರಶ್ನೆ ಕೂಡ ನಿಮ್ಮ ಹಾಲಿನಲ್ಲಿಯೂ ಉಪ್ಪನ್ನೇ ಹಾಕಿರಬೇಕು. ನೀವು ನಗುನಗುತ್ತಲೇ ಕುಡಿದಿರಿ. ನಾನು ಮಾತ್ರ ಮುಖ ಕಿವುಚಿಕೊಂಡೆ.

ಕಬೀರ : ಜೀವನದಲ್ಲಿ ಇವೆಲ್ಲ ಇದ್ದದ್ದೆ. ಇವನ್ನು ಮನಸ್ಸಿಗೆ ಹಚ್ಚಿ-ಕೊಳ್ಳಬಾರದು ಬಂಧು, ಇವುಗಳಿಗೆ ತಾಳ್ಮೆಯೇ ತರಣೋಪಾಯ!

ಆಗಂತುಕ : ಜೀವನವನ್ನು ಎದುರಿಸುವುದು ಹೇಗೆಂಬುದು ತಿಳಿಯಿತು, ಮರಣವನ್ನೆಂತು ಎದುರಿಸುವುದು?

ಕಬೀರ : ಮರಣ ನಿಶ್ಚಿತ; ಅದರ ಆಗಮನ ಅನಿಶ್ಚಿತ. ಯಾವಾಗ ಬಂದರೂ ಅದನ್ನು ಸ್ವಾಗತಿಸಲು ಸಿದ್ಧನಾಗಿರಬೇಕು. ತೋಟಗಾರ ತೋಟಕ್ಕೆ ಬರುತ್ತಾನೆ; ಮೊಗ್ಗುಗಳು ಅರಚುತ್ತಿವೆ; "ಇಂದವನು ಅರಳಿದ ಹೂಗಳನ್ನು ಕಿತ್ತುಕೊಳ್ಳುತ್ತಾನೆ; ನಾಳೆ ನಮ್ಮ ಸರದಿ" ಹೀಗೆ ಸಾವು ನಿಶ್ಚಿತವೆಂದರಿತು ಅದನ್ನು ಸ್ವಾಗತಿಸಲು ಸದಾ ಸಿದ್ಧನಾಗಿರಬೇಕು.

ಆಗಂತುಕ : ವಸ್ತುಸ್ಥಿತಿ ಹೀಗಿದ್ದೂ ತಾವು ಚಿರಂಜೀವಿಗಳೆಂದು ಕೆಲವರು ಗರ್ವಿಸುವರಲ್ಲ?

ಕಬೀರ : ಅಂಥವರ ಬಗ್ಗೆ ಹೀಗೆ ಹೇಳಬೇಕಾಗುತ್ತದೆ: "ಮಣ್ಣು ಕುಂಬಾರನಿಗೆ ಹೇಳಿತು;" ನನ್ನನ್ನು ಏಕೆ ತುಳಿಯುತ್ತೀಯೆ? ಒಂದು ಕಾಲ ಬರುತ್ತದೆ, ಆಗ ನಾನು ನಿನ್ನನ್ನು ತುಳಿಯುವೆ;" ಎಂದು ಮೇಲಾಗಿ, ನನ್ನೊಬ್ಬನಿಗೇ ಮೃತ್ಯು, ಮುಪ್ಪು, ಆಪತ್ತುಗಳಿದ್ದಿದ್ದರೆ ನಾನು ಅಂಜಬೇಕು. ಆದರೆ ಇವು ಎಲ್ಲರಿಗೂ ಇವೆಯಲ್ಲ. ಆದ್ದರಿಂದ ಯಾರೇಕೆ ಇವುಗಳಿಗೆ ಅಂಜಬೇಕು?

ಆಗಂತುಕ : ನನ್ನ ಪ್ರಶ್ನೆಗಳಿಗೆಲ್ಲ ಸರಿಯಾದ ಉತ್ತರ ನೀಡಿದಿರಿ. ಕೃತಜ್ಞತೆಗಳು.

ಕಬೀರ : ರಾಮನಿಗೆ ಸಲ್ಲಲಿ ಈ ಕೃತಜ್ಞತೆಗಳು. ಇನ್ನು ನಿಮ್ಮ ಕೈ ಕೆಲಸಮಾಡಲಿ; ಮನ ರಾಮನನ್ನು ನೆನೆಯಲಿ;




ಹಟಾ ಮಾಡಬೇಡ ಮರೀ..... ಬೇಗ
ಇಳಿದು ಬಿಡೋ.. ಶಾಲೆ ಬಂತು.




ನೀನೂ ನನ್ ಜೊತೆ
ಕೂತ್ರೆ ಮಾತ್ರ ನಾನೂ ಕೂಡ್ತೀನಿ ಅಮ್ಮ....
ಯಾಕಂದ್ರೆ...ನಂಗೆ ಇಲ್ಲಿ ಯಾರು ಮಮ್ಮ
(ಎದೆಹಾಲು) ಕುಡಿಸ್ತಾರೆ?

**ನಿರೂಪಕ :** "ಸ್ವಾಮಿ, ಇಷ್ಟು ಮಾತ್ರಕೊಡು; ನನ್ನ ಪರಿವಾರದ ಪೋಷಣೆಯಾಗಬೇಕು; ನಾನು ಹಸಿದಿರಬಾರದು; ಮನೆಗೆ ಬಂದ ಸಾಧುಗಳೂ ಹಸಿದು ಹೋಗಬಾರದು;" ಎಂಬುವದಷ್ಟೇ ಕಬೀರನ ಕೋರಿಕೆ. ಜೀವನಲ್ಲಿ, ಇಷ್ಟೂ ನಿರಾತಂಕವಾಗಿ ನಡೆಯುತ್ತಿತ್ತೆಂದು ಹೇಳಲಾಗದು ನೇಯ್ದುದ್ದು ಅದೂ ಅನ್ಯಮನಸ್ಕನಾಗಿ ನೇಯುದ್ದು ಪರಿವಾರಕ್ಕೂ ಅತಿಥಿ ಅಭ್ಯಾಗತರಿಗೂ ಹೇಗೆ ಸಾಲಬೇಕು? ಮೇಲಾಗಿ, ಇದು ಅವನ ಗುರಿಯೇ ಆಗಿರಲಿಲ್ಲ. ಅವನ ವೃತ್ತಿಯ ತಾತ್ತ್ವಿಕ ತಳಹದಿಯೇ ಹಾಗಿತ್ತು.

**ಕೂಡು ಹಾಡು :** (ಮೂಲ: ರಘುನಿ, ರಘುನಿ, ಬಿನಿ, ಛದರಿಯಾ ಹಾಡಿನ ಅನುವಾದ,)

ತೆಳ್ಳನೆ ತೆಳ್ಳನೆ ಚಾದರ ನೆಯ್ದಿದೆ,
ಏನುದ್ದೇಶವು ಇದಕೆ ?

ಅಡ್ಡಳೆ ಯಾವುದು, ಉದ್ದಳೆಯಾವುದು,
ಯಾವ ತಂತು ಈ ಚಾದರಕೆ,

ಇಡಾ ಪಿಂಗಳಾ ಉದ್ದಳೆ, ಅಡ್ಡಳೆ
ಸುಷುಮ್ನೆಯೆಂಬ ನಾಡಿ,

ಅಷ್ಟಕಮಲದಲಿ ತಿರುಗುವ ರಾಟೆ,
ಪಂಚತತ್ತ್ವ ತ್ರಿಗುಣವ ಕೂಡಿ !

ಹತ್ತು ತಿಂಗಳು ಹಿಡಿದುವು ಸ್ವಾಮಿಗೆ
ಬಡಿದು ನೆಯ್ಯಲಿದನು;

ಸುರ-ನರ-ಮುನಿಗಳು ಹೊದ್ದು ಹೊದ್ದು ಬಲು
ಹೊಲಸು ಮಾಡಿದರು ಇದನು;

ಜತನದಿ ಹೊದ್ದು ಕಬೀರನು ಕೊಟ್ಟನು
ಇದ್ದಂತೆಯೆ ಸ್ವಾಮಿಗಿದನು;

**ನಿರೂಪಕ :** "ಯಾವ ಕುಲದಲ್ಲಿ ಭಕ್ತನು ಜನಿಸುವನೋ ಆ ಕುಲವೇ ಭಾಗ್ಯಶಾಲಿಯಾದುದು" ಎಂದು ನಂಬಿ ನಡೆದ ಕಬೀರ ಜಾತ್ಯತೀತತೆಯ ಜ್ಯೋತಿರ್ಧರ, "ಆ ಕುಲ ಆ ವರ್ಣದ್ದು, ಈ ವರ್ಣದ್ದು ಎಂದು ಗಣಿಸಬೇಡಿರಿ; ಬಡ ಬೆಲ್ಲದ ಎಂದು ಎಣಿಸಬೇಡಿರಿ, ಅದು ತನ್ನ ನಿರ್ಮಲ ಪರಿಮಳದಿಂದ ಪೂತವಾದುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಯಾರೂ ಭಕ್ತನಿಗೆ ಸಮಾನರಾದವರಲ್ಲ. ಯಾವ ಊರು ಯಾವ ತಾಣ ಭಕ್ತನ ಸಂಗವನ್ನು ಪಡೆಯುವುದೋ ಅದು ಪವಿತ್ರವಾಗುವುದು, ಧನ್ಯವಾಗುವುದು, ಪವಿತ್ರನಾಮವನ್ನು ಜಪಿಸುವುದರಿಂದ ಅವನು ತನ್ನ ಉದ್ಧಾರವನ್ನು ಮಾಡಿಕೊಳ್ಳುವನಲ್ಲದೆ ಕುಲವನ್ನೂ ಉದ್ಧರಿಸುವನು; ಮತ್ತು ನೀರಿನಲ್ಲಿ ತಾವರೆಯು ಇರುವಂತೆ ಇರುವನು, ಪ್ರಪಂಚದಲ್ಲಿ ಎಲ್ಲ ಜನರು ಸಹ ಇದರಂತೆ ಇರಬೇಕೆಂದು ಕಬೀರನು ಹೇಳುತ್ತಾನೆ," ಎಂದು ಸಾರಿದ ಕಬೀರನಿಗೆ ನಾವು ಕಿವಿಗೊಟ್ಟರೆ ಮತೀಯ ಸೌಹಾರ್ದ ಗುಣಗೌರವದ ಅಸ್ತಿವಾರದ ಮೇಲೆ ನಿಂತ ಭಕ್ತಸಮಾಜ, ಜೀವನವನ್ನು ತಿರಸ್ಕರಿಸದೇ ನಿರ್ಮಲೀಕರಿಸಿ ಬಾಳುವ ಬುದ್ಧಿ ಸುಲಭವಾಗಿ ಅಳವಡುವನು. ಆದರೆ ನಾಯಿಯು ಬಾಲದಂತಿರುವ ಮಾನವ ಸಮಾಜ ಕಬೀರ ಬದುಕಿರುವಾಗಲೂ ತನ್ನ ಡೊಂಕನ್ನು ತಿದ್ದಿಕೊಳ್ಳಲಿಲ್ಲವೇನೋ;

**ಕೂಡು ಹಾಡು :** ಅಂಜಿಕೆ ಬರುತಿದೆ
ನಗೆಯೂ ಬರುತಿದೆ
ವಿಚಿತ್ರ ಕಾಲವು ಬಂತು

ಸೂಳೆಗೆ ಚಿನ್ನವು
ಒಕ್ಕೈಯನ್ನವು
ಸಾಧುಗೆ ಸಿಗದಾಯ್ತು;

ಹರಿಕಥೆಯಿದ್ದರೆ
ಉದ್ದಕು ನಿದ್ದೆಯು
ಚೈನಿಗೆ ನಿದ್ರೆಯೆ ಹೋಯ್ತು;

ಭಂಗಿಗೆ ನಮನ
ತಂಬಾಕು ಸೇವನ
ಗಾಂಜಾ ಪೂಜೆಯ ವಸ್ತು;

ಗುರು ಚರಣಾಮೃತ
ನೇಮ ತಿರಸ್ಕೃತ
ಕುಡಿಯ ಸೆರೆಯ ಬಲು ಖುಷಿಯು

ತಿರುಗು ಮುರುಗು ನಡೆ
ಜಗದಲಿ ಎಲ್ಲೆಡೆ
ಅಂತೆಯೆ ಅಂಜಿದೆ ಅಸುವು:

**ನಿರೂಪಕ :** ಕಬೀರ ಬದುಕಿದ್ದಾಗ ಅವನ ಬೋಧೆಗೆ ಕಿವಿಗೊಡದ, ಒಂದುಗೂಡದ ಹಿಂದುಗಳೂ ಮುಸಲ್ಮಾನರೂ ಅವನು ದೇಹವಿಟ್ಟಾಗ ಅವನ ಶವಸಂಸ್ಕಾರದ ಹಕ್ಕಿಗಾಗಿ ಹೊಡೆದಾಡಿದರಂತೆ.

**ಹಿಂದುಗಳು ;** ಕಬೀರ ರಮಾನಂದರ ಶಿಷ್ಯ; ಆದುದರಿಂದ ಹಿಂದೂ ಪದ್ಧತಿಯಂತೆ ಅವನ ಶವಕ್ಕೆ ಅಗ್ನಿಸಂಸ್ಕಾರವಾಗಬೇಕು.

**ಮುಸಲ್ಮಾನರು :** ಕಬೀರನ ತಂದೆತಾಯಿಗಳು ಮುಸಲ್ಮಾನರು. ಆದರಿಂದ ಮುಸ್ಲಿಂ ಪದ್ಧತಿಯಂತೆ ಅವನ ಶವ ದಫನವಾಗಬೇಕು.

**ನಿರೂಪಕ:** ಇಬ್ಬರೂ ಸಾಕಾಗುವವರೆಗೆ ಜಗಳಾಡಿದ ಮೇಲೆ ಕಬೀರನ ಶವಕ್ಕೆ ಹೊದಿಸಿದ್ದ ಹಚ್ಚಡ ತೆಗೆದು ನೋಡಲು ಅಲ್ಲಿ ಸೌರಭ ಸೂಸುವ ಹೂಗಳು ಮಾತ್ರ ಇದ್ದವಂತೆ. ಅಲ್ಲಿ ಅವು ಇದ್ದುವೋ ಇಲ್ಲವೋ—ಆದರೆ ಆವರ ಕೃತಿ ಕುಸುಮಗಳು ಮಾತ್ರ ಇಂದಿಗೂ ಬಳಿಗೆ ಬಂದವರಿಗೆ ಸಿರಿಗಂಪನ್ನು ಸೂಸುತ್ತ ಉಳಿದಿವೆ-ಉಳಿಯುವುವು ಕೊನೆಯ ವರೆಗೆ. ಜಾತೀಯತೆಯ ದುರ್ಗಂಧ ಹರಡಿರುವೆಡೆಗಳಲ್ಲಿ ಈ ಕೃತಿಕುಸುಮಗಳ ಪರಿಮಳವನ್ನು ಹಬ್ಬಿಸಬೇಕು; ಸಂಕುಚಿತತೆಯ ದುರ್ವಾಸನೆ ತುಂಬಿರುವ ತಾಣಗಳಲ್ಲಿ ಇವುಗಳ ಅಮಂದ ಸುಗಂಧವನ್ನು ಪಸರಿಸಬೇಕು. ಆಗ ಅವನ ಕನಸಿನ ಜಾತಿ-ಮುಕ್ತ ಭಕ್ತ ಸಮಾಜ ಮೈದೋರೀತು.






# ವೃದ್ಧಾಪ್ಯ ವೈಭವ

'ಎನ್ಕೆ'

ನನ್ನ ಹುಟ್ಟುಹಬ್ಬಗಳನ್ನು ನೆನಪಿಡಲು ನನಗೆ ಮನಸ್ಸೇ ಆಗುವದಿಲ್ಲ ಎಂದು ಪಂಡಿತ ನೆಹರೂ ಹೇಳುತ್ತಿದ್ದರು. ಅವರಿಗೆ ಎಪ್ಪತ್ತುನಾಲ್ಕು ತುಂಬಿದಾಗ '**I am seventy four years young**' ಎಂದು ಹೇಳಿದ್ದರು. 'ನೆಹರೂಚಾಚಾ' ಎನಿಸಿಕೊಂಡು ಚಿಕ್ಕಮಕ್ಕಳೊಡನೆ ಚಕ್ಕಂದ ವಾಡುತ್ತ ತರುಣ ಚೇತನರಾಗಿ ತಮ್ಮ ಮುಪ್ಪನ್ನು ಮರೆಯಬಯಸುತ್ತಿದ್ದರು ಅವರು. ಒಬ್ಬ ನೆಹರೂ ಯಾಕೆ, ಬಹಳಷ್ಟು ಜನಕ್ಕೆ ತಮ್ಮ ವಯಸ್ಸನ್ನು ಮುಚ್ಚಿಟ್ಟು ಕೊಳ್ಳುವ ಒಂದು ಚಾಪಲ್ಯ. ಎಷ್ಟು ಮುಚ್ಚಿಟ್ಟ ರೇನು, ಸರ್ವಿಸ್ ಬುಕ್ಕು ಸುಳ್ಳು ಹೇಳುತ್ತ ದೆಯೆ? ಸುಪರ್ ಆ್ಯನ್ಯುಯೇಶನ್ ಬಂದಾಗ ಲಾದರೂ ವಯಸ್ಸಿನ ಹೂರಣ ಹೊರಬೀಳಲೇ-ಬೇಕಲ್ಲ? ಹೆಣ್ಣು ಮಕ್ಕಳಿಗಂತೂ ಹುಟ್ಟು ಹಬ್ಬದ ಕಾಣಿಕೆ ಸ್ವೀಕರಿಸುವ ಸಂಭ್ರಮ. ಆದರೆ ವಯಸ್ಸೆಷ್ಟು ಎಂದು ಕೇಳಿದರೆ ಅವಮಾನ, ಸಿಟ್ಟು. ಆರು ಹಡೆದರೂ ನೀವಿನ್ನೂ ಹುಡುಗೆಯ ಹಾಗೆ ಕಾಣ್ತೀರಿ' ಎಂದು ಮುಖಸ್ತುತಿ ಮಾಡಿದಾಗ ಮಹಿಳೆಯ ಮುಖ, ಹುಣ್ಣಿವೆ ಚಂದಪ್ಪನಂತೆ ಅಡ್ಡಾಗಲಾಗುತ್ತದೆ. ಮೊನ್ನೆ ಒಬ್ಬ ತಾಯಿ ಮದುವೆಗಾದ ತನ್ನ ಮಗಳೊಡನೆ ನಿಂತಾಗ– ''ಏನ್ರೀ ರುಕ್ಮಿಣಿ ಬಾಯರs ,ನೀವು ತಾಯಿ ಮಗಳ ಹಾಂಗ ಕಾಣಸೋದೆ ಇಲ್ಲ; ಅಕ್ಕತಂಗಿ ಹಾಂಗ ಕಾಣ್ತೀರಿ'' ಎಂದು ನಾನು **flatter** ಮಾಡಿದಾಗ ಹಿಗ್ಗಿ ಹಿಗ್ಗಿ ಹೀರೆಕಾಯಿ ಆದ ಆ ತಾಯಿ ಏನು ಹೇಳ ಬೇಕು? ಅಕ್ಕಾತಂಗಿ ಹಾಂಗ ಕಾಣ್ತೀವಿ ಅಂದ್ರಿ. ಅಂದರ ನಾನs ತಂಗಿ ಹಾಂಗ ಕಾಣ್ತಾನೀ ಅನ್ರಿ'– ಎಂದಾಗ ನನಗೆ ಸ್ವಲ್ಪ ಅಚ್ಚರಿಯೂ ಆಯಿತು.

ನಿಜ. ವಾರ್ಧಕ್ಯ ಯಾರಿಗೆ ಇಷ್ಟ? ಗಂಡಸರೇ ಆಯಿತು, ಹೆಣ್ಣು ಮಕ್ಕಳೇ ಆಯಿತು. ನಿಜವಾದ ವಯಸ್ಸನ್ನು ಹೇಳದಿರುವುದಕ್ಕೆ ಅನೇಕ ಕಾರಣ ಗಳಿರುತ್ತವೆ. ಗಂಡಸರಿಗೆ ಇಪ್ಪತ್ತೈದರೊಳಗೆ ಸರಕಾರಿ ನೌಕರಿ ದೊರಕುವುದೊ ಇಲ್ಲವೊ ಎಂಬ ಆತಂಕವಿರುತ್ತದೆ. ಅಂತೆಯೆ ಶಾಲಾ ರಜಿಸ್ಟರ್ ನಲ್ಲಿ ವಯಸ್ಸನ್ನು ಒಂದಿಷ್ಟು ಕಡಿಮೆ ಹಚ್ಚು

---

ಏನೋ ವಯಸ್ಸಾಗಿದೆ. ತಲೆ ನೆರತಿದೆ. ಬಸ್ಸಿನಲ್ಲಿ ನಿಲ್ಲುವುದಕ್ಕಾಗುವುದಿಲ್ಲ. ಅಷ್ಟಕ್ಕೇ ಮುದುಕಾ, ಅಜ್ಜಾ ಎಂದು ಕರೆಯೋದೆ? ಛೆ ಛೆ ಎಂತಹ ಅನ್ಯಾಯ, ಅದಕ್ಕೇ ಸನ್ಮಾನಗಳಲ್ಲಿ 'ಎಪ್ಪತ್ತರ ತರುಣ' ಎಂದು ಬಳಸುತ್ತಿರಬಹುದೆ?

---




ವದು ನಡೆದು ಬಂದ ವಾಡಿಕೆ. ಹೀಗೆ ಸುಳ್ಳು ವಯಸ್ಸು ಹಚ್ಚಿದಾಗ ಅವರಿಗೆ ನಾಲ್ಕುಮಂದಿಯೊಳಗೆ 'ನಿಮ್ಮ ವಯಸ್ಸು ಎಷ್ಟು? ಎಂದು ಕೇಳಿ ಧರ್ಮಸಂಕಟಕ್ಕೆ ಕೆಡವಿದಾಗ ಅವರಿಗೆ ಎಷ್ಟೊಂದು ಸಂಕಟವಾಗಬೇಡ! ಹಾಗೆಯೇ ಮಾರುಕಟ್ಟೆಯಲ್ಲಿ ವರಗಳೇ ದೊರಕದಿದ್ದ ಕನ್ಯಾಮಣಿಗಳ ವಯಸ್ಸನ್ನೂ ಜಾತಕವನ್ನೂ ಅವರ ಪಿತೃಗಳು revise ಮಾಡಲೇಬೇಕಲ್ಲವೆ? ಆಗ ಪಾಪ, ಕನ್ಯಾಮಣಿಗೆ ನಿನ್ನ ವಯಸ್ಸೆಷ್ಟು? ಎಂದು ಪ್ರಶ್ನಿಸಿದರೆ ಆಕೆ ಶಾಲಾ ರಜಿಸ್ಟರ ವಯಸ್ಸು ಹೇಳಬೇಕೋ ಮೂಲ ಜಾತಕದ ವಯಸ್ಸು ಹೇಳಬೇಕೋ ತಿದ್ದುಪಡಿ ಆವೃತ್ತಿಯ ವಯಸ್ಸು ಹೇಳಬೇಕೋ? ಅಂತೂ ಮಾಯೆ ಕಾಯಕ್ಕೆ ನೆಳಲಾಗಿ ಕಾಡಿದಂತೆ, ಜಾತನಿಗೆ ಜಾತಕ ಕಾಡುತ್ತದೆ.

ಇಷ್ಟೆಲ್ಲ ಹೇಳಿದ ಮೇಲೆ ನಿಮಗೆಷ್ಟು ವಯಸ್ಸು? ಎಂದು ನೀವು ಪ್ರಶ್ನಿಸಿದರೆ ನಾನೇನು ಮುಚ್ಚಿಟ್ಟುಕೊಳ್ಳುವದಿಲ್ಲ. ನನಗೆ ನಿವೃತ್ತಿ ಆದಾಗ ನನ್ನ ಒಬ್ಬಿಬ್ಬರು ಮಿತ್ರರಿಗೆ ಷಷ್ಟ್ಯಬ್ಧಿ ಸಮಾರಂಭ! ವಿಜೃಂಭಣೆಯಿಂದಲೇ ಜರುಗಿತು. ಆಗ ಮಿತ್ರರಿಗೆ ಅಭಿನಂದನಪರ ಶುಭಾಶಯದ ಮಾತು ಹೇಳುತ್ತ ವೇದಿಕೆಯ ಮೇಲಿಂದ ಸಂಘಟಕರಿಗೆ ಚೆನ್ನಾಗಿ ಕೇಳಿಸುವಂತೆ ನನಗೂ ಅರವತ್ತು ಸಮೀಪಿಸಿತು ಎಂದು ಹೇಳಿದ್ದೆ. ಸಭೆ ಮುಗಿದ ಮೇಲೆ ಒಬ್ಬ ಸಂಘಟಕರು ಇದೇನ್ರಿ? ಮೊನ್ನೆ ಮೊನ್ನೆ ನಿವೃತ್ತಿಹೊಂದಿದ್ದೀರಿ. ಆಗಲೇ ಅರವತ್ತೆ? ನಿಮ್ಮ ಪಿಂಚಣಿ ಅರುವತ್ತಕ್ಕೇನು? ಎಂದು ಕೇಳಿದಾಗ 'ಇಲ್ಲಾ, ಸರಕಾರಿ ನೌಕರಿಸಲುವಾಗಿ ಎರಡು ವರ್ಷ ಕಡಿಮೆ ಹಚ್ಚಿದ್ದೆ' ಎಂದು ಅನಿವಾರ್ಯವಾಗಿ ಅಸತ್ಯನುಡಿಯಬೇಕಾಯಿತು. ಆದರೂ ನನ್ನ ಷಷ್ಟ್ಯಬ್ಧಿ ಸಮಾರಂಭ ಜರುಗಲಿಕ್ಕೆ ಎರಡು ವರುಷಗಳೆ ಬೇಕಾದವು.

**'Grey hair should be respected'** ನೆರೆಗೂದಲಿಗೆ ನಮಸ್ಕಾರ ಎಂಬ ಸ್ಲೋಗನ್‌ನಲ್ಲಿ ನನಗೆ ಅಪಾರ ಶ್ರದ್ಧೆ. ಅಂತೆಯೇ ನನಗೆ ಬಹು ಬೇಗನೆ ಬೆಳ್ಳಿಯಕೂದಲು ಕಾಣಸಿಕೊಂಡರೂ ನಾನು ಕಲಪು ಹಚ್ಚಿಕೊಳ್ಳುವ ಗೋಜಿಗೆ ಹೋಗಲಿಲ್ಲ. ಅನಾಯಾಸವಾಗಿ ಬೆಳ್ಳಿಯ ಕೂದಲಿಗೆ ಸನ್ಮಾನ ದೊರಕುವಾಗ ಆ ಸುಯೋಗವನ್ನು ಕಳೆದುಕೊಳ್ಳಬಹುದೆ? ನನಗಿನ್ನು ಪಿಂಚಣಿ ಆಗದೆ, ಮೊಮ್ಮಕ್ಕಳು ಹುಟ್ಟದೆ ಇದ್ದಾಗಲೂ ಕಾಯಿಪಲ್ಯೆಯ ಪೇಟೆಯಲ್ಲಿ "ಅಜ್ಜಾವ್ರ ಬರ್ರಿ ಗಜ್ಜರಿ ಸೋವಿ ಅದಾವು" ಎಂದು ಕಾಯಿಪಲ್ಲೆಯವಳು ಕರೆದಾಗ ಆಕೆ ನನ್ನ ನೆರೆಗೂದಲಿಗೆ ನಮಸ್ಕಾರ ಹೇಳಿಯೆ ಅಜ್ಜಾವ್ರ ಎಂದಿರಬೇಕು ಎಂದು ತರ್ಕಿಸಿ ಗಜ್ಜರಿ ವ್ಯಾಪಾರ ಮಾಡಿದರೆ ನಿಜವಾಗಿಯೂ ಆಕೆ ನನಗೆ ಸೋವಿ ದರದಲ್ಲಿಯೇ ಅವನ್ನ ಕೊಟ್ಟಿದ್ದಳು. ಕಲಪು ಹಚ್ಚಿಕೊಂಡಿದ್ದರೆ ಈ ಮರ್ಯಾದೆ, ಈ ಉಳಿತಾಯ ಸಾಧ್ಯವಿತ್ತೆ?

ನಾನೂ ನೋಡಿದ್ದೇನೆ. ಕೆಲವರಿಗೆ 'ಅಜ್ಜಾವ್ರ' ಎಂದು ಸಂಬೋಧಿಸಿದಾಗ ಬ್ರಹ್ಮಾಂಡ ಸಿಟ್ಟು. 'ನಾ ಏನು ಗೋರಿಗೆ ಹೋಗೂ ಮುದುಕಾ ಅಂತ ತಿಳಿದಿ ಏನಬೆ? ಇನ್ನೂ ಮೂರು ಮದವಿ ಆಗೂ ಹಾಂಗ ಅದೀನಿ' ಎಂದು ಎದೆ ಉಬ್ಬಿಸುವವರೂ ಇದ್ದಾರೆ.

ಆದರೆ ನನಗೆ ಅಜ್ಜ, ಮುದುಕ ಮನುಷ್ಯ ಎಂದು ಕರೆದಾಗ ಸಂತೋಷವೆ ಆಗುತ್ತದೆ. ಮೊನ್ನೆ ಸಿಟಿಬಸ್‌ನಲ್ಲಿ ಬರುತ್ತಿದ್ದಾಗ ನಿಲ್ಲುವುದಕ್ಕೂ ಸ್ಥಳವಿಲ್ಲದೆ ಒಂದು ಕೈಯಲ್ಲಿ ವಾಕಿಂಗ್ ಸ್ಟಿಕ್ ಕಮ್ ಛತ್ರಿ ಇನ್ನೊಂದು ಕೈಯಲ್ಲಿ ಕರವಸ್ತ್ರ ಕಮ್ ಕಾಯಿಪಲ್ಲೆಯ ಗಂಟು ಧರಿಸಿ ಜೋಲಿ ಹೊಡೆಯುತ್ತ ನಿಂತಾಗ ಪಾಪ ಒಬ್ಬ ಕಾಲೇಜ್ ಯುವತಿ ನನ್ನ ನೆರೆಗೂದಲಿಗೆ ಗೌರವ ಕೊಟ್ಟು ತನ್ನ ಸೀಟಿನಲ್ಲಿ ಖಾಲಿ ಇದ್ದ ಸ್ಥಳದಲ್ಲಿ ಕೂಡಲು ಸಮ್ಮತಿಯ ಸೂಚನೆ ನೀಡಿದಳು. ಇಂತಹ ರೋಮಾಂಚಕ ಗೌರವ ಯಾವ ಕಲಪಿನ ಕರಿಗೂದಲಿಗೆ ದೊರೆತೀತು? ಜೈ ಬೆಳ್ಳಿ ತಲೆ !

**'Old age is second childhood'**– ಮುಪ್ಪು ಮರುಬಾಲ್ಯ-ಎಂಬ ನಾಣ್ನುಡಿಯಲ್ಲಿ ನಂಬುಗೆಯಿಟ್ಟ ನಮ್ಮ ಕರುಣಾಳು ಕರ್ನಾಟಕ ಸರಕಾರ ವೃದ್ಧರಿಗಾಗಿ ಅರ್ಧಬಸ್ ಚಾರ್ಜ್ ರಿಯಾಯಿತಿ ತೋರಿ ತಮ್ಮ ಜನತಾ ಕಲ್ಯಾಣ ಕಾರ್ಯದಲ್ಲಿ ದೃತ್ಯ ಹೆಜ್ಜೆಯನ್ನೆ ಇಟ್ಟಿದ್ದಾರೆ. ಈ ರಿಯಾಯಿತಿ ಕೆಲವೊಂದು ವೇಳೆಯಲ್ಲಿ ಮಾತ್ರ ಇದ್ದರೂ ನನ್ನ ಬೆಂಗಳೂರಿನ ನಿವೃತ್ತ ಮಿತ್ರರೊಬ್ಬರು ಈ ರಿಯಾಯ್ತಿಯ ಅವಧಿಯ ಕೊನೆಯ ನಿಮಿಷದ ವರೆಗೂ ಬಸ್ ಬಿಟ್ಟು ಇಳಿಯುವುದೇ ಇಲ್ಲ. ದಿನಾಲು ಎರಡು ರೂಪಾಯಿ ಬಸ್ ವೆಚ್ಚಮಾಡುತ್ತಿದ್ದರೆ ಈಗ ಅವರು ರಿಯಾಯ್ತಿ ಎಂದುಕೊಂಡು ದಿನಾಲು ನಾಲ್ಕು ರೂಪಾಯಿ ಮಿಕ್ಕು ವೆಚ್ಚಮಾಡುತ್ತಿದ್ದಾರೆ. ಅಂತೂ **blessings of old age**–ವೃದ್ಧಾಪ್ಯದವರಗಳಲ್ಲಿ ಈ ಬಸ್ ರಿಯಾಯ್ತಿ ಹೆಚ್ಚಿನದೇ ಎನ್ನಬೇಕು. ನಮ್ಮ ಕರ್ನಾಟಕ ಸರಕಾರ ವೃದ್ಧಾಪ್ಯವೇತನವನ್ನು ಧಾರಾಳವಾಗಿ ಪ್ರಯೋಗಿಸಿ ಹೆಚ್ಚಿನ ಪುಣ್ಯಕಟ್ಟಿಕೊಂಡಿದ್ದಾರೆ. ನನ್ನ ಮಿತ್ರರೊಬ್ಬರು ವೃದ್ಧಾಪ್ಯವೇತನಕ್ಕಾಗಿ ಅರ್ಜಿ ಫಾರ್ಮ ಕೇಳಲಿಕ್ಕೆ ಹೋದಾಗ ಅವರಿಗೆ ಆ ಫಾರ್ಮು ಮುಗಿದುಹೋಗಿದ್ದವೆಂದು ವಿಧವಾ ಮಾಸಾಶನದ ಅರ್ಜಿ ಫಾರ್ಮು ಕೊಟ್ಟುಕಳಿಸಿದ್ದರು. ನನ್ನ ಮಿತ್ರರೂ ಮಹಾ ಘಾಟಿ. ಹೋಗಲಿ. ನನ್ನ ಪತ್ನಿಗಾದರೂ ವೇತನ ಸಿಕ್ಕರೆ ಸಾಕು' ಎಂದುಕೊಂಡು ವಿಧವಾ ಮಾಸಾಶನದ ಅರ್ಜಿ ಫಾರ್ಮನ್ನೆ ತುಂಬಿಕಳಿಸಿದ್ದರು. ಅದೇನೆ ಇರಲಿ. ನಮ್ಮ ಸರಕಾರ ವೃದ್ಧರಿಗಾಗಿ–ಅವರು ಪುರುಷರೆ ಇರಲಿ, ಸ್ತ್ರೀಯರೆ ಇರಲಿ, ವಿಧುರರೆ ಇರಲಿ ವಿಧವೆಯರೆ ಇರಲಿ–ವಿಶೇಷ ಅನುಕಂಪವುಳ್ಳವರಾಗಿರುವುದು ಮೆಚ್ಚತಕ್ಕ ಮಾತು.

ವಿದೇಶಗಳಲ್ಲಿ–ಅದರಲ್ಲೂ ಅಮೇರಿಕೆಯಲ್ಲಿ–ವೃದ್ಧಾಪ್ಯದ ರಿಯಾಯ್ತಿ, ಸೌಕರ್ಯಗಳು ಹಲವಾರು. ಅಲ್ಲಿ ಒಟ್ಟು ಕುಟುಂಬದ ಪದ್ಧತಿಯೆ ಇಲ್ಲದ್ದರಿಂದ ಅನೇಕ ಬಗೆಯ ವೃದ್ಧಾಶ್ರಮಗಳು

ವೃದ್ಧಾಪ್ಯ ಅನುಕೂಲತೆಗಳು, ವೃದ್ಧರ ನಿವಾಸಗಳು, ಪ್ರವಾಸಸೌಕರ್ಯಗಳಂತೂ ಸಾಕಷ್ಟು. 'ವೃದ್ಧಾಪ್ಯ ಬಂದರೆ ಅಮೇರಿಕೆಯಲ್ಲಿ ಬರಬೇಕು ನೋಡ್ರಿ'-ಎಂದು ನನ್ನ ಹಿರಿಯ ಷಡ್ಕರೊಬ್ಬರು ಉದ್ಗಾರತೆಗೆದಾಗ ಅವರ ಮಗ-ಸೊಸೆ ಹಿತವಾಗಿ ನೋಡಿಕೊಳ್ಳುತ್ತಿಲ್ಲ ಎಂದು ಊಹಿಸಿದ್ದು ನಿಜವೆ ಆಗಿತ್ತು. ಆದರೆ ನನಗೂ ಇದ್ದುದರಲ್ಲಿಯೆ ಅಮೇರಿಕೆಯ ವೃದ್ಧಾಪ್ಯ ಸೌಕರ್ಯಗಳೆಲ್ಲಾ ಲಭ್ಯವಾಗುತ್ತಿವೆ. ಅದು ಹೇಗೆ ಎಂದು ಕೇಳುತ್ತೀರಾ? ಆಗಲಿ ನನ್ನಂತೆಯೆ ವೃದ್ಧಾಪ್ಯವನ್ನನುಭವಿಸುತ್ತಿರುವ ನಿಮಗೆ ವೃದ್ಧಾಪ್ಯದಲ್ಲಿ ವೈಭವದ ಸುಖಸೌಕರ್ಯಗಳನ್ನು ಪಡೆಯುವುದರ ಗುಟ್ಟುಬಿಟ್ಟುಕೊಡುತ್ತೇನೆ. ಅದರಂತೆ ನೀವು ಪ್ರಯೋಗಮಾಡಿ ಪ್ರಯೋಜನಪಟ್ಟುಕೊಳ್ಳಬಹುದು. ಮೋದಲನೆಯ ಗುಟ್ಟೆಂದರೆ ನೀವು ನಿಮ್ಮ ಸೊಸೆಂದಿರ ಮುಂದೆ ಮಾವನದರ್ಪವನ್ನ ತೋರಿಸಲು ಹೋಗಬೇಡಿರಿ. ಅತ್ತೆಂದಿರಿಗೂ ಇದೇ ಸಲಹೆ! ವೃದ್ಧಾಪ್ಯದಲ್ಲಿ ನಿಮ್ಮ ಸೊಸೆಂದಿರು ನಿಮ್ಮನ್ನು ನೋಡಿಕೊಳ್ಳಬೇಕಾದರೆ ಸೊಸೆಯ ಮೇಲೆ ಬಾಸ್ಸಿಂಗ್ ಮಾಡಬೇಡಿರಿ. 'ಅತ್ತೆಗೊಂದು ಕಾಲ ಸೊಸೆಗೊಂದು ಕಾಲ' ಎಂಬುದನ್ನು ನೆನಪಿನಲ್ಲಿಡಿರಿ. ಸೊಸೆಗೆ ಬಾಸಿಂಗ ಬಲ ಬಂದಮೇಲೆ ಬಾಸ್ಸಿಂಗ್ (bossing) ಬಲವೂ ಬಂದೇ ಬರುತ್ತದೆ.

ನನ್ನ ಮಟ್ಟಿಗೆ ನಾನು ನನ್ನ ಸೊಸೆಂದಿರಿಗೆ ಮಾವನಲ್ಲ, ಆಕಳದಂತಹ ತಂದೆ. ಎಂತಲೇ ಮಕ್ಕಳಿಗಿಂತ ಸೊಸೆಂದಿರೇ ನನ್ನನ್ನು ಹೆಚ್ಚು ಕಾಳಜಿಯಿಂದ ನೋಡಿಕೊಳ್ಳುತ್ತಾರೆ. ನನ್ನ ಬೇಕು-ಬೇಡಗಳನ್ನು ನಾನು ಗಂಡುಮಕ್ಕಳ ಮುಂದೆ ಹೇಳದೆ ನನ್ನ ಸೊಸೆಂದಿರ ಮುಂದೆಯೆ ಹೇಳುತ್ತೇನೆ. ವೃದ್ಧಾಪ್ಯದಲ್ಲಿ ನೆಮ್ಮದಿಯಿಂದಿರಬೇಕಾದರೆ ಸೊಸೆಂದಿರ ಮರ್ಜಿ ಸಂಪಾದಿಸಬೇಕು-ಇದು ಮೊದಲನೆಯ ಗುಟ್ಟು. ಎರಡನೆಯ ಗುಟ್ಟೆಂದರೆ ಮೊಮ್ಮಕ್ಕಳನ್ನು ನಿಮ್ಮ ಆರಕ್ಷಣೆಯಲ್ಲಿಟ್ಟುಕೊಂಡಿರುವುದು. ಬಗಲೊಳಗಿನ ಮೊಮ್ಮಕ್ಕಳಿದ್ದರೆ ತಾಯಂದಿರಿಗೆ ಅಡುಗೆಗೆ ಹರವಾಗುವಂತೆ ಹೊರಗೆ ಅಡ್ಡಾಡಿಸಿಕೊಂಡು ಬರ್ರಿ. ಶಿಶುವಿಹಾರದ ಮಕ್ಕಳಾದರೆ ಶಾಲೆಗೆ ಕಳಿಸುವ, ಕರೆತರುವ ಡ್ಯೂಟಿ ನಿಮ್ಮ ಪಾಲಿಗೆ ಇರಲಿ. ಎಂದರೆ ಮಕ್ಕಳ ಜೊತೆಗೆ ನೀವೂ ಆಫೀಸರರಂತೆ ಬೇಗ ಬಿಸಿ ಬಿಸಿ ಊಟಮಾಡಿಕೊಂಡು ಅವರನ್ನು ಶಾಲೆಗೆ ಕಳಿಸುವ ನೆಪದಲ್ಲಿ ಸ್ವಲ್ಪ ಅಲೆದಾಡಿ ಬರಬಹುದು. ಹೀಗೆ ಸೊಸೆಂದಿರಿಗೆ ಅನುಕೂಲವಾಗಿ ನಡೆದುಕೊಂಡರೆ ನಿಮ್ಮ ವೃದ್ಧಾಪ್ಯ ನಿಮಗೊಂದು ದೇವಪ್ರೇಷಿತ ಬಾಳಸಂಜೆಯ ಭೂಸ್ವರ್ಗವಾಗುವುದು. ಇದನ್ನು ತಪ್ಪಿದಿರೊ , ಬರಿ ಸ್ವರ್ಗವಾಗುವುದು.

ಹೀಗೆ ಒಟ್ಟು ಕುಟುಂಬದಲ್ಲಿ ವೃದ್ಧಾಪ್ಯವು ವೈಭವದಿಂದ ವಿಜೃಂಭಿಸಬೇಕಾದರೆ ಮಕ್ಕಳೊಡನೆ ಮಕ್ಕಳಾಗಿ ಬಾಳಿ. ವೃದ್ಧಾಪ್ಯವೆಂದರೆ ಎರಡನೆಯ ಬಾಲ್ಯವಲ್ಲವೆ? ಇಷ್ಟಾಗಿಯೂ ಕ್ವಚಿತ್ತಾಗಿ ಏನೇ ತಪ್ಪು-ತಡೆಗಳು ನಿಮ್ಮಿಂದ ಘಟಿಸಿದರೂ ಪಾಪ 'ಮುದುಕ ಮನುಷ್ಯ' ಅರವುಮರವಿನಲ್ಲಿ ಏನಾದರೂ ಎಡವಿರಬೇಕು-ಎಂದು ಉದಾರಮನಸ್ಸು ತೋರುತ್ತಾರೆ. ಈ ಅರವುಮರವು ನಿಮಗೊಂದು ದೊಡ್ಡವರ, ದೊಡ್ಡ ರಕ್ಷಣೆ. ಯಾರಿಗಾದರೂ ಒಂದಿಷ್ಟು ಹಣ ಕೊಡುವುದಿತ್ತು ಎನ್ನಿರಿ. ಮರೆವಿನ ನೋಗಿನಲ್ಲಿ ಹಾಗೇ ತಳ್ಳಬಹುದು. ಹಣ ಕೊಟ್ಟವರು ಕೇಳಬಂದರೆ- 'ಅಯ್ಯೋ ಮರ್ತೇಬಿಟ್ಟೆನಲ್ರೀ' ಎಂದು ನೆಪ ಹೇಳಿದರೂ ನಿಜವೆಂದೇ ಅವರು ಭಾವಿಸುತ್ತಾರೆ. ಚಿಂತೆಬೇಡ. ಅರವು-ಮರವು ಹೇಗೆ ನಿಮಗೊಂದು ಅಮರ ರಕ್ಷೆಯಾಗಬಲ್ಲದೊ-ದೃಷ್ಟಿಮಾಂದ್ಯವೂ ಅಷ್ಟೇ ಪ್ರಬಲರಕ್ಷೆಯಾಗಬಲ್ಲದು. ನಿಮಗೆ ಬೇಡಾದವರನ್ನು ಮಾತನಾಡಿಸದೆ ಹಾಗೇ ಮುಂದೆ ಸಾಗಿದರೆ ನೀವು ಮುದ್ದಾಂ ಮೈಸೊಕ್ಕಿನಿಂದ ಅವರನ್ನು ಮಾತಾಡಿಸದೆ 'ಹಾಗೇ ಮುನ್ನಡೆದಿರಿ ಎಂದು ಅವರು ಆರೋಪಿಸಲು ಸಾಧ್ಯವೆ ಇಲ್ಲ. 'ಕ್ಷಮಿಸಿರಿ, ನನಗೆ ಸರಿಯಾಗಿ ಕಾಣಿಸಲಿಲ್ಲ' ಎಂದು ನೀವು ಯಾವಾಗಲೂ ಹೇಳಲು ಸಮರ್ಥರಿದ್ದೀರಿ.



ವೃದ್ಧಾಪ್ಯಕ್ಕೂ ವೈರಾಗ್ಯಕ್ಕೂ ಸಂಬಂಧವಿಲ್ಲ. ವೃದ್ಧರ ರಸಿಕತೆಗೆ ಮಾತ್ರ ಮುಪ್ಪಿರುವುದಿಲ್ಲ. ಸುಕುಮಾರ ಅಂಗಸ್ಪರ್ಶದಮಟ್ಟಿಗಾದರೂ ವೃದ್ಧರ ರಸಿಕತೆ ನವೋದಯ, ನವ್ಯಕಾವ್ಯದಂತಿರುತ್ತದೆ. ತುಂಬಿದ ತರುಣಿಯ ಅಚಾನಕ ಅಂಗಸ್ಪರ್ಶವಾದರೆ ಆಕೆ ಎಂದೂ ಈ ಮುದುಕನಿಗೆ ಶಾಪ ಹಾಕುವುದಿಲ್ಲ. ಪಾಪ ಇವನೇನು ಮಹಾಭಾರತದ ಯಯಾತಿ ಅಲ್ಲವಲ್ಲ ಎಂದುಕೊಂಡು ಮೆತ್ತಗೆ ಇರುತ್ತಾಳೆ. ತಾನು ಆ ತರುಣಿಯನ್ನು ಅಂಗವಿಸಿದ್ದು ಅಸಾಧು ಎನಿಸಿದರೆ-ಅರೆ! ನೀವೇನೇನು ತಂಗಿ, ನಾನು ನನ್ನ

ಮೊಮ್ಮಗಳು ಅಂತ ಮಾಡಿದ್ದ' ಎಂದು ವಿಷಾದ ವ್ಯಕ್ತಪಡಿಸಿದರೆ ನಿಮಗೆ ಮತ್ತೊಮ್ಮೆ ಸ್ಪರ್ಶ ಹರ್ಷ ವರ್ಷಿಸಬಹುದು.

ವೃದ್ಧನೆಂದು ಹೇಳಿಕೊಳ್ಳುವಲ್ಲಿ ಯಾವ ಅವಮಾನವೂ ಇಲ್ಲ, ಎಲ್ಲ ಅನುಗ್ರಹವೂ ಉಂಟು. ಷಷ್ಠ್ಯಬ್ಧಿ ದಾಟಿದರೆ ನಿಮ್ಮ ಎಪ್ಪತ್ತರ ವರ್ಧಂತಿ ಆಚರಿಸುವವರಿತ್ತಾರೆ. ಅದು ತಪ್ಪಿದರೆ ಎಪ್ಪತ್ತೈದರ ಅಮೃತ ಮಹೋತ್ಸವ! ಮುಂದೆ ಸಹಸ್ರ ಚಂದ್ರದರ್ಶನ ನಿಮ್ಮ ಎಂಭತ್ತರ ಗಡಿಯನ್ನು ಕಾಯುತ್ತ ನಿಂತಿರುತ್ತದೆ. ಅಂತೂ ಷಷ್ಠ್ಯಬ್ಧಿ ಸಮಾರಂಭವನ್ನೀಸಿ ಮುಂದೆ ಎಡವಿದಿರೋ ಐದೈದು ವರ್ಷಕ್ಕೆ ಒಂದು ಮಹಾ ವರ್ಧಂತಿ ದಾರಿ ಕಾಯುತ್ತಿರುತ್ತದೆ. ಇದೇ ಸಂದರ್ಭದಲ್ಲಿ ಯಾವುದೇ V. I. P.ಯ ಅಂತಿಮ ಯಾತ್ರೆಯನ್ನನುಸರಿಸಿ ರುದ್ರಭೂಮಿಯಲ್ಲಿ ರೌದ್ರ ಭಾಷಣ ಮಾಡಲು ಮರೆಯಬೇಡಿರಿ. ಏಕೆಂದರೆ ಅದು ನಿಮಗೆ ಕಟ್ಟಿಟ್ಟ ಬುತ್ತಿ!

ಬಾಳ ದಾರಿಯಲ್ಲಿ ಎಷ್ಟುದ್ದ ನಡೆದು ಬಂದಿದ್ದೀರಿ! ಅಥವ ಎಡವಿ ಬಂದಿದ್ದೀರಿ.! ನೀವು ಎಡವಿದ ಒಂದೊಂದು ಹೆಜ್ಜೆಗೂ ವೈಭವದ ಒಂದೊಂದು ಮೈಲುಗಲ್ಲು ನೆಡುತ್ತಲೆ ಬಂದಿರುವಿರಿ. ನೀವು ಎಡವಿದ ಒಂದೊಂದು ಹೆಜ್ಜೆಯೂ ಒಂದೊಂದು ಇತಿಹಾಸ, ಒಂದೊಂದು ಗತ ವೈಭವ! 'ಹುಟ್ಟ ಬೆನ್ನಟ್ಟಿ ಬರುತ್ತದೆ ಸಾವು' ಎಂದರು ವರಕವಿ ಬೇಂದ್ರೆ, ಒಂದೊಂದು ಹುಟ್ಟು ಹಬ್ಬದ ಮಾರ್ಗಕ್ರಮಣವೂ ನಿಮ್ಮನ್ನು ಪರಂಧಾಮದ ನಿಲ್ದಾಣಕ್ಕೆ ಸಮೀಪ ಒಯ್ಯಬಹುದು, ಆದರೇನಂತೆ? ವೃದ್ಧಾಪ್ಯದ ಪೂರ್ಣ ಬಟ್ಟಲನ್ನು ಸವಿಯುವ ಆ ಕಾಲರಾಯನಿಗೆ ಬಳಿಗೆ ಬರಲು ಬಿಡಬೇಡಿರಿ, 'ಎಲೋ ಮೂರ್ಖಾ ಸಾವಿತ್ರಿಯಂತಹ ಅಬಲೆ ನಿನ್ನನ್ನು ಸೋಲಿಸಿ ಬಿಟ್ಟಳೆಂದು ನನ್ನ ಬೆನ್ನು ಹತ್ತಿದೆಯಾ? ಸುಮ್ಮನೆ ನಿಂತಕೋ' ಎಂದು ಅವನಿಗೆ ಬೆದರಿಸಿ ಹೇಳಿರಿ. ಅಥವಾ-

ಕವಿ ರವೀಂದ್ರರು ಹೇಳುತ್ತಾರಲ್ಲ ?

"ಸೋದರರೆ, ನನಗೀಗ ಬಿಡುವು. ಅಗಲುವ ಮುನ್ನ ನಿಮಗೆಲ್ಲ ನನ್ನ ಅನಂತ ವಂದನೆಗಳು. ಅಪ್ಪಣೆ ಕೊಡಿ, ಇದೋ ನನ್ನ ಮನೆಯ ಬೀಗದ ಕೈಗಳು. ನನ್ನದೇನಿದೆ ಅದರಲ್ಲಿ? ನಾನು ಜೀವನವನ್ನು ಇಷ್ಟೊಂದು ಪ್ರೀತಿಸಿದ್ದೇನೆ, ಸಾವನ್ನೂ ಪ್ರೀತಿಸದೆ ಇರಬಹುದೆ?"

ಕಾಲರಾಯನನ್ನು ಧಿಕ್ಕರಿಸುವುದಕ್ಕಿಂತ ಅವನನ್ನು ಪ್ರೀತಿಸಿ ನುಡಿದರಾದರೂ ತಪ್ಪೇನು? ಅಂತೆಯೆ ನಾನು ಹೀಗೆ ನುಡಿಯಲಪೇಕ್ಷಿಸುತ್ತೇನೆ.

"ಸೊಸೆಂದಿರೆ, ನನಗೀಗ ನಿವೃತ್ತಿಯು ವಿಶ್ರಾಂತಿ. ಚಿರ ವಿಶ್ರಾಂತಿಗೆ ಮುನ್ನ ನಿಮಗೆಲ್ಲ ನನ್ನ ಅಂತಿಮ ಆಶೀರ್ವಾದಗಳು. ಬೀಳ್ಕೊಡಿರಿ. ಇದೋ, ಇವು ನನ್ನ ಎಫ್. ಡಿ. ರಶೀದಿಗಳು **'either or Survivor'** ಎಂದಿವೆ. ಇದೋ ನನ್ನ ಗೋದ್ರೆಜ್ ಕಪಾಟಿನ ಬೀಗದ ಕೈಗಳು, ಲಾಕರ್ ಕೈ ಸಹಿತ ನನ್ನದೆಲ್ಲವೂ ಇದೆ ಅದರಲ್ಲಿ. ನನ್ನ ಬದುಕಿನಲ್ಲಿ ಲವಲವಿಕೆಯನ್ನು ಹೆಚ್ಚಿಸಿದ್ದೀರಿ. ಸಾವಿನಲ್ಲೂ ಲವಲವಿಕೆ ನೀವು ಉಂಟು ಮಾಡದೆ ಇರಲು ಶಕ್ಯವೆ?"

ಆಯಿತು. ಇದೇ ನನ್ನ ಕೊನೆಯ ವುಯಿಲ್ ಉ! ಹೀಗೆಂದು ಅದನ್ನು ನನ್ನ ಬಳಿ ಬಚ್ಚಿಟ್ಟುಕೊಳ್ಳದೆ ನನ್ನ ಸೊಸೆಂದಿರಿಗೆ ಹಸ್ತಾಂತರಿಸಿ ಬಿಡುತ್ತೇನೆ. ಆಗ ನೋಡಿರಿ, ಮೊಮ್ಮಕ್ಕಳನ್ನು ನೋಡಿಕೊಂಡರೇ ಸೊಸೆಂದಿರ ಮರ್ಜಿ ಎಂಬ ಪ್ರಮೇಯವಿಲ್ಲ. ನಾ ಮುಂದೆ ತಾ ಮುಂದೆ ಎಂದು ವೃದ್ಧಾಪ್ಯದ ಮಾವಂದಿರನ್ನು ನೋಡಿಕೊಳ್ಳುತ್ತಾರೆ. ಹಾ ! ಇಲ್ಲಿ ಒಂದು ಸಣ್ಣ ಪ್ರಶ್ನೆ–ಸಣ್ಣ ಸಮಸ್ಯೆ! ನೀವು ಈ ಸಣ್ಣ ಪ್ರಶ್ನೆ ಕೇಳುವ ಮೊದಲೆ ನಿಮಗೊಂದು ಸಣ್ಣ ಕತೆ ಹೇಳುತ್ತೇನೆ :

ಒಬ್ಬ ವೃದ್ಧೆ. ತನ್ನ ದಿಂಬಿಗೆ ಹಣದ ಚೀಲ ಇಟ್ಟುಕೊಂಡಿದ್ದಳು. ತನ್ನ ಮೂವರೂ ಸೊಸೆಂದಿರ ಕಣ್ಣಿಗೆ ಅದನ್ನು ಹಾಕುತ್ತಿದ್ದಳಾದರೂ ಅದನ್ನು ಯಾವ ಸೊಸೆಯ ವಶಕ್ಕೂ ಕೊಟ್ಟಿರಲಿಲ್ಲ. ಯಾರ್ಯಾರಿಗೆ ಎಷ್ಟೆಷ್ಟು ಹಂಚುವಳೋ ಎಂಬ ಕುತೂಹಲವನ್ನು ಮಾತ್ರ ಹುಟ್ಟಿಸುತ್ತ ಪ್ರತಿಯೊಬ್ಬ ಸೊಸೆಯೂ ವಿಧೇಯಳಾಗಿ ಸೇವೆ ಸಲ್ಲಿಸುವಂತೆ ಮಾಡಿದ್ದಳು. ಅಂತೂ ಕೊನೆಗೊಮ್ಮೆ ವೃದ್ಧೆ ಹಣದ ಚೀಲವನ್ನು ಬಿಚ್ಚಿ ಹಂಚದೆ ಹಾಗೇ ಕಣ್ಣುಮುಚ್ಚಿದಳು. ಅತ್ತೆ ಕಣ್ಣುಮುಚ್ಚುವುದೇ ತಡ ಕೊನೆಯ ಸೊಸೆ ಮುದಿಕೆಯ ತಲೆಯ ಬುಡದಿಂದ ಹಣದ ಚೀಲ ಎತ್ತಿಕೊಂಡಳು. ಉಳಿದಿಬ್ಬರು ಔಪಚಾರಿಕವಾಗಿ ಶೋಕಮಗ್ನರಾಗಿದ್ದಾರೆ. ಚಿಕ್ಕಸೊಸೆ ಹಣದ ಚೀಲ ಬಿಚ್ಚಿನೋಡಿ ಬೆರಗಾಗಿ ಹಿರಿಯ ಸೊಸೆಯ ಕಿವಿಯಲ್ಲಿ ಹೇಳುತ್ತಾಳೆ : 'ಅಯ್ಯಯ್ಯ, ಹಂಚರೇ' ಎಂದು. ಹಿರಿಯ ಸೊಸೆಗೆ ಒಂದಿಷ್ಟು ಮುನಿಸು. 'ಅಯ್ಯ ಸ್ವಲ್ಪ ತಡಿ, ಹಂಚೋಣಂತ' ಎಂದು ಬುದ್ಧಿವಾದ ಹೇಳಿದಳು. 'ಅಲ್ರೇ ಹಂಚರೇ' ಎಂದು ಕೂಗಿಕೊಂಡಳು. ಎರಡನೆಯ ಸೊಸೆಗೂ ರೇಗಿತು. 'ಶವ ಆದರೂ ಸಾಗಲಿ ಸ್ವಲ್ಪ ತಡಿಯೆ' ಎಂದು ಚಿಕ್ಕವಳ ಕೈಯೊಳಗಿನ ಚೀಲವನ್ನು ಕಸಿದುಕೊಳ್ಳುತ್ತಾಳೆ! ಆದರೇನು? ಚೀಲದಲ್ಲಿದ್ದುದು ಹಣವಲ್ಲ, ಹಂಚಿನಬಿಲ್ಲೆಗಳು.

ಎಂತಹ ಘಾಟಿ ಮುದಕಿ! ನಿಜ, ನಾನೂ ಹಾಗೇ ಮಾಡುತ್ತೇನೆ. ನನ್ನ ಎಫ್. ಡಿ. ರಶೀದಿಗಳನ್ನೂ, ಅಲ್ಮೇರಾ ಕೀ ಬಂಚನ್ನೂ ಸೊಸೆಂದಿರಿಗೆ ಗೊತ್ತಾಗುವಂತೆ ನನ್ನ ದಿಂಬಿನ ಬುಡದಲ್ಲಿಯೆ ಮಡಗಿಕೊಳ್ಳುತ್ತೇನೆ. ಆಗ ಕೇಳಬೇಕೆ ಸೊಸೆಂದಿರ ಸೇವಾ ವೈಭವವನ್ನು? ●






# ನಿಜಾಮಶಾಹಿಯ ಮೋಜಿನ ನೆನಪು

* ದೇವೇಂದ್ರಕುಮಾರ ಹಕಾರಿ



ನಿಜಾಮ್ ಸರಕಾರದ ಆಡಳಿತಕ್ಕೆ ಒಳಪಟ್ಟ ಪ್ರದೇಶವನ್ನು 'ಮೊಗಲಾಯಿ' ಎಂದು ಕರೆಯುವುದು ರೂಢಿಯಾಗಿತ್ತು. ಉತ್ತರ ಹಿಂದುಸ್ತಾನದಲ್ಲಿ ಮೊಗಲರ ಆಳಿಕೆ ಪ್ರಬಲವಾಗಿದ್ದ ಕಾಲದಲ್ಲಿ ಅದು ದಕ್ಷಿಣ ಭಾರತದ ವಿವಿಧ ಪ್ರದೇಶಗಳಿಗೂ ಹರಡಿ ಕಾಲಾನಂತರ ಅನೇಕ ಆಂತರಿಕ ಬಾಹ್ಯ ಕಾರಣಗಳಿಂದಾಗಿ ಛಿದ್ರಗೊಂಡದ್ದು ಇತಿಹಾಸಕ್ಕೆ ಸಂಬಂಧಿಸಿದ ವಿಷಯ. ಆದರೆ ಹೈದರಾಬಾದಿನ ಆಸಫ್‌ಜಾಹಿ ಮನೆತನ ಬ್ರಿಟಿಶ್ ಆಡಳಿತದೊಂದಿಗೆ ಮಾಡಿಕೊಂಡ ಒಪ್ಪಂದದ ಮೇರೆಗೆ ಕನ್ನಡ, ತೆಲುಗು ಮತ್ತು ಮರಾಠಿ ಭಾಷೆಯ ಕೆಲವು ಪ್ರದೇಶಗಳು ಹೈದರಾಬಾದಿನ ನಿಜಾಮರ ಆಡಳಿತೆಗೆ ಒಳಪಟ್ಟಿದ್ದು ೧೯೪೭-೪೮ರ ವರೆಗೂ ಅಲ್ಲಿ ನಿಜಾಮ ಸರಕಾರದ ಆಡಳಿತವೇ ಮುಂದುವರೆದಿತ್ತು. ಹೈದರಾಬಾದ ನಗರ ರಾಜಧಾನಿಯಾಗಿದ್ದ ನಿಜಾಂ ರಾಜ್ಯದ ಆಡಳಿತೆಯಲ್ಲಿ ಪಟ್ಟಾಭಿಷಿಕ್ತರಾಗಿದ್ದ ನಿಜಾಮುಲ್‌ಮುಲ್ಕ್‌ರ ಹಾಗು ಅವರ ವಂಶಜರ ಆಳ್ವಿಕೆಯಲ್ಲಿ ಹಾಗೂ ಈ ಅವಧಿಯಲ್ಲಿ ಅಲ್ಲಲ್ಲಿ ಕಂಡುಬಂದ ಮತ್ತು ಕೇಳಿ ತಿಳಿದ ಸಂಗತಿಗಳನ್ನು, ಕೆಲವು ತಮಾಷೆಯ, ಮೋಜಿನ ಅಥವಾ ಗಂಭೀರ ಪ್ರಸಂಗಗಳನ್ನು ಇಲ್ಲಿ ವಿವರಿಸಲಾಗಿದೆ* ನಿಜಾಮರ ಆಡಳಿತ ಮುಗಿದಮೇಲೂ ಕೆಲವು ರೂಢಿಗಳು ಉಳಿದು ಬಂದುದೂ ಉಂಟು. ಅಂಥ ಒಂದೆರಡು ಪ್ರಸಂಗಗಳನ್ನು ಇಲ್ಲಿ ಕೊಡಲಾಗಿದೆ.

'ಮೊಗಲಾಯಿ' ಗ್ರಾಮೀಣ ಜನತೆಗೆ ಹುಜೂರ ನಿಜಾಮ ಸರಕಾರ ಪ್ರತ್ಯಕ್ಷವಾಗುತ್ತಿದ್ದುದು ಆಗಾಗ ಸಣ್ಣಪುಟ್ಟ ಕಾರಣಗಳಿಗಾಗಿ ಹಳ್ಳಿಗಳಿಗೆ ಭೇಟಿಕೊಡುತ್ತಿದ್ದ ಪೋಲೀಸರ ಮೂಲಕ, ಕೆಲವೊಮ್ಮೆ ತಮ್ಮ 'ಸರಂಜಾಮ್' ಸಹಿತ 'ಮಕಾಮ್' ಮಾಡುತ್ತಿದ್ದ ಪೋಲೀಸ್ ಮಹಕ್ಮಾ, ತಹಸೀಲ್

*ಲೇಖಕ ಕಂಡ ಒಂದೆರಡು ಸತ್ಯಸಂಗತಿಗಳನ್ನು ಬಿಡು ಉಳಿದ ವ್ಯಕ್ತಿ, ಸ್ಥಳ ನಾಮಗಳೆಲ್ಲ ಕೇಳಿ ತಿಳಿದವು.

**ಈಗ ಹೈದ್ರಾಬಾದ ಕರ್ನಾಟಕವೆಂದು ಕರೆಯುವ ರಾಯಚೂರು, ಕಲಬುರ್ಗಿ ಜಿಲ್ಲೆಗಳು ಹಿಂದೆ ಹೈದ್ರಾಬಾದ ನಿಜಾಮರ ಆಡಳಿತಕ್ಕೊಳಪಟ್ಟಿದ್ದವು. ಜನರಿಂದ ದೂರವಿದ್ದು ಆಡಳಿತ ನಡೆಸುವ ಅವರ ಶೈಲಿ ಕೆಲವೊಮ್ಮೆ ಹಾಸ್ಯಾಸ್ಪದವೂ ಎನಿಸಿತ್ತು, ಅಂಥ ಕೆಲ ಘಟನೆಗಳ ನಿರೂಪಣೆ ಇದು.**

ಮಹಕ್ಮಾ, ಅಧಿಕಾರಿಗಳ ಮೂಲಕ ಪ್ರತಿಶತ ೯೫ ಜನ ತಮ್ಮ ಅರಸ ಹುಜೂರ ನಿಜಾಮರ ಹೆಸರನ್ನು ಕೇಳಿಬಲ್ಲರು. ನವಾಬರು, ಸುಬೇದಾರರು, ಜಾಗೀರದಾರ, ದೇಸಾಯಿ ಗೌಡ (ಮಾಲಿಪಟೇಲ್ ಪೋಲೀಸ್ ಪಟೇಲ್) ಕುಲಕರ್ಣಿ, ಕರೋಡಗಿರಿ ಕಾರಕೂನರು (ಅವರೇ ಅಧಿಕಾರಿಗಳೆಂದು ಜನರ ಭಾವನೆ) ಮುಂತಾದವರನ್ನು ಆಗಾಗ ಕಂಡದ್ದುಂಟು. ಸುಬೇದಾರ, ನವಾಬ ಮುಂತಾದವರು ಜನತೆಯ ಸುಖದುಃಖಗಳಿಂದ ಎಷ್ಟುದೂರ ಇದ್ದರು ಎನ್ನವುದಕ್ಕೆ ಕೊಪ್ಪಳ ಜಹಗೀರಿನ ನವಾಬ್ ಸಾಲಾರ್ ಜಂಗ್ ಅವರ ತಮ್ಮ ಜಹಗೀರಿಯ ಒಂದು ಭೇಟಿಯ ಪ್ರಸಂಗ ಇಂದಿಗೂ ಪ್ರಸಿದ್ಧವಿದೆ.

ಡೌಗಿಬರ ಎಂದು ಪ್ರಸಿದ್ಧವಾದ ಕಾಲಾವಧಿಯ ಆಚೀಚಿನ ಒಂದು ಪ್ರಸಂಗವಂತೆ. ದೇಶ ವಿದೇಶಗಳನ್ನು ಸುತ್ತಿ ಪ್ರಪಂಚದ ಉನ್ನತ ಕಲಾನಮೂನೆಗಳನ್ನು ಸಂಗ್ರಹಿಸಿ ಕಾಲಾನಂತರದಲ್ಲಿ ಒಂದು ವಸ್ತುಸಂಗ್ರಹಾಲಯ ರೂಪಿಸಿ 'ಸಾಲಾರ್‌ಜಂಗ್ ಮ್ಯೂಜಿಯಮ್' ಎಂದು ಪ್ರಸಿದ್ಧವಾದ ಆ ಸಂಗ್ರಹಾಲಯದ ರೂವಾರಿ ನವಾಬ್ ಸಾಲಾರ್ ಜಂಗ್. ಇವರು ತಮ್ಮ ಜೀವಿತಕಾಲದಲ್ಲಿ ಒಂದೆರಡು ಸಲ ಮಾತ್ರ ತಮ್ಮ ಜಾಹಗೀರಿಗೆ (ಕೊಪ್ಪಳ. ಯಲಬುರ್ಗಿ ಪ್ರದೇಶ) ಭೆಟ್ಟಿಕೊಟ್ಟು-ದುಂಟಂತೆ. ಹೀಗೆ ಅವರು ಕೊಪ್ಪಳಭಾಗಕ್ಕೆ ತಮ್ಮ ಸಕಲ ಸರಂಜಾಮಿನೊಂದಿಗೆ ಬಂದು ಕೊಪ್ಪಳದಲ್ಲಿ ಮುಕ್ಕಾಮ್ ಮಾಡಿದರು.

ತಮ್ಮ ಜಹಗೀರಿನ ಕೆಲವು ಹಳ್ಳಿಗಳನ್ನಾದರೂ ತಾವು ಭೇಟಿನೀಡುವ ಇನಾಯತ್ ತೋರಿಸ ಬೇಕೆಂದು ಸುತ್ತಮುತ್ತಣ ಜನ ಬೇಡಿಕೊಂಡರಂತೆ. ನೂರಾರು ಪೋಲೀಸರು, ತಾಲೂಕ್‌ದಾರರು, ತಹಸೀಲ್ದಾರರು ದೇಸಾಯರು ಗೌಡರು ಇತ್ಯಾದಿ ಜನರೊಡಗೂಡಿ ನವಾಬ್ ಸಾಲಾರಜಂಗರ ಸವಾರಿ ಕೊಪ್ಪಳ ಭಾಗದ (ಅಂದು ಇದೆ ಜಹಗೀರಿಯ ಕೇಂದ್ರ ಸ್ಥಳ) ಕೆಲವು ಹಳ್ಳಿಗಳಿಗೆ ಹೊರಟಿತು. ಅಲಂಕೃತ ಅರಬ್ಬೀ ಕುದುರೆಯ ಮೇಲೆ ನವಾಬರ ಸವಾರಿ.

ನಿರಂತರ ಬರಗಾಲದ ಬವಣೆಯಿಂದ ಬಳಲಿದ ಸಾವಿರಾರು ಹಳ್ಳಿಯ ರೈತರು ಯಾವ ಅಧಿಕಾರಿಗಳ ಮಾತಿಗೂ ಕಿವಿಗೊಡದೆ ನವಾಬರ ಸವಾರಿ ಬರುವ ರಸ್ತೆಯಲ್ಲಿ ಸೇರಿದರು. ಗಂಟೆಗಟ್ಟಲೆ ಕಾದು ಕುಳಿತರು. ನವಾಬರ ಸವಾರಿ ಬಂದ ಕೂಡಲೇ ಎಲ್ಲರೂ ಮುಜುರೆಮಾಡಿ 'ಹುಜೂರ ಹುಜೂರ್' ಎಂದು ಸಾಲುಗಟ್ಟಿನಿಂತರು. ತಮ್ಮನ್ನು ಕಾಣಲು ಇಷ್ಟೊಂದು ರೈತರು ಬಂದಿರುವುದನ್ನು ಕಂಡ ನವಾಬರಿಗೆ ದಿಲ್ ಖುಷ್ ಆಯಿತಂ. ಜನ ನೀಡಿದ ಸಲಾಮ್ ಸ್ವೀಕರಿಸಿದ ನವಾಬರು ಕುದುರೆಯ ಮೇಲೆಯೇ ಕುಳಿತು ಕೇಳಿದರು.

"ಕ್ಯಾ ಏ ಸಬ್ ಹಮಾರೆ ರಿಆಯಾ ಹೈಂ?"



"ಜೀ ಹುಜೂರ್"

"ಹಮೇ ಬಹುತ್ ಖುಷಿ ಹುಯಿ"

ಜನ ಕೂಗಿದರು.

"ಹುಜೂರ್. ಹುಜೂರ್"

ನವಾಬರು ತಮ್ಮ ಬದಿಯಿದ್ದ ತಾಲೂಕದಾರ ಮುಂತಾದ ಅಧಿಕಾರಿಗಳನ್ನು ಕೇಳಿದರು.

"ಯೆ ಲೋಗ ಕುಛ್ ಕಹನಾ ಚಾಹತೇ ಹೈಂ?"

'ಜಿ ಹುಜುರ್'

'ಕಹನೇ ದೋ'

ಅಷ್ಟರಲ್ಲಿ ಒಬ್ಬ ಮುಂದೆ ಬಂದು ಹೇಳಿದ

"ಮಾಯ ಬಾಪ್ ನಮ್ಮಲ್ಲಿ ಮುಸಲ್ಸಲ್ ಬರಗಾಲ. ಮಳೆ ಹನಿ ನಮಗೆ ಕನಸು. ನಮಗೆ ಒಂದೊತ್ತಿನ ಊಟಕ್ಕೂ ಗತಿಯಿಲ್ಲ. ನಾವೆಲ್ಲ ಬಡತನ ಬರದಿಂದ ಸತ್ತು ಹೋಗುತ್ತಿದ್ದೇವೆ. ನಮಗೆ ಒಂದು ಹಿಡಿ ಜವಾರಿ ಕೂಡ ಇಲ್ಲ" ದುಬಾಷಿಯ ಕಾರ್ಯ ಮಾಡಿದ ಅಧಿಕಾರಿ ಎಲ್ಲ-ವನ್ನೂ ನವಾಬರಿಗೆ ತಿಳಿಸಿದ. ನವಾಬರಿಗೆ ಆಶ್ಚರ್ಯವಾಯಿತು.

'ಕ್ಯಾ ಖಾನೇ ಕೋ ಜವಾರಿ ವಗೈರಾ ನಹೀ?'

'ನಹೀ ಹುಜುರ್ ಏನಾ ದ್ರೂ ಮಾಡ್ರಿ ಹುಜೂರ್'

'ಜವಾರಿ ನಹೀ ತೋ ಕ್ಯಾ ಖಾನೇ ಕೋ ಚನಾಭೀ ನಹೀ'

(ತಿನೋದಕ್ಕೆ ಜೋಳ ಇಲ್ಲಾ ಅಂದ್ರೆ ಕಡ್ಲೆ ಕೂಡ ಇಲ್ಲಾ)

ನವಾಬರ ಕುದುರೆಗೆ ಬಳಸುತ್ತಿದ್ದ ಕಡಲೆ ಕೂಡ ಜನತೆಗೆ ಇಲ್ಲ ಎಂದರೆ ಅಚ್ಚರಿಯ ಮೇಲೆ ಅಚ್ಚರಿ!

ನವಾಬರ ಸವಾರಿ ರೈತರಿಗೆ 'ಹಮ್ ಜರೂರ ಕುಛ್ ಕರೇಂಗೆ' ಎಂದು ಭರೋಸಾ ನೀಡಿ ವಾಪಸ್ ಆಯಿತಂತೆ, ಮುಂದೆ ಕೆಲವೇ ವಾರಗಳಲ್ಲಿ ನವಾಬರ ಆಜ್ಞೆಯಂತೆ ಜೋಳದ ಮೂಟೆಗಳು ಕೊಪ್ಪಳಕ್ಕೆ ಬಂದವಂತೆ. ಅದರಲ್ಲಿ ಬರ-ಗಾಲ ಪೀಡಿತ ಜನರಿಗೆ ಎಷ್ಟು ಮುಟ್ಟಿತು? ಏನಾಯಿತು. ಇದು ಬೇರೆ ಕಥೆ (ಕಾಲಾಂತರದಲ್ಲಿ ತುಂಗಭದ್ರಾಡ್ಯಾಮ ಯೋಜನೆ ರೂಪಗೊಳ್ಳಲು ಇಂಥ ಪ್ರಸಂಗಗಳೂ ಕಾರಣವಾಗಿರಬೇಕು).

ಜನತೆಯ ಭಾಷೆಯಿಂದ ದೂರಾದ ನವಾಬರು ಜನತೆಯ ಭಾವನೆಗಳಿಂದ, ಅವರ ಸ್ಥಿತಿಗತಿಗಳಿಂದಲೂ ದೂರವಾಗಿದ್ದರು ಎನ್ನು-ವುದು ಮಾತ್ರ ಬಹುಮಟ್ಟಿಗೆ ನಿಜ. ಇಂಥ



ಕೆಲವು ಕಾರಣಗಳಿಂದಲೇ ನಿಜಾಮರ ರಾಜ್ಯದಲ್ಲಿ ಉರ್ದು ಭಾಷೆಯೇ ಶಿಕ್ಷಣ ಮಾಧ್ಯಮವಾಗಿ (ಕೆಲವು ಕಾಲ) ರೂಪುಗೊಂಡದ್ದು ಗತ-ಕಾಲದ ಸಂಗತಿ.

## ಕರೋಡಗಿರಿ ದರೋಡಗಿರಿ

ಮೊಗಲಾಯಿಯ ಸೀಮೆಯನ್ನು ದಾಟಿ ಯಾವುದೇ ಸರಕು ಬ್ರಿಟಿಷ್ ಪ್ರದೇಶಕ್ಕೆ (ಅಂದರೆ ಅಂದಿನ ಧಾರವಾಡ, ಬಳ್ಳಾರಿ, ಬಿಜಾಪುರ, ಇತ್ಯಾದಿ) ಹೋಗಬೇಕಾದರೆ ನಿಜಾಮರ ಆಡಳಿತ ಸರಹದ್ದಿನ ಕೆಲವು ಆಯಕಟ್ಟಿನ ಸ್ಥಳಗಳಲ್ಲಿ ಕರೋಡಗಿರಿ ಆಫೀಸು ಕಾಯಂ ಮಾಡಿತ್ತು. ರೈತರು ಅತ್ತ ಕಡೆಯಿಂದ ಯಾವುದೇ ಸರಕು ಇತ್ತ ತರಲಿ ಅಥವಾ ಈ ಕಡೆಯಿಂದ ಆ ಕಡೆ ಒಯ್ಯಲು ಅದಕ್ಕೆ ನಿಗದಿಯಾದ ರಕಂ ನೀಡಿ ಕರೋಡಗಿರಿ ಕಾರಕೂನನ ಅನುಮತಿ ಪಡೆದು ಬರಬೇಕಾಗುತ್ತಿತ್ತು. ರೈತರು ತಮ್ಮ ಸರಕು ಒಯ್ಯುವಾಗ ಅಥವಾ ತರುವಾಗ ಕರೋಡಗೀರಿ ಕಚೇರಿಯಲ್ಲಿ ನಿರ್ದಿಷ್ಟ ಕಾರಕೂನ ಇಲ್ಲದೆ ಹೋದರೆ ಅಲ್ಲಿದ್ದ ಪ್ಯಾದೇನ ಕಿತಾಬ್‌ದಲ್ಲಿ ತನ್ನ ಹೆಸರು ಬರೆಸಿ ಬರಬೇಕಾಗುತ್ತಿತ್ತು. ಹೀಗೆ ರೈತರು ಹೆಸರು ಬರೆಸಿ ಬರುವುದೇ ಕರೋಡಗಿರಿ ಅಧಿಕಾರಿಗಳಿಗೆ ಅಧಿಕಲಾಭದಾಯಕವಾಗಿದ್ದುದರಿಂದ ಯಾವಾಗಲೂ ಆ ಅಧಿಕಾರಿ ತನ್ನ ಕಚೇರಿಯಲ್ಲಿ ಗೈರಹಾಜರ, ವಾರದಲ್ಲಿ ಒಂದು ಸಲ ಬಂದು ಹೀಗೆ ಬರೆಸಿ ಬಂದವರ ಊರುಗಳಿಗೆ 'ಸವಾರಿ' ಬೇಳೆಸುತ್ತಿದ್ದ. ಹೀಗೆ ಆಯಾ ಗ್ರಾಮಕ್ಕೆ ಬಂದ ಈ ಕರೋಡಗಿರಿ ಅಧಿಕಾರಿಯನ್ನು ಕಂಡ ರೈತರು ಥರಥರ ನಡುಗುತ್ತಿದ್ದರಂತೆ. ಬದ್ಮಾಷ್ ನಾವಿಲ್ದೇ ಇರೋ ಟೈಮ್ ನೋಡಿ ಮಾಲು ಸಾಗಿಸಿಕೊಂಡು ಬಂದೀದಿ. ಸಚ್ ಬೋಲೋ. ನಿಮ್ದು ಮಾಲ್ ಎಷ್ಟುಚೀಲಾ ಇತ್ತು. ಜವಾರಿ, ಗೆಂಹೂ(ಗೋದಿ) ಯಾ ಕಪಾಸ್ (ಹತ್ತಿ) ಯಾವದು ಎಷ್ಟೆಷ್ಟು.

ಆಗ ಗ್ರಾಮದ ದೊಡ್ಡ ಕುಳ, ಅಥವಾ ಮಾಲಿ ಪಾಟೀಲ ಇಂಥವರು ಆ ರೈತನ ಮಧ್ಯಸ್ತಿಕೆಮಾಡಿ ಒಂದು 'ನ್ಯಾಯ' ಒದಗಿಸುತ್ತಿದ್ದರು. ಐದು ಚೀಲ ಸರಕು ಇದ್ದರೆ ೧ ಚೀಲ ಅಥವಾ ಅದರ ಬೆಲೆ ಕರೋಡಗಿರಿ ಕೋಡಬೇಕು. ಅಥವಾ ಆ ಅಧಿಕಾರಿ ಕೇಳಿದಷ್ಟು ಕೊಡಬೇಕು. ಹೀಗೆ ಕರೋಡಗಿರಿ ವಸೂಲ ಮಾಡಿದ ಅಧಿಕಾರಿ ಕೆಲವೊಮ್ಮೆ ತನ್ನ ವಸೂಲಿ ಸರಕುಗಳನ್ನು ಆ ರೈತನ ಚಕ್ಕಡಿಯ ಮೇಲೆ ಹೇರಿಸಿಕೊಂಡು ಹೋಗುತ್ತಿದ್ದುದೂ ಉಂಟಂತೆ. ಆದ್ದರಿಂದ ಆಗ ಜನರಲ್ಲಿ 'ಕರೋಡಗಿರಿ ಯಾ ದರೋಡಗಿರಿ?' ಎನ್ನುವ ಮಾತು ರೂಢಿಯಲ್ಲಿತ್ತಂತೆ. ಇದು 'ಮಹಕ್ಮಾಮೆ ಕರೋಡಗಿರಿ' ಸುಂಕದ ಖಾತೆಯ ಕಥೆ* ನೂರಕ್ಕೆ ಒಬ್ಬ ಪ್ರಾಮಾಣಿಕ ಅಧಿಕಾರಿಯೂ ಇದ್ದನಂತೆ ಆದರೆ ಅಂಥವರನ್ನು ಈ ಸರಹದ್ದಿನ ಕಚೇರಿಗಳಿಗೆ ಕಳಿಸುತ್ತಿದ್ದುದು ವಿರಳವೆಂದು ಹೇಳಲಾಗುತ್ತಿತ್ತು.

## 'ಹುಕುಂ ಬಂತೇನ್ರಿ ?'

ಮೊಗಲಾಯಿ ಆಡಳಿತೆಯಲ್ಲಿ ಬಹಳ ಪ್ರಭಾವಶಾಲಿ ವಿಭಾಗವೆಂದರೆ ಪೋಲೀಸ್ ಇಲಾಖೆ. ಗ್ರಾಮೀಣ ಭಾಗದಿಂದ ಠಾಣೆ, ಠಾಣೆಯಿಂದ ತಹಶೀಲ್, ತಹಶೀಲಿನಿಂದ ಸುಬೇದಾರಿವರೆಗೂ ಈ 'ಮಹಕ್ಮಾ'ದ ಕೈ ಚಾಚಿಕೊಂಡಿರುತ್ತಿತ್ತು.

ಮೊಗಲಾಯಿ ಹಳ್ಳಿಯ ಜನರಿಗೆ ಬಯಲಾಟ ನಾಟಕಗಳ ಹುಚ್ಚು. ನಾಲ್ಕುವರ್ಷ ಬರಗಾಲ; ಒಂದು ವರ್ಷ ಮಳೆಗಾಲವಿದ್ದರೂ ಇಲ್ಲಿಯ ಜನ ನಾಟಕ ಆಡುವುದು, ಆಡಿಸುವುದರಲ್ಲಿ ನಿಸ್ಸೀಮರು (ಯಲಬುರ್ಗಿ ತಾಲೂಕಿನ ಬನ್ನಿಕೊಪ್ಪದ ಯರಾಸಿ ಭರಮಪ್ಪನವರ ಮೊಗಲಾಯಿ ಕಂಪನಿ' ಎಂದೇ ಪ್ರಸಿದ್ಧಿ ಪಡೆದಿದ್ದ (೧೯೨೮-೧೯೨೯) ವಾಣೀ ವಿಲಾಸ ಕಂಪನಿ ಈ ಮೊಗಲಾಯಿ ಜನರ ಕಲಾರಾ

---

* ಯಲಬುರ್ಗಿ ತಾಲೂಕಿನ ಕರ್ಮುಡಿ, ಸರಹದ್ದಿನಲ್ಲಿ ಒಬ್ಬ ಅಧಿಕಾರಿ ತುಂಬ ಪ್ರಾಮಾಣಿಕನಾಗಿದ್ದುದನ್ನು ನಮ್ಮ ತಂದೆ ಹೇಳುತ್ತಿದ್ದರು. ಇವರು ಮಾತ್ರ ಇದಕ್ಕೆ ಅಪವಾದವಂತೆ.

ಧನೆಗೆ ಸಾಕ್ಷಿ) ಆಗ ಬಯಲಾಟವನ್ನೆ ಆಡಲಿ ನಾಟಕವನ್ನೇ ಆಡಲಿ ಸರಕಾರದ 'ಹುಕುಂ' ತರಲೇಬೇಕಾಗಿತ್ತು. ಒಂದೊಂದು ಹಳ್ಳಿಯಲ್ಲಿ ಒಬ್ಬೊಬ್ಬ ಪ್ರಮುಖ ಅಥವಾ 'ಪುಢಾರಿ'ಯ ಎರಡುಮೂರು ಪಾರ್ಟಿ ಇದ್ದು ಒಂದೊಂದು ಪಾರ್ಟಿಯೂ ಒಂದೊಂದು ಆಟ ಆಡುವುದರಲ್ಲಿ ಪರಸ್ಪರ ಪೈಪೋಟಿ ಏರ್ಪಡುತ್ತಿತ್ತು. ಒಮ್ಮೊಮ್ಮೆ ಇದು ದ್ವೇಷಕ್ಕೂ ತಿರುಗಿ (ದಂಗೆ) ಹೊಡೆದಾಟಗಳೂ ಆಗುತ್ತಿದ್ದುವು. ಇಂಥ ಸಂದರ್ಭಗಳನ್ನು ತಪ್ಪಿಸಲು 'ಹುಕುಂ' ಅಗತ್ಯವಾಗಿತ್ತೆಂದು ತಿಳಿವಳಿಕೆ 'ಹುಕುಂ' ಎಂದರೆ ಅದೊಂದು ಬಹು ಮಹತ್ವದ ಘಟ್ಟವಾಗಿತ್ತು.

ಯಾವುದಾದರೂ ಹಳ್ಳಿಯಲ್ಲಿ ನಾಟಕದ ರಂಗ ತಾಲೀಮು ಆಗಿ ನಾಟಕದ ಅಟ್ಟದಕಂಬ ನೆಟ್ಟ ಮೇಲೆ ಇನ್ನೇನು ತಿಂಗಳೊಪ್ಪತ್ತಿನಲ್ಲಿ ನಾಟಕ ಪ್ರದರ್ಶನ ಎಂದು ನಿರ್ಧಾರ. ಆಗ ಬರಹೋಗುವ ಜನ ಆ ನಾಟಕದ ಪ್ರಮುಖರನ್ನು ಕಂಡು 'ಹುಕುಂ' ಬಂತೇನ್ರಿ ಎಂದು ಕೇಳುತ್ತಿದ್ದರು. 'ಇನ್ನೂ ಬಂದಿಲ್ಲ ಹುಕುಂ ತರಾಕ ಹೋಗ್ಯಾರ' ಎಂದು ಉತ್ತರ. 'ಹುಕುಂ' ತರಲು ಹಳ್ಳಿಯಗೌಡ ಒಬ್ಬಿಬ್ಬರು ಪಂಚರು ಅಥವಾ ಪ್ರಮುಖರನ್ನು ಜೊತೆಗೂಡಿ, ಕೊಲ್ಹಾರಿ ಚಕ್ಕಡಿ ಕಟ್ಟಿಸಿಕೊಂಡು ಒಳ್ಳೆ ಠೀವಿಯಿಂದ ಹೊರಡುತ್ತಿದ್ದರು.

ಆಟಕ್ಕೆ ಸಂಬಂಧಿಸಿದ ಜನರೆಲ್ಲ ಕೂಡಿ 'ಏನರ ಮಾಡಿ ಒಟ್ಟು 'ಹುಕುಂ' ಮಾತ್ರ ತರಬೇಕು ನೋಡ್ರಿ– ಖರ್ಚಿಗೆ ಹಿಂದಮುಂದ ನೋಡಬ್ಯಾಡ್ರಿ. 'ಎಂದು ಚಂದಾ ಕೂಡಿಸಿ ಹಣ ಕೊಟ್ಟು ಬೀಳ್ಕೊಡುತ್ತಿದ್ದರು.

ಆಗ ಯಲಬುರ್ಗಿ ತಾಲೂಕಿನ ಕುಕನೂರು ಅಂಥ ಒಂದು ಮಹತ್ವದ ಪೋಲೀಸಠಾಣೆ.

ಅತ್ತ ಕುಕನೂರಿಗೆ 'ಹುಕುಂ' ತರಲು ಹೋಗಿದ್ದಾರೆ ಎಂದರೆ ಇತ್ತ ಆಟದ ಅಟ್ಟ ಸಿದ್ಧ. ನಾಳೆ ಪ್ರದರ್ಶನವೆಂದರೆ ಒಂದು ದಿನ ಮೊದಲೇ ಕಿನ್ಹಾಳ ಮುಂತಾದ ಕಡೆಯಿಂದ ವೇಷಭೂಷಣದ ಪಡದೆ ಡೇರೆ ಮುಂತಾದವುಗಳನ್ನು ಹೇರಿತರಲಾಗುತ್ತಿತ್ತು.

ಅಂಕ ಪಡದೆ, ಕವಾಟು, ಜಂಗಲ್ ಪಡದೆ (ಪರದೆ) ಇತ್ಯಾದಿ ಎಲ್ಲ ಸಿದ್ಧವಾಗುತ್ತಿತ್ತು. ಸಂಜೆಯಾದರೂ ಹುಕುಂ ತರಲು ಹೋದವರು ಬಾರದಿದ್ದಾಗ ಎಲ್ಲರಿಗೂ ಕಳವಳ, ಕಾತರ. ಒಬ್ಬಿಬ್ಬರು ಕೂಡಿ ಕುಕನೂರಿಂದ ತಮ್ಮ ಊರಿಗೆ ಬರುವ ರಸ್ತೆಯಲ್ಲಿ 'ಹುಕುಂ'ಗಾಗಿ ಕಾಯುತ್ತ, ಕುಳ್ಳಿರುತ್ತಿದ್ದರು. ತಮ್ಮ ವಿರೋಧಿ ಪಾರ್ಟಿಯವರು ಏನೋ 'ಮಸಲತ್ತುಮಾಡಿ ಬಂದಿದ್ದಾರೆ ಎನ್ನುವ ಕೋಪವೂ ಕೆಲವೊಮ್ಮೆ 'ಹುಕುಂ' ಕೊಡುವ ಪೋಲೀಸ್ ಫೌಜದಾರ್ ಬೇರೆಕಡೆ ಹೋಗಿದ್ದರೆ ಆತನಿದ್ದಲ್ಲಿಗೂ ಹೋಗಿ 'ಹುಕುಂ' ತರಲೇಬೇಕು. ಅದಕ್ಕಾಗಿ ಆತನಿಗೆ ಸಲ್ಲಿಸುವ 'ನಜರಾನಾ' ಮತ್ತು ಮಾಮೂಲು ನೀಡಿ ಹುಕುಂ ತರಲಾಗುತ್ತಿತ್ತು. ಅಂತೂ ರಾತ್ರಿ ೯ ಗಂಟೆಯಾದರೂ 'ಹುಕುಂ' ಬಾರದಿದ್ದಾಗ ಆಟ ಆಡುವವರಲ್ಲಿ ತುಂಬ ಕಾತರ. ಅಂತೂ ಒಮ್ಮೆ ಕೊಲ್ಹಾರ ಚಕ್ಕಡಿಯ ಗಿಲ್‌ಗಿಲ್ ಸದ್ದುಕೇಳಿ ಬರುತ್ತಿದ್ದಂತೆ ಎಲ್ಲರಿಗೂ ಉಲ್ಲಾಸ. 'ಹುಕುಂ' ಹೊತ್ತು ತಂದ ಹಿರಿಯರನ್ನು ಆಟದ ಅಟ್ಟದವರೆಗೂ ಗುಂಪುಗೂಡಿ ಕರೆತಂದಾಗ ಸಂಭ್ರಮವೋ ಸಂಭ್ರಮ. ಕೆಲವೊಮ್ಮೆ ಮದ್ದು ಹಾರಿಸಲಾಗುತ್ತಿತ್ತು; 'ಹುಕುಂ ಸಿಕ್ಕಿತು' ಎನ್ನುವುದರ ಸಂಕೇತ ಇದು, ರಾತ್ರಿ ೧೧ ಗಂಟೆಗೆ ಆಟ ಆರಂಭವಾಗುವುದು 'ಹುಕುಂ' ನೀಡಿದ 'ಪ್ರಭು' ಫೌಜ್ದಾರ ನಾಲ್ಕಾರು ಪೋಲೀಸರ ಜೊತೆಗೆ ಆ ಹಳ್ಳಿಗೆ ಬಂದು ಮುಕ್ಕಾ ಮಾಡುತ್ತಿದ್ದ. 'ಬರೇ ಹುಕುಂ ತಂದಷ್ಟೆ ಅಲ್ಲ, ಹುಕುಂ ಕೊಡಾವರನ್ನ ಕರಕೊಂಡ ಬಂದ್ರು ನೋಡಿರೋ' ಎಂದು ಕುಣಿದಾಡಿದ ಜನ ಸಂಭ್ರಮದಿಂದ ಬಂದ ಈ ವಿಶೇಷ ಅತಿಥಿಗಳಿಗೆ ಎಲ್ಲ ಬಗೆಯ ಊಟ, ಪಾನಿ ಪೇಯ 'ವಸತಿ'–ಸರಬರಾಜು ಮಾಡುತ್ತಿದ್ದರು. ಇದು 'ಹುಕುಂ' ಕಥೆ.

## ಹಮ್‌ಕರೆಸೋ ಕಾಯ್ದಾ

'ಮೊಗಲಾಯಿ ರಾಜ್ಯದ ಕೆಲವು ನಗರಸ್ಥಳಗಳಿಗೆ ಖಾಸಗೀ ಬಸ್ಸುಗಳ ಜನಸಂಪರ್ಕ ಸಾರಿಗೆ ಕಾರ್ಯ ಪೂರೈಸುತ್ತಿದ್ದವು. ಇಂಥ ಬಸ್ಸುಗಳ ಮಾಲಿಕರು 'ರಸ್ತೆ ಪರ್ಮಿಟ್'ಗಾಗಿ ಸದಾ ಪೋಲೀಸರ, ಪೋಲೀಸ್ ಅಧಿಕಾರಿಗಳ ಮರ್ಜಿ ಕಾಯಬೇಕಾಗುತ್ತಿತ್ತು.

ಆಗ ನಾನಿನ್ನೂ ಹೈಸ್ಕೂಲಿನ ಶಿಕ್ಷಣಪಡೆಯುತ್ತಿದ್ದೆ. (೧೯೪೭) ರಾಯಚೂರಿನ ಒಂದು ಹಳ್ಳಿಗೆ ಹೋಗಬೇಕಾದರೆ ಒಂದು ಅಡ್ಡರಸ್ತೆಗೆ ಇಳಿದು ಮುಂದೆ ನಡೆದು, ಕುದುರೆಮೇಲೆ ಹೋಗಬೇಕಾದ ಪ್ರಸಂಗ, ನಮ್ಮ ಬಸ್ ಒಂದು



ತಾಲೂಕಾ ಸ್ಥಳಕ್ಕೆ ಬಂದು ನಿಂತಿತು. 'ಕಿನ್ನರ್ ಸಾಬ್' ಬಂದು 'ಈಗ ಚಹಾಪಾನಿ ಏಕ ಘಂಟಾ ಹೈ. ಠೀಕ್ ನೌ ಬಜೇ ಗಾಡಿ ಛುಟ್ತೆ' ಎಂದು ಸಾರಿದ.

ನೌ ಬಜೆ ಎಲ್ಲ ಸವಾರರೂ ಬಂದು ಕುಳಿತರು. ಮತ್ತೆ ಕೆಲವು ಜನ ಬಸ್ಸು ಹತ್ತಿದರು. ೯ ಕಳೆದು ಹತ್ತು ಗಂಟೆ. ಬದಿಯ ಹೊಟೆಲ್‌ನ ಕುರ್ಚಿಯಲ್ಲಿ ಕುಳಿತ ಡ್ರೈವರ ಸಾಹೇಬನಿಗೆ ಕಿನ್ನರ್‌ಸಾಬ್ ಓಡಿ ಬಂದು ಹೇಳಿದ.

'ಸಾಬ್ ಅಭೀ ಆ ಠೈಂ'

'ಕೌನ್ ಸಾಬ್ '

'ತುಮೇಕಾಯ್ಕೋ'

'ಏಕ ಗಂಟಾ ತೋ ಗುಜರ್‌ಗಯಾ'

'ಹೌ ಗುಜರಗಯಾ'

ಮಾತಾಡಿ ಫಾಯಿದೆ ಇಲ್ಲವೆಂದು ಒಬ್ಬರು ಸೂಚಿಸಿದರು.

ಅಷ್ಟರಲ್ಲಿ ಒಂದು ಹೋಲ್ಡಾಲ್', ಸವಾರರ ಮಂಚದ ಕಟ್ಟು, ಪೆಟ್ಟಿಗೆ, ಬಂದವು. ಮುಂದೆ ಕುಳಿತ ಜನರನ್ನು ಎಬ್ಬಿಸಿ ಅಲ್ಲಿ ಸಾಮಾನ ಇಟ್ಟು 'ಫ್ರಂಟ್ ಸೀಟ್' ಖಾಲಿಮಾಡಲಾಯಿತು. ಮತ್ತೊಬ್ಬ ಓಡಿಬಂದು 'ಡ್ರೈವರ್ ಸಾಬ್ ನಿಗೆ 'ಅಬ್‌ಕ್ಯಾ, ಸಬ್‌ಕಾ ಹಜಾಮತಿ, ಹಮಾಲ್ ಸೋಬ್ ಹುವಾ. ನಾಷ್ಟ್ಯಾಕರ್‌ಕೋ ಅಭೀ 'ಆತ್ಯೆಂ' ಅಂದ, 'ದಸ್‌ಬಜ್‌ಗಯೆ ಗ್ಯಾರಾಭೀ ಬಜ್‌ಗಯೆ, ಯೆಕ್ಯಾಹೈ' ಅಂದೆ. 'ಹಾಜಿ ಸಾಬ್ ಆನೇಕಾ,

ಅಷ್ಟರಲ್ಲಿ ಫೌಜ್ದಾರ್, ಇಬ್ಬರು ಪೋಲೀಸರ ಮೆರವಣಿಗೆ'ಯಲ್ಲಿ ಚುರುಟ ಸೇದುತ್ತ ಬಂದರು. ನಾನು ಬಸ್ಸಿನ ಬಾಗಿಲ ಬದಿ ನಿಂತಿದ್ದು, ಬಂದ ಫೌಜದಾರರನ್ನೇ ಕೇಳಿದೆ.

'ಇದೇನಿದು ೮ ರಿಂದ ೧೧ ಘಂಟೆಯವರೆಗೆ ಇಷ್ಟು ಜನ ಕಾಯ್ತಿದ್ದಾರೆ. ಬಸ್ ಛೋಡನೇಕೆ-ಲಿಯೆ ಕೋಯಿ ಕಾಯ್ದಾ ಕಾನೂನ್ ನಹೀಹೈಕ್ಯಾ? ಆ ಪೋಲೀಸ್ ಅಧಿಕಾರಿ ಆಢ್ಯತೆಯಿಂದ ಕೂಡಿದ 'ಕ್ಯಾ, ಹಮ್‌ಕೋ ಕಾಯ್ದಾ ಸಿಖಾತೆ ? ಯಹಾ ಹಮಾರಾ ಕಾಯ್ದಾ ಚಲ್ತಾ ಹೈ. ಹಮ್‌ಕರೇಸೋ ಕಾಯ್ದಾ !

ಕಾಯ್ದೆ ಏನೇ ಆಗಲಿ ಅಂತೂ ಬಸ್ ಆ ಸ್ಥಳ ಬಿಟ್ಟು ಕದಲಿತ್ತು.

ಕಾಲ ಬದಲಾಯಿತು. 'ತಾಬದೆ ಖಾಲಿಕೆ, ಆಲಮ್' 'ಜಗತ್ತು ಇರುವಷ್ಟು ಶಾಶ್ವತಕಾಲದವರೆಗೂ ನಮ್ಮ ನಿಜಾಮರಾಜ್ಯ ಚಿರವಾಗಿರಲಿ' ಎನ್ನುವ ಪ್ರಾರ್ಥನಾ ಗೀತೆ ಶಾಲೆಯಲ್ಲಿ ಎಲ್ಲರಿಗೂ ಕಡ್ಡಾಯವಾಗಿದ್ದ ಕಾಲಗತಿಸಿ ಸ್ವಾತಂತ್ರ್ಯದ ಹೊಸ ಗಾಳಿ ಬೀಸಿತು. ೧೯೪೭ ಆಗಸ್ಟ್ ಭಾರತ ಸ್ವಾತಂತ್ರ್ಯ ಪಡೆದರೂ ನಿಜಾಮರ ಪ್ರದೇಶದಲ್ಲಿ ಇನ್ನೂ ಗುಲಾಮಗಿರಿ. ಆಗ ಸ್ವಾಮಿ ರಮಾನಂದ-

ತೀರ್ಥರ ನಾಯಕತ್ವದಲ್ಲಿ ಇಡೀ ಹೈದರಾಬಾದ ಪ್ರಾಂತದ ಜನತೆ ಸ್ವಾತಂತ್ರ್ಯಾಂದೋಲದಲ್ಲಿ ಧುಮುಕಿತು. (ಜನಾರ್ಧನರಾವ್ ದೇಸಾಯಿ, ಡಿ. ಜಿ. ಬಿಂದು, ಬಿ. ರಾಮಕೃಷ್ಣರಾವ ಮುಂತಾದ ವರ ಒಂದು ತಂಡ, ಜಗನ್ನಾಥರಾವ್ ಚಂಡರಕಿ, ಸರ್ದಾರ್ ಶರಣಗೌಡ, ಚಂದ್ರಶೇಖರ ಪಾಟೀಲ ರಾಘವೇಂದ್ರರಾವ್ ದೇಸಾಯಿ, ಸರಾಫ, ಜೆ. ಕೆ. ಪ್ರಾಣೇಶಾಚಾರ, ಪ್ರಜಾಪತ್ರಿಕೆಯ ರಾಘವೇಂದ್ರ ರಾವ ಜಾಗೀರದಾರ ಅಳವಂಡಿ ಶಿವಮೂರ್ತಿ ಸ್ವಾಮಿ, ಪ್ರಭುರಾಜ ಪಾಟೀಲ, ಶಂಕರಪ್ಪಯ್ಯ ರಾಶಿ, ಮುಂತಾದವರ ಮತ್ತೊಂದು ತಂಡ ಜೊತೆಗೆ, ಕುಸುಮಾಕರ ದೇಸಾಯಿ, ಜಯತೀರ್ಥ ರಾಜಪುರೋಹಿತ, ಬಿ. ವಿರೂಪಾಕ್ಷಪ್ಪ, ಡಂಬಳ ಸೋಮಪ್ಪ, ವಿಠ್ಠಲರಾವ್ ಎಸ್. ಡಿ. ಪಾಟೀಲ, ಅನ್ನದಾನಯ್ಯ ಪುರಾಣಿಕ, ಬಿ. ವಿರೂಪಾಕ್ಷಪ್ಪ, ಪಂಚಾಕ್ಷರಿ ಹಿರೇಮಠ ಮೊದಲಾದ (ಕೆಲವು ಸ್ನಾತಕ ಸ್ನಾತಕೋತ್ತರ) ವಿದ್ಯಾರ್ಥಿಗಳ ತಂಡ ಹೀಗೆ ಈ ಆಂದೋಲನ ಮುಂದುವರೆಯಿತು.

ಆ ಅವಧಿಯಲ್ಲಿ ಅನಿರುದ್ಧ ದೇಸಾಯಿ ಕಾಲೇಜಿನಲ್ಲಿ, ನಾನು ಹೈಸ್ಕೂಲಿನಲ್ಲಿ. ಅಕ್ಟೋಬರ್ (೧೯೪೭) ತಿಂಗಳು ಹೈಸೂಲು, ಕಾಲೇಜಿನ ವಿದ್ಯಾರ್ಥಿಗಳು ಕೂಡಿ ಮೆರವಣಿಗೆಗೆ ಹೊರಡಿಸಿದ್ದವು.

ಝುಂಡಾ ಊಂಚಾ ರಹೇ ಹಮಾರಾ, ವಿಜಯೀ ವಿಶ್ವತಿರಂಗಾಪ್ಯಾರಾ' ಹಾಡು ಸಾವಿರಾರು ವಿದ್ಯಾರ್ಥಿಗಳ ಮೆರವಣಿಗೆ. ಇದ್ದಕ್ಕಿದ್ದಂತೆ ಗುಲಬರ್ಗಾದ ಮಹಬೂಬ್ ಗುಲ್ಷನ್ ಹತ್ತಿರ ಒಂದು ಭಾರೀ ಮಿಲಿಟರಿ ಲಾರಿಯಲ್ಲಿ ನೂರಾರು ನಿಜಾಮ ಪೋಲೀಸರು ಬಂದಿಳಿದು ಲಾಠಿಪ್ರಹಾರ ಮಾಡಿದರು. ಅವರ ಬೆನ್ನಹಿಂದೆಯೇ ಬಂದ ರಜಾಕಾರರ ಗುಂಪು ಮೆರವಣಿಗೆಯ ಮೇಲೆ ದಾಳಿ ಮಾಡಿತು. ಅನಿರುದ್ಧದೇಸಾಯಿಯ ಕೈಯ್ಯಲ್ಲಿಯ ಧ್ವಜವನ್ನು ಕಿತ್ತಿಸೆಯುವ ಮುಂಚೆಯೇ ಹತ್ತಾರು ಜನ ಕೂಡಿ ಮತ್ತೆ ಧ್ವಜ ಮೇಲೆತ್ತಿದೆವು. ಕಂಡಕಂಡಲ್ಲಿ ಬೂಟು ಗಾಲಿನ ಒದೆತ ಲಾಠಿಪ್ರಹಾರ ಮುಂದೇನಾಯಿತೂ! ಎಚ್ಚರಾದಾಗ ನಾವು ಕೆಲವರು ಗುಲಬುರ್ಗಾದ ಸೆಂಟ್ರಲ್ ಜೈಲಿನಲ್ಲಿದ್ದೆವು. ಅಂದು ಸಂಜೆಯೇ ನಮ್ಮಬಿಡುಗಡ. ರಾಷ್ಟ್ರನಾಯಕರ ಕರೆಯ ಮೇರೆಗೆ ನಿಜಾಮ ಸರಕಾರ ಧಿಕ್ಕರಿಸಿ ಗುಲಬರ್ಗಾ, ಅಂದೇ ಬಿಡಬೇಕಾಗಿತ್ತು. ಹೀಗೆ ನಿಜಾಮ ಆಡಳಿತದ ಮೊದಲ ಸವಿ ನಮ್ಮ ಅನುಭವಕ್ಕೆ ಬಂದಿತ್ತು ಏಸಿದ್ದರೂ ಅಂದು ಸಂಜೆ ನನ್ನ ಮಿತ್ರ ಇಸಾಕ ಜುನೇದಿ ನೆರವಿನಿಂದ ಚೂಡಿದಾರ್ ಪೈಜಾಮ, ಷೇರವಾನಿ, ರೂಮಿ ಟೋಪಿ ಧರಿಸಿ ಬೆಂಬತ್ತಿದ ಪೋಲೀಸರು ಮತ್ತು ರಜಾಕಾರ ಗುಪ್ತಚಾರರಿಗೆ ಚಳ್ಳೆಹಣ್ಣು ತಿನಿಸಿ ಸೊಲ್ಲಾಪುರ ಕಡೆಗೆ ಬಿಡುವ ರೈಲು ಹತ್ತಿದೆವು. ೧೯೪೮ ಕಳೆದು ನಮಗೂ ಸ್ವಾತಂತ್ರ್ಯ ಬಂದ ಬಳಿಕ ಮತ್ತೆ ಗುಲಬರ್ಗಾಕ್ಕೆ ಬಂದು ಪ್ರಿನ್ಸಿಪಾಲ ಷರೀಫುಲ್ ಹಸನ್‌ಬರ್ನಿ ಪ್ರೊ. ಮಲ್ಲಿಕಾರ್ಜುನರಾವ, ಪೋಲೀಸ ಅಧಿಕಾರಿ ಘಾಟಗೆ ಮುಂತಾದವರ ನೆರವು ಪಡೆದು ಕಾಲೇಜಿನ

> **ಸರ್ಕಾರಿ ಯೋಜನೆ**
>
> ನೀರು ತರತಾರಂತ ಕಾರು ಓಡ್ಯಾಡಿದವ
> ಕೊಳವಿ ಕುಂದರಿಸಿ ವರ್ಸರಡು| ಕಳದsರು
> ನಳದಾಗ ನೀರು ಬಂದಿಲ್ಲ ॥
>
> —ಶ್ಯಾಮ ಹುದ್ದಾರ

ಆವರಣದಲ್ಲಿಸ್ವಾತಂತ್ರ್ಯೋತ್ಸವಆಚರಿಸಲಾಯಿತು. ಆಗ ಲಾಠಿಪ್ರಹಾರ ಮಾಡಿದ ಕೆಲವು ಪೋಲೀಸ ಇತ್ಯಾದಿ ಜನರು ಬಂದು ಇದರಲ್ಲಿ ಭಾಗವಹಿಸಿದ್ದು. ಅಂದಿನ ವಿದ್ಯಾರ್ಥಿ ವೃಂದಕ್ಕೆ– ಕುಳಗೇರಿ ಚೆನ್ನ ಬಸಪ್ಪ, ಸಿದ್ದನಗೌಡ, ಎರಾಸಿ ಲಿಂಗಬಸಪ್ಪ, ಸಿಂದೋಗಿ ಯಲ್ಲಪ್ಪ, ಬಿ. ಯಲ್ಲಪ್ಪ, ಕ್ರಿನಾಸ್ಪ, ಪಂಚಾಕ್ಷರಿ ಹಿರೇಮಠ, ಇಸಾಕ ಜುನೇದಿ, ಮುಂತಾದವರು ಮತ್ತು ಪ್ರಮುಖ ನಾಗರಿಕರಿಗೆ -ಸರ್ದಾರ ಶರಣ ಗೌಡ, ಮಹಾಗಾಂವ್ ಚಂದ್ರಶೇಖರ ಪಾಟೀಲ, ರೇವಣ ಸಿದ್ದಪ್ಪರಾಮ ಪುರೆ ಇತ್ಯಾದಿ– ಒಂದು ರೀತಿಯ ಸಮಾಧಾನವಾಗಿತ್ತು.

ನಿಜಾಮರ ಆಡಳಿತದ ಈ ಅವಧಿಯಲ್ಲಿ ಎಷ್ಟೋ ನೀರು ಹರಿದುಹೋಗಿತ್ತು. ಹಿಂದೂ ಮತ್ತು ಮುಸಲ್ಮಾನ್ ನನ್ನ ರಾಜ್ಯದ ಎರಡು ಕಣ್ಣು ಎನ್ನುವ ನಿಜಾಮರ ಹೇಳಿಕೆಯ ಪ್ರಸರಣ ಅದಕ್ಕೆ ವಿರುದ್ಧವಾಗಿ ರಜಾಕಾರರ ಮತೀಯ ಉದ್ರಿಕ್ತ ಪ್ರದರ್ಶನ ಈ ಗಲಭೆಯಲ್ಲಿ ಘಟಿಸಿದ ಒಂದು ಬಹುದೊಡ್ಡ ದುರಂತ. ನಿಜಾಮರ ಆಡಳಿತದ ಅವನತಿ ಮತ್ತು ಅದರ ಅಂತ್ಯಕ್ಕೆ ಸಂಕೇತವಾಗಿದೆ.

ಶೋಬುಲ್ಲಾಖಾನ್ ಎನ್ನುವ ಒಬ್ಬ ಮಹಾನ್ ರಾಷ್ಟ್ರೀಯವಾದಿ ತನ್ನ ಉರ್ದು ಪತ್ರಿಕೆಯಲ್ಲಿ ನಿಜಾಮರ ಹೇಳಿಕೆಗೆ ಪ್ರಾಧಾನ್ಯವಿತ್ತು ಅದಕ್ಕೆ ಪೂರಕವಾದ ಲೇಖನ ಬರೆದದ್ದು ಅದರಿಂದ ಕೆರಳಿದ ರಜಾಕಾರರು ಶೋಬುಲ್ಲಾಖಾನರಿಂದ ಕ್ಷಮೆ ಕೇಳಲು ಒತ್ತಾಯಿಸಿದ್ದು, ಅವರು ಒಪ್ಪದಿದ್ದಾಗ ಕೊನೆಗೆ ಕಾಚೀಗುಡಾ ರೈಲು ನಿಲ್ದಾಣಕ್ಕೆ ಸಮೀಪದ ಒಂದು ರಸ್ತೆಯಲ್ಲಿ ಹಾಡುಹಗಲೇ ಮತಾಂಧರು ಕೂಡಿ ಶೋಬುಲ್ಲಾಖಾನರ ಕೊಲೆ ಮಾಡಿದ್ದು ಇತ್ಯಾದಿ.

ಹೀಗೆ ಇನ್ನೂ ಅನೇಕ ಸಂಗತಿಗಳನ್ನು ವಿವರಿಸುತ್ತ ಹೊದರೆ ಅದೊಂದು ಬೇರೆ ಪುಸ್ತಕವೇ ಆದೀತು. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ನಡೆದ ಒಂದು ಪ್ರಸಂಗದೊಡನೆ ಈ ಲೇಖನ ಮುಗಿಸುವದು ಸೂಕ್ತ.

೧೯೫೧-೫೨ರ ಅವಧಿ. ನವಾಬ ಅಲಿಯಾವರ ಜಂಗ್ ಅಂದು ಉಸ್ಮಾನಿಯಾ ವಿಶ್ವವಿದ್ಯಾಲಯದ ವೈಸ್‌ಚಾನ್ಸಲರ್ ಆಗಿದ್ದರು. ಈಶ್ವರನಾಥ ಟೋಪಾ ರಜಿಸ್ಟ್ರಾರ್.

ಹೈದರಾಬಾದ ನಗರದಿಂದ ಉಸ್ಮಾನಿಯಾ ವಿಶ್ವವಿದ್ಯಾಲಯಕ್ಕಾಗಿ ಕಾಚೀಗುಡಾ ಅಡಿಗಮೇಟ್, ಸೀತಾಫಲಮಂಡಿ ಮುಂತಾದ ಸಣ್ಣ ಸಣ್ಣ ರೇಲ್ವೆ ನಿಲ್ದಾಣಗಳು, ಕಾಚೀಗುಡಾದಲ್ಲಿ ರೈಲು ಹತ್ತಿದ ವಿದ್ಯಾರ್ಥಿಗಳು ಅಡಿಗಮೇಟ್ ನಿಲ್ದಾಣಕ್ಕೆ ಇಳಿದು ವಿಶ್ವವಿದ್ಯಾಲಯಕ್ಕೆ ಹೋಗುವುದು ವಾಡಿಕೆ, ಅಂದೊಮ್ಮೆ ರೈಲು, 'ಅಡಿಗಮೇಟ್' ನಿಲ್ದಾಣದಲ್ಲಿ ನಿಲ್ಲಲಿಲ್ಲ. ಕೂಡಲೇ ವಿದ್ಯಾರ್ಥಿಗಳು 'ಚೈನು' ಜಗ್ಗಿದರು, ರೇಲ್ವೆ ಪೋಲೀಸರು ತಕ್ಷಣ ಬಂದು ಕೆಲವು ವಿದ್ಯಾರ್ಥಿಗಳನ್ನು ಗದರಿಸಿದರು. ಅದಕ್ಕೆ ವಿದ್ಯಾರ್ಥಿಗಳು ಪ್ರತಿಭಟಿಸಿದಾಗ ಕೆಲವರನ್ನು ಅರೆಸ್ಟ್ ಮಾಡುವ ಯತ್ನ ನಡೆಯಿತು. ವಿದ್ಯಾರ್ಥಿ ಗುಂಪು ಉಗ್ರ ಪ್ರತಿಭಟನೆಗೆ ತೊಡಗಿದಾಗ ಅವರ ಮೇಲೆ ಲಾಠೀಪ್ರಹಾರ. ಪರಿಸ್ಥಿತಿ ನಿಯಂತ್ರಣ ಮೀರಿದಾಗ ಪೋಲೀಸರು ಅಷ್ಟಕ್ಕೆ ಬಿಟ್ಟು ರೈಲು ಹತ್ತಿ ನಡೆದರು.

ಬಳಿಕ ಒಂದು ಗಂಟೆಯ ಬಳಿಕ ಉಸ್ಮಾನಿಯಾ ವಿಶ್ವವಿದ್ಯಾಲಯದ ಆವರಣದಲ್ಲಿ ಬಹುದೊಡ್ಡ ಸಂಖ್ಯೆಯಲ್ಲಿ ಪೋಲೀಸ್ ವ್ಯಾನ್ ಬಂದವು. ಈ ಸುದ್ದಿ ನವಾಬ್‌ಅಲಿಯಾವರ ಜಂಗ್ ಅವರಿಗೆ ತಲುಪುತ್ತಲೇ ನವಾಬರು ಕಿಡಿಕಿಡಿಯಾದರು. ತಮ್ಮ ಫೋನ್ ಎತ್ತಿ ಅಂದಿನ ಐ. ಜಿ. ಪಿ. (ಬಹುಶಃಶಿವ ಮೋಹನ್‌ಲಾಲ) ಅವರಿಗೆ ಐ. ಜಿ. ಪಿ. ಸಾಬ್ ಯೆ ಮೇರಾ ಉಹಾತಾಹೈ ಯಂಹಾ ಆಪ್‌ಕೆ ಲೋಗ್ ಆನಾಹೈತೋ ಉನ್ಹೇ ಹಮಾರೆ ಪಡೆ ಇಜಾಜತ್ ಲೇನಾ ಥಾ. ಎಂದು ಮುಂತಾಗಿ ಹೇಳಿ, ಮೊದಲು ಪೋಲೀಸ ನಮ್ಮ ಆವರಣದಿಂದ ಹೊರಗೆ ಹೋಗಲಿ ಆ ಬಳಿಕ ತಾವು ಬರಬೇಕು. ವಿದ್ಯಾರ್ಥಿಗಳು ನನ್ನ ಮಕ್ಕಳು ( ತಲಬಾ ಮೇರೆ ಬಚ್ಚೆ ಹೈ, ಔರ ಆಪಕೇ ಭೀ ) ನಿಮ್ಮ ಮಕ್ಕಳು ಕೂಡ. ತಕ್ಷಣ ಪೋಲೀಸರು ಅವರಣ ಖಾಲಿಮಾಡಿದರು. ಮುಂದೆ ಪೋಲೀಸ ಅಧಿಕಾರಿಗಳ ಜೊತೆ ಮಾತುಕತೆ ಒಪ್ಪಂದ ಎಲ್ಲ ನಡೆದು ಮತ್ತೆ ವಿಶ್ವವಿದ್ಯಾಲಯ ಸಾಮಾನ್ಯ ಪರಿಸ್ಥಿತಿಗೆ ತಿರುಗಿತು ಇತ್ಯಾದಿ.

ನಿಜಾಂ ಸರಕಾರದ ನವಾಬೀ ಮನೆತನದ ಒಬ್ಬ ಪ್ರತಿಷ್ಠಿತ ವ್ಯಕ್ತಿಯ ಈ ಉನ್ನತ ನಡವಳಿಕೆ ಹೈದರಾಬಾದಿನ ಆಡಳಿತೆಯಲ್ಲಿ ಉಂಟಾದ ಪರಿವರ್ತನೆಗೆ ಸಂಕೇತವಾಗಿರುವಂತೆ ಅಂಥ ವ್ಯವಸ್ಥೆಯಲ್ಲಿ ಕೂಡ ಇಂಥ ವಿರಳವ್ಯಕ್ತಿಗಳು ಇದ್ದರು ಎನ್ನುವುದಕ್ಕೆ ಸಾಕ್ಷಿ. ●

---

ಮಹಕ್ಮಾ–ಇಲಾಖೆ–ಖಾತೆ

ತಲಬಾ–ವಿದ್ಯಾರ್ಥಿಗಳು (ತಾಲಿಬೆ ಇಲ್ಮ್ ವಿದ್ಯಾರ್ಥಿ)




ಈಗಿನ ಹುಡುಗರು ಆಡಲು ಬುಗುರಿ ಗೋಲಿ ಕೇಳ್ತೋಲ್ಲ. ಕೋವಿ, ಆಟಂಬಾಂಬ್ ಕೇಳ್ತಾರೆ..



ನಮ್ಮನೇಲಿ ಕುಂಕುಮ ಇಲ್ಲ ಗೌರಮ್ಮಾ 'ಟಿಕ್ಲಿ' ಕೊಡ್ತೀನಿ.

# ಇದು ಈ ಕಾಲ

ಕೆ. ಆರ್. ಸ್ವಾಮಿ



ಕುಡಿಯೋಲ್ಲ ತಿನ್ನೋಲ್ಲ. ನಾಲ್ಕು ಜನರೊಟ್ಟಿಗೆ ಸೇರದಂತಾ ಗಂಡ ನಂಗೆ ಬೇಡಪ್ಪಾ...



ಅತ್ತೆಯಿಲ್ಲದ ಮನೆ ಯಾವುದಿದ್ರೂ ಹೇಳಿ... ಇನ್ನೂ ಐವತ್ತು ಸಾವಿರ ಜಾಸ್ತಿ ವರದಕ್ಷಿಣೆ ಕೊಡ್ತೀನಿ...

# ಕಂಪ್ಯೂಟರ್


ನಾಳೆ ಸಂಜೆ ನಿಮ್ಮ ಸಮಾರಂಭ
ದಲ್ಲಿ
ಮಾಡಬೇಕಾಗಿರುವ
ಭಾಷಣವನ್ನು
ತಯಾರು ಮಾಡುತ್ತಿದೆ.
ಮಂತ್ರಿ
ಕಂಪ್ಯೂಟರ
ಪರೀಕ್ಷಾ ಫಲಿತಾಂಶ


ಸಾಲ ಮಂಜೂರಾತಿ


ನಿಮ್ಮ ಮಗನ ಆತ್ಮಹತ್ಯೆಯ ಪ್ರಯತ್ನ ವಿಫಲವಾದದ್ದು ಒಳ್ಳೆಯದಾಯ್ತು. ಆತ ಕಂಪ್ಯೂಟರ ನೀಡಿದ ತಪ್ಪು ಮಾಹಿತಿಯಿಂದ ಫೇಲ್ ಆಗಿದ್ದ... ಈಗ ಸರಿಯಾದ ಮಾಹಿತಿ ಸಿಕ್ಕಿದೆ. ಆತ ಪಾಸ್.

ಪ್ರೇಂಕುಮಾರ್

# ಕನ್ನಡಾಂಬೆಯ ನೆನಪು



ಡಾ॥ ಬುದ್ಧಣ್ಣ ಹಿಂಗಮಿರೆ

ನೀ ನಿರ್ಮಿಸಿದ ಮಣ್ಣಿನ ಗೊಂಬೆಗಳು ನಾವು;
ನೀ ತುಂಬಿದ ರಕ್ತಮಾಂಸದಿಂದ ಕಣ್ತೆರೆದು
ಆಟವಾಡಿದೆವು ನಿನ್ನ ಉಡಿಯಲ್ಲಿ.
ನೀ ಹರಿಸಿದ ಪ್ರೀತಿಯ ಹೊಳೆಯಲ್ಲಿ ತೇಲಾಡಿ
ಕುಣಿದು ಕೂಗಿದೆವು ಹಗಲು-ರಾತ್ರಿ.
ನಿನ್ನ ಕಣ್ಣಿಂದೊಗೆದ ಸೆಳೆಮಿಂಚಿಗೆ ಸಿಕ್ಕು,
ಕಲಿತೆವು ನಾವು ನಗುವುದನ್ನು.
ಭೀತಿ-ಸಂಶಯಗಳ ಗಾಳಿ ಸೋಂಕಿದ ಸಮಯ
ಅಡಗಿದೆವು ನಿನ್ನ ಭಯದ ಸೆರಗಿನಲ್ಲಿ
ಗಿಡಗಿಡಕೆ ತೂಗುವ ಎಲೆ-ಗೊಂಚಲು ಹೂ-ಹಣ್ಣ ಕಂಡು
ಹಿರಿಹಿರಿ ಹಿಗ್ಗಿದೆವು ಹಕ್ಕಿಗಳಂತೆ ರೆಕ್ಕೆ ಪಡೆದು
ಹಾರಾಡಿದೆವು ಗುಡ್ಡ-ಬೆಟ್ಟ ಹಸಿರ ನೆತ್ತಿಯ ಮೇಲೆ ಸುತ್ತಮುತ್ತ
ಗುಡಿ ಕಟ್ಟಿದೆವು ಅಲ್ಲಲ್ಲಿ ಸೂರ್ಯಕಿರಣಗಳ ಹಿಡಿದು
ಕಾಮನಬಿಲ್ಲನು ಹಿಡಿದು, ಕತ್ತರಿಸಿ ಕರಗಿಸಿ
ಬಣ್ಣ ಬಣ್ಣಗಳ ಹೋಳಿ ಹರಿಸಿದೆವು.
ತಾಮ್ರ, ಶಿಲೆ ಕಂಚು ಹಿತ್ತಾಳೆ ಗೋಡೆ ಕಾಗದ ಮೇಲೆ
ಮೂಡಿಸಿದೆವು ಕಣ್ಣು-ಮನ ಕುಕ್ಕಿಸುವ ಕಲೆಯ
ಸಹಸ್ರ ವರ್ಷಗಳಿಂದ ಹುಡುಕುತ್ತಿದ್ದೇವೆ
ಜೀವಂತ ನೆಲೆಯ.
ಕಣ್ತೆರೆದಾಕ್ಷಣ ಹಾರಿ ಹೋಗುವ ಸ್ವಪ್ನಗಳ ಹಿಡಿದು
ರಚಿಸಿದ್ದೇವೆ ಅತ್ಯಾಧುನಿಕ ಸೌಧ ಮಹಲುಗಳನ್ನು
ಗೆದ್ದಲಿ ಹತ್ತಿ ಮಸಕು ಮಸಕಾಗಿದ್ದ
ಗತವೈಭವವನ್ನು ಸ್ಮರಿಸಿಕೊಂಡು,
ಮತ್ತೆ ಪುನಃ ರಚಿಸಿದ್ದೇವೆ ಹೊಸ ಇತಿಹಾಸವನ್ನು.
ನುಡಿ-ನುಡಿಯ ಮೈಯಲ್ಲಿಂದು
ತುಳುಕುವುದು ಕನ್ನಡದ ರಕ್ತ.
ಭೂತಕಾಲದ ಗವಿಯಲ್ಲಿ ಹಿಲಾಲುಗಳ ಹಚ್ಚಿ ನೋಡಿ
ಭೇದಿಸಿದ್ದೇವೆ ರಹಸ್ಯಗಳನ್ನು,
ಗತಕಾಲ ಬಿಟ್ಟು ಹೋದ ಹೆಜ್ಜೆಗಳ ಮೆಟ್ಟಿ
ಇಂದು ನೆಡುತ್ತಿದ್ದೇವೆ ಹೊಸ ಸಂಸ್ಕೃತಿಯ ಸಸಿಗಳನ್ನು.
ಮೇಲು-ಕೀಳು, ತಗ್ಗು-ದಿನ್ನೆಗಳ ನೆಲಸಮ ಮಾಡಿ,
ಬಿತ್ತುತ್ತಿದ್ದೇವೆ ಹೊಸ ಬೀಜಗಳನ್ನು.
ಶ್ರಮಿಸುತ್ತಿದ್ದೇವೆ ಎಂದಿನಿಂದಲೂ ಇಂದಿನ ವರೆಗೆ
ಒಂದೇ ಒಂದು ಗುರಿ ಮುಟ್ಟುವುದಕ್ಕೆ:
ಒಗ್ಗಿ ಮುನ್ನಡೆಯುತ್ತಿದ್ದೇವೆ ಕಿವಿಗೊಟ್ಟು ಹೊಸ ನುಡಿಗೆ
'ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು'
ಮೊರ್ದನಿಯುವ ಈ ಹೊಸ ದನಿಗೆ,
ಸದಾಕಾಲವು ನಿನ್ನಡಿಯಲ್ಲಿ
ತೇಲಾಡುವ ಮತ್ಸ್ಯಗಳು ನಾವು,
ನೀ ತುಂಬಿದ ರಕ್ತ-ಮಾಂಸದಿಂದ ಕಣ್ತೆರೆದು
ಆಟವಾಡುತ್ತ ನಿನ್ನ ಉಡಿಯಲ್ಲಿ;
ನೀ ನಿರ್ಮಿಸಿದ ಮಣ್ಣಿನ ಗೊಂಬೆಗಳು ನಾವು

# ಹಿಂದೂ ಸೀಖ ಏಕ್ಯ: ಸಾವರಕರರ ಕೊಡುಗೆ

ಪ್ರಾ. ವ್ಹಿ. ಎಸ್. ಗೋಡಬೋಲೆ

ಇತಿಹಾಸದ ನಮ್ಮ ಪಠ್ಯ ಪುಸ್ತಕಗಳು ಅನೇಕ ತಪ್ಪು ತಿಳುವಳಿಕೆಗೆ ಎಡೆಕೊಡುವಂತಿವೆ. ಕೆಲವು ಸಂದರ್ಭಗಳಲ್ಲಿ ಉದ್ದೇಶಪೂರ್ವಕವಾಗಿ ತಪ್ಪು ತಪ್ಪಾಗಿ ಬರೆಯಲ್ಪಟ್ಟಿವೆ. ಇವುಗಳಿಂದ ಪ್ರಭಾವಿತರಾದ ಕೆಲ ಜನರು ಪಂಜಾಬದಲ್ಲಿ ದಿಗ್ಭ್ರಮೆಗೊಳಿಸುವ ಕೆಲ ಘಟನೆಗಳಿಗೆ ಕಾರಣರಾಗುತ್ತಿದ್ದಾರೆ. ಉದಾಹರಣೆಗೆ ಹೇಳಬೇಕಂದರೆ ಹಿಂದೂ ಧರ್ಮದ ರಕ್ಷಣೆಗಾಗಿ ತಮ್ಮ ತಂದೆ ಹಾಗೂ ಮಕ್ಕಳ ಬಲಿ ಕೊಟ್ಟು ಸರ್ವಸ್ವ ತ್ಯಾಗ ಮಾಡಿದ ಗುರುಗೋವಿಂದಸಿಂಗರ ಹೆಸರನ್ನು ಆನಂದಪುರದ ಒಂದು ಮಾರ್ಗಕ್ಕೆ ಇಡಬೇಕೆಂಬ ಸೂಚನೆಯನ್ನು ಕೆಲ ಹಿಂದುಗಳು ವಿರೋಧಿಸಿದರಂತೆ. ನಿಜವಾದ ಯಾವನೇ ಹಿಂದುವೂ ಆ ರೀತಿ ಮಾಡಲಾರನೆಂದು ನನ್ನ ನಂಬಿಕೆ. ಒಂದು ವೇಳೆ ಯಾರಾದರೂ ಅದನ್ನು ವಿರೋಧಿಸಿದ್ದರೆ ಇತಿಹಾಸ ಓದಿ ಬೆಳೆಸಿಕೊಂಡ ತಪ್ಪು ಕಲ್ಪನೆಯೇ ಅದಕ್ಕೆ ಕಾರಣ. ಸ್ವಧರ್ಮವನ್ನು ತ್ಯಜಿಸಿ ಇಸ್ಲಾಮ ಧರ್ಮವನ್ನು ಸ್ವೀಕರಿಸಲು ಒಪ್ಪದಿದ್ದುದಕ್ಕಾಗಿ ಗುರುಗೋವಿಂದಸಿಂಗರ ಇಬ್ಬರು ಪುತ್ರರನ್ನು ಇಟ್ಟಿಗೆಗಳಲ್ಲಿ ಸಜೀವವಾಗಿ ಹೂಳಲಾಯಿತು. ಆದರೂ ಆ ಇಬ್ಬರು ಬಾಲಕರು ದೃಢ ನಿರ್ಧಾರದಿಂದ ಕದಲಲಿಲ್ಲ. ಹಿಂದುಗಳು ಹಾಗೂ ಸೀಖರಲ್ಲಿದ್ದ ಅನ್ಯೋನ್ಯ ಸಂಬಂಧವನ್ನು ಎತ್ತಿ ತೋರಿಸಿ ಏಕತೆ ಬೆಳೆಸಲು ಶ್ರಮಿಸಿದವರಲ್ಲಿ ವೀರ ಸಾವರಕರರು ಅಗ್ರಗಣ್ಯರು. ಅವರು ೧೯೦೬ ರಿಂದ ೧೯೧೦ರ ವರೆಗೆ ಲಂಡನ್ನಿನಲ್ಲಿದ್ದಾಗ ಶಿವಾಜಿ ಮಹಾರಾಜ ಮತ್ತು ಗುರು ಗೋವಿಂದಸಿಂಗರ ದೇಶಾಭಿಮಾನದ ಸಾಕಾರವಾದ ವ್ಯಕ್ತಿತ್ವದಿಂದ ಸ್ಫೂರ್ತಿ ಪಡೆದರು. ೧೯೦೮ನೇ ಅಕ್ಟೋಬರ ೨೪ರಂದು ಲಂಡನ್ನಿನ ಕ್ಯಾಕ್ಸ್ಟನ್ ಹಾಲ್‌ನಲ್ಲಿ ಅವರು ಭಾರತೀಯರ ಸಭೆಯೊಂದನ್ನು ಕರೆದರು. ಬಂಗಾಲದ ಬಿಪಿನಚಂದ್ರಪಾಲರು ಅಧ್ಯಕ್ಷತೆ ವಹಿಸಿದ್ದರು. ಅಂದು ಗುರುಗೋವಿಂದಸಿಂಗರ ಜನ್ಮ ದಿನವಾಗಿತ್ತು. "ಕ್ರಿಸ್ತರಿಗೆ ಯೇಸು ಇದ್ದಂತೆ ಹಿಂದುಗಳಿಗೆ ಗುರುಗೋವಿಂದಸಿಂಗರು" ಎಂದು ಸಭೆಯಲ್ಲಿ ಮಾತನಾಡಿದ ಪ್ರೊ. ಗೋಕುಲಚಂದರು ನುಡಿದರು. "ಗುರು ಗೋವಿಂದ ಸಿಂಗರು ನಿಜವಾಗಿಯೂ ಸಿಂಗ (ಸಿಂಹ)" ಎಂದು ಲಾಲಾ ಲಜಪತರಾಯರು ಹೇಳಿದರು. ಬಿಪಿನಚಂದ್ರಪಾಲರ ಭಾಷಣದ ನಂತರ ವೀರ ಸಾವರಕರರು ಮಾತನಾಡಿ "ತತ್ವಗಳು ಎಷ್ಟೇ ಉದಾತ್ತವಿದ್ದರೂ, ಅವಶ್ಯವಿದ್ದಾಗ ಶಸ್ತ್ರಾಸ್ತ್ರಗಳೂ ಅವುಗಳ ಬೆಂಬಲಕ್ಕಿರಬೇಕು." ಎಂದರು. ಬ್ರಿಟಿಶರನ್ನು ಜಯಿಸುವುದಕ್ಕೆ ಗುರುಗೋವಿಂದ ಸಿಂಗರಿಂದ ಸ್ಫೂರ್ತಿ ಪಡೆಯಬೇಕೆಂದು ಎಲ್ಲ ಭಾಷಣಕಾರರೂ ಒತ್ತಿ ಹೇಳಿದರು. ವೀರ ಸಾವರಕರರು ಲಂಡನ್ನಿನಲ್ಲಿರುವಾಗ ಗುರುಮುಖಿ ಭಾಷೆಯನ್ನು ಕಲಿತು ಆದಿಗ್ರಂಥ, ಸೂರಜ ಪ್ರಕಾಶ ಮತ್ತು ವಿಚಿತ್ರ ನಾಟಕ ಮೊದಲಾದ ಸಿಖ್ ಧರ್ಮದ ಪವಿತ್ರ ಗ್ರಂಥಗಳ ಅಧ್ಯಯನ ಮಾಡಿದರು. ೧೯೧೦ರಲ್ಲಿ ವೀರ ಸಾವರಕರರಿಗೆ ಐವತ್ತು ವರ್ಷಗಳ ಕರಿನೀರಿನ ಶಿಕ್ಷೆಯಾಯಿತು. ಇಷ್ಟು ಕಠಿಣ ಶಿಕ್ಷೆಯನ್ನು ಬ್ರಿಟಿಷರ ಆಳಿಕೆಯಲ್ಲಿ ಇನ್ನಾರಿಗೂ ಕೊಟ್ಟಿಲ್ಲ. ಅಲ್ಲಿ ಅವರಿಗೆ ಓದು-ಬರಹದ ನಿರ್ಬಂಧವಿತ್ತು. ಆಗ ಅವರು ಗುರು ಗೋವಿಂದಸಿಂಗರ ಜೀವನ ಚರಿತ್ರೆಯನ್ನು ವಿವರಿಸುವ ಪದ್ಯಗಳನ್ನು ರಚಿಸಿದರು. ಗುರು ಗೋವಿಂದ ಸಿಂಗರಜೀವನ ಚರಿತ್ರೆಯೇ ಏಕೆ? ಅದಕ್ಕೆ ವೀರ ಸಾವರಕರರ ಉತ್ತರ: "ಮೊಗಲರ ವಿರುದ್ಧ ಹೋರಾಟದಲ್ಲಿ ಗುರು ಗೋವಿಂದ ಸಿಂಗರು ತಮ್ಮ ತಾಯಿ, ಪತ್ನಿ ಮತ್ತು ನಾಲ್ವರು ಮಕ್ಕಳನ್ನು ಕಳೆದುಕೊಂಡರು. ಅವರ ಆತ್ಮೀಯರಲ್ಲಿ ಕೆಲವರು ಅವರ ಕೈ ಬಿಟ್ಟರು. ಆದರೂ ಈ ಮಹಾಪುರುಷರು ಎಲ್ಲ ವಿಪತ್ತುಗಳನ್ನು ಸ್ಥೈರ್ಯದಿಂದ ಎದುರಿಸಿದರು.

ಹನ್ನೊಂದು ವರ್ಷಗಳ ಕಾಲ ಕರಿನೀರಿನ ಶಿಕ್ಷೆ ಅನುಭವಿಸುತ್ತಿದ್ದಾಗ ಸಾವರಕರರು ಪ್ರತಿವರ್ಷ ಗುರು ಗೋವಿಂದ ಸಿಂಗರ ಜನ್ಮ ದಿವಸವನ್ನು ಆಚರಿಸುತ್ತಿದ್ದರು. ತಮ್ಮ ಜತೆಗೆ ಅಂದಮಾನದಲ್ಲಿದ್ದ ಸಿಖ್ ಕೈದಿಗಳಿಗೆ ತಲೆಗೂದಲನ್ನು ತೊಳೆಯಲು ಶುದ್ಧ ನೀರು ಮತ್ತು ಸಾಬೂನು ಕೊಡಬೇಕು ಮತ್ತು ಎಣ್ಣೆ ಕೊಡಬೇಕು ಎಂಬ ಬೇಡಿಕೆಗಳನ್ನು ಮುಂದಿಟ್ಟು ಕೈದಿಗಳಿಂದ ಸಂಪು ಮಾಡಿಸಿದರು.

ವೀರ ಸಾವರಕರರು ಇನ್ನೂ ಸೆರೆಮನೆಯಲ್ಲಿದ್ದಾಗಲೇ "ಹಿಂದುತ್ವ" ಎಂಬ ತಮ್ಮ ಪ್ರಖ್ಯಾತ ಪುಸ್ತಕವನ್ನು ಪ್ರಕಟಿಸಿದರು. ಪಂಜಾಬದಲ್ಲಿ ಹಿಂದುಗಳ ಸ್ವಾತಂತ್ರ್ಯಕ್ಕಾಗಿ ಗುರು ತೇಘ ಬಹದ್ದೂರರು ತಮ್ಮ ಆತ್ಮ ಬಲಿದಾನ ಮಾಡಿದರು. ಅವರ ಪುತ್ರ ಕವಿ ಗೋವಿಂದರು ಬರೆದ ವಿಚಿತ್ರ ನಾಟಕವೆಂಬ ಗ್ರಂಥದಲ್ಲಿ "ಈ ಖಾಲ್ಸಾ ಪಂಥವು ಎಲ್ಲ ಕಡೆಗೆ ಊರ್ಜಿತವಾಗಿ ಪಸರಿಸಿ ಆದರಿಂದ ಹಿಂದೂ ಧರ್ಮವು ಚಿರವಾಗಿ ಬಾಳಲಿ" ಎಂದು ಬರೆದಿದ್ದಾರೆ. "ನಿನ್ನಿನ ಹಿಂದುಗಳೇ ಇಂದಿನ ಸಿಖ್ ಜನರು. ಇಂದಿನ ಹಿಂದುಗಳು ನಾಳೆ ಸಿಖ್ ಆಗಬಹುದು. ಸಿಖ್ ಗುರುಗಳು ಹಿಂದೂಗಳ ಮಕ್ಕಳೇ. ಸಿಖ್ ಜನರಿಗೆ ತಮ್ಮ ಪೂರ್ವಜರ ಧರ್ಮವಾದ ಹಿಂದೂ ಧರ್ಮದ ಬಗ್ಗೆ ಅಭಿಮಾನವಿದೆ." ಎಂದು ವೀರ ಸಾವರಕರರು ಸಾರಿದ್ದಾರೆ.

ರಾಷ್ಟ್ರ ವಿಭಜನೆಯಿಂದಾದ ಭೀಕರ ಪರಿಣಾಮಗಳಿಂದ ತಪ್ತವಾದ ಪಂಜಾಬಕ್ಕೆ ೧೯೫೧ ರ ಜನಗಣತಿಯಲ್ಲಿ ಹೊಸದೊಂದು ತೊಂದರೆ ಉದ್ಭವಿಸಿತು. ಜನಗಣತಿಯಲ್ಲಿ ಪಂಜಾಬದ ಹಿಂದುಗಳು ತಮ್ಮ ಮಾತೃಭಾಷೆ ಹಿಂದಿ ಎಂದು ಬರೆಸಬೇಕೆಂಬುದಾಗಿ ಆರ್ಯಸಮಾಜ, ಆರ್. ಎಸ್. ಎಸ್. ಮೊದಲಾದವರು ಹಿಂದುಗಳಿಗೆ ಉಪದೇಶ ಮಾಡಿದರು. ಇದೇ ಇಂದಿನ ವಿಷಮ ಸ್ಥಿತಿಗೆ ಮೂಲಕಾರಣ. ಹೀಗಾಗಿ ಪಂಜಾಬಿ ಭಾಷೆಯನ್ನು ಮಾತಾಡುವ ಪಂಜಾಬ ಪ್ರಾಂತ ರಚನೆಯು ಮುಂದಕ್ಕೆ ಬಿತ್ತು, ೧೯೬೬ ರಲ್ಲಿ

## ನಿನ್ನ ಕೃಪೆ....

ನಿನ್ನ ಕೃಪೆಯಿಂದ ಕತ್ತಲೆಯು ಸತ್ತು  
ಚುಕ್ಕೆಗಳು ಕರಗಿ ಬೆಳಕಿನ ಧಾರೆಯಾಗಿ,  
ಲೋಕದ ಬೀದಿ ಬೀದಿಯ ತುಂಬೆಲ್ಲ  
ಬೆಳ್ಳಂ ಬೆಳಕು ಸುರಿದಿತ್ತು, ಕೆಳದಿ

—ಪಂಚಾಕ್ಷರಿ ಹಿರೇಮಠ

ಪಂಜಾಬವು ದ್ವಿಭಾಷಾ ಪ್ರಾಂತವೆಂದು ಉದ್ದೇಶ ಪೂರ್ವಕವಾಗಿಯೇ ಘೋಷಿಸಲಾಯಿತು. ಪಂಜಾಬಿ ಪ್ರಾಂತ ರಚನೆಗಾಗಿ ಮಾಸ್ತರ ತಾರಾ ಸಿಂಗರು ಚಳವಳಿ ಪ್ರಾರಂಭಿಸಿದಾಗ ಪಂಜಾಬದ ಹಿಂದುಗಳು ಅದನ್ನು ಬೆಂಬಲಿಸಲಿಲ್ಲ. ಹೀಗಾಗಿ ಇದು ಭಾಷಾವಾರು ಪ್ರಾಂತದ ಚಳವಳಿ ಅಲ್ಲ ವೆಂದೂ ಕೇವಲ ಸಿಖ್ ಜನರ ಪ್ರತ್ಯೇಕ ರಾಜ್ಯದ ಬೇಡಿಕೆಯ ಚಳುವಳಿ ಎಂದೂ ಭಾರತದ ಜನರು ತಿಳಿದುಕೊಂಡರು. ಅನಾವಶ್ಯಕ ದೀರ್ಘ ವಿಳಂಬದ ನಂತರ ೧೯೬೬ರಲ್ಲಿ ಪಂಜಾಬ ಪ್ರತ್ಯೇಕ ರಾಜ್ಯವೇನೋ ನಿರ್ಮಾಣವಾಯಿತು. ಆದರೆ ಅದಕ್ಕೆ ತನ್ನದೇ ಆದ ಸ್ವತಂತ್ರ ರಾಜಧಾನಿ ಇಲ್ಲದಂತೆ ಮಾಡಿದರು. ಅದಲ್ಲದೆ ಪಂಜಾಬಿ ಭಾಷಿಕ ಕೆಲವು ಜಿಲ್ಲೆಗಳನ್ನು ಅದರಲ್ಲಿ ಸೇರಿಸಲಿಲ್ಲ. ಹಿಂದಿ ಭಾಷೆಯ ರಾಜ್ಯವೆಂದು ಹರಿಯಾನಾ ಪ್ರತ್ಯೇಕ ರಾಜ್ಯವಾಯಿತು. ಆದರೆ ಅದನ್ನು ಉತ್ತರ ಪ್ರದೇಶಕ್ಕೆ ಜೋಡಿಸಲಿಲ್ಲ. ಹಾಗೆ ಮಾಡಿದ್ದರೆ ಚಂಡಿಗಡದ ಸಮಸ್ಯೆ ಬಗೆಹರಿದು ಶಾಂತಿ ಸೌಹಾರ್ದ ನೆಲೆಸಬಹುದಾಗಿತ್ತು.

ಗಾಂಧಿಯವರ ಕೊಲೆಯಾದ ನಂತರ ಸಾವರ ಕರರನ್ನು ನ್ಯಾಯಾಂಗ ವಿಚಾರಣೆ ಇಲ್ಲದೆ ಕಾರಾ ಗೃಹದಲ್ಲಿಡಲಾಯಿತು. ಅವರ ಬಿಡುಗಡೆಯಾದ ಕೂಡಲೇ ಮಾಸ್ತರ ತಾರಾಸಿಂಗರನ್ನು ಬಂಧನ ದಲ್ಲಿಡಲಾಯಿತು. ಬಿಡುಗಡೆಯಾದ ನಂತರ ಅವರು ಸಾವರಕರರನ್ನು ಪಂಜಾಬಕ್ಕೆ ಆಮಂತ್ರಿ ಸಿದರು. ಒಂದು ವರ್ಷದ ವರೆಗೆ ಮುಂಬೈ ಬಿಟ್ಟು ಕದಲಬಾರದೆಂಬ ಆಜ್ಞೆ ಸಾವರಕರರ ಮೇಲೆ ಇತ್ತು. ಅವರು ಪಂಜಾಬಕ್ಕೆ ಹೊರ ಟಾಗ ಅವರನ್ನು ಮತ್ತೆ ಬಂಧಿಸಲಾಯಿತು. ಪಂಜಾಬದಲ್ಲಿಯ ಹಿಂದೂ-ಸಿಖ್ ವಿವಾದದಲ್ಲಿ ವೀರ ಸಾವರಕರರ ಐತೀರ್ಪನ್ನು ಸಿಖ್ ಜನರು ಒಪ್ಪುವರೆಂದು ಮಾಸ್ತರ ತಾರಾಸಿಂಗರು ೧೯೫೨ ನೇ ಜನವರಿಯಲ್ಲಿ ಪುನಃ ಹೇಳಿದರು. ಸಿಖ್ ಸಮಾಜಕ್ಕೆ ವೀರ ಸಾವರಕರರಲ್ಲಿ ಪೂರ್ಣ ವಿಶ್ವಾಸವಿತ್ತೆಂಬುದಕ್ಕೆ ಇದು ನಿದರ್ಶನ.

ಸಾವರಕರರ ೭೫ನೇ ಜನ್ಮದಿನ ೧೯೫೮ ಮೇ ೨೮ರಂದು ನಡೆದ ಸಮಾರಂಭವೊಂದರಲ್ಲಿ ಹಳೆಯ ಕಾಂಗ್ರೆಸ ನಾಯಕರಾದ ಪಾರ್ಸಿಧರ್ಮದ ಶ್ರೀ ಬಿ. ಎಫ್. ಭರೂಚಾ ಅವರು ಭಾಷಣ ಮಾಡುತ್ತ ಸರಕಾರಕ್ಕೆ ಒಂದು ಸೂಚನೆ ಮಾಡಿ ದರು. ಸಾವರಕರರು ಹಿಂದೂ ಮತ್ತು ಸಿಖ್ ಎರಡೂ ಧರ್ಮಗಳ ಜನರಿಗೆ ಬೇಕಾದವರು. ಆದ್ದರಿಂದ ಪಂಜಾಬದ ಸಮಸ್ಯೆಯ ಪರಿಹಾರಕ್ಕೆ ಸರಕಾರವು ಅವರ ಸಹಾಯಪಡೆಯಬೇಕೆಂಬುದೇ ಅವರ ಸೂಚನೆಯಾಗಿತ್ತು. ಆದರೆ ಯಾರೂ ಲೆಕ್ಕಿಸಲಿಲ್ಲ.

ಪಂಜಾಬ ಮತ್ತು ಮಹಾರಾಷ್ಟ್ರಗಳ ಐತಿ ಹಾಸಿಕ ಸಂಬಂಧವೇ ಹಿಂದೂ-ಸಿಖ್ ಏಕತೆಗೆ ಪರಿಶ್ರಮಿಸಲು ವೀರ ಸಾವರಕರರಿಗೆ ಪ್ರೇರಣೆ ನೀಡಿರಬಹುದು. ಮಹಾರಾಷ್ಟ್ರದ ಸಂತ ನಾಮ- ದೇವರ ಮರಾಠಿ ಭಜನೆಗಳು, ಗ್ರಂಥಸಾಹಿಬ ದಲ್ಲಿವೆ. ಗುರು ಗೋವಿಂದಸಿಂಗರು ಮಹಾ ರಾಷ್ಟ್ರದ ನಾಂದೇಡದಲ್ಲಿ ತಮ್ಮ ಕೊನೆಯ ದಿನ ಗಳನ್ನು ಕಳೆದರು. ಔರಂಗಜೇಬನು ಗುರು ತೇಘಬಹಾದ್ದೂರರನ್ನು ಚಿತ್ರಹಿಂಸೆಕೊಟ್ಟು ಕೊಲ್ಲಿ ಸಿದನು. ಇದರಿಂದ ಸಿಖ್ ಜನರು ರೊಚ್ಚಿಗೆದ್ದು ಹಿಂದೂಧರ್ಮ ರಕ್ಷಣೆಗಾಗಿ ಪ್ರಾಣತೆತ್ತಲೂ ಸಿದ್ಧರಾದರು. ಅದರಂತೆ ಶಿವಾಜಿಯ ಮಗ ಸಂಭಾಜಿಯನ್ನು ಔರಂಗಜೇಬನು ಚಿತ್ರಹಿಂಸೆ ಕೊಟ್ಟು ಕೊಲ್ಲಿಸಿದನು. ಸಿಖ್ ಜನರಂತೆ ಮರಾ ಠರೂ ಔರಂಗಜೇಬನ ಮೇಲೆ ಕುಪಿತರಾಗಿ ಎಂಟು ವರ್ಷಗಳ ವರೆಗೆ ಯುದ್ಧ ಮಾಡಿದರು. ೧೮೭೯ ರಲ್ಲಿ ವಾಸುದೇವ ಬಳವಂತ ಫಡಕೆಯವರು ಬ್ರಿಟಿಶ ಆಳಿಕೆಯ ವಿರುದ್ಧ ಬಂಡೆದ್ದರು. ಪಂಜಾ ಬದಲ್ಲಿ ರಾಮಸಿಂಗ ಕುಕಾ ಅವರು ಸಹ ಅದೇ ರೀತಿ ಬಂಡೆದ್ದರು. ಸಿಖ್ ಭಗತಸಿಂಗ ಮತ್ತು ಮಹಾರಾಷ್ಟ್ರದ ರಾಜಗುರು ಇಬ್ಬರನ್ನೂ ೧೯೩೧ ರಲ್ಲಿ ಒಟ್ಟಿಗೇ ಗಲ್ಲಿಗೇರಿಸಲಾಯ್ತು. ಜಾಲಿ- ಯನವಾಲಾಬಾಗದ ಕಗ್ಗೊಲೆಯ ಸೂತ್ರಧಾರ ನಾದ ಸರ್ ಮೈಕೇಲ್ ಓಡ್ವಾಯರನನ್ನು ಸಿಖ್ ಉಧಮಸಿಂಗನು ೧೯೪೦ರಲ್ಲಿ ಲಂಡನ್ನಿನಲ್ಲಿ ಗುಂಡಿಕ್ಕಿ ಕೊಂದನು. ಭಾರತದಲ್ಲಿ ಉಧಮ- ಸಿಂಗನ ಗುಣಗಾನ ಮಾಡಿದವರೆಂದರೆ ವೀರ ಸಾವರಕರರೊಬ್ಬರೇ. ●

# ಭಾರತೀಯ ಆಭರಣಗಳು

# ಪಾರಂಪರ್ಯದ ಸಿರಿ ಸಂಕೇತ

— ವಿದ್ವಾನ್ ಕೆ. ವಿಶ್ವಂಭರ ಉಪಾಧ್ಯಾಯ

ಕಾವ್ಯದ ಸೌಂದರ್ಯವನ್ನು ಹೆಚ್ಚಿಸಲು ಅಲಂಕಾರಗಳು ಹೇಗೊ, ಹಾಗೆ ಸಹಜ ಸೌಂದರ್ಯವನ್ನು ಹೆಚ್ಚಿಸಲು ಆಭರಣಗಳು. ಸೌಂದರ್ಯವರ್ಧನೆಗೆ ಉಪಯೋಗಿಸುವ ವಸ್ತುಗಳು, ಆಭರಣಗಳು ಅನೇಕ. ಅವುಗಳ ಇತಿಹಾಸ ವೇದಕಾಲದಷ್ಟು ಪ್ರಾಚೀನ. ಬಂಗಾರದ ಕಿರೀಟ, ಕರ್ಣ ಕುಂಡಲ, ಭುಜಕಿರೀಟ, ಮಣಿಮೇಖಲೆ ಮೊದಲಾದವುಗಳ ಬಣ್ಣನೆ ವೇದ ಕಾವ್ಯೇತಿಹಾಸ ಪುರಾಣಗಳಲ್ಲಿ ವಿಪುಲವಾಗಿ ಸಿಕ್ಕುತ್ತದೆ.

ಆಭರಣಗಳನ್ನು ಧರಿಸುವದರಿಂದ ಸೌಂದರ್ಯ ಹೆಚ್ಚುತ್ತದೆಂಬ ಕಲ್ಪನೆ ಮಾನವನಲ್ಲಿ ಪ್ರಾಚೀನ ಕಾಲದಿಂದಲೂ ಇದೆ. ಇಷ್ಟೇ ಅಲ್ಲ, ದೇವತೆಗಳಿಗೂ ವಿಶಿಷ್ಟ ಆಭರಣಗಳನ್ನು ತೊಡಿಸಿ ಇಂತಹ ದೇವರ ಆಭರಣಗಳು ಇಂತಹವೇ ಎಂದು ಆತನು ಗುರುತಿಸಿದ್ದಾನೆ. ಶ್ರೀಲಕ್ಷ್ಮಿ ಹೇಮಾಲಂಕಾರ ಭೂಷಿತೆ, ಶ್ರೀವಿಷ್ಣು ಕೌಸ್ತುಭಧಾರಿ, ಹಾರೀ; ಮಕರಕುಂಡಲ ಹಾಗೂ ಕೇಯೂರಗಳನ್ನು ಧರಿಸಿರುವನೆಂದು ಆತನ ಸ್ತುತಿ ಸ್ತೋತ್ರಗಳಲ್ಲಿ ಬಣ್ಣನೆ ಇದೆ. ಇದೇ ರೀತಿ ಇನ್ನನೇಕ ದೇವತೆಗಳು ನಾನಾಲಂಕಾರಗಳಿಂದ ಭೂಷಿತರು. ಎಲ್ಲ ದೇವತೆಗಳೂ ಕಿರೀಟಧಾರಿಗಳು. ಅರ್ಜುನನಂತೂ ತನ್ನ ಕಿರೀಟದಿಂದಾಗಿ 'ಕಿರೀಟಿ' ಎಂದು ಹೆಸರು ಪಡೆದಿದ್ದ.

ಅನಂತರದ ಐತಿಹಾಸಿಕ ಕಾಲದ ಗ್ರಂಥಗಳಲ್ಲಿ ವೈವಿಧ್ಯಪೂರ್ಣ ಆಭರಣಗಳ ಬಣ್ಣನೆ ವಿವರವಾಗಿ ನಿರೂಪಿತವಾಗಿದೆ. ಇನ್ನು ಮೂರ್ತಿಶಿಲ್ಪ ಮೊದಲಾದವುಗಳಲ್ಲಿ ಕಟೆದ ಆಭರಣಗಳು ಇಂದಿಗೂ ಆಗಿನ ಜನರ ಕಲಾಭಿರುಚಿ, ಆಭರಣಗಳ ಪ್ರೇಮವನ್ನು ನಿದರ್ಶಿಸುತ್ತವೆ. ಇಷ್ಟೇ ಅಲ್ಲ, ಅನೇಕ ಪ್ರಾಚೀನ ಪ್ರತಿಮೆಗಳನ್ನು ಅಡಿಯಿಂದ ಮುಡಿಯವರೆಗೆ ಆಭರಣಗಳಿಂದ ಸಿಂಗರಿಸಿದ್ದನ್ನು ನೋಡಿದಾಗ ಅವರ ಕೌಶಲ್ಯ, ಕಲಾಪ್ರಜ್ಞೆಗಳ ಬಗ್ಗೆ ಅಚ್ಚರಿಯೆನಿಸುತ್ತದೆ.

ಭಾರತದೆಲ್ಲೆಡೆ ಇರುವ ಪ್ರಾಚೀನ ದೇವಾಲಯಗಳಲ್ಲಿ ಬೇರೆಬೇರೆ ಶೈಲಿಯ ಮೂರ್ತಿಗಳು ಆಭರಣಗಳಿಂದ ಅಲಂಕೃತವಾಗಿರುವದು ಅವುಗಳ ವೈಶಿಷ್ಟ್ಯ ವೈವಿಧ್ಯಗಳ ಮೇಲೆ ಬೆಳಕು ಚೆಲ್ಲುತ್ತಿವೆ. ಅಕ್ಕಸಾಲಿಗರು ಬೆಳ್ಳಿಬಂಗಾರ ಮುತ್ತು ರತ್ನಗಳನ್ನು ಪಯೋಗಿಸಿ ಕಿರೀಟ, ಸಿಂಹಾಸನ, ಬಗೆಬಗೆಯ ಹಾರ, ಆಭರಣಗಳನ್ನು ನಿರ್ಮಿಸಿ ರಾಜರನ್ನು ಶ್ರೀಮಂತರನ್ನು ಮೆಚ್ಚಿಸಿದ್ದಲ್ಲದೆ ತಮ್ಮ ಕಲೆಯ ಪರಂಪರೆಯನ್ನು ಆನುವಂಶಿಕವಾಗಿ ಮುಂದುವರಿಯುವಂತೆ ಮಾಡಿದುದು ಒಂದು ಗಮನಾರ್ಹ ಸಂಗತಿ.

ಆಭರಣಗಳನ್ನು ಮಾಡಲು ಉಪಯೋಗಿಸಿದ ವಸ್ತುಗಳು ಅನೇಕ. ಆದರೆ ಬೆಳ್ಳಿ ಬಂಗಾರಕ್ಕೇ ಹೆಚ್ಚು ಪ್ರಾಧಾನ್ಯ. ಕಾಲಲ್ಲಿ ಧರಿಸುವ ಪೈಜಣ, ಸುತ್ತುಕಾಲುಂಗುರ ಪಿಲ್ಲೆ, ಕಡಗ. ರುಳಿ ಹಾಗು ಉಡದಾರ ಮೊದಲಾದವೆಲ್ಲ ಬೆಳ್ಳಿಯವು. ಸೊಂಟದ ಮೇಲ್ಗಡೆ ಧರಿಸುವ ಆಭರಣಗಳೆಲ್ಲ ಹೆಚ್ಚಾಗಿ ಬಂಗಾರದವು. ಬಂಗಾರದ ಆಭರಣಗಳಲ್ಲಿ ಕುಸುರಿನ ಕೆಲಸ ಮಹತ್ವದ್ದು. ನತ್ತು, ಬೆಂಡೋಲೆ, ಮೂಗುತಿ, ಪದಕ, ಹಾರ ಇತ್ಯಾದಿ ಸ್ತ್ರೀಯರ ಆಭರಣಗಳು ಬಂಗಾರದವು ಇರುವಂತೆ ಮುತ್ತು, ರತ್ನ, ವಜ್ರಗಳನ್ನು ಕೂಡಿಸಿದವು ಇರುವದುಂಟು. ನವರತ್ನಗಳ ಉಂಗುರ ಧರಿಸುವ ಶ್ರೀಮಂತರಿಗೇನೂ ಕಡಿಮೆಯಿಲ್ಲ. ಇವೆಲ್ಲ ನವರತ್ನಗಳು ಬಹು ಅಮೂಲ್ಯವಾಗಿರುವವು.

---

**ಭಾರತೀಯರ ಜೀವನದಲ್ಲಿ ಆಭರಣಗಳಿಗೆ ಮಹತ್ವದ ಹಾಗು ವಿಶಿಷ್ಟವಾದ ಸ್ಥಾನವಿದೆ. ಅವು ಅಲಂಕಾರಗಳೂ ಅಹುದು, ಆರ್ಥಿಕ ಭದ್ರತೆ, ಪ್ರತಿಷ್ಠೆಯ ವಸ್ತುಗಳೂ ಅಹುದು. ಧಾರ್ಮಿಕ ಹಿನ್ನೆಲೆಯೂ ಅದಕ್ಕಿದೆ. ಆಭರಣಗಳ ಇತಿಹಾಸ ಕೂಡ ಸಾಕಷ್ಟು ಪ್ರಾಚೀನ. ಆಭರಣಗಳ ಕಿರು ಪರಿಚಯ.**

---



## ಆಭರಣ ಹೆಣ್ಣಿಗೆ ಶೃಂಗಾರ!

ಕು। ಉಮಾ

ಆದಿಕವಿ ವಾಲ್ಮೀಕಿ ಬರೆದ ರಾಮಾಯಣದಲ್ಲಿ ಆಭರಣಗಳು ಮಹತ್ವದ ಪಾತ್ರವಾಡಿದ ವಿವರ ದೊರೆಯುತ್ತದೆ. ಸೀತಾವಿಯೋಗದ ನಂತರ ಶ್ರೀರಾಮಚಂದ್ರನು ಲಕ್ಷ್ಮಣನೊಂದಿಗೆ ಸೀತೆಯನ್ನು ಅರಸುತ್ತ ಹೊರಟಾಗ ಸೀತೆಯು ಕೆಳಗೊಗೆದ ಆಭರಣಗಳನ್ನು ಆತನು ಗುರುತಿಸುತ್ತಾನೆ. ಅನಂತರ ಹನುಮಂತನನ್ನು ಸೀತೆಯ ಶೋಧಕ್ಕಾಗಿ ಕಳಿಸುವಾಗ ಅವನ ಕೈಯಲ್ಲಿ ಶ್ರೀರಾಮಚಂದ್ರನು ಮುದ್ರೆಯುಂಗುರ ಕೊಟ್ಟು ಕಳಿಸುತ್ತಾನೆ. ಸೀತೆಗೆ ಉಂಗುರ ಕೊಟ್ಟು ಹನುಮಂತನು ಆಕೆಯಿಂದ ಚೂಡಾಮಣಿಯನ್ನು ತಂದು ಶ್ರೀರಾಮಚಂದ್ರನಿಗೆ ಒಪ್ಪಿಸುತ್ತಾನೆ.

ಇನ್ನು ಮಹಾಕವಿ ಕಾಳಿದಾಸನ ಅಭಿಜ್ಞಾನ ಶಾಕುಂತಲದಲ್ಲಿ ದುಷ್ಯಂತನು ಉಂಗುರವನ್ನು ಶಕುಂತಲೆಗೆ ನೀಡುತ್ತಾನೆ. ಶಕುಂತಲೆ ಪತಿಗೃಹಕ್ಕೆ ಹೊರಟಾಗ ಆ ಉಂಗುರ ಕಳೆದು ಹೋಗಿರುತ್ತದೆ. ದುಷ್ಯಂತನು ಆಕೆಯನ್ನು ಗುರುತಿಸುವದಿಲ್ಲ. ಅಂತೆಯೇ ತ್ಯಜಿಸುತ್ತಾನೆ. ಅನಂತರ ಒಬ್ಬ ಬೆಸ್ತನು ಮುದ್ರೆಯುಂಗುರ ತಂದಾಗ ದುಷ್ಯಂತನಿಗೆ ಶಕುಂತಲೆಯ ನೆನಪಾಗುತ್ತದೆ. ಹೀಗೆ ಆಭರಣಗಳು ಕಾವ್ಯನಾಟಕಗಳಲ್ಲಿಯೂ ಮಹತ್ವದ ಪಾತ್ರವಾಡಿವೆ.

ಉಂಗುರ ಕಿವಿಯೋಲೆ, ಮಂಗಲಸೂತ್ರದ ತಾಳಿ ಮೊದಲಾದವು ಮದುವೆಯಲ್ಲಿ ಅತ್ಯವಶ್ಯ. ಸೌಭಾಗ್ಯದ ಸಂಕೇತಗಳಾದ ಇವನ್ನು ಮಹಿಳೆ ತುಂಬ ಜತನದಿಂದ ಕಾಯ್ದುಕೊಳ್ಳುತ್ತಾಳೆ. ಎಂತಹ ಬಡತನವಿದ್ದರೂ ಇಂದಿಗೂ ಮಹಿಳೆಯರ ಮಂಗಳಸೂತ್ರದ ತಾಳಿ ಬಂಗಾರದ್ದಿರಲೇಬೇಕು. ಕಾಲುಂಗರ ಪಿಲ್ಲಿಗಳು ಸುಮಂಗಲೆಯರ ಕಾಲ್ಬೆರಳನ್ನು ಅಲಂಕರಿಸುತ್ತವೆ.

ಚಿನ್ನ ಬೆಳ್ಳಿಗಳ ಆಭರಣಗಳಿಂದ ಸೌಂದರ್ಯ ಹೆಚ್ಚುವದೇನೋ ನಿಜ, ಆದರೆ ಅವುಗಳಿಂದ ಆಕರ್ಷಣೆ, ಪ್ರತಿಷ್ಠೆ, ಐಶ್ವರ್ಯದ ಪ್ರದರ್ಶನ, ಆರ್ಥಿಕ ಅಂತಸ್ತುಗಳನ್ನು ಗುರುತಿಸಬಹುದಾಗಿದೆ. ಇನ್ನೂ ಕೆಲವು ಆಭರಣಗಳನ್ನು ಧರಿಸುವ ಹಿನ್ನೆಲೆ ಧಾರ್ಮಿಕ ಶ್ರದ್ಧೆಯೂ ಆಗಿದೆ. ದುಷ್ಟಶಕ್ತಿಯಿಂದ ಗ್ರಹಗಳ ಬಾಧೆಯಿಂದ ಪಾರಾಗಲೂ ಕೆಲವು ಆಭರಣಗಳ ಧಾರಣ ಅವಶ್ಯವೆಂದು ನಂಬಿಕೆಯಿದೆ. ಬ್ಯಾಂಕ ಮೊದಲಾದವು ಇಲ್ಲದಿದ್ದಾಗ ಬಂಗಾರ ಬೆಳ್ಳಿಗಳ ಸಂಗ್ರಹವೇ ಒಂದು ಆಪದ್ಧನವಾಗಿತ್ತು. ಹೀಗೆ ಆಭರಣಗಳು, ತೊಡಿಗೆಗಳು ಭಾರತೀಯರ ಜೀವನದಲ್ಲಿ, ಸಾಂಸ್ಕೃತಿಕ ಇತಿಹಾಸದಲ್ಲಿ ಅವಿಭಾಜ್ಯ ಅಂಗವಾಗಿವೆ.

### ಹಳೆಯ ಆಭರಣಗಳು

ಈಗ ಹಳೆಯ ಆಭರಣಗಳು ಮಾಯವಾಗುತ್ತಿವೆಯಾದರೂ ತಾಳಿಕೆ ಬಾಳಿಕೆಯ ದೃಷ್ಟಿಯಿಂದ, ಮೌಲ್ಯದ ದೃಷ್ಟಿಯಿಂದ ಅವು ಇಂದಿಗೂ ತಮ್ಮತನವನ್ನು ಉಳಿಸಿಕೊಂಡಿವೆ, ಅವನ್ನು ಇಟ್ಟು ಪೂಜಿಸುವ ಸಾಮರ್ಥ್ಯವಿರುವಲ್ಲಿ ಮಾತ್ರ ಉಳಿದಿವೆ ಹೆಚ್ಚಿನವು ಕರಗಿ ಹೊಸರೂಪ ಪಡೆದಿವೆ.

### ಓಲೆಯ ಭಾಗ್ಯ

ಹಳೆಯ ಆಭರಣಗಳಲ್ಲಿಯ ಓಲೆಯು ಅತ್ಯಂತ ಮೌಲಿಕವಾದುದು. ಓಲೆಯು ಸೌಭಾಗ್ಯದ ಸಂಕೇತ. ಮುತ್ತಿನ ಮುಗುಳನ್ನು ಧರಿಸಿ ಮುತ್ತಿನ ಓಲೆಯನ್ನು ಧರಿಸುತ್ತಾರೆ. ಇದು ಕರ್ಣಾಭರಣ. ಸುಮಂಗಲಿಯರು ಬಯಸುವುದೇ ಓಲೆಯಭಾಗ್ಯವನ್ನು. ಸರಪಳಿಗೆ ಕೆಂಪು ಕಿಡಿಯನ್ನು ಕಟ್ಟಿ, ಮುತ್ತಿನ ಜಾಲರಿಯನ್ನು ನಿರ್ಮಿಸುತ್ತಾರೆ, ಅದು ಅತಿ ಸೂಕ್ಷ್ಮವಾದಕೆಲಸ. ನೂರಾರು ಮುತ್ತುಗಳು ಬೇಕು. ಬಂಗಾರವೂ ಬೇಕು. ಇದು ಶ್ರೀಮಂತರ ಆಭರಣ, ಓಲೆ ಇಲ್ಲದವರು ಮುಗುಳು ಧರಿಸುತ್ತಿದ್ದರು. ಕೇವಲ ಚಿನ್ನದಿಂದಲೂ ಮುಗುಳು ಮಾಡಿಸುತ್ತಿದ್ದರು. ಅದೂ ಇಲ್ಲದಾಗ ಕೆನ್ನೆ ಸರಪಳಿ ಆ ಸ್ಥಾನವನ್ನು ತುಂಬುತ್ತಿತ್ತು. ಇವೆಲ್ಲ ವೈಭವದ ಮಾತಾದರೂ ಈಗಲಂತೂ ಬೆಂಡೋಲೆ ಧರಿಸದೇ ಇರುವದೇ ಇಲ್ಲ. ಕರ್ಣಹಾರ, ಲೋಲಕ ರಿಂಗುಗಳು, ನವೀನ ಆವಿಷ್ಕಾರ.

ಕೆಲವರು ಕಿವಿಗೆ ಒಂದೇ ತೂತು ಚುಚ್ಚಿಕೊಂಡರೆ ಇನ್ನು ಕೆಲವರು ಸಂಪ್ರದಾಯವನ್ನು ಅನುಸರಿಸಿ ಹೆಚ್ಚು ಸಲ ಚುಚ್ಚಿಕೊಳ್ಳುವರು. ಅಲ್ಲಿ ಎಲ್ಲಿಡೆ ಆಭರಣಗಳಿಂದ ಶೋಭಿಸುವವು. ಅವರಿಗೆ ಆಯಾ ಶೈಲಿಯು ಸೊಗಸಾಗಿ ತೋರುತ್ತದೆ.

### ನತ್ತು

ಮೂಗು ಎಂದರೆ 'ನತ್ತು' ಇರಲೇಬೇಕಲ್ಲಾ. ಇದೂ ಸೌಭಾಗ್ಯದ ಸಂಕೇತ. ಹಾಗೆಂದು ಚಿಕ್ಕಂದಿನಲ್ಲೇ ನತ್ತು, ಓಲೆ, ಬಳೆಗಳನ್ನು ಧರಿಸುತ್ತಾರೆ. ವೈಧವ್ಯ ಬಂದಾಗ ಇವೆಲ್ಲವನ್ನು ತೆಗೆದು ಬಿಡುತ್ತಾರೆ ವಜ್ರದ ಬೆಂಡೋಲೆಯಂತೆ ವಜ್ರದ ನತ್ತನ್ನೂ ಮಾಡಿಸುತ್ತಾರೆ. ಮೂಗಿನ ತುದಿಯಲ್ಲಿ 'ಬುಲಾಕು' ಎನ್ನುವ ಆಭರಣ ಹಿಂದಿತ್ತು. ಅದು ಮೂಗಿನ









೧) ಓಲೆ ಭಾಗ್ಯದ ಮುತ್ತೈದೆ ಶ್ರೀಮತಿ ಪದ್ಮಾವತಮ್ಮ

೨) ನಾಗರ ಹೆಡೆಯ ನಡುವೆ ಕೊಳಲೂದುವ ಕೃಷ್ಣ

೩) ಬಂಗಾರದ ನಡುಪಟ್ಟಿ

೪) ವಂಕಿ, ಕಾಸಿನಸರ ಹಾಗು ಬೈತಲೆ [illegible]

ನ ಇಳಿದು ಮೇಲ್ಸುಟಿಯನ್ನು ಚುಂಬಿಸು
. ಬುಲಾಕನ್ನು ತೊಟ್ಟ ಲಲನೆಯನ್ನು ವರ್ಣಿ
ಗ ಕವಿಗಳು ಬುಲಾಕು ಇರುವ ಮೂಗನ್ನು
ಸುಕೊಕ್ಕಿಗೆ ಹೋಲಿಸಿ "ಬಿಂಬಫಲವನ್ನು
ಸುಲು ಗಿಣಿಯೊಂದು ಕಾದು ಕುಳಿತಿದೆ"
ಬಣ್ಣಿಸಿದ್ದಾರೆ.

**ರ ಚೂಡಾಮಣಿ**

ಂದುಮಕ್ಕಳಿಗೆ ಜಲ್ಲಿಬಿಟ್ಟ ಬಳಿಕ, ನೆತ್ತಿಯಲ್ಲಿ ಹಿಂದಕ್ಕೆ ನಾಗರವನ್ನು ಇಡುತ್ತಿದ್ದರು. ರಹೆಡೆಯಂತೆ ಈ ಆಭರಣವಿದ್ದರೆ, ಜಡೆಯು ನ ದೇಹದಂತೆ ಇದೆ ಎನ್ನುವಾಗ "ನಾಗವೇಣಿ- ಹೆಸರನ್ನು ಈ ಆಭರಣ ಮೂಲಕ ಅನ್ವರ್ಥ ಸುತ್ತಿದ್ದರು, ಜಡೆಗೆ ಜಡೆಹೂಗಳ ಮಾಲೆ ನ್ನು ಹಾಕುತ್ತಿದ್ದರು ಜಡೆಯ ಹೂ ಮೇಲೆ ಾರು ಎರಡುವರೆ ಇಂಚು ವ್ಯಾಸವಾಗಿದ್ದು ರುತ್ತಾ ಚಿಕ್ಕಚಿಕ್ಕದಾಗಿ ಕೆಳಗಡೆಯಲ್ಲಿ ಅರ್ಧ ನ ಹೂವಾಗಿರುವುದಿದೆ, ಅದರ ಬುಡದಲ್ಲಿ ರು ಗೊಂಡೆಗಳನ್ನು ತೂಗಾಡಿಸುವರು,

ಾಗರ ಬದಲಿಗೆ "ತಿರುಪಿನ" ಹೂ ಮಧ್ಯಮ ನ ಅಲಂಕಾರವಾಗಿತ್ತು. ಕೆಲವರು ತಿರುಪಿನ ಹೂಗಳನ್ನೇ ಇಟ್ಟು ಜಡೆ ನೇಯುವುದೂ ಇತ್ತು, ನಾಗರ ಕೆಳಗಡೆಯಲ್ಲಿ 'ಬುಗುಡಿ' ಎಂಬ ಕಲಾ ಕೃತಿಯ ಚೂಪಿನ ಆಭರಣವನ್ನು ಧರಿಸುತ್ತಿದ್ದರು, ಮೂರು ಎಳೆಯ ಮುಂದಲೆ ಕಟ್ಟು ನೆತ್ತಿಯಿಂದ ಕಿವಿಯ ತನಕ ಬರುತ್ತದೆ, ಮಧ್ಯದಲ್ಲಿರುವ ಒಂದು ಪದಕವು ಮುಖದ ಶೋಭೆಯನ್ನು ಹೆಚ್ಚಿಸುತ್ತದೆ,

ಈಗ ಬೈತಲೆಯ ಮಧ್ಯೆ ಒಂದೆಳೆಯನ್ನು ಮೂಗಿನಿಂದ ಕಿವಿಯನ್ನು ಹಾದು ಹೋಗುವ ಆಭರಣದ ಆವಿಷ್ಕಾರವಾಗಿದೆ, ಆದರೆ ಇದು ಒಂದುಪಾರ್ಶ್ವಕ್ಕೆ ಮಾತ್ರ ಸೀಮಿತ,

**ಮಂಗಲಸೂತ್ರ**

ಇದನ್ನು 'ಕರಿಮಣಿ' ಎಂದೂ ಸಾಂಕೇತಿಕವಾಗಿ ಹೇಳುತ್ತಾರೆ, ಹಿಂದೆ 'ಪರಂಗಿನ' ನಾರಿನಿಂದ ಕರಿಮಣಿಯನ್ನು ಕಟ್ಟಿಕೊಳ್ಳುತ್ತಿದ್ದರು, ಅದು 'ಹೆಚ್ಚಿದರೆ' (ತುಂಡಾಯಿತು ಎಂಬುದನ್ನು ಹೆಚ್ಚಿತು ಎನ್ನುತ್ತಾರೆ ಬಳೆ ಹೆಚ್ಚಿತು, ಕರಿಮಣಿ ಹೆಚ್ಚಿತು ಇತ್ಯಾದಿ) ಬೇರೊಂದು ದಾರದಿಂದ ಪೋಣಿಸಿ ಹಾಕಿಕೊಳ್ಳುತ್ತಿದ್ದರು. ಅದರಲ್ಲಿ ಕರಿಮಣಿಯೇ ಪ್ರಧಾನ,

ಎರಡು 'ತಾಳಿ' ಎರಡೋ ನಾಲ್ಕೋ 'ಗುಂಡು' ಒಂದು ತಾಳಿ ತವರು ಮನೆಯದು, ಇನ್ನೊಂದು ಗಂಡನ ಮನೆಯದು, ಈಗ ಕರಿಮಣಿಯನ್ನು ಚಿನ್ನದಲ್ಲಿಯೇ ಪೋಣಿಸಿಕೊಳ್ಳುತ್ತಾರೆ, ಅದನ್ನು ಗಂಡನೇ ಕಟ್ಟಬೇಕು ಮುಟ್ಟಬೇಕು, ಎಂಬ ಭಾವನೆ ಬದಲಾಗಿ ಈಗ ಅದು ಒಂದು ಆಭರಣದ ಹಂತವನ್ನು ತಲುಪಿದೆ,

**ಉಗ್ಗರಡ್ಡಿಗೆ**

ಒಂದು ಕಂಠಾಭರಣ, ಕತ್ತಿಗೆ ತಾಗಿ - ಈಗಿನ ನೆಕಲೇಸಿನಂತೆ ಇರುವ ಆಭರಣದ. ಹಿಂದೆ ಬೆಳ್ಳಿ ಮೇಲೆ ಮಾತ್ರ ಬಂಗಾರದ ಕುಸುರಿಯಕೆಲಸ, ದಾರದಿಂದಲೇ ಕಟ್ಟಿದ ಈ ಆಭರಣವನ್ನು ದಾರ ದಿಂದಲೇ ಧರಿಸಬೇಕು, ಇದರ ಅಗಲ ಒಂದಿಂಚಿ ಗಿಂತಲೂ ಹೆಚ್ಚಾಗಿರುತ್ತಿತ್ತು,

ಮೊಗ್ಗುಗಳನ್ನೆ ಪೋಣಿಸಿ, ಗುಂಡಿನಿಂದ ಅಂದ ಗೊಳಿಸಿದ ಇನ್ನೊಂದು ಕಂಠಾಭರಣ 'ಮಿಣಿಲು' ಇವೆಲ್ಲವೂ ಕತ್ತಿನ ಮೇಲೆ ಎದ್ದು ಕಾಣುವಂತಿರು ತ್ತವೆ, ಸೀರೆಯಿಂದ ಮುಚ್ಚಿ ಹೋಗುವದಿಲ್ಲ, ಅದಕ್ಕಿಂತ ದೊಡ್ಡದಾದ ಮತ್ತು ಶ್ರೀಮಂತವಾದ ಸರವೆಂದರೆ 'ಪವನ್ ಸರ' ಪವನ ಅಥವಾ ಅರ್ಧ

# ನಮಗೇಕೆ ಆಭರಣಗಳು ಬೇಕು?

## ಬಂಗಾರದಂಥ ಜೀವನ

ಹೊನ್ನು, ಹೆಣ್ಣು, ಮಣ್ಣು ಇವು ಅಶಾಶ್ವತ ು ವೇದಾಂತಗಳು ಘಂಟಾ ಘೋಷವಾಗಿ ಹೇಳಿ ಅವುಗಳನ್ನು ಪಡೆಯುವ ಆಶೆ ಶಾಶ್ವತ ಯೇ ಇದೇ ಹೊನ್ನು ಎಂದರೆ ಯಾವ ಹೆಣ್ಣೂ ಂಗುಟ್ಟುತ್ತಾಳೆ, ಇದು ಪ್ರಕೃತಿ ಸಹಜ ದ್ದು. ಅನೇಕ ಸಲ ವಿಚಾರ ಮಾಡಿದಾಗ ನ ಸೌಂದರ್ಯಕ್ಕೆ ಮೆರಗು ಕೊಡಲು ದೆ ಆರ್ಥಿಕ ದೃಷ್ಟಿಯಿಂದ ನೆಲಗಟ್ಟಾಗಿಯೂ ಡ ಬಂಗಾರ ಅವಶ್ಯವೇ ಅನಿಸುತ್ತದೆ. ಆದರೆ ಾರದಂಥ ಜೀವನವನ್ನು ಸಾಗಿಸಲು ಬರೀ ಾರದಿಂದ ಸಾಧ್ಯವಿಲ್ಲ. ಇದಕ್ಕೆ ಮೈದಾಸನ ಾಹರಣೆ ಜಗಜ್ಜನಿತವಾಗಿದೆ, ಹಿಂದಕ್ಕೆ ಚಿಕ್ಕ ಳಿಗೂ ಕೂಡ ಸಾಕಷ್ಟು ಬಂಗಾರದ ಆಭರಣ ಡಿಸಿ ಶಾಲೆಗೆ ಕಳಿಸುವ ಸಂಪ್ರದಾಯ. ರೆ ಇಂದಿನ ನಾಜೂಕು ಪರಿಸ್ಥಿತಿಯಲ್ಲಿ ದೊಡ್ಡವರು ತ ಬಂಗಾರದ ಆಭರಣಗಳನ್ನು ಧರಿಸಿಕೊಂಡು ಗಾಡುವದು ಅಪಾಯಕರವಾಗಿದೆ. ಅದಕ್ಕೆಂದೇ ನಕಲಿ ಮಾಲುಗಳ ಬಳಕೆ ಹೆಚ್ಚಾಗಿದೆ. ಏನಾದರೂ ಮದುವೆ ಮುಂಜಿವೆಗಳಂಥ ಧಾರ್ಮಿಕ ಹಾಗೂ ಬೇರೆ ಸಾರ್ವಜನಿಕ ಸಮಾರಂಭಗಳಲ್ಲಿ ಅಂತಸ್ತನ್ನು ಪ್ರದರ್ಶಿಸುವ ಆಳತಗೋಲಾಗಿದೆ. ಬಂಗಾರ ಹೀಗಾಗಿ ಸ್ಪರ್ಧೆಗೆ ಸೇರಿದ ಸಂಗತಿಯಾಗಿ ಬಿಟ್ಟದ್ದು ಸಹಜ. ಈ ಪೈಪೋಟಿ ಹತೋಟಿ ಯಲ್ಲಿರಬೇಕು ಏಕಂದರೆ ಇಡೀ ದೇಶದ ಆರ್ಥಿಕ ತಳಹದಿಯೇ ಬಂಗಾರ.

ಶೈಲಜಾ ಆರ್ ಪಾಟೀಲ.
ಧಾರವಾಡ

## ಗಿಲೀಟಿನ ಆಭರಣಗಳು

ಮಹಿಳೆಯರು ಅನಾದಿಕಾಲದಿಂದಲೂ ಆಭರಣ ಗಳನ್ನು ಧರಿಸುವದು ರೂಢಿ, ಕಳುವಿನ ಭಯವಿರದಿದ್ದ ಹಿಂದಿನ ಕಾಲದಲ್ಲಿ ಮಹಿಳೆಯರು ಸದಾ ಆಭರಣ ಭೂಷಿತೆಯರಾಗಿರುತ್ತಿದ್ದರು. ಆದರೆ ಇಂದಿನಮಹಿಳೆಯರು ನಿತ್ಯ ಆಭರಣಗಳನ್ನು ಧರಿಸದಿರುವದಕ್ಕೆ ಕಾರಣಗಳು ಹಲವಾರು ಇರ ಬಹುದು. ಕೇವಲ ಸೌಂದರ್ಯಕ್ಕಾಗಿಯೇ ಆಭರ ಣಗಳು ಬೇಕೆಂದಿಲ್ಲ. ಸುಂದರಿಯಾದವಳು ಆಭರಣ ಧರಿಸದಿದ್ದರೂ ಸಹ ನಿರಾಭರಣ ಸುಂದರಿ ಎಂದು ವ್ಯಾಖ್ಯಾನಿಸುತ್ತಾರೆ. ಆರ್ಥಿಕ ಭದ್ರತೆ ಗಾಗಿಯೂ ಆಭರಣಗಳು ಅಗತ್ಯವಾಗಿರುವ ಇಂದಿನ ದಿನಗಳಲ್ಲಿ ಅವುಗಳನ್ನು ಕಳ್ಳಕಾಕರಿಂದ ರಕ್ಷಿಸಿ ಜೋಪಾನವಾಗಿಟ್ಟುಕೊಳ್ಳುವದೇ ಒಂದು ಮಹತ್ವದ ಸಂಗತಿಯಾಗಿದೆ. ಅಲ್ಲದೇ ಯಾವುದೇ ವಸ್ತುವನ್ನು ಪದೇ ಪದೇ ಉಪಯೋಗಿಸಿದರೆ ಅದರ ಮೌಲ್ಯವು ಕಡಿಮೆಯಾಗುವದಲ್ಲದೇ ಅದರ ಮಹತ್ವವೂ ಕುಂಠಿತಗೊಳ್ಳುತ್ತದೆ. ಇದನ್ನ ರಿತೇ ಇಂದಿನ ಮಹಿಳೆಯರು ಮದುವೆ, ಮುಂಜಿವೆ, ಮತ್ತು ಹಬ್ಬಗಳಲ್ಲಿ ಮಾತ್ರ ಆಭರಣ ಧರಿಸುತ್ತಿರಬಹುದು. ಹಾಗೂ ಇದರಿಂದಾಗಿಯೇ ಗಿಲೀಟಿನ ಆಭರಣಗಳು ಬಳಕೆಗೆ ಬಂದಿರಲು ಸಾಕು.

ಶೋಭಾ. ಜಿ. ಖಟಾವಕರ
ನವಲಗುಂದ

ಪವನ್ 'ಮಿಸ್ರಿ' ಗಳನ್ನು ಒತ್ತೊತ್ತಾಗಿ ಪೋಣಿಸಿ ಚಿನ್ನದಿಂದಲೇ ಈ ಸರವನ್ನು ಮಾಡುತ್ತಾರೆ, ಹಾಗಾಗಿಯೇ ಇದು ಹೆಚ್ಚು ಬೆಲೆಬಾಳುತ್ತದೆ, ಒಂದು ಸರದಲ್ಲಿ ಇಪ್ಪತ್ತೂ ಮೂವತ್ತು ಪವನ ಗಳು ಇರುವದೂ ಇದೆ, ಇನ್ನೊಂದು ಚಕ್ರ ಸರ 'ಅವಲಕ್ಕಿ ಸರ' 'ಗುಂಡುಮಣಿ ಸರ' ಇವೆಲ್ಲ ಅನ್ವರ್ಥ ಹೆಸರಿನವು. ಆ ಸ್ಥಾನವನ್ನೆಲ್ಲ ಇಂದಿನ ಚೈನ್, ನೆಕಲೆಸುಗಳು ಆಕ್ರಮಿಸಿಕೊಂಡಿವೆ. ಚಿನ್ನದ ಜತೆಯಲ್ಲಿ ಹರಳುಗಳು, ಮಣಿಗಳು, ಹವಳ ಮುತ್ತುಗಳೂ ಕಂಠವನ್ನು ಅಲಂಕರಿಸುತ್ತಿವೆ, ಗಾತ್ರವೂ ನಾಭಿಯ ಪರ್ಯಂತರವ್ಯಾಪಿಸಿದೆ.

**ಸೊಂಟದ ಪಟ್ಟಿ**

ಪಟ್ಟಿಯು ಸೊಂಟದ ಒಂದು ಸುಂದರ ಆಭರಣ. ಉಡಿದಾರವು ಒಳ ಆಭರಣವಾದರೆ ಒಡ್ಯಾಣದ ಜತೆ ಕೆಲವೊಮ್ಮೆ ಹೊರಗೆ ಇಣುಕುವುದಿದೆ; "ಉಡಿದಾರ ಒಡ್ಯಾಣಗಳ ಚಲುವಾಭರಣಗಳು" ಇವುಗಳ ಮೇಲ್ಗಡೆಯಲ್ಲಿಯೇ ಪಟ್ಟಿಯು ಇರಬೇಕು ಪಟ್ಟಿ-ಎಂದರೆ ದಟ್ಟಿಯ ಸ್ಥಾನದ್ದು (ಬೆಲ್ಟ) ಪಟ್ಟಿ ಯನ್ನು ಬೇಕಾದ ಗಾತ್ರಕ್ಕೆ ಅಳವಡಿಸಿಕೊಳ್ಳ ಬಹುದು ಅದರ ಮೇಲ್ಗಡೆಯಲ್ಲಿ ಚಿನ್ನದ ಗುಂಡು ಗಳನ್ನು ಮೂರು ಸಾಲು ಪೋಣಿಸುತ್ತಾರೆ ನಡುವೆ ಹರಳಿನಗುಚ್ಛ ಇರುತ್ತದೆ. ಇಡಿಯ ಪಟ್ಟಿ ಯನ್ನು ವಜ್ರ ಹರಳು ಮೊದಲಾದವುಗಳಿಂದ ಅಲಂಕರಿಸುತ್ತಾರೆ. ಕೆಳಗಡೆಯಲ್ಲಿ ಜಾಲರಿಯನ್ನೂ ಇಳಿ ಬಿಟ್ಟ ಶ್ರೀಮಂತ ಪಟ್ಟಿಗಳೂ ಇವೆ. ಇದೂ ಈಗ ಅಪೂರ್ವವಾಗುತ್ತಿರುವ ಆಭರಣವೆ.

---

## ಆಭರಣಗಳು ಬೇಕೆಬೇಕು

ಈಗೀಗ ಬಂಗಾರ ಗಗನಕುಸುಮವಾಗಿದೆ. ಇಂಥ ಶ್ರೇಷ್ಠತಮ ವಸ್ತುವಿನ ಆಭರಣ ಧರಿಸುವ ಮಹಿಳೆಗೆ ಸಮಾಜದಲ್ಲಿ ಗೌರವಾದರಗಳು ಹೆಚ್ಚು. ಈ ಕಾರಣದಿಂದ ಮಹಿಳೆಯರಲ್ಲಿ ಆಭರಣಗಳ ಮೋಹ ಜಾಸ್ತಿಯಾಗಿದೆ. ಪ್ರತಿಯೊಬ್ಬ ಮಹಿ ಳೆಯೂ ಆಭರಣಗಳನ್ನು ಅಪೇಕ್ಷಿಸುತ್ತಾಳೆ. ಆದರೆ ಇದು ಎಲ್ಲರಿಗೂ ಸಿಲುಕಲಾರದ ವಸ್ತುವಾಗಿದೆ. ಇದನ್ನರಿತ ಮಹಿಳೆಯರು ಗಿಲೀಟಿನ ಆಭರಣ ಗಳನ್ನು ಧರಿಸಿ ತಮ್ಮಾಸೆಯನ್ನು ಈಡೇರಿಸಿಕೊಳ್ಳು ತ್ತಾರೆ.

ಆಭರಣಗಳು ಅತ್ಯಂತ ಬೆಲೆಯುಳ್ಳ ವಸ್ತು ವಾದ್ದರಿಂದ ಇವುಗಳನ್ನು ಸಮಾರಂಭಗಳಲ್ಲಿ, ಮದುವೆ ಮುಂಜಿವೆಗಳಲ್ಲಿ ಕ್ಷಣಹೊತ್ತು ಧರಿಸಿ ತೆಗೆ ದಿರಿಸುತ್ತಾರೆ. ಇಂಥ ಆಭರಣಗಳನ್ನು ನಿತ್ಯ ಧರಿಸುವುದು ಕಷ್ಟ. ಇದಕ್ಕೆ ಕಳ್ಳರ ಭಯ ಜಾಸ್ತಿ. ಇವರಿಂದ ಮಹಿಳೆಯರ ಜೀವಕ್ಕೆ ಅಪಾಯ. ಇದನ್ನರಿತ ಮಹಿಳೆ ನಿತ್ಯ ಆಭರಣ ಧರಿಸಲು ಭಯಪಡುತ್ತಾಳೆ. ನಿತ್ಯ ಧರಿಸಿದರೆ ಸವಕಳಿ ಬರುತ್ತದೆನ್ನುವ ಕಾರಣ ಒಂದಡೆಯಾದರೆ ಅಷ್ಟು ಇಷ್ಟು ಬಂಗಾರ (ಆಭರಣ) ಸಂಗ್ರಹಿಸಿದರೆ ಮುಂದೆ ತಮ್ಮ ಜೀವನಕ್ಕೆ ಆಸರೆಯಾಗುವು ದೆಂಬುದು ಮತ್ತೊಂದೆಡೆ.

ಹೆಣ್ಣಿಗೆ ಶೋಭಾಯಮಾನವಾದದ್ದು ಆಭರಣ. ಆಭರಣವಿರದ ಮಹಿಳೆಗೆ ಸಮಾಜದಲ್ಲಿ ಸ್ಥಾನಗಳು ಲಭ್ಯವಾಗಲಾರವು ಇದನ್ನರಿತ ಮಹಿಳೆ ಆಭರಣ ಗಳ ಸಂಗ್ರಹಕ್ಕೆ ಹೆಚ್ಚು ಆಸಕ್ತಿ ತೋರುವಳೇ ವಿನಃ ಅವಳಲ್ಲಿ ಆಭರಣಗಳ ಮೋಹ ಕಡಿಮೆಯಾ ಗಿಲ್ಲ.

ಆರ್ಥಿಕಭದ್ರತೆ ಕಾಯ್ದುಕೊಳ್ಳಲು ಸಮಾಜ ದಲ್ಲಿ ಎಲ್ಲರೊಂದಿಗೆ ಒಂದಾಗಿ ಬೆರೆಯಲು ಮಹಿಳೆಗೆ ಆಭರಣಗಳು ಬೇಕೆ ಬೇಕು.

**ಶಾಮಲಾ ಬೆಟಗೇರಿ**
**ಲಕ್ಷ್ಮೇಶ್ವರ**



ಮಗುವಿಗೂ ಬೇಕು ಆಭರಣ!
ಕು। ನಾಗವೀಣಾ (ಪಿಂಕಿ)

## ಯಾವ ಮೂಲೆಗೆ ?

ಜೀವನದಲ್ಲಿ ಏನಿದೆ? ಬರೀ ಬಂಗಾರವನ್ನು ಮೈಮೇಲೆ ಹೊತ್ತು ಆನಂದಿಸುವದಕ್ಕಿಂತ, ಹೆಣ್ಣು ತನ್ನ ಮನೆ, ತನ್ನ ಸಂಸಾರವನ್ನು ಸದಾಕಾಲವೂ ಆನಂದ, ಉಲ್ಲಾಸ ಹರ್ಷಗಳಲ್ಲಿ ಇಡುವುದರಲ್ಲಿ ಆಕೆ ಹೆಚ್ಚು ಆನಂದ ಪಡೆಯಬಹುದು.

ತನ್ನ ಪತಿಗೆ ಸದಾಕಾಲವೂ ನೆರವಾಗುತ್ತ ನಡೆದು, ಮಕ್ಕಳನ್ನು ಎಲ್ಲರೂ ಅಹುದೆನ್ನುವಂತೆ ರೂಪಿಸಿ, ಆದರ್ಶ ಗೃಹಿಣಿಯಾಗಿ ಬಾಳುವಲ್ಲಿ ಸಿಗುವ ಸುಖದ ಗುಲಗಂಜಿಯಷ್ಟಾದರೂ ಸುಖ ಆಭರಣದಿಂದ ಆಕೆಗೆ ಸಿಗಲಿಕ್ಕಿಲ್ಲ.

ತನ್ನ ಮನೆಯನ್ನು ಸದಾಕಾಲವೂ ಸಮೃದ್ಧ ವಾಗಿಟ್ಟು, ನಂದಗೋಕುಲದಂತಿಸಿರಿ. ತಾನದರ ಒಡತಿಯಾಗಿ ಬಾಳಿದಾಗ ಸಿಗುವ ಪರಮಸುಖದ ಮುಂದೆ ಆಭರಣ ಯಾವ ಮೂಲೆಗೆ.

**—ರೋಹಿಣಿ ಯಾದವಾಡ, ಅಥಣಿ**

### ವಂಕಿ

ವಂಕಿಯು ತೋಳಲ್ಲಿ ಧರಿಸುವ ಒಂದು ಆಭರಣ ವಿಶೇಷ. ಅದರ ರಚನಾ ವಿಧಾನದಿಂದ ಸಪೂರದ ಅಥವಾ ದಪ್ಪದ ಯಾವ ತೋಳಿನವರೂ ಅದನ್ನು ಧರಿಸಬಹುದು. ಬರಿಯ ಚಿನ್ನದ ಅಥವಾ ಹರಳಿನ ವಂಕಿಗಳೂ ಇವೆ. ಕೈಗೆ ಬಳೆಗಳೂ ಬೆರಳಿಗೆ ಉಂಗುರುಗಳು ವಿವಿಧ ಮಾದರಿಯಲ್ಲಿವೆ. 'ಕರಿ ಮಣಿ ಬಳೆ" ಗಳು ಹೊಸ ಆವಿಷ್ಕಾರವಾದರೆ, 'ಪಾಟಲಿ' ಗಳು ಗಂಡು ಮಕ್ಕಳಿಗೆ ಅಂದವಾಗುತ್ತವೆ. ಒಂದುಮಗ್ಗಲಲ್ಲಿ ನಿತಂಬವನ್ನು ಬಳಸುವ ಕಟಿಯ ಆಭರಣವೂ ಈಗ ರೂಢಿಗೆ ಬರುತ್ತಿದೆ.

### ಕಾಲ್ಗೆಜ್ಜೆ

ಮಕ್ಕಳಿಗೆ ಕಾಲಗೆಜ್ಜೆಯನ್ನು ಹಾಕಿದಂತೆ, ಪ್ರೌಢೆಯರು ಕಾಲಚೈನನ್ನುಧರಿಸುತ್ತಾರೆ, ಅದರಲ್ಲಿ ಈಗ ಕಲೆಯ ಕುಸುರುಕಾಣುತ್ತಿದೆ. ಕಾಲುಂಗುರ ಸೌಭಾಗ್ಯದ ಸಂಕೇತ ಅದರಲ್ಲೂ ಝಲ್ ಎನ್ನುವ ಕಿರುಗೆಜ್ಜೆಗಳ ನಾದಮಾಧುರ್ಯ ಈಗೀಗ ಕೇಳಿ ಬರುತಿದೆ. ಶ್ರೀಮಂತಿಕೆಯ ಸಂಕೇತವಾಗಿ ಕಾಲ ಸರಪಳಿ ಚಿನ್ನದ್ದೇ ಆಗಿ ಕೆಲವೊಮ್ಮೆ ಕಂಡರೂ ಅದು ಚಿನ್ನವನ್ನು ಕಾಲಿಗೆ ತೊಡಿಸಲು ಕೆಲವರ ಮನಸ್ಸು ಒಪ್ಪದು ಹೀಗಾಗಿ ಬಂಗಾರದ ಸ್ಥಾನ ಸೊಂಟದ ಮೇಲಕ್ಕೆ; ಕೆಳಗೆ ಬೆಳ್ಳಿ!

### ಗಂಡಸರಿಗೂ ವ್ಯಾಮೋಹ

ಗಂಡಸರೂ ಚಿನ್ನಾಭರಣ ಧರ್ಮವಿಧಿಯಂತೆ ತೊಡಲೇಬೇಕು 'ಕರ್ಣವೇಧ' ಅವರಿಗೆ ಅಗಲೇ ಬೇಕಾದ ಸಂಸ್ಕಾರ. ಮಕರಕುಂಡಲಗಳನ್ನು ಅಗ್ನಿ ಹೋತೃಗಳು ಧರಿಸುತ್ತಾರೆ ಕಿವಿಯ 'ವಂಟಿ' ಗಳನ್ನು ತಾಯಿತಂದೆಯರು ಸತ್ತಾಗ ಮಾತ್ರ ಗಂಡಸರು ತೆಗೆದಿರಿಸಬೇಕು.

### ಮದುಮಗ

ಮದುಮಗನ ಕಿವಿಗೆ ಹಿಂದೆ "ಗಾಲಿವಂಟಿ" ಹಾಕುತ್ತಿದ್ದರು ಕಾಲಿಗೆ ಪೈಜಣಿ, ಪಾಡಗ ಎಂಬ ಬೆಳ್ಳಿಯ ಆಭರಣಗಳನ್ನು ಹಾಕಬೇಕಾಗಿತ್ತು, ಮುಂಡಾಸು ಸುತ್ತಿ ಬಾಸಿಂಗ ಕಟ್ಟುತ್ತಿದ್ದರು.

ವಿಧವಿಧದ ಸರಗಳನ್ನು ಹಾಕಿ, ಸೊಂಟಕ್ಕೆ ಬೆಳ್ಳಿಯ 'ದಾಬು' (ಉಡಿದಾರ) ಹಾಕಿ ಅಲಂಕರಿಸುತ್ತಿದ್ದರು. ಹೀಗೆ 'ಸರ್ವಾಂಗ ಸುಂದರನಾದ' ಮದುಮಗನು ಕೊಡೆಯನ್ನು ಹಿಡಿದುಕೊಂಡು 'ಕಾಶಿಯಾತ್ರೆ' ಮಾಡುವಾಗ ಕಾಲಿಗೆ ಅಡಿಕೆ ಹಾಳೆಯ ಮೆಟ್ಟ (ಚಪ್ಪಲಿ) ನ್ನು ದರಿಸ ಬೇಕಾಗುತ್ತದ, ಆಗ 'ಕಾಲಿಗೆ ಹೋದ ನಮ್ಮ ಭಾವಾ ಕಬ್ಬಿನ್ ದೋಣಿಲಿ' ಎಂಬ ಮಾತು ನೆನಪಿಗೆ ಬಾರದಿರದು.

### ಹಳತೇ ಹೊಸತು

ಮದುವೆ ಮುಂತಾದ ಕೌಟುಂಬಿಕ ಸಮಾರಂಭಗಳಲ್ಲಿ ಈ ಆಭರಣಗಳೆಲ್ಲ ಹೊರಬರುತ್ತವೆ. ಈ ಹಳೆಯ ಆಭರಣಗಳೇ ಹೊಸರೂಪವನ್ನು ಧರಿಸಿ ಥಳಕಿನಿಂದ ಈಗ ಶೋಭಿಸುತ್ತಿವೆ. ಕೆನ್ನೆ ಸರಪಳಿಯು ಸೂಕ್ಷ್ಮರೂಪದಿಂದ ಒಂದೆಡೆ ಕಾಣಿಸಿಕೊಂಡರೆ, ಕೆಲವರು ಕಿವಿಯಿಂದ ಜಡೆಗೆ ಅದನ್ನು ಕಟ್ಟಿಕೊಳ್ಳುತ್ತಾರೆ ಹೀಗೆ ಸೊಂಟದ, ಕಾಲಿನ, ಕಿವಿಯ ಜಡೆಯ ಆಭರಣಗಳಲ್ಲಿ ಹಿಂದಿನ ರೂಪವನ್ನೆ ಗುರುತಿಸಬಹುದು. ಅದು ಕಾಲಚಕ್ರದ ಗತಿ.



ಸಾಲಂಕೃತ ವಧು

## ಸರ್ವೇ ಜನಾಃ ಕಾಂಚನಮಾಶ್ರಯಂತಿ

"ಸರ್ವೇಜನಾಃ ಕಾಂಚನಮಾಶ್ರಯಂತಿ" ಎಂಬ ಮಾತಿನಂತೆ ಮುಂದಿನ ಬದುಕು ಸುಲಲಿತವಾಗಿ ಜರುಗಲು ಆಭರಣ ಆಧಾರ. ಸ್ತ್ರೀಗೆ ಅವಶ್ಯಕ. ಈ ಆಭರಣ ಎಂದರೆ ಎರಡು ಮೊನೆಯ ಕತ್ತಿ ಇದ್ದಂತೆ. ಅದು ಅಪತ್ಕಾಲಕ್ಕೆ ಉಪಕಾರಿಯೂ ಆಗಬಹುದು. ಅಥವಾ ಜೀವಕ್ಕೆ ಸಂಚಕಾರವನ್ನೂ ತರಬಹುದು. ಆಭರಣ ಒಂದು ಸೌಂದರ್ಯದ ಸಾಧನವೂ ಹೌದು. ಐಶ್ವರ್ಯದ ಚಿನ್ಹೆಯೂ ಹೌದು. ಅತಿ ಮೋಹವಾದರೆ ಜೀವನಾಶಕವೂ ಹೌದು. ಆಭರಣ ಮೋಹ ಸ್ತ್ರೀಯರಲ್ಲಿ ಜನ್ಮಜನ್ಮಾಂತರಗಳಿಂದ ಬಂದಿರುವ ಪ್ರವೃತ್ತಿ. ಅದು ಯಾವಯುಗದಲ್ಲೂ ಕಡಿಮೆಯಾಗಲು ಸಾಧ್ಯವಿಲ್ಲ.

—ಶಾಂತಾ ವ್ಹಿ. ಶೆಣ್ವಿ ಕುಮಟಾ

## ನಿರಾಭರಣ ಸುಂದರಿ

ಕೇವಲ ಸೌಂದರ್ಯಕ್ಕಾಗಿಯೇ ಆಭರಣಗಳು ಬೇಕೆಂದಿಲ್ಲ. ಸುಂದರಿಯಾದವಳು ಆಭರಣ ಧರಿಸದಿದ್ದರೂ ಸುಂದರಿಯಾಗಿ ಕಂಡೇ ಕಾಣುತ್ತಾಳೆ. 'ನಿರಾಭರಣ ಸುಂದರಿ' ಎಂಬ ವ್ಯಾಖ್ಯೆ ಪ್ರಚಲಿತವಾಗಿಲ್ಲವೇ? ಮಹಿಳೆಯರು ಅನಾದಿಕಾಲದಿಂದಲೂ ಆಭರಣ ಧರಿಸುವದು ರೂಢಿ ಅಷ್ಟೆ. ಆರ್ಥಿಕ ಭದ್ರತೆಗೂ ಆಭರಣಗಳು ಅಗತ್ಯ.

ಶೋಭಾ ಜಿ. ಖಟಾವಕರ ನವಲಗುಂದ

ದೀಪಾವಳಿಯ ಹಾರ್ದಿಕ ಶುಭಾಶಯಗಳು

# ಕೆ. ಕೆ. ಲಕಮನಹಳ್ಳಿ



ಕೆ. ಕೆ. ಲಕಮನಹಳ್ಳಿ

ಸಾರಿಗೆ ವಾಹನ ಕಾಂಟ್ರಾಕ್ಟರ್

ಇ. ಡಬ್ಲ್ಯು. ಎಸ್.

ನವನಗರ, ಹುಬ್ಬಳ್ಳಿ



ಬಸವರಾಜ ಕರವೀರಪ್ಪ ಲಕಮನಹಳ್ಳಿ

ದೀಪಾವಳಿಯ
ಹಾರ್ದಿಕ ಶುಭಾಶಯಗಳು

# ಪದ್ಮಶ್ರೀ ಹೊಟೇಲ್ ಮತ್ತು ಲಾಡ್ಜಿಂಗ್

ತಾಲ್ಲೂಕು ಆಫೀಸ ಹತ್ತಿರ
ನರಸಿಂಗರಾವ್ ರಸ್ತೆ,
ಚಿಕ್ಕಮಗಳೂರು - 577 101

ನಮ್ಮ ವೈಶಿಷ್ಟ್ಯಗಳು :

ವಿಶಾಲ ಕಾರ್‌ಪಾರ್ಕಿಂಗ್, ನೀರಿನ ಸೌಲಭ್ಯ, ಚಾನಲ್ ಮ್ಯೂಸಿಕ್ ಎಲ್ಲಾ ರೂಮುಗಳಿಗೆ ಅಳವಡಿಸಿದೆ, ಡೀಲಕ್ಸ್ ರೂಮುಗಳು, ಪ್ರತ್ಯೇಕ ಹಾಸಿಗೆ, ಹೊದಿಕೆ ಸೌಲಭ್ಯ ಇರುತ್ತವೆ,

### ದೇವರ ಆಭರಣ

ಆಭರಣಗಳ ಪರಂಪರೆಯನ್ನು ನೋಡಬೇಕಾದರೆ ನಾವು ದೇವರ ಆಭರಣಗಳನ್ನೆ ನೋಡಬೇಕು ಅದರಲ್ಲಿ ಹೆಚ್ಚು ಬದಲಾವಣೆ. ಇನ್ನೂ ಬಂದಿಲ್ಲ, ಹಳೆಯ ಆಭರಣಗಳು ಹಾಗೆಯೇ ಇವೆ. ಗಾತ್ರದಲ್ಲಿ ಇವೆಲ್ಲ ದೊಡ್ಡವು ಯಕ್ಷಗಾನದಲ್ಲಿ ಪುರಾತನತೆ ಇನ್ನೂ ಉಳಿದಿದೆ.

ಬೇಲೂರು ಹಳೆಬೀಡುಗಳಿಗೆ ಹೋದರೆ ಆಭರಣದಲ್ಲಿ ಅನುಸರಿಸಬಹುದಾದ ಕುಸುರಿಯ ಮಾರ್ಗ ಎಂತಹದು ಅಂತ ತಿಳಿದೀತು ನಾವೀಗ ಹೇಳುವ ನವೀನ ಶೈಲಿಗಳನ್ನು ಅವರು ಅಂದೇ ಗುರುತಿಸಿದ್ದರು.

ಚಿನ್ನ ಮೊದಲಾದ ಲೋಹಗಳನ್ನು ಧರಿಸುವುದು ರತ್ನ ಹವಳ, ನೀಲಮಣಿ ಮೊದಲಾದವುಗಳನ್ನು ಧರಿಸುವುದು ಆಗತ್ಯ- ಎಂಬುದನ್ನು ಪೂರ್ವಿಕರು ಮನಗಂಡಿದ್ದರು. ಶನಿಯಪೀಡೆ ಪರಿಹಾರಕ್ಕೆ ನೀಲವನ್ನು ಧರಿಸಬೇಕು ಎಂದರು. ಆ ಮಣಿಯ ಮೂಲಕ ನಮ್ಮ ದೇಹವನ್ನು ಪ್ರವೇಶಿಸುವ ರವಿ ಕಿರಣವು ಶನಿಗ್ರಹಚಾರದಿಂದುಂಟಾದ ಕಿರಣದ ಕೊರತೆಯನ್ನು ತುಂಬಿಸುತ್ತದೆ ಅಂತೆಯೇ "ಸೂಚಿ ಚಿಕಿತ್ಸೆಯ" ಪರಿಣಾಮವನ್ನು ಮನಗಂಡೇ ಕರ್ಣವೇಧದಂತಹ ಸಂಸ್ಕಾರಗಳನ್ನು ವಿಧಿಸಿದರು, ಅದುದರಿಂದ ಆಭರಣವು ಆಡಂಬರಕ್ಕಾಗಿ ಮಾತ್ರ ಆಗಿರದೆ ಆರೋಗ್ಯಕ್ಕೂ ಆವಶ್ಯಕ ಎಂಬುದನ್ನು ನಾವು ಮನಗಾಣಬಹುದು.

### ಆಪದ್ಧನ

ತವರಿನಿಂದ ಬರುವ ವನಿತೆಗೆ ಈ ಆಭರಣವೇ ಆಪದ್ಧನ ಎಂಬ ಧೈರ್ಯವನ್ನು ಹುಟ್ಟಿಸಿತು. ಹಿಂದಿನ ಆಭರಣ ಬಡಕಾಗಿದ್ದರೂ ಅದರಲ್ಲಿ ಹೆಚು ಪೌಲಿಕತೆ ಇತ್ತು ಆ ದೃಷ್ಟಿಯಿಂದ ಅದು ಸಾರ್ಥಕ.



ಮೂಗುತಿ ಮೂಗಿಗೆ ಭಾರವೆ?
ಕು। ಉಷಾ

ಆಭರಣಗಳು : ಫ್ರಾನ್ಸಿ ಜ್ಯುವೇಲರಿಮಾರ್ಟ ಧಾರವಾಡ
ಎಂ. ವಿ. ಕಣಗಿನಹಾಳ ಆ್ಯಂಡ ಸನ್ಸ್ ಸರಾಫ್ ಅವರ ಕೃಪೆ;

## ಎಲ್ಲಿಟ್ಟರೂ ಭಯವೇ

ಮಹಿಳೆಯರಿಗೆ ಆಭರಣಗಳ ಮೋಹ ಒಂದು ಆರ್ಥಿಕ ಭದ್ರತೆಗಾಗಿಯಾದರೆ ಇನ್ನೊಂದು ಹೆಣ್ಣಿನ ಅಂದ ಹೆಚ್ಚಿಸುವುದಾಗಿದೆ. ಹೆಣ್ಣು ತನಗೆ ಎಷ್ಟು ಆಭರಣಗಳಿದ್ದರೂ ತೃಪ್ತಿ ಹೊಂದುವುದಿಲ್ಲ. ಒಂದೇ ತರಹದ ವಿವಿಧ ನಮೂನೆಯ ಆಭರಣಗಳಿರಬೇಕೆಂಬುದು ಅವಳ ಆಸೆ. ಇದು ಅನುಕೂಲಸ್ಥ ಶ್ರೀಮಂತರಿಗೆ ಸಾಧ್ಯ. ಆದರೆ ಬಡ ಜನತೆ ವಿವಿಧ ಲೋಹಗಳಿಂದ ಅಂದರೆ ರೋಲ್ಡ್ ಗೋಲ್ಡ್‌ನಿಂದ ತಯಾರಿಸಿದ ಆಭರಣಗಳಿಂದಲೇ ತೃಪ್ತಿಪಟ್ಟುಕೊಳ್ಳುತ್ತಾರೆ. ಈಗಿನ ಕಾಲದಲ್ಲಿ ಚಿನ್ನದ ಆಭರಣ ಮತ್ತು ರೋಲ್ಡ್‌ಗೋಲ್ಡ್ ಆಭರಣಗಳನ್ನು ನೋಡಿದರೆ ಯಾವುದು ನಿಜವೆಂಬುದೇ ತಿಳಿಯಲು ಕಷ್ಟ. ಚಿನ್ನದ ಬೆಲೆ ಗಗನಕ್ಕೇರಿದ ಇಂದಿನ ಕಾಲದಲ್ಲಿ ಚಿನ್ನದ ಆಭರಣದ ಮೆರಗನ್ನೇ ರೋಲ್ಡ್‌ಗೋಲ್ಡ್ ಆಭರಣಗಳು ಹೊಂದಿರುತ್ತವೆ. ಚಿನ್ನದ ಆಭರಣಗಳಿಂದಾಗಿ ನಡೆಯುವ ಕೊಲೆಸುಲಿಗೆಗಳು ನಿಜಕ್ಕೂ ಹೆಣ್ಣಿಗೆ ಒಂದು ಶಾಪದಂತಾಗಿಬಿಟ್ಟಿದೆ. ಆಭರಣ ಧರಿಸಿದ ಒಂದು ಹೆಣ್ಣು ಅದನ್ನು ತೆಗೆದಿಡುವವರೆಗೂ ಭಯ ಭೀತಿಯಲ್ಲೇ ಇರುತ್ತಾಳೆ. ಮನೆಯಲ್ಲಿ ಇಟ್ಟರೂ ಭಯ, ಮೈಮೇಲೆ ಧರಿಸಿದ್ದರೂ ಭಯ. ಹೀಗಿರುವಲ್ಲಿ ಯಾವ ಹೆಣ್ಣು ತಾನೇ ಆಭರಣಗಳಿಗಾಗಿ ತನ್ನ ಪ್ರಾಣ ಕಳೆದುಕೊಳ್ಳಲು ಬಯಸುವಳು. ಅದಕ್ಕಾಗಿ ಈಗಿನ ಕಾಲದಲ್ಲಿ ಅರ್ಧಭಾಗದಷ್ಟು ಹೆಣ್ಣು ಮಕ್ಕಳು ಚಿನ್ನದ ಆಭರಣಗಳಿಂದ ಆದಷ್ಟು ದೂರವಾಗಿ ರೋಲ್ಡ್‌ಗೋಲ್ಡ್ ಆಭರಣಗಳ ಮೊರೆ ಹೋಗಿರುವುದು ಸಹಜ. ಇಂತಹ ಆಭರಣಗಳಿಂದಲೇ ಹೆಣ್ಣು ಸಮಾಜದಲ್ಲಿ ತನ್ನ ಸ್ಥಾನಮಾನ ಉಳಿಸಿಕೊಳ್ಳಲು ಮತ್ತು ತನ್ನ ಸೌಂದರ್ಯಕ್ಕೆ ಮೆರಗು ಕೊಡಲು ಪ್ರಯತ್ನ ನಡೆಸುತ್ತಾಳೆ.

ಶ್ರೀಮತಿ ಎಸ್. ಆರ್. ದೊಡ್ಡಮ್ಮ
ಬಳ್ಳಾರಿ

## ಇಷ್ಟು ಸಾಕು

ಕೊರಳಲ್ಲಿ ಒಂದು ಸರ. ಬಲಗೈಲಿ ಎರಡು ಬಳೆ, ಎಡಗೈಲಿ ವಾಚು, ಕಿವಿಯಲ್ಲಿ ಜತೆ ರಿಂಗು, ಇಷ್ಟವಿದ್ದರೆ ಬೆರಳಿಗೊಂದು ಉಂಗುರ ಇಷ್ಟು ಸಾಕಲ್ಲವೇ? ಹಾಂ! ಇಷ್ಟೇ ಸಾಕು. ಸ್ತ್ರೀ ಆಭರಣ ಧರಿಸಬೇಕು. ಆದರೆ ಅದು ಮಿತವಾಗಿರಬೇಕು. ಅದು ಎಲ್ಲದೃಷ್ಟಿಯಿಂದಲೂ ಒಳ್ಳೆಯದು. ಮಹಿಳೆಯರಲ್ಲಿ ಆಭರಣಗಳ ಮೋಹ ಹೆಚ್ಚುತ್ತಲೇ ಹೋಗುತ್ತಿದೆಯೇ ಹೊರತು ಕಡಿಮೆಯಾಗುತ್ತಿಲ್ಲ. ಇಂದಿನ ಫ್ಯಾಶನ್ ಯುಗದಿಂದ ಇದಕ್ಕೆ ಪುಷ್ಟಿ.

ನಮಗೆ ಬಂಗಾರ ಕಷ್ಟ ಕಾಲಕ್ಕೆ ಆಗುತ್ತದೆ ಎಂಬ ಕಾರಣಕ್ಕೆ ಎಷ್ಟೇ ಇದ್ದರೂ ಕೆಟ್ಟದ್ದಲ್ಲ. ಆದರೆ ಅತಿಯಾಗಿ ಆಭರಣ ಧರಿಸುವದು, ಅದೂ ಕೂಡ ಇಂದಿನ ಅಭದ್ರ ದಿನಗಳಲ್ಲಿ ಬಹಳ ಅಪಾಯಕರ.

ಉಷಾ ಕಿರಣ ಸಂಪಗಾವ್

## ಅಚ್ಚರಿ ತರುವಂತಹ ನಂಟು

ಆಪದ್ಧನವಾಗಿ ಚಿನ್ನ ಎಷ್ಟೋ ಬಾರಿ ಆಕೆಯ ಮಾನ ಕಾಯುತ್ತ ಬಂದಿದೆ. ಆದರೆ ಈಗಿನ ದಿನದಲ್ಲಿ ಅದರಿಂದಲೇ ಆಕೆಯ ಮಾನಾಪಹರಣವಾಗುವ ಪ್ರಸಂಗಗಳು ಹೆಚ್ಚಾಗುತ್ತಿವೆ. ರೂಪಾಯಿ ಅಪಮೌಲ್ಯಗೊಳ್ಳುತ್ತ ಹೋದಂತೆ ಬೆಲೆಗಳು ಏರತೊಡಗಿದಂತೆ, ಕಳ್ಳಕಾಕರ ದೃಷ್ಟಿ ಈಗ ಮೊದಲು ಬೀಳುವದು ಚಿನ್ನದ ಮೇಲೆಯೇ. ಹೀಗಾಗಿಯೇ ಇಂದು ಆಸೆಪಟ್ಟು, ಜೀವ ಒತ್ತೆ ಇಟ್ಟು, ಮಾಡಿಸಿಕೊಳ್ಳುವ ಆಭರಣ ಹಾಯಾಗಿ ಪೆಟ್ಟಿಗೆ ಸೇರಿ ಕುಳಿತುಕೊಳ್ಳುತ್ತಿದೆ. ಕಳ್ಳಕಾಕರ ಭಯ ಹೆಚ್ಚಾಗುತ್ತಿದ್ದೆ, ಎಂದ ಮಾತ್ರಕ್ಕೆ ಒಡವೆಯೇ ಬೇಡ ಎಂಬ ತರ್ಕವನ್ನು ಮಹಿಳೆ ಮಾತ್ರ ಒಪ್ಪುವದಿಲ್ಲ. ಆರ್ಥಿಕ ಭದ್ರತೆಗಾಗಿಯಾದರೂ, ಆಪದ್ಧನವಾಗಿಯಾದರೂ ಒಡವೆ ಅವಳಿಗಾಗಿ ಇರಲೇಬೇಕು. ಒಡವೆ ನೋಟಕ್ಕೆ ಕುಸುರಿನ ಕೆಲಸವಾದರೂ ಬಳಕೆಯ ರೂಪದಲ್ಲಿ ಅದರ ಕಾರ್ಯಕ್ಷೇತ್ರ ವೈವಿಧ್ಯಮಯ. ಅಂತೂ ನಿಜಕ್ಕೂ ಮಹಿಳೆಗೂ, ಚಿನ್ನಕ್ಕೂ ಇರುವ ಈ ನಂಟು ಅಚ್ಚರಿ ತರುವಂತಹದು.

**ನೇತ್ರಾವತಿ ಅಭಿರಾಮ ಮೂರ್ತಿ**
**ಬೆಂಗಳೂರು**

## ಮಡಿಲಲ್ಲಿ ಮೃತ್ಯುವಿದ್ದಂತೆ

ಬಂಗಾರದ ಒಡವೆ ಎಂದರೆ ಇತ್ತಿತ್ತಲಾಗಿ ಮಡಿಲಲ್ಲಿ ಮೃತ್ಯುವನ್ನೇ ಕಟ್ಟಿಕೊಂಡಂತೆ. ಆದರೂ ತುಲನಾತ್ಮಕ ದೃಷ್ಟಿ ಇನ್ನೂ ಎಲ್ಲರಲ್ಲೂ ಕಾಣಸಿಗುತ್ತಿರುವದರಿಂದ ಆಭರಣಗಳ ಬಳಕೆ ಕಡಿಮೆಯಾಗಿಲ್ಲ. ಸ್ತ್ರೀಗೆ ಎಷ್ಟು ವಸ್ತ್ರಹಾಕಿಕೊಂಡರೂ ತೃಪ್ತಿ ಇಲ್ಲ ಎನ್ನುವ ಮಾತಿಗೆ ಹಿಂದೆ ಕೇಳಿದ ಸಂಗತಿಯೊಂದು ನೆನಪಾಗುತ್ತದೆ. "ಒಬ್ಬ ಅತ್ತೆಯ ಮನೆ ಸೊಸೆಗೆ ಮೈ ಭಾರವಾಗುವಷ್ಟು ಆಭರಣ ಧರಿಸಿದರೂ ತೃಪ್ತಿ ಇಲ್ಲ. ಒಂದು ಬಾರಿ ಆಕೆಯ ಮಾವ 'ತಂಗೀ, ಅಲ್ಲಿಯ ಸಾಣೀಕಲ್ಲು ತಾ' ಅಂದರಂತೆ. ಎತ್ತಲು ಆಗಲಾರದು ಎಂಬ ನೆಪವೊಡ್ಡಿ ತರಲಿಲ್ಲವಂತೆ ಆ ಸೊಸೆ. ಮರುದಿನವೇ ಅವಳ ಮಾವ ಅದೇ ಸಾಣಕಲ್ಲಿಗೆ 'ಬಂಗಾರದ ಕಟ್ಟು' ಹಾಕಿಸಿ, ಸರದ ಮಧ್ಯೆ ಪದಕದಂತೆ ಪೋಣಿಸಿಕೊಟ್ಟರಂತೆ. ಸಂಭ್ರಮದಿಂದ ಆ ಸೊಸೆ ಅದನ್ನು ಧರಿಸಿ ಊರೆಲ್ಲಾ ತಿರುಗಾಡಿದಳಂತೆ."

**ವಿಜಯಲಕ್ಷ್ಮಿ ಕಟ್ಟಿ**
**ಬಾಗಲಕೋಟ**

## ಆಭರಣಗಳು ಅಭಂಗದಲ್ಲಿ

"ನನ್ನ ಪ್ರೀತಿಯ ಚಿನ್ನಾ, ರನ್ನಾ" ಎಂದು ಹೊಗಳಿ ಹೊಗಳಿ ಮಡದಿಯ ಮನ ಗೆಲ್ಲಲು ಗಂಡ ಹವಣಿಸಿದರೆ ಚತುರ ಮಡದಿ "ಸಾಕು ಬಿಡಿ ಸುಮ್ಮ ಸುಮ್ಮನೆ ವರ್ಣನೆ ಬೇಡ" ಎಂದು ಹುಸಿ ಮುನಿಸು ತೋರಿ ಚಿನ್ನದೊಡವೆಗಳನ್ನು ಪಡೆಯಲೆತ್ನಿಸುತ್ತಾಳೆ. ಚಿನ್ನಾಭರಣಗಳ ವ್ಯಾಮೋಹ ಸ್ತ್ರೀಯರಿಗೆ ಸಹಜವಾದುದು. ಮಡದಿಯ ಚಿನ್ನಾಭರಣಗಳ ವ್ಯಾಮೋಹ ಈಡೇರಿಸದ ಬಡಪಾಯಿ ಗಂಡ ಹೆಂಡತಿಯ ಪೀಡೆಯನ್ನು ತಾಳದ್ದರಿಂದಲೋ ಏನೋ "ಹೆಂಡತಿ ಪ್ರಾಣ ಹಿಂಡುತಿ" ಎಂದು ಗೋಳಾಡಿದ್ದನ್ನು ದಾಸರೊಬ್ಬರು ಹಾಡಿದ್ದಾರೆ.

"ನನಗೆ ನೀವೇ ಆಭರಣ. ಬೇರೆ ಆಭರಣ ಏಕೆ?" ಎಂದು ಗಂಡನಿಗೆ ನೆಮ್ಮದಿ ನೀಡುವ ಆದರ್ಶಸತಿಯರ ಬದುಕು ಅನುಕರಣೀಯ. ಪರಮಾತ್ಮನ ನಾಮಸ್ಮರಣೆಯಲ್ಲೇ ಸಕಲ ಆಭರಣಗಳ ತೃಪ್ತಿ ಪಡೆವ ಅಧ್ಯಾತ್ಮ ನಿಷ್ಠ ಆದರ್ಶಸತಿಯ ಅನುಭವಾಮೃತವುಳ್ಳ ಮರಾಠಿ ಅಭಂಗವೊಂದನ್ನು ಚಿದಂಬರ ಭಕ್ತರಾದ ಸಾಧ್ವಿಗಳು ನಿತ್ಯ ಸಂಜೆ ಹಾಡಿಕೊಳ್ಳುತ್ತಾರೆ. ಒಂದೊಂದು ದೇವರ ನಾಮಸ್ಮರಣೆಗೆ ಒಂದೊಂದು ಆಭರಣವನ್ನು ಹೋಲಿಸುವ ಮರಾಠಿ ಅಭಂಗದ ಕನ್ನಡಾನುವಾದ ಇಲ್ಲಿದೆ.

# ಆಭರಣ ಗೀತೆ

ಚಿದಂಬರ ನಾಮದಲಿ ಸೌಭಾಗ್ಯ ಸಂಪೂರ್ಣ
ನಿತ್ಯ ನಿನ್ನಯ ನೆನಹೆ ಸಕಲ ಆಭರಣ ॥ ೧ ॥

ತೊಟ್ಟೆ ಜರದಂಚು ಕುಬುಸ ಪಾಂಡುರಂಗಾ ಎಂದು
ಉಟ್ಟ ಪೀತಾಂಬರವ ರಾಮರಾಮಾ ಎಂದು ॥ ೨ ॥

ಕೇಶವಾ ಎಂದರೆಯೇ ಪ್ರಕಟ ಮಂಗಳ ಸೂತ್ರ
ನಾರಾಯಣಾ ಎನಲು ಪುತ್ಥಳೀ ಹಾರ ॥ ೩ ॥

ಮುತ್ತಿನ ಸರದೊಳಗೆ ಪದಕ ಮಾಧವನಾಮ
ಮತ್ತೆ ತಾಯುತವುಂಟು ಗೋವಿಂದನಾಮ ॥ ೪ ॥

ಕಂಠಿ ಕಟ್ಟಾಣಿ ಸರ ವಿಷ್ಣು ನಿನ್ನಯ ನಾಮ
ಸರಗಿ ಜಂಬೂಸರವೆಂಬೆ ಮಧುಸೂದನ ॥ ೫ ॥

ತ್ರಿವಿಕ್ರಮನೆನಲು ಮೋಹನಮಾಲೆಯ ಅಂದ
ವಾಮನನ ನೆನೆದಾಗ ಚಂದ್ರಹಾರದ ಛಂದ ॥ ೬ ॥

ಶ್ರೀಧರ ಎನುವಾಗ ರತ್ನ ಕರ್ಣಾಭರಣ
ಹೃಷಿಕೇಶ ಸ್ಮರಣೆಯೇ ಅಪಮೌಲ್ಯ ಕಾಲ್ಗಡಗ ॥ ೭ ॥

ಪದ್ಮನಾಭನ ನೆನೆಯೆ ಮುತ್ತಿನ ಬುಗುಡಿ
ದಾಮೋದರ ಎನಲು ರುಖಮಕಿಯ ಜೋಡಿ ॥ ೮ ॥

ಸಂಕರ್ಷಣನ ನೆನಹು ವಂಕಿ ನಾಗಮುರಗಿ
ಸೊಬಗು ಸಂಭ್ರಮವೆಲ್ಲ ವಾಸುದೇವನಲಿ ॥ ೯ ॥

ಬೈತಲೆಗೆ ಚೂಡಾಮಣಿ ಪ್ರದ್ಯುಮ್ನನಾಮವದು
ಪಾಟಲಿಗಳ ಜೋಡಿ ಅನಿರುದ್ಧ ಎನ್ನುವುದು ॥ ೧೦ ॥

ವಿಶ್ವವ್ಯಾಪಿಯು ಪುರುಷೋತ್ತಮ ಎಂದು ನೀ ತಿಳಿ
ಚಂದ್ರಸೂರ್ಯರು ಬೆಳಗೆ ಅಧೋಕ್ಷಜನಲಿ ॥ ೧೧ ॥

ನರಸಿಂಹ ಸ್ಮರಣೆಯೆ ಹೊನ್ನ ಕೇದಗೆಯು
ಅಚ್ಯುತ ಎಂದಾಗ ಜಡೆಗೆ ಚಿನ್ನದ ಬಿಗುವು ॥ ೧೨ ॥

ಜನಾರ್ದನ ಎನಲು ನಡುಪಟ್ಟಿವಡ್ಯಾಣ
ಉಪೇಂದ್ರ ಸ್ಮರಣೆಯೇ ಸರಪಳಿ ವ್ಯಂಜಣ ॥ ೧೩ ॥

ಹರಿ ನಿನ್ನ ನೆನೆಯೆ ಚೆಲುವ ಮುತ್ತಿನ ದಂಡೆ
ಶ್ರೀ ಕೃಷ್ಣ ನಾಮದಲಿ ರನ್ನಮೂಗುತಿ ಥಂಥ ॥ ೧೪ ॥

ಸಂಕರ್ಷಣ ನಾಮ ಎಲ್ಲೆಡೆ ರಂಜಿಪುದು
ಸಾರುವರು ದಾಸರು, ಕುಂಕುಮವೇ ಅನಂತವೆಂದು ॥ ೧೫ ॥

—ರಮಾ ನಾರಾಯಣ ಘಳಗಿ

## ಆಶ್ಚರ್ಯವೇನಿಲ್ಲ

ಈ ಪ್ರಪಂಚದಲ್ಲಿ ಆಭರಣಗಳಿಗಿಂತ ಅಮೂಲ್ಯವಾದ ವಸ್ತು ಇನ್ನೊಂದಿಲ್ಲ. ಅದಕ್ಕೆ ಕಾರಣ ಅವು ಮಹಿಳೆಯ ಅಂದವನ್ನು ಹೆಚ್ಚಿಸುತ್ತವೆ. ಒಂದು ಸಾಮಾನ್ಯ ಹೆಣ್ಣಿನ ಸೌಂದರ್ಯವನ್ನು ಹೆಚ್ಚಿಸಲು ಆಭರಣಗಳಿಂದ ಮಾತ್ರ ಸಾಧ್ಯ. ಅಷ್ಟು ಅರಿತೂ ಕೂಡ ಯಾವ ಮಹಿಳೆ ತಾನು ಸುಂದರಿಯಾಗಲು ಬಯಸುವದಿಲ್ಲ.? ಆದ್ದರಿಂದ ಮಹಿಳೆಯರಿಗೆ ಆಭರಣಗಳ ಮೋಹವಿರುವದು ಆಶ್ಚರ್ಯದ ಸಂಗತಿಯೇನಲ್ಲ. ಆಭರಣವಿಲ್ಲದ ಚೆಲುವೆಯನ್ನು ಸೂರ್ಯನಿಲ್ಲದ ಗಗನಕ್ಕೂ, ತಾವರೆ ಇಲ್ಲದ ಕೊಳಕ್ಕೂ ಹೋಲಿಸುತ್ತಾರೆ.

ಶ್ರೀಮಂತಮಹಿಳೆಯರಿಗಂತೂ ಆಭರಣಗ ಳದ್ದೇ ಹುಚ್ಚು. ಅವರಿಗೆ ಅದು ಇದ್ದಷ್ಟು ಕಡಿಮೆಯೇ. ಮದುವೆ ಮುಂಜಿ ಮುಂತಾದ ಶುಭಕಾರ್ಯಗಳಲ್ಲಿ, ಮಹಿಳೆಯರಿಗೆ ಆಭರಣ ಬಿಟ್ಟು ಬೇರೆ ವಿಷಯವೆ ಗೊತ್ತಿರುವದಿಲ್ಲ.

ಒಂದು ಸ್ತ್ರೀಗೆ ತನ್ನ ಪತಿಯ ಮೇಲೆ ಎಷ್ಟೇ ಸಿಟ್ಟಿರಲಿ, ತಾನು ಒಡವೆಗಳನ್ನು ಮಾಡಿಸುತ್ತೇನೆಂದರೆ, ಅವಳ ಕೋಪ ಮಾಯವಾಗಿ ಬಿಡುತ್ತವೆ. ಅಂತೂ ಆಭರಣಗಳ ಮಹಿಮೆ ಅಪಾರವಾದುದು.

ಅಷ್ಟು ಆಭರಣಗಳನ್ನಿಟ್ಟು ಅವರಿಗೆ ಹಾಕಲು ದರೋಡೆಕಾರರು ಬಿಡುತ್ತಾರೆಯೇ ? ದಿನ ನಿತ್ಯ ಪತ್ರಿಕೆಗಳಲ್ಲ ಒಂದಾದರೊಂದು ಕಳವು, ಕೊಲೆಯ ಸುದ್ದಿ ಇದ್ದೇ ಇರುತ್ತವೆ.

ಅಂತೂ ನನ್ನ ಪ್ರಕಾರ ಪ್ರತಿಯೊಬ್ಬ ಮಹಿಳೆಗೂ ಆಭರಣಗಳ ಮೋಹ ಇದ್ದೇ ಇರುತ್ತದೆ. ಕೆಲವರು ಅದನ್ನು ತೋರಿಸಿಕೊಡುತ್ತಾರೆ. ಮತ್ತು ಕೆಲವರು ತೋರಿಸಿಕೊಡುವದಿಲ್ಲ ಅಷ್ಟೇ.

**—ಸುನೀಲಾ ಮೌಲೆ, ಮಾಜಾಳಿ**

## ಬಂಗಾರ ಯಾತಕ ನ್ಮೈಯ್ಯಾಗ

"ಬಂಗಾರ ಯಾತಕ ಮೈಯ್ಯಾಗ ನಮಗ
ಶೃಂಗಾರ ಮಾಡುದಕ
ಬಂಗಾರದಂಥ ಗುಣವೊಂದಿದ್ದರ ಇನ್ನೇನ
ಬೇಕ ಜಗದಾಗ"

ಎಂದು ಕವಿ ಹಾಡುತ್ತಿದ್ದರೂ ಅಲಂಕಾರಪ್ರಿಯ ಭಾರತೀಯ ನಾರಿಗೆ ಚಿನ್ನ ತನ್ನ ಪ್ರಿಯಕರನಷ್ಟೇ ಪ್ರಿಯ.

"ನಮ್ ಮದುವ್ಯಾಗ ಮೈಮ್ಯಾಲೆ ಮೂರು ಸೇರು, ಪಂಛೇರು ಬಂಗಾರ ಹಾಕತಿದ್ರು ನೋಡವಾ" ಎಂದು ಆಗ ನಮ್ಮ ಅಜ್ಜಿ ಮುತ್ತಜ್ಜಿ ಹೇಳುತ್ತಿದ್ದರು. ಅಡಿಯಿಂದ ಮುಡಿಯವರೆಗೆ ಆಭರಣಧರಿಸುವ ಆ ದಿನ ಈಗ ದೂರ. ಅಜ್ಜಿಯ ಕಾಲದ ಆಭರಣಗಳ ಸಂಖ್ಯೆ, ಚೊಕ್ಕ ಚಿನ್ನ, ವೈವಿಧ್ಯ, ಅಂದಿನ ಪ್ರೀತಿ ವಿಶ್ವಾಸಗಳೆಲ್ಲ ಈಗ ಮಾಯ.

ದುಬಾರಿ ಚಿನ್ನ, ಹಸಿದ ಕಣ್ಣುಗಳು, ಯಾರನ್ನು ಯಾವಾಗ ಯಾವ ರೀತಿ ದೋಚುತ್ತಾರೋ ಎಂಬ ಭಯ. ಇದ್ದಬಿದ್ದದ್ದು ಒಯ್ದು ಹೊಸ ಆಭರಣ ಮಾಡಿಸಲು ಅಕ್ಕಸಾಲಿಯ ಕೈಗಿತ್ತರೆ ಅಲ್ಲಿಯೂ ಕಲಬೆರಕೆ. (ಯಾರನ್ನು ಬಿಟ್ಟಿದೆ ಈ ಕಲಬೆರಕೆ? ಅಕ್ಕನ ಬಂಗಾರ ಅಕ್ಕಸಾಲಿ ಬಿಡ). ಚಿನ್ನ ಮನೆಯಲ್ಲಿದ್ದರೆ ಕಳ್ಳಕಾಕರ ಭೀತಿ. ಆಕಸ್ಮಾತ್ ದರೋಡೆಯಾಗಿ ಪೋಲೀಸರಿಗೆ ದೂರಿತ್ತರೆ ಹುಚ್ಚು ಮಂಗನಹಾಗೆ ಪರದಾಟ. ಅದಕ್ಕಿಂತ "ಹೋದದ್ದು ಹೋಗಲಿ ಜೀವ ಉಳಿದಿದೆ ಸಾಕು" ಎನ್ನುವ ಸಮಾಧಾನ-ಸಂಕಟ! ಕಾರಣ ಈ ಹೊನ್ನಿನ ಶೂಲದಲ್ಲಿ ಸಿಕ್ಕು ಅಂಜುತ್ತ ಅಳುಕುತ್ತ ಬದುಕುವದು ಬೇಡವಾಗಿದೆ. ಇಂದಿನ ತುಟ್ಟಿಯ ದಿನಗಳಲ್ಲಿ ಆಹಾರ, ಬಟ್ಟೆ ಬರೆ, ಮಕ್ಕಳ ಶಿಕ್ಷಣ, ವೈದ್ಯಕೀಯ ಉಪಚಾರ, ವಿಹಾರ ವಿನೋದಗಳಿಗೆಲ್ಲ ನಮ್ಮ ಆದಾಯವನ್ನು ಬಾಯಿಗೂಡಿಸುವುದೇ ಒಂದು ದೊಡ್ಡ ಹೋರಾಟವಾಗಿದೆ.

**—ಸುನಂದಾ ಚೊಳಚಗುಡ್ಡ, ಧಾರವಾಡ**

## ಹೆಚ್ಚುತ್ತಲೇ ಇದೆ

ಹರಪ್ಪಾ ಸಂಸ್ಕೃತಿಯಷ್ಟು ಹಳೆಯದಾದ ನಮ್ಮ ಆಭರಣ ಮೋಹ ಕಾಲ ಬದಲಾಯಿತೆಂದು ಕಡಿಮೆಯೇನೂ ಆಗಿಲ್ಲ. ಹಾಗೆ ನೋಡಿದರೆ ಯಂತ್ರ ನಿರ್ಮಿತ ನಾಜೂಕಿನ ಒಡವೆಗಳತ್ತಣ ಒಲವು ಈ ಯಂತ್ರ ಯುಗದಲ್ಲಿ ಹೆಚ್ಚುತ್ತಲೇ ಇದೆ. ತನ್ನ ಸೌಂದರ್ಯಕ್ಕೆ ದೀಪೋತ್ಸವವನ್ನು ಯಾರು ಬಯಸುವದಿಲ್ಲ? ನಾಲ್ಕು ಜನರಲ್ಲಿ ಗುರುತಿಸಲ್ಪಡಬೇಕು. ಎನ್ನುವದು ಎಲ್ಲರ ಸಹಜ ಚಪಲ, ಸೌಂದರ್ಯ ಅಭಿಮಾನಿಯಾದ ಹೆಣ್ಣು ಈ ಮಾಧ್ಯಮದಲ್ಲಿ ಆಭರಣಗಳನ್ನು ಬಳಸುವಳು. ಬಡತನವೇನು ಆಭರಣಗಳನ್ನು ಒಲ್ಲೆನೆನ್ನದು. ಬೀಡಿ ಕಟ್ಟುವ, ದಿನಗೂಲಿಯ ಹೆಣ್ಣುಕೂಡ ತನ್ನ ಕಿವಿ, ಮೂಗು ಚುಚ್ಚಿಗೆಗಳನ್ನು ಅಲಂಕರಿಸಿಕೊಳ್ಳುವಲ್ಲಿ ಹೆಚ್ಚು ! ಗಮನ ಕೊಡುವಳು. ದಿನ ನಿತ್ಯ ಬ್ಯಾಂಕ ದರೋಡೆಗಳ ಕುರಿತಾಗಿ ಕೇಳುತ್ತ ಹಣದ ಬೆಲೆ ಕುಸಿಯುತ್ತಿರುವದನ್ನು ನೋಡುತ್ತಿರುವಾಗ ಮಾಡಿಸಿಟ್ಟ ಆಭರಣಗಳೇ ಕಷ್ಟಕಾಲದಲ್ಲಿ ಹೆಚ್ಚಿನ ಬೆಲೆ ಪಡೆಯಬಲ್ಲವೆಂದು ಯೋಚಿಸುವಂತಾಗುತ್ತಿದೆ. ಮಕ್ಕಳನ್ನು ಚಿನ್ನ ಬಂಗಾರಿ ಎಂದು ಆಭರಣಗಳ ದ್ಯೋತಕಗಳನ್ನಾಗಿಸುವುದು ಇರುವ ವಿಷಯವಾಗಿರುವಾಗ ಆಭರಣ ಮೋಹ ಕಡಿಮೆಯಾಗಿದೆ ಎಂದು ಹೇಗೆ ತಾನೆ ಹೇಳಬಹುದು.?

**—ವಸಂತಲಕ್ಷ್ಮಿ ಐರಣಿ, ಧಾರವಾಡ**




"ಸ್ವಲ್ಪ ತಡಿಯಯ್ಯ ಸೋಕ್ತೀನಿ ಈಗ ತಾನೆ ಕೊಟ್ಟುಬಂದ ಕಥೆ ಈ ಬುಟ್ಟಿಯಾಗ, ಇಲ್ಲದಿದ್ರೆ ಖಂಡಿತ ಪ್ರಕಟವಾಗುತ್ತೆ ಅಂತ ಅರ್ಥ...

## ಮಹಿಳೆಗೆ ಆಭರಣಗಳ ಮೋಹ ?

ಆಭರಣಗಳ ಇನ್ನೊಂದು ಹೆಸರೇ ಹೆಣ್ಣು... "ಆಡು ಮುಟ್ಟದ ಗಿಡವಿಲ್ಲ, ಹೆಣ್ಣು ಬಯಸದ ಆಭರಣಗಳಿಲ್ಲ" ಎಂಬ ಕಾಲವೊಂದಿತ್ತು. ಆಭರಣಕ್ಕಾಗಿಯೇ ಗಂಡಂದಿರನ್ನು ಪೀಡಿಸುವದು ಸಾಮಾನ್ಯ ವಿಷಯವಾಗಿತ್ತು. ಆದರೆ ಇಂದು ಮಹಿಳೆ ವಿದ್ಯಾವಂತಳಾಗಿದ್ದಾಳೆ. ವೈಚಾರಿಕ ಪ್ರಜ್ಞೆಯುಳ್ಳವಳಾಗಿದ್ದಾಳೆ. ಹಲವಾರು ಕಾರಣಗಳಿಗಾಗಿ ಹೊರಹೋಗುವ ಯುವತಿ ತನಗೆ ಆಭರಣಗಳಿಂದ ಆಗುವ ಹಾನಿಯನ್ನು ಅರಿತು, ಅದರ ಮೋಹವನ್ನು ತೊರೆದು, ಸರಳ ಮನೋವೃತ್ತಿಯನ್ನು ಬೆಳೆಸಿಕೊಳ್ಳುತ್ತಿರುವದನ್ನು ನೋಡಿದರೆ ಸಮಾಜವಾದಿ ಸಮಾಜವೊಂದರ ಉದಯ ಸದ್ಯದಲ್ಲಿಯೇ ಆಗಲಿದೆ. ಎನಿಸುತ್ತದೆ. ಜೀವನವನ್ನೇ ಸಾಗಿಸುವುದು ತೊಂದರೆಯಾಗಿರುವಾಗ ಅಸಂಘಟಿತವಾಗಿರುವ ಆಶೆಗೆ ಮಾರುಹೋಗದವಳಾಗಿದ್ದಾಳೆ. ಅದು ತನಗೆ ನಿಲುಕಲಾರದ್ದು, ಅಲ್ಲದೆ ಅದನ್ನು ರಕ್ಷಿಸುವಲ್ಲಿ ತಾನು ಅಸಮರ್ಥಳು. ಅದಕ್ಕಾಗಿ ತನ್ನ ಶೀಲ, ಪ್ರಾಣವನ್ನು ಒತ್ತೆಯಾಗಿ ಡಬೇಕಾಗುವದು ಎಂಬುದನ್ನು ಅರ್ಥೈಸಿಕೊಂಡು ಬಾಳುತ್ತಿದ್ದಾಳೆ. ಅಲ್ಲದೆ ಆಪತ್ಕಾಲದಲ್ಲಿ ಬಂಗಾರ ಎಂಬುದರ ಬದಲಾಗಿ ಅದನ್ನೇ ಬ್ಯಾಂಕಿನಲ್ಲಿ ಹಣದ ರೂಪದಲ್ಲಿಟ್ಟರೆ ಬಡ್ಡಿ ಬರುತ್ತದೆ. ಮತ್ತು ಕಳ್ಳರ ಭಯವಿಲ್ಲ. ಸವೆಯುತ್ತವೆ ಎಂಬ ದುಃಖ ಕೂಡಾ ಇಲ್ಲ. ಇದೆಲ್ಲವನ್ನು ಅರಿತ ಜಾಣ ಮಹಿಳೆ ಬಟ್ಟೆಗಳಲ್ಲಿ ತನ್ನ ಆಶೆಯನ್ನು ತೀರಿಸಿಕೊಂಡು ತನ್ನ ಮೂಲಸ್ವಭಾವದಲ್ಲೇ ಬದಲಾವಣೆ ಮಾಡಿಕೊಂಡು ತನ್ನ ಬದುಕನ್ನು ಸುಖದ ಸೋಪಾನವನ್ನಾಗಿಸಿಕೊಂಡಿದ್ದಾಳೆ.

**—ಪದ್ಮಾ ಎಚ್. ಪದವಿ, ಹುಬ್ಬಳ್ಳಿ**

## ಸದಾ ತನ್ನನ್ನು ನೋಡಲಿ

ಮಹಿಳೆಯರಿಗೆ ಆಭರಣ ಮೋಹ ಇದು ನಿಜವಾದ ನಂಬಿಕೆ. ಪುರಾತನ ಕಾಲದಿಂದಲೂ ಅವಳಿಗೆ ಆಭರಣಗಳೆಂದರೆ ಬಲು ಪ್ರೀತಿ. ಅವುಗಳನ್ನು ಅವಳು ಪ್ರಾಣದಂತೆ ಕಾಪಾಡುತ್ತಾಳೆ. ಎಷ್ಟು ಆಭರಣ ಧರಿಸಿದರೂ ಮಹಿಳೆಗೆ ತೃಪ್ತಿಯಿಲ್ಲ. ಎಲ್ಲ ತರಹದ ಆಭರಣಕ್ಕಾಗಿ ಅವಳು ಸದಾ ಹಾತೊರೆಯುವಳು. ಹೊಸ ಮಾದರಿಯ ಆಭರಣಕ್ಕಾಗಿ ಆಕೆಯಲ್ಲಿ ಬಹಳ ಆಸೆ. ಅದಕ್ಕಾಗಿ ಆಕೆ ತನ್ನ ಹಳೆಯ ಆಭರಣಗಳನ್ನೆಲ್ಲ ಮುರಿಸಿ ಹೊಸ ಆಭರಣ ಮಾಡಿಸಿಕೊಳ್ಳುವಳು.

ಪ್ರತಿದಿನ ಆಭರಣ ಧರಿಸಿದರೆ ಅವೆಲ್ಲಿ ಸವೆಯುವವೋ ಎಂಬ ಭಯ ಅವಳಿಗೆ. ಹೀಗಾದರೆ ವಿಶೇಷ ಸಮಾರಂಭಗಳಲ್ಲಿ ತನಗೆಲ್ಲಿ ಆಭರಣಗಳು ಇಲ್ಲವಾಗುವವೋ ಎಂದು ಆಕೆ ದಿನವೂ ಅವುಗಳನ್ನು ಉಪಯೋಗಿಸುವದಿಲ್ಲ.

ಚಿನ್ನದ ಬೆಲೆ ಗಗನಕ್ಕೇರಿದರೂ ಸ್ತ್ರೀಯರಲ್ಲಿ ಆಭರಣಗಳ ಮೋಹ ಕಡಿಮೆಯಾಗಿಲ್ಲ. ಬಂಗಾರದವು ಇಲ್ಲದಿದ್ದರೂ ಸರಿ, ಹಬ್ಬದ ದಿನ ಗಿಲೀಟಿನ ಆಭರಣಗಳನ್ನಿಟ್ಟು ಆಕೆ ತೃಪ್ತಿ ಪಡೆಯುವಳು. ಆರ್ಥಿಕ ಭದ್ರತೆಗಾಗಿ ಆಭರಣ ಎಂಬುದು ಆಕೆಯ ಮತವಲ್ಲ. ಕಷ್ಟ ಬಂದಾಗಲೂ ತನ್ನ ಆಭರಣ ಮಾರಿ ಆ ದುಃಖ ತೊಡೆಯುವ ಸ್ತ್ರೀಯರ ಸಂಖ್ಯೆ ಬಹಳ ವಿರಳ. ಸಾಗರದಷ್ಟು ಕಷ್ಟ ಬಂದರೂ ಆಭರಣ ಬಿಡದವರೇ ಬಹುಜನ. ಆಭರಣ ಸ್ತ್ರೀಗೆ ತನ್ನ ಪ್ರಾಣದಂತೆ. ಇವು ಆಕೆಯ ಸೌಂದರ್ಯವರ್ಧಕ ಸಾಧನಗಳಾಗಿ, ಶ್ರೀಮಂತಿಕೆಯ ಸಂಕೇತವಾಗಿ, ಪ್ರತಿಷ್ಠೆ, ಗೌರವಗಳ ಪ್ರತೀಕವಾಗಿ ಕೆಲಸಮಾಡುತ್ತವೆ. ಎಲ್ಲರೂ ಸದಾಕಾಲವೂ ತನ್ನನ್ನು ನೋಡುವಂತಾಗಲಿ ಎಂಬ ಭಾವನೆಯಿಂದ ಕೂಡ ಸ್ತ್ರೀ ಆಭರಣ ಧರಿಸುತ್ತಾಳೆ.

**—ಶಶಿಕಲಾ ಸ್ವಾಮಿಗೌಡರ, ಗಲಗಲಿ**

## ಸಮಯಕ್ಕಾಗುವ ಆಸ್ತಿ

ಬಂಗಾರದ ಒಡವೆ ಇಟ್ಟು ತೆಗೆದರೆ ಚೆಂದ. ಮಗಳು ತವರಿಗೆ ಬಂದುಹೋಗುವದು ಚೆಂದ. ಇದು ನಮ್ಮ ಕಾಲದ ಗಾದೆ ಮಾತು. ಈಗ ಕಾಲ ಬದಲಾಗಿದೆ. ಕಷ್ಟಪಟ್ಟು ಗಳಿಸಿದ ಬಂಗಾರ ಸವೆದು ಹೋಗಬಾರದು ಎಂದೂ ಸಹ ಗಾದೆ ಮಾತು ಹೇಳುತ್ತದೆ.

ಆದರೂ ನನ್ನ ಪ್ರಕಾರದ ಬಂಗಾರ ಆಪತ್ಕಾಲದ ಬಾಂಧವ. ಇದು ಸಮಯಕ್ಕೆ ಒದಗುವ ಆಸ್ತಿ. ಇದು ಎಂದೂ ಬೆಲೆ ಕಳೆದುಕೊಳ್ಳದ ಬಾಳನ್ನು ಬೆಳಗುವ ಆಸ್ತಿ.

**—ಸರೋಜಮ್ಮ ಮಧ್ವರಾಜ, ದಾಂಡೇಲಿ**

## ಹಿತಮಿತವಾಗಿರು

ಮಹಿಳೆಯರಿಗೆ ಆಭರಣಗಳ ಮೋಹ ಹೆಚ್ಚುತ್ತಲೇ ಹೋಗುತ್ತದೆಯೇ ಹೊರತು ಕಡಿಮೆಯಾಗುವದಿಲ್ಲ. ಕಾರಣ ಈಗಿನ ಫ್ಯಾಷನ್ ಯುಗದಲ್ಲಿ ಹೊಸ ನಮೂನೆಯ ಆಭರಣಗಳನ್ನು ನೋಡಿ ಮಹಿಳೆಯರಿಗೆ ಅದೇ ತರಹದ್ದು ತಮ್ಮಲ್ಲಿಯೂ ಇರಬೇಕೆಂಬ ಆಸೆ. ಕೆಲವರಿಗೆ ಆಭರಣ ಧರಿಸುವದರಲ್ಲಿ ಆಸಕ್ತಿ ಇಲ್ಲದಿದ್ದರೂ ಸಮಾರಂಭಗಳಲ್ಲಿ ಹಾಕಿಕೊಳ್ಳಲೇ ಬೇಕಾದದ್ದು ಅನಿವಾರ್ಯವಾಗುತ್ತದೆ.

ಏಕೆಂದರೆ ಒಂದು-ಯಾವುದಾದರೂ ಸಮಾರಂಭಕ್ಕೆ ಸರಳವಾಗಿ ಹೋದರೆ "ಜನ ಅವ್ವಲ್ಲಿ ಏನಿದೆ? ಒಂದು ಒಡವೇನಾ? ವಸ್ತ್ರನಾ ಬರೀ ಜಂಬಾ" ಅಂತಾ ಆಡಿಕೊಳ್ತಾರೆ ಅನ್ನೋದಕ್ಕಾಗಿ.

ಎರಡನೆಯದಾಗಿ, ಮನೆಯಲ್ಲಿ ಹಿರಿಯರು ವಿಶೇಷವಾಗಿ ಹೆಂಗಸರು, ನಾವು ಯಾವುದೇ ಕಾರ್ಯಗಳಿಗೆ ಸರಳವಾಗಿ ಹೊರಟರೆ, ಅದೇನು ಏನೂ ಇಲ್ಲದೋರ ಹಾಗೇ ಹೋಗ್ತಿ. ಅಲ್ಲಿ, ದೊಡ್ಡ ದೊಡ್ಡ (ಶ್ರೀಮಂತ) ಜನ ಬಂದಿರ್ತಾರೆ ನೀನೂ ಪಾಟ್ಲಿ ಬಳೆ ಆ ಮೂರು ಎಳೆ ಸರಾ, ಆ ನಿನ್ನ ಮದುವೆ ಜರೀ ರೇಷ್ಮೆ ಸೀರೆ ಉಟ್ಕೊಂಡು ಲಕ್ಷಣವಾಗಿ ಹೋಗು" ಅನ್ನೊ ಒತ್ತಾಯ. ಹೀಗೆ ಹಲವಾರು ಕಾರಣಗಳು.

ನಮಗೆ ಬಂಗಾರ ನಮ್ಮ ಕಷ್ಟ ಕಾಲಕ್ಕೆ ಆಗುತ್ತೆ ಅನ್ನೊ ಕಾರಣಕ್ಕೆ ಅದು ಎಷ್ಟೇ ಇದ್ದರೂ ಕೆಟ್ಟದ್ದಲ್ಲ. ಆದರೆ ಬಹಳ ಆಭರಣ ಧರಿಸುವದು ಅಪಾಯ. ಆಭರಣ ಧರಿಸಬೇಕು. ಆದರೆ ಅದು ಮಿತವಾಗಿರಬೇಕು. ಆಗಲೆ ನಮಗೆ ಎಲ್ಲಾ ದೃಷ್ಟಿಯಿಂದಲೂ ಹಿತ.

ಕೊರಳಲ್ಲಿ ಒಂದು ಸರ (೩ ತೊಲೆ) ಬಲಗೈಲಿ ೨ ಬಳೆ (೨ ತೊಲೆ) ಎಡಗೈಲಿ ವಾಚು, ಕಿವಿಯಲ್ಲಿ ಒಂದು ಜೊತೆ ರಿಂಗು ಇಷ್ಟವಿದ್ದರೆ ಒಂದು ಬೆರಳಿನಲ್ಲಿ ಉಂಗುರ ಇಷ್ಟು ಸಾಕಲ್ಲವೇ? ಹೇಳಿ.

**—ಶ್ರೀಮತಿ ಉಷಾ ಕಿರಣ**
**ಸಂಪಗಾಂವ್**

## ಆಭರಣಗಳ ಬಂಧನ, ಜೀವಕ್ಕೆ ಕುತ್ತು

ರಂಗುರಂಗಿನ ವಿಭಿನ್ನ ಮಾದರಿಯ ಬೆಲೆ ಬಾಳುವ ವೇಷಭೂಷಣಗಳನ್ನು ಧರಿಸಿ, ವಿವಿಧ ಕ್ಷೇತ್ರಗಳಲ್ಲಿ ಉನ್ನತ ಹುದ್ದೆಗಳನ್ನು ಅಲಂಕರಿಸಿ ತಾನು ಯಾವುದರಲ್ಲೂ ಕಡಿಮೆ ಅಲ್ಲ ಎಂದು ತೋರಿಸಿರುವ ಮಹಿಳೆ, ಚಕಚಕ ಹೊಳೆಯುವ ಕೃತಕ ಆಭರಣ ಧರಿಸಿ ಫಕಫಕನೆ ಹೊಳೆಯುವ ಇಂದಿನ ಆಧುನಿಕ ಮಹಿಳೆ ಬಂಗಾರದ ಆಭರಣದ ವ್ಯಾಮೋಹಕ್ಕೆ ಒಳಗಾದಾಳೇ ? ಎಂದಿಗೂ ಸಾಧ್ಯವಿಲ್ಲ.

ಕಳ್ಳತನ ದರೋಡೆ ಲೂಟಿ-ಇಂತಹವುಗಳನ್ನು ಪ್ರತಿದಿನ ಪತ್ರಿಕೆಗಳಲ್ಲಿ ಓದುವ ಇಂದಿನ ಮಹಿಳೆ ಆಭರಣ ಧರಿಸಿ ಓಡಾಡುವ ದುಃಸ್ಸಾಹಸ ಮಾಡಿಯಾಳೇ ? ಆಭರಣ ಇದ್ದರೂ ಅವುಗಳನ್ನು ಬ್ಯಾಂಕಿನ ಲಾಕರಿನಲ್ಲಿಟ್ಟು ಆಭರಣ ಸುಖ ಕಾಣುತ್ತಾಳೆ ಇಂದಿನ ಮಹಿಳೆ. ಜನಜೀವನದ ಇಂದಿನ ನೀತಿ ಹೇಳುವದಾದರೆ, ಸ್ವತಂತ್ರ ಹಕ್ಕಿಯಾಗಿ ಭಯ ಬಂಧನಗಳಿಲ್ಲದೇ ಹಾರಲು ಮಹಿಳೆ ಬಯಸುತ್ತಿರುವಾಗ ಆಭರಣಗಳ ಬಂಧನ ಜೀವಕ್ಕೆ ಕುತ್ತಿರುವಂತೆ. ●

**—ಆಶಾರಾಣಿ ಚನಗುಂಡಿ, ಹುಬ್ಬಳ್ಳಿ**









ಕಂಠಾಭರಣಗಳು

# ನೆನೆವುದೆಮ್ಮ ಮನಂ ಆಭರಣಗಳಂ

ಮದುವೆಯಂತಹ ಸಮಾರಂಭಗಳಲ್ಲಿ ಕೇಳುವ ದೇನೆಂದರೆ "ಏನ್ರಿ ವರನ ಕಡೆಯವರು ಕನ್ಯಾಕ ಏನು ಹಾಕಿದರು". ಬೋರ್ಮಳ, ಚಪಲಹಾರ, ಪಾಟ್ಲಿನೋ, ಹೀಗೆ ಯಾವದಾದರೊಂದು ಆಭರಣ ಕನ್ಯಾ ಮೈಮೇಲೆ ಹಾಕುವದು ರೂಢಿಯಾಗಿದೆ. ನನ್ನಂತೆ ಎಲ್ಲ ಮಹಿಳೆಯರಿಗೂ ಸರ್ವಸಾಮಾನ್ಯ ವಾಗಿ ಆಭರಣಗಳ ಮೋಹ ಇರುವದೆಂದು ನನ್ನ ಖಚಿತ ವಾದ ನಂಬಿಕೆ. ಕೆಲವರು ಆಭರಣ ಮಾಡಿ ಸಲು ತಾಕತ್ತಿಲ್ಲದಿದ್ದರೂ ಗಿಲೀಟಿನ ಆಭರಣ ಹಾಕಿ ಕೊಂಡಾದರೂ ತೃಪ್ತಿ ಪಡೆಯುವರು.

ಒಂದು ಸಲ ನಮ್ಮ ಮನೆಯ ಎದುರಿನ ಕಲಾ ಬಾಯಿಯವರು ೫ ತೊಲಿಚಪಲಹಾರ' ಮಾಡಿಸಿ ದ್ದರು. ಅದನ್ನು ಹಾಕಿಕೊಂಡು ಎಲ್ಲರ ಮುಂದೆ ಬೀಗುತ್ತಿದ್ದರು. ಹಾಕಿಕೊಂಡು ಗಂಡ ಹೆಂಡತಿ ಕೂಡಿ ಬಜಾರಕ್ಕೆ ಹೋಗಿ ಸಾಮಾನು ತಗೊಂಡು ಮನೆಗೆ ಬರುವಾಗ ಬಸ್ಸಿನಲ್ಲಿ ಹತ್ತಿದರು. ಹತ್ತುವಾಗ ಬಸ್ಸಿನಲ್ಲಿ ಆ ಹಾರವೇ ಮಾಯ. ಆಗ ಇಡೀ ಬಸ್ಸನ್ನೆ ಪೋಲೀಸ ಸ್ಟೇಶ ನ್ನಿಗೆ ಒಯ್ದು ತಪಾಸಿಸಿದರೆ ಯಾರ ಹತ್ತಿರವೂ ಸಿಗಲಿಲ್ಲವಂತೆ. ಆದರೆ ಮೊದಲು ನಾನು ನಮ್ಮ ಮನೆಯವರಿಗೆ ನನಗೂ ಚಪಲಹಾರ ಮಾಡಸ್ರಿ ಎಂದು ದುಂಬಾಲು ಬಿದ್ದಿದ್ದೆ. ನಮ್ಮ ಕಲಾಬಾಯಿ ಯವರ ಸುದ್ದಿ ಕೇಳಿದ ಮೇಲಂತೂ ನನ್ನನ್ನೆ ಬಯ್ದಿದ್ದರು.

ಆದರೂ ಇಂದಿನ ಸ್ತ್ರೀಯರು ಹೇಳುತ್ತಿರುವದು ಇಷ್ಟೇ

"ಆರಂಕುಶವಿಟ್ಟೊಡಂ ನೆನವುದೆಮ್ಮ ಮನಂ ಆಭರಣಗಳಂ"

**—ಶಾಂತಾ ಜೋಶಿ, ಬಿಜಾಪುರ**

# ತನಗೆಟುಕದ ದ್ರಾಕ್ಷಿ

ಭಾರತೀಯ ಮಹಿಳೆ ಹಾಗೂ ಆಭರಣ ಇವೆರಡೂ ಒಂದೇ ನಾಣ್ಯದ ಎರಡು ಮುಖ ಗಳಂತಿವೆ. ನೀವು ಎಷ್ಟೇ ಪುರಾತನ ಕಾಲವನ್ನಾ ದರೂ ನೋಡಿ, ಅಲ್ಲಿಯ ಕಲೆ, ಶಿಲೆ, ಕಲಾಚಿತ್ರ, ಸಾಹಿತ್ಯ ಪುರಾಣಗಳಲ್ಲಿ ಹೆಣ್ಣನ್ನು ಆಭರಣಗ ಳೊಂದಿಗೇ ಚಿತ್ರಿಸಲಾಗಿದ್ದು ಕಂಡುಬರುತ್ತದೆ. ಅಂದ ಮೇಲೆ ಹೆಣ್ಣಿಗೆ ಈ ವ್ಯಾಮೋಹ ಹುಟ್ಟು ಮೋಹ ಎನ್ನಬಹುದು.

ಆದರೆ ಈಗ ಕಾಲ ಬದಲಿಸಿದಂತೆ ಹೆಣ್ಣಿನ ಆಗು ಹೋಗುಗಳು ಕೂಡ ಬದಲಿಸಿವೆ. ಸೌಭಾಗ್ಯದ ಲಕ್ಷಣ ಎಂದುಸ್ತ್ರೀ ಆಗ ಯಾವಾಗಲೂ ಇಡು ತ್ತಿದ್ದ ಆಭರಣಗಳು ಇಂದು ಕಾಣಲೂ ಸಿಗುವದು ಅಪ ರೂಪ.ಇದಕ್ಕೆ ಕಾರಣ ಮೊದಲಿನ ಕಾಲದಲ್ಲಿ ಇರದ ಹಲವಾರು ಸಮಸ್ಯೆಗಳು ಈಗ ಉದ್ಭವಿ ಸಿರುವದರಿಂದ ಕಾಲಕ್ಕೆ ತಕ್ಕಂತೆ ತನ್ನ ಅಭಿರುಚಿ ಯನ್ನು ಹೊಂದಿಸಿಕೊಳ್ಳುತ್ತಿದ್ದಾಳೆ ಸ್ತ್ರೀ. ದೃಷ್ಟಿ ಕೋನ ಬದಲಾದರೂ ನನ್ನ ಪ್ರಕಾರ ನಾವು ಏನೇ ವಿಚಾರಿಸಿದರೂ ಮಹಿಳೆ ಎಂಬುವಳಿಗೆ ಆಭರಣ ಗಳು ಯಾವ ಕಾಲಕ್ಕಾದರೂ ಬೇಕೆ ಬೇಕು. ಕಾಲ ಸೃಷ್ಟಿಸಿರುವ ಕೊರತೆ ಸಮಸ್ಯೆಗಳಿಂದಲೇ ಈಗ ಅವು ಬೇಡವಾಗುತ್ತಿವೆ ಅಷ್ಟೆ. 'ತನಗೆಟುಕದ ದ್ರಾಕ್ಷಿ ಹುಳಿಯಲ್ಲವೇ? ಎಂಬಂತೆ ನರಿಯ ಪಾಡಿ ನಂತಾಗಿದೆ ಇಂದಿನ ಸ್ತ್ರೀಯರ ನೀತಿ.

**—ಮಂಗಲಾ ಸಾಲೀಮಠ, ಮುಧೋಳ**

# ಕಡಿಮೆಯಾಗಲು ಎಂದಿಗೂ ಸಾಧ್ಯವೇ ಇಲ್ಲ

ಮಹಿಳೆ ಶೃಂಗಾರ ಪ್ರಿಯಳು. ಎಲ್ಲಿಗೆ ಹೋದರೂ ಅವಳು ಮಾಡುವ ಯೋಚನೆ ಎಂದರೆ ಯಾವ ತರಹದ ಡ್ರೆಸ್ ಮಾಡಬೇಕು. ಅದಕ್ಕೆ ತಕ್ಕಂತೆ ಯಾವ ತರಹದ ಆಭರಣಗಳನ್ನು ಹಾಕಿಕೊಳ್ಳಬೇಕು ಎಂದು. ಇಂದಿನ ಮ್ಯಾಚಿಂ ಗ್‌ನ ಯುಗದಲ್ಲಿ ಮ್ಯಾಚಿಂಗ್ ಮಾಡಲು ಕೆಲ ಪೂಮ್ಮೆ ಗಿಲೀಟಿನ ಆಭರಣಗಳಿಗೆ ಮೊರೆ ಹೋಗುತ್ತಾಳೆ ಸ್ತ್ರೀ ಯಾವ ತರಹದ ಸೀರೆ ಉಡುತ್ತಾಳೋ, ಅದೇ ತರಹದ ರವಿಕೆ, ಕುಂಕುಮ, ಲಿಪ್‌ಸ್ಟಿಕ್, ನೇಲ್‌ಪಾಲಿಶ್, ಅದೇ ಬಣ್ಣದ ಆಭರಣ– ಹೀಗೆ ಇಂದಿನ ಫ್ಯಾಶನ್ ಯುಗದ ಮಾಟ ನಡೆದಿದೆ.



ಲೇಟೆಸ್ಟ್ ಫ್ಯಾಶನ್ ಅಂದರೆ ಸಿಂಪಲಸ್ಸಿಗಿ ಕಾಣುವಂತೆ ಆಭರಣ ಧರಿಸುವದು. ಹಳೆಯ ಕಾಲದವರಂತೆ ಹೊರೆ ಆಭರಣ ಅಲ್ಲ. ಮಹಿಳೆ ಯರಲ್ಲಿ ಆಭರಣ ಮೋಹ ಕಡಿಮೆಯಾಗಿದೆ ಎಂದೇನು ಇದರರ್ಥ ಅಲ್ಲ. ಮೋಹ ಇದ್ದೇ ಇದೆ. ಆದರೆ ಮಟ್ಟ ಮಾತ್ರ ತುಸು ಕಡಿಮೆ ಆಗಿದೆ ಅಷ್ಟೆ.

ಇಂದು ಕಳ್ಳರು ಕೊರಳಲ್ಲಿನ ಮಂಗಳಸೂತ್ರ ಕೂಡಾ ಬಿಡುತ್ತಿಲ್ಲ. ಅಂದ ಮೇಲೆ ಭಯ ಮೂಡುವದು ಸಹಜತಾನೆ? ಇದರಿಂದ ಮಹಿಳೆ ಆಭರಣ ಧರಿಸುವದು ಸ್ವಲ್ಪ ಕಡಿಮೆಯಾಗಿ ದೆಯೇ ಹೊರತು, ಮೋಹ ಮಾತ್ರ ಎಂದೂ ಮಾಯವಾಗಲು ಸಾಧ್ಯವೇ ಇಲ್ಲ.

**ಡಾ॥ ಶಾಂತಾ ಅರಳಿಮರದ**
**ಧಾರವಾಡ**

# ಬಡವರ ಆಪದ್ಧನ

ಆಭರಣಗಳ ಮೋಹವೆಂಬುದು ಶ್ರೀಮಂತ ಮಹಿಳೆಯರಿಗೆ ಮಾತ್ರ ಹೆಚ್ಚು ಅನ್ವಯವಾಗುವ ಅಂಶ. ಬಡ ಹಾಗೂ ಮಧ್ಯಮ ವರ್ಗದ ಕುಟುಂಬದವರಿಗೆ ಬಂಗಾರವೆಂಬುದು ಆಪತ್ತಿಗೆ ಸಹಾಯವಾಗುವ ವಸ್ತು. ಬಳಿಯಲ್ಲಿ ಎಷ್ಟೇ ಹಣವಿದ್ದರೂ ಖರ್ಚಾಗುತ್ತದೆ, ಹತ್ತಿರ ಹಣ ವಿದ್ದಾಗ ಗುಂಜಿಯೋ ಎರಡು ಗುಂಜಿಯೋ ಬಂಗಾರ ತೆಗೆದುಕೊಂಡಿಟ್ಟರೆ ಮುಂದೆ ದೊಡ್ಡ ಮೊತ್ತದ್ದಾಗುತ್ತದೆ. ಸಂಸಾರದಲ್ಲಿ ಏರಿಳಿತ ಗಳುಂಟಾದಾಗ ಕಂಡವರ ಮನೆ ಬಾಗಿಲಿಗೆ ಹೋಗುವುದಕ್ಕಿಂತ ಅದನ್ನೇ ಖರ್ಚುಮಾಡ ಬಹುದು. ಮಕ್ಕಳ ಮದುವೆ ಕಾಲಕ್ಕೆ ಒಮ್ಮೆಲೇ ತೆಗೆದುಕೊಳ್ಳುವುದಾಗುವುದಿಲ್ಲವೆಂದು ಜಾಣ ರಾದ ತಂದೆತಾಯಿಗಳು ಅಷ್ಟಿಷ್ಟು ತೆಗೆದು ಕೊಳ್ಳುತ್ತಾರೆ. ಅದರಿಂದ ಪರದಾಡುವುದು ತಪ್ಪುತ್ತದೆ. ಈಗ ಮದುವೆಯಲ್ಲಿ ತಮ್ಮ ಮಕ್ಕಳಿಗೆ ಬಂಗಾರವನ್ನಿಟ್ಟು ಕೊಡುವವರೇ ಹೆಚ್ಚು. ಕಾರಣ ಅದು ಮಗಳ ಆಸ್ತಿ. ತನಗೆ ಅಥವಾ ಕುಟುಂಬಕ್ಕೆ ತೊಂದರೆ ಬಂದಾಗ ಇರ ಲೆಂಬುದೇ ಇವರ ಹಿಂದಿರುವ ಉದ್ದೇಶ. ಈಗಂತೂ ಶೋಕಿಗಾಗಿ ಹಾಕುವಂಥ ದಿನಗಳು ಇಲ್ಲ. ಅದಂತೂ ಪ್ರಾಣಕ್ಕೇ ಹಾನಿ. ಮುಂಬೈ ಕಲ್ಕತ್ತಾ, ದಿಲ್ಲಿಗಳಂತಹ ನಗರಗಳಲ್ಲಿಯಂತೂ ಮೈತುಂಬಾ ಆಭರಣ ಹಾಕಿಕೊಂಡು ಹೋದ ಮಹಿಳೆಯರು ತಿರುಗಿ ಬಂದಾರೆಂಬ ನಂಬಿಕೆಯೇ ಇಲ್ಲ. ಹೀಗಾಗಿ ಆಭರಣಗಳು ಇಂದು ಮೋಹದ ವಸ್ತುಗಳಲ್ಲ; ಮನುಷ್ಯನನ್ನು ಆಪತ್ತಿನಿಂದ ಪಾರುಮಾಡುವ ಮಾಧ್ಯಮಗಳೆಂದು ಪರಿ ಗಣಿಸಬಹುದು.

**ಸರೋಜಾ ಇಟ್ಟಣ್ಣವರ**
**ಬೀಳಗಿ**

# ನಾವೇ ಮಾಡಿಕೊಂಡಿದ್ದು

ಸ್ತ್ರೀ ಯರಲ್ಲಿಆಭರಣಗಳ ವ್ಯಾಮೋಹ ಬಂಗಾರದ ಮೋಹ ಎಂಬ ಮಾತು— ಸುವ್ಯವಸ್ಥಿತ ಸಮಾಜಪದ್ಧತಿ ಹಾಗೂ ಸಾಂಪ್ರದಾಯಕ ಕಟ್ಟು ಪಾಡುಗಳಿಂದ ಬೆಳೆದು ಬಂದಿರುವ ಸಂಗತಿ ಎಂದು ನನ್ನ ಅನಿಸಿಕೆ.

ಹುಟ್ಟುವಾಗ ಯಾರೂ ಯಾವ ಆಸೆಗಳೊಂದಿಗೆ ಹುಟ್ಟುವುದಿಲ್ಲ. ಮಗು ಈ ವಿಶ್ವಕ್ಕೆ ಕಾಲಿರಿಸುವದು ಮುಗ್ಧಜೀವಿಯಾಗಿಯೇ. ಈ ಮೋಹ ವ್ಯಾಮೋಹಗಳು ಹುಟ್ಟಿಕೊಳ್ಳುವುದು ಸಮಾಜಜೀವಿ ಆದ ಮೇಲೆಯೇ.

ಹೆಣ್ಣುಮಗು ಹುಟ್ಟಿದ ಎಂದಾಕ್ಷಣ ಯಾಕೆ ಎಲ್ಲರೂ ಬಳೆ, ಸರ, ಗೊಂಬೆ ತರುವುದು? ಗಂಡು ಮಗು ಎಂದಾಕ್ಷಣ ಬರವವು ಕಾರು, ವಿಮಾನ ಆಟಿಕೆಗಳು, ಹೀಗೆ ಎಳೆಯ ಮನಸ್ಸಿದ್ದಾಗಲೇ ನಾವು ಈ ರೀತಿಯಾಗಿ ವಿಚಾರಗಳನ್ನು ಮಗುವಿನಲ್ಲಿ ರೂಢಿಸುತ್ತೇವೆ. ಬೇಕಿದ್ದರೆ ಹೆಣ್ಣುಮಗುವಿಗೆ ಕಾರು ವಿಮಾನಗಳನ್ನಿತ್ತು ಗಂಡುಮಗು ಪಡೆಯುವ ಟ್ರೀಟಮೆಂಟ್ ಕೊಡಿ. ಗಂಡುಮಗುವಿಗೆ ಯಾವಾಗಲೂ ತರತರಹದ ಆಭರಣಗಳನ್ನಿಟ್ಟು ಆ ಮಗುವಿನ ಗಮನವನ್ನು ಯಾವಾಗಲೂ ಆಭರಣ, ಅಲಂಕಾರ ಇಂತಹವುಗಳಲ್ಲೇ ಕೇಂದ್ರೀಕರಿಸಿ. ಆಗ ಆ ಮಗುವಿನಲ್ಲಿ ಆಭರಣ ವ್ಯಾಮೋಹ ಕಾಣುವುದು ಸಹಜವೇ. ಒಂದು ಮದುವೆ ಕಾಲದಲ್ಲಿ ಹೆಣ್ಣು ಗಂಡಿಗೆ ಮಂಗಳಸೂತ್ರ ಕಟ್ಟುವ ರೂಢಿ ಇದ್ದಿದ್ದರೆ ಈ ಅಪವಾದ ಹೆಣ್ಣಿಗೆ ತಪ್ಪುತ್ತಿತ್ತೇನೊ.

ನಮ್ಮ ಸಾಮಾಜಿಕ, ಧಾರ್ಮಿಕ, ಪದ್ಧತಿಗಳು ಪುರುಷರು ಆಭರಣ ಧರಿಸುವ ಪದ್ಧತಿಯನ್ನು ರೂಢಿಸಿದ್ದರೆ "ಆಭರಣದ ವ್ಯಾಮೋಹ"ದ ಪಟ್ಟ ಅವರಿಗೇ ಹೋಗುತ್ತಿತ್ತೇನೊ, ಆಗ ಪುರುಷರೆಲ್ಲ ಕಿವಿಯಲ್ಲಿ ಝುಮುಕಿ, ಕೊರಳಲ್ಲಿ ಚಪಲಾಹಾರ. ಅವಲಕ್ಕಿ ಸರ, ಚೈನು, ಧರಿಸಿ, ಕಾಲುಗಳಲ್ಲಿ ಗೆಜ್ಜೆ ಕಾಲುಂಗರ ಹಾಕಿಕೊಂಡು ಕೈತುಂಬ ಬಳೆ ಧರಿಸಿಕೊಂಡು ಹೋಗುತ್ತಿದ್ದರೇನು ?

—ಸೌ. ಮಾಧುರಿ ಯು. ದೀಕ್ಷಿತ, ಹಾವೇರಿ

# ಕಾರಹುಣ್ಣಿಮೆ ಎತ್ತು

ಮಹಿಳೆಯರಿಗೆ ಆಭರಣಗಳ ಮೋಹ ಹೆಚ್ಚು ಎನ್ನುವದು ಸರ್ವ ಸಾಮಾನ್ಯ ನಂಬಿಕೆ. ಆದರೆ ಹಲವು ಮಹಿಳೆಯರ ಹವ್ಯಾಸಗಳು ವಿಭಿನ್ನವಾಗಿರುತ್ತವೆ. ಒಬ್ಬ ಮಹಿಳೆಗೆ ಎಷ್ಟು ಬಂಗಾರ (ಒಡವೆ) ಹಾಕಿಕೊಂಡರೂ ಸಾಕೆನಿಸುವದಿಲ್ಲ. ಯಾವಾಗಲೂ ಕಾರಹುಣ್ಣಿಮೆ ಎತ್ತಿನಂತೆ ಹೇರಿಕೊಂಡಿರುತ್ತಾರೆ. ಇನ್ನು ಕೆಲವರು ಬಿಟ್ಟಿಸ್ತ್ರೀ ಗೌರಮ್ಮನಂತೆ ಇರುತ್ತಾರೆ.(ಒಡವೆ ಹಾಕುವ ಆಸೆ ಇರುವದಿಲ್ಲ) ಉಳಿದವರು ಸಿಂಪಲ್ಲಾಗಿ ಮಿತಮಿತವಾಗಿ ಆಭರಣ ಧರಿಸುತ್ತಾರೆ.




...ಸಾರ್- ಬಿಸಿ ಬಿಸಿ ಸುದ್ದಿ...



ಕೆಲ ಮಹಿಳೆಯರಿಗೆ ತಮ್ಮ ಶ್ರೀಮಂತಿಕೆ ಪ್ರದರ್ಶಿಸುವ ಹುಚ್ಚು ವ್ಯಾಮೋಹ ಇರುತ್ತದೆ. ಅದಕ್ಕಾಗಿ ಸಭೆ ಸಮಾರಂಭಕ್ಕೆ ಹೋದಾಗ ಒಂದೇ ತರಹದ ಆಭರಣ ಹಾಕಿದರೆ ಬೇಜಾರಾಗುವದಲ್ಲದೇ "ಇವಳ ಹತ್ತಿರ ಇಷ್ಟೇ ಆಭರಣವಿದೆಯೆಂದು" ಜನ ತಿಳಿಯುತ್ತಾರೆಂದು ರೋಲ್ಡಗೋಲ್ಡ ಆಭರಣಕ್ಕೆ ಮಾರುಹೋಗುತ್ತಾರೆ. ಮತ್ತೊಂದು ಮ್ಯಾಚಿಂಗ್ ಗಾಗಿ ಸಹ ನಾನಾ ತರಹ ಆಭರಣ ಇಷ್ಟ ಪಡುತ್ತಾರೆ.

—ಮಧು ಪಾಂಡೆ, ಮಾನವಿ

# ಆಪತ್ತಿಗೊದಗಿದ ಆಪ್ತ

ಬಂಗಾರವನ್ನು ಧರಿಸಿಕೊಂಡೇ ಇರುವ ಬಗ್ಗೆ ನನಗೆ ಆಸಕ್ತಿಯಿಲ್ಲ. ಮೈಮೇಲೆ ಬಂಗಾರ ಇದ್ದರೇ ಒಂದು ತರಹ ಕಿರಿಕಿರಿಯಾಗುತ್ತದೆ. ಆದರೆ 'ಬಂಗಾರ ಬೇಕು' ಎಂಬುದು ನನ್ನ ಖಚಿತ ಅಭಿಪ್ರಾಯ. ಬಂಗಾರದ ಮೇಲಣ ಮೋಹದಿಂದಲ್ಲ. ಅದು ಅಗತ್ಯ ಎಂಬುದಕ್ಕಾಗಿ.

ಎರಡು ವರ್ಷಗಳ ಹಿಂದಿನ ಘಟನೆ. ಇನ್ನೂ ಮೂವತ್ತು ವಸಂತಗಳನ್ನು ಕಾಣದ ನಮ್ಮವರು ತೀವ್ರತರ ಕಾಯಿಲೆಗೆ ತುತ್ತಾಗಿ ಹಾಸಿಗೆ ಹಿಡಿದರು. "ಘಟಪ್ರಭಾ ಆರೋಗ್ಯಧಾಮದಲ್ಲಿ ಉತ್ತಮ ಚಿಕಿತ್ಸೆ ದೊರೆಯುತ್ತದೆ. ಅಲ್ಲಿಗೆ ಕರೆದುಕೊಂಡು ಹೋಗುವದು ಒಳ್ಳೆಯದು" ಎಂದು ನಮ್ಮ ಕುಟುಂಬ ವೈದ್ಯರು ಸಲಹೆ ಮಾಡಿದರು. ಆದರೆ ಕೈಯಲ್ಲಿ ಕಾಸಿಲ್ಲ ಮೈಯಲ್ಲಿ ಮಾಂಸವಿಲ್ಲ ಎನ್ನುವ ಸ್ಥಿತಿ ನಮ್ಮದಾಗಿತ್ತು. ಚಿಕ್ಕ ಅಂಗಡಿಯಿಟ್ಟುಕೊಂಡ ನಮಗೆ ಹಲವರಿಂದ ಅಲ್ಪ ಸ್ವಲ್ಪ ಬಾಕಿ ಹಣ ಬರಬೇಕಾಗಿತ್ತು. ನಮ್ಮವರು ಕಾಯಿಲೆ ಬಿದ್ದೊಡನೆ ವ್ಯವಹಾರ ನಿಂತುದರಿಂದ ಪರಿಪರಿಯಲ್ಲಿ ಕೇಳಿಕೊಂಡರೂ ಸಕಾಲಕ್ಕೆ ಬಾಕಿ ಹಣಬರಲಿಲ್ಲ. ಕೊನೆಗೆ ನನ್ನ ಬಂಗಾರದ ಮಂಗಲಸೂತ್ರವನ್ನೇ ಬ್ಯಾಂಕಿನಲ್ಲಿ ಅಡವಿಟ್ಟು ಹಣ ಕೂಡಿಸಿಕೊಂಡು ಘಟಪ್ರಭಾದಲ್ಲಿ ಚಿಕಿತ್ಸೆ ಮಾಡಿಸಿದೆವು. ಈಗ ಸಂಪೂರ್ಣ ಗುಣಹೊಂದಿದ್ದಾರೆ. ಸಕಾಲದಲ್ಲಿ ಚಿಕಿತ್ಸೆಯಾಗದಿದ್ದರೆ ಅವರು ಬದುಕುವ ಸಾಧ್ಯತೆಯಿರಲಿಲ್ಲ. ಭಾರತೀಯ ನಾರಿಗೆ ಅಮೂಲ್ಯ ಸಂಪತ್ತಾದ ಕುಂಕುಮ ಭಾಗ್ಯವನ್ನು ಉಳಿಸಿಕೊಳ್ಳಲು ಬಂಗಾರವೇ ಆಪತ್ತಿಗಾಯಿತು. ಆದುದರಿಂದ ಬಂಗಾರ ಬೇಡ ಎಂದು ಹೇಗೆ ಹೇಳಲಿ? ಅಲ್ಲದೇ ಬಹುತೇಕ ಜನರಿಗೆ ಒಂದಿಲ್ಲೊಂದು ರೀತಿಯಿಂದ ಈ ಅನುಭವ ಆಗಿಯೇ ಇದೆ ಎಂಬುದರಲ್ಲಿ ಸಂದೇಹವಿಲ್ಲ.

—ಜಿ. ಸುಶೀಲಾ, ವಜ್ರಳ್ಳಿ

# ಹಿಂದೆಯೂ ಇತ್ತು ಈಗಲೂ ಇದೆ

ಸುಂದರವಾದ ವಸ್ತುವನ್ನು ಅಲಂಕಾರ ಮಾಡಿದಾಗ ಇನ್ನೂ ಹೆಚ್ಚು ಸುಂದರವಾಗಿ ಕಾಣುವುದಿಲ್ಲವೆ! ಅಂತೆಯೇ ಸುಂದರ ರೂಪವನ್ನು ಹೊತ್ತ ಮಹಿಳೆ ತನ್ನ ಸೌಂದರ್ಯವನ್ನು ಆಭರಣಗಳಿಂದ ಹೆಚ್ಚಿಸಿಕೊಳ್ಳುವುದೂ ಶತಶತಮಾನಗಳಿಂದ ನಡೆದು ಬಂದ ರೂಢಿಯಷ್ಟೆ! ಸೌಂದರ್ಯಾರಾಧಕ ಪುರುಷನ ಒಲವನ್ನು ಪಡೆಯಲೂ ಸ್ತ್ರೀ ಆಭರಣಗಳನ್ನು ಇಷ್ಟ ಪಡುವುದುಂಟು! ಒಂದಾನೊಂದು ಕಾಲದಲ್ಲಿ ಆಪದ್ಧನವೆಂಬುದಾಗಿ ಮದುವೆಯ ಮಂಗಲ ಸಮಯದಲ್ಲಿ, ಮಹಿಳೆಗೆ ಆಭರಣಗಳು ಬಳುವಳಿಯಾಗಿ ಕೊಡಲ್ಪಡುತ್ತಿದ್ದವು. ಅವು ಆಕೆಯ ಸಾಮಾಜಿಕ ಸ್ಥಾನಮಾನದ ಸಂಕೇತವೂ ಆಗಿರುತ್ತಿದ್ದವು. ಸಂಸಾರ ಸಾಗರದಲ್ಲಿ ಮುಳುಗುವಂಥ ಕಷ್ಟಕರ ಪ್ರಸಂಗಗಳು ಒದಗಿದಾಗ, ತೇಲಿಸುವ-ದಡ ಮುಟ್ಟಿಸುವ ಸಾಧನಗಳು ಆಗಿರುತ್ತಿದ್ದವು. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ನೂರಕ್ಕೆ ಎಂಭತ್ತರಷ್ಟು ಮಹಿಳೆಯರು ಆಭರಣಗಳನ್ನು ಇಷ್ಟ ಪಟ್ಟರೂ ಉಳಿದ ಇಪ್ಪತ್ತರಷ್ಟು ಮಹಿಳೆಯರು ಇಷ್ಟ ಪಡದಿರುವ ಸನ್ನಿವೇಶಗಳೂ ಉಂಟು. ಕಾರಣಗಳು ಅನೇಕ. ಬದಲಾಗುತ್ತಿರುವ ಸಾಮಾಜಿಕ ಮೌಲ್ಯಗಳಲ್ಲಿ, ಸ್ತ್ರೀಯ ಸ್ವತಂತ್ರ ವ್ಯಕ್ತಿತ್ವಕ್ಕೂ ಅವಳ ಬುದ್ಧಿಮತ್ತೆಗೂ ಹೆಚ್ಚೆಚ್ಚು ಮಹತ್ವ ಉಂಟಾಗುವಿಕೆ, ಸ್ವತಃ ಮಹಿಳೆಯೇ ಆರ್ಥಿಕ ಸ್ವಾತಂತ್ರ್ಯಕ್ಕೂ ಬೌದ್ಧಿಕ ವಿಕಾಸಕ್ಕೂ ಮನ ಸೋಲುವಿಕೆ-ಇವುಗಳು ಕೆಲ ಕಾರಣಗಳು. ಆರ್ಥಿಕ ಭದ್ರತೆ ಆಭರಣಗಳಿಂದ ಹಿಂದೆಯೂ ಇತ್ತು, ಈಗಲೂ ಇದೆ.

—ವಿಜಯಾ ಕಗೇಕರ್, ಬೆಂಗಳೂರ

# ಸಹಜ ಸೌಂದರ್ಯಕ್ಕೆ ಅಲಂಕಾರದ ಸೊಬಗು

**ರೂಪಾ ಈರೇಶನವರ**

ದೇವಸೃಷ್ಟಿಯ ಸುಂದರವಾದ ಕೊಡುಗೆಯೇ ಸ್ತ್ರೀ. ಸ್ತ್ರೀಯ ಸೌಂದರ್ಯಕ್ಕೆ ಮಾರುಹೋಗದೆ ಇರುವವರು ಅತಿ ವಿರಳ. ಮಹಾಭಾರತ ಹಾಗೂ ಪುರಾಣಗಳಲ್ಲಿ ಸ್ತ್ರೀಯರಿಗಾಗಿ ಯುದ್ಧ ಕಾಳಗಗಳಾಗಿವೆ. ವಿಶ್ವಾಮಿತ್ರ ಕೂಡ ಮೇನಕೆಯ ಸೌಂದರ್ಯಕ್ಕೆ ಮೋಹಗೊಂಡು ತನ್ನ ತಪಸ್ಸನ್ನೇ ಮರೆತುಬಿಟ್ಟ. ಅಲ್ಲದೇ ಪ್ರತಿಯೊಂದು ಒಳ್ಳೆಯ ಕಾರ್ಯಗಳ ಹಿಂದೆ ಸ್ತ್ರೀಯ ಪ್ರೇರಣೆ ಇದೆ. ಸಾಹಿತ್ಯದಲ್ಲಿ, ಕಾವ್ಯವಲ್ಲಿ ಕವಿಗಳು ಸ್ತ್ರೀ ಸೌಂದರ್ಯವನ್ನು ಹುಚ್ಚುಹುಚ್ಚಾಗಿ ವರ್ಣಿಸಿದ್ದು ಸಾಕಷ್ಟಿವೆ. ಇಂತಹ ಮೋಹಕ ಸೌಂದರ್ಯವನ್ನು ನಿರ್ಮಿಸಿಕೊಟ್ಟ ಆ ದೇವನಿಗೆ ನಾವು ಎಷ್ಟು ಜನ್ಮಗಳು ಋಣಿಯಾದರೂ ಸಾಲದು.

ಜೀವನಕ್ಕೂ ಸೌಂದರ್ಯಕ್ಕೂ ನಿಕಟವಾದ ಸಂಬಂಧವಿದೆ. ಚೆಲುವು ಸಂಚರಿಸುವ ಲೋಕಗಳಲ್ಲಿ, ಚೆಲುವಿಗಾಗಿ ಶೋಧವೂ ನಡೆದಿದೆ. ಸೌಂದರ್ಯದಲ್ಲಿ ಸಹ ಪೂರ್ವಿಕರು ಪಡೆದಿರುವ ಅನುಭವವೇ ನಮಗೆ ಪರಂಪರೆಯ ರೂಪದಲ್ಲಿ ಬಂದಿದೆ. ಹಳತು ಹೊಸತುಗಳ ಕೂಡಿಕೆಯಿಂದ ಚಿರ ನವೀನ ಸೌಂದರ್ಯವನ್ನು ನಾವು ಕಾಣಬೇಕಿದೆ.

ಮಾನವನ ಸೌಂದರ್ಯದ ಪ್ರಜ್ಞೆ ಪರಿಜ್ಞಾನಗಳ ಬೆಳವಣಿಗೆಯಾದದ್ದು ಸೃಷ್ಟಿಯ ಪ್ರಭಾವವಲ್ಲದೆ ಪರರನ್ನು ತನ್ನೆಡೆಗೆ ಆಕರ್ಷಿಸಿಕೊಳ್ಳಬೇಕು, ಪ್ರೀತಿ ಮೆಚ್ಚುಗೆಯನ್ನು ಪಡೆಯಬೇಕು ಎನ್ನುವ ಬಯಕೆಯೂ ಪ್ರಧಾನ ಕಾರಣವಾಗಿದೆ. ಮಾನವನು ಹೆಚ್ಚಾಗಿ ಕಾಡಿನಲ್ಲಿಯೇ ವಾಸವಾಗಿದ್ದಾಗ ತನ್ನ ಸುತ್ತಲಿನ ಸೃಷ್ಟಿಯ ಸೊಬಗು ವಿವಿಧ ವರ್ಣಮಾಲೆಗಳ ಚೆಲುವಿಗೆ ಮಾರುಹೋದ. ಸೃಷ್ಟಿ ದೇವತೆಯ ಲಾವಣ್ಯವೇ ಮನುಷ್ಯನ ಮನಸ್ಸಿನಲ್ಲಿ ಮೊದಲು ದೇಹ ಶೃಂಗಾರದ ಕಲ್ಪನೆಯನ್ನು ತಂದುಕೊಟ್ಟಿತು. ಆದಿ ಮಾನವನು ಸೃಷ್ಟಿಯ ಅನುಕರಣೆ ಮಾಡಿ ತನ್ನ ದೇಹವನ್ನು ವಿವಿಧ ಬಣ್ಣಗಳ ಹೂವು, ಎಲೆ ಬಣ್ಣಗಳಿಂದ ಶೃಂಗರಿಸಿಕೊಳ್ಳತೊಡಗಿದನು. ಸೃಷ್ಟಿಯಲ್ಲಿ ದೊರಕಿದ ಬಣ್ಣಗಳನ್ನು ಮೈಗೆ ಬಳಿದುಕೊಳ್ಳತೊಡಗಿದನು. ಕ್ರಮೇಣವಾಗಿ ತುರಾಯಿಯುಳ್ಳ ಪಕ್ಷಿಗಳಾದ ಹುಂಜ, ನವಿಲು ಮುಂತಾದವುಗಳಿಂದ ಮನುಷ್ಯ ತನ್ನ ಮುಡಿಯನ್ನು ಹೂವಿನಿಂದ ಅಂದವಾದ ಪುಚ್ಛಗರಿಗಳಿಂದ ಗೊಂಡೆಯನ್ನು ಮಾಡಿ ಶೃಂಗರಿಸಿಕೊಳ್ಳುವದನ್ನು ಕಲಿತನು. ಮೈಮೇಲೆ ಪಟ್ಟೆ ಪಟ್ಟೆಯ ಮತ್ತು ಚುಕ್ಕೆಗಳುಳ್ಳ ಪ್ರಾಣಿಗಳಾದ ಹುಲಿ, ಚಿರತೆ, ಝಿಬ್ರಾ, ಪತಂಗ ಮುಂತಾದವು ಮನುಷ್ಯನಿಗೆ ಹಚ್ಚೆ ಚುಚ್ಚಿಕೊಳ್ಳಲು ಪ್ರೇರಣೆಯಿತ್ತವು. ಅನಂತರ ಸ್ತ್ರೀ ಪುರುಷರು ತಮ್ಮ ದೇಹ ಮತ್ತು ಮುಖಗಳಿಗೆ ಗಂಧ, ಕುಂಕುಮ, ಅರಿಷಿಣ, ಕಾಡಿಗೆ, ಮದರಂಗಿ ಮತ್ತಿನ್ನಿತರ ಅನೇಕ ವರ್ಣದ್ರವ್ಯಗಳನ್ನು ಲೇಪಿಸಿಕೊಳ್ಳತೊಡಗಿದರು. ಗಂಧ, ಕುಂಕುಮ, ಅರಿಷಿಣ ಇವು ಬರಿ ಕಾಂತಿವರ್ಧಕಗಳಾಗಿರದೆ ಅವುಗಳನ್ನು ಉಪಯೋಗಿಸುವಲ್ಲಿ ಧಾರ್ಮಿಕ, ಮಾಂತ್ರಿಕ, ಸಾಮಾಜಿಕ ಉದ್ದೇಶಗಳು ಇವೆ. ಅಂದಿನ ವಿವಿಧ ಕಾಂತಿವರ್ಧಕಗಳು, ಪ್ರಸಾಧನಗಳು ಆ ಕಾಲದ ಜನರ ಸೌಂದರ್ಯಾಸಕ್ತಿ: ಲಾವಣ್ಯವನ್ನು ಹೆಚ್ಚಿಸಿಕೊಳ್ಳುವ ಮನೋಬಯಕೆಗಳನ್ನು ತೋರಿಸಿ



ಕೇಶರಾಶಿಗೆ ಬಂಗಾರದ ಚೆಲುವು!
ಕು। ಮಹೇಶ್ವರಿ

ಕೊಡುತ್ತವೆ. ಇಂದಿನ ಪೌಡರ ಸ್ನೋ, ಕ್ರೀಮ, ಲಿಪ್‌ಸ್ಟಿಕ್ ಮೊದಲಾದವು ಹಿಂದಕ್ಕೂ ಬೇರೆ ರೂಪದಲ್ಲಿದ್ದವು. ತುಟಿಗಳಿಗೆ ಉಪಯೋಗಿಸುವ ಲಿಪ್‌ಸ್ಟಿಕ್, ಪಿರ್‍ಯಾಮಿಡ್‌ಗಳಲ್ಲಿ ದೊರಕಿವೆ. ಗ್ರೀಕರು ಸೌಂದರ್ಯವರ್ಧನೆಗೆ ತುಂಬಾ ಗಮನವೀಯುತ್ತಿದ್ದರು. ಮೊಗಲರ ಕಾಲದಲ್ಲಿ ಸೌಂದರ್ಯಕ್ಕೆ ಅತಿಶಯ ಮಹತ್ವವಿತ್ತು. ಅಲ್ಲಿನ ರಾಣಿಯರು ಉಪಯೋಗಿಸುತ್ತಿದ್ದ ಕ್ಷೀರ ಸ್ನಾನ-ಗೃಹಗಳು ಇಂದು ಪ್ರೇಕ್ಷಣೀಯ ಸ್ಥಳಗಳಾಗಿವೆ.

೩,೦೦೦ ವರ್ಷಗಳ ಹಿಂದಿನ ಶಿಲ್ಪಗಳ ಮೇಲೆ ಕೆತ್ತಿದ ಮಾತುಗಳು "ಸುಂದರವಾಗಿರಿ ಮತ್ತೆ ಸಂತಸದಿಂದಿರಿ !"

ಮನುಷ್ಯನು ಅಲಂಕಾರ ಪ್ರಿಯ ಜೀವಿ. ಈ ಮಾತು ಸ್ತ್ರೀ ಪುರುಷರಿಬ್ಬರಿಗೂ ಅನ್ವಯಿಸಿದರೂ ಸ್ತ್ರೀಯರು ಪುರುಷರಿಗಿಂತ ಹೆಚ್ಚು ಅಲಂಕಾರ ಪ್ರಿಯರಾಗಿದ್ದಾರೆ. ಅಲಂಕಾರದ ಬಯಕೆಯನ್ನು ಪೂರೈಸಿಕೊಳ್ಳಲು ಫ್ಯಾಶನ್ನು ಸಹಾಯ ಮಾಡುತ್ತದೆ.

ಆಧುನಿಕ ಮನೋವಿಜ್ಞಾನಿಗಳ ಪ್ರಕಾರ, ಬೆಳಿಗ್ಗೆ ಹೆಣ್ಣು ಮಕ್ಕಳು ಶೃಂಗಾರ ಮಾಡಿಕೊಳ್ಳುವದರಿಂದ ಅವರು ಚುರುಕಾಗಿರುತ್ತಾರೆ. ಮತ್ತು ಅಷ್ಟೇ ಉಲ್ಲಸಿತರಾಗಿರುತ್ತಾರೆ. ಎಂದು ಕಂಡುಬಂದಿದೆ. ಮಹಿಳೆ ಸದಾ ಸುಂದರಳಾಗಿ ಕಾಣಿಸಲು ಇಚ್ಛಿಸುತ್ತಾಳೆ. ತನ್ನ ಪ್ರತಿಬಿಂಬವನ್ನು ಕನ್ನಡಿಯಲ್ಲಿ ಕಂಡು ತಾನು ತನ್ನ ಆಕರ್ಷಕ ಶಕ್ತಿಯನ್ನೇನೋ ಕಳೆದುಕೊಂಡಿಲ್ಲವೆಂದು ತಿಳಿದಾಗ ಆಕೆ ಇನ್ನೂ ಹೆಚ್ಚು ಪ್ರೋತ್ಸಾಹಿತಳಾಗುತ್ತಾಳೆ. ಒಂದು ರೀತಿಯ ಆತ್ಮ ವಿಶ್ವಾಸ ಆಕೆಯಲ್ಲಿ ಮೂಡಿ ಹೆಚ್ಚಿನ ಕೆಲಸ ಮಾಡಲು ಸಹಾಯವಾಗುತ್ತದೆ.

ಸೌಂದರ್ಯ ಆಂತರಿಕವಾಗಿ ಹೊರ ಚಿಮ್ಮಬೇಕೆ ವಿನಃ ಬಾಹ್ಯದಿಂದಲ್ಲ. ಉತ್ತಮ ಯೋಚನೆ, ನಡೆನುಡಿ. ಒಳ್ಳೆಯ ಆರೋಗ್ಯ, ನಿಯಮಿತ ಆಹಾರ, ವ್ಯಾಯಾಮಗಳಿಂದ ನೈಜ ಸೌಂದರ್ಯ ಸಾಧ್ಯ. ಆಹಾರದ ಸತ್ವ ಹಾಗೂ ಪರಿಮಾಣ ಸರಿಯಾಗಿರದಿದ್ದರೆ ನಿರ್ದಿಷ್ಟ ಅವಧಿಗಿಂತ ಮುನ್ನವೇ ಮಹಿಳೆಯರಿಗೆ ವೃದ್ಧಾಪ್ಯ ತಲೆದೋರುತ್ತದೆ. ಆಕಾರವು ವಿಕಾರವಾಗಿ ಕಾಣಿಸುತ್ತದೆ. ಒಳ್ಳೆಯ ಆಹಾರ ಸೇವನೆಯಿಂದ ಶರೀರದ ಸೌಷ್ಟವ ಹೆಚ್ಚುವಂತೆ ಮುಖದ ಸೊಬಗನ್ನು ವರ್ಧಿಸುತ್ತದೆ.

ಇತ್ತೀಚಿಗೆ ಬ್ಯೂಟಿ ಪಾರ್ಲರಗಳು ಹೆಚ್ಚು ಹೆಚ್ಚಾಗಿ ಸ್ತ್ರೀಯರನ್ನು ಆಕರ್ಷಿಸುತ್ತಿವೆ. ಆದರೆ ಇವು ಹಣವಿದ್ದವರಿಗೆ ಮಾತ್ರ ಲಭ್ಯ. ಇಂದಿನ ಆಧುನಿಕ ಉಪಕರಣಗಳು ಎಂತಹ ಕುರೂಪಿಯನ್ನು ಸುಂದರಳನ್ನಾಗಿ ಮಾಡುವ ಶಕ್ತಿ ಹೊಂದಿವೆ.

ಪರಿಸರ ಮಾಲಿನ್ಯದಿಂದಲೋ. ಬೆರಿಕೆ ಆಹಾರ ಸೇವಿಸುವವರಿಂದಲೋ, ರಾಸಾಯನಿಕ ಮಿಶ್ರಿತ



ಸರ್ವಾಲಂಕಾರಭೂಷಿತೆ

ಸೌಂದರ್ಯ ವರ್ಧನೆಗಳನ್ನು ಉಪಯೋಗಿಸುವದರಿಂದಲೋ. ಇಂದು ಆರೋಗ್ಯ ಕಡುತ್ತ ಸಾಗಿದೆ. ಕೂದಲುಗಳು ಉದುರುವದು, ಚರ್ಮವು ಅಂದಗೆಡುವದು, ಸಾಮಾನ್ಯವಾಗಿ ಬಿಟ್ಟಿದೆ. ಇಂತಹದರಲ್ಲೂ ನಾವು ನಮ್ಮ ಸೌಂದರ್ಯದ ಬಗ್ಗೆ ತುಂಬ ಎಚ್ಚರಿಕೆ ವಹಿಸಬೇಕಾಗಿದೆ. ಸಹಜವಾಗಿ ಮತ್ತು ಸುಲಭವಾಗಿ ಸಿಗುವಂಥ ವಸ್ತುಗಳಿಂದ ನಾವು ನಮ್ಮ ಸಹಜ ಸೌಂದರ್ಯವನ್ನು ಹೇಗೆ ವರ್ಧಿಸಿಕೊಳ್ಳಬೇಕೆಂಬುದಕ್ಕೆ ಕೆಲವೇ ಸಲಹೆಗಳು ಇಲ್ಲಿವೆ.

ಕೂದಲು : ಸುಂದರ ಕೂದಲು ಮುಖಕ್ಕೆ ಕಿರೀಟವಿದ್ದಂತೆ ಪ್ರತಿಯೊಬ್ಬರು ಹುಟ್ಟುತ್ತಲೇ ಸುಂದರ ಕೂದಲನ್ನು ಹೊಂದಿದವರೇ ಇರುವದಿಲ್ಲ ಇದ್ದ ಕೂದಲನ್ನೆ ಹಾಳಾಗದಂತೆ ಕಾಳಜಿ ತೆಗೆದುಕೊಳ್ಳುವದು ಒಳ್ಳೆಯದು.

ಚರ್ಮದಲ್ಲಿ ಕೂದಲಿಗೆ ಪೋಷಕವಾದ ಎಣ್ಣೆ ಅಂಶ ಇದೆ. ಇದು ಸರಿಯಾದ ಪ್ರಮಾಣದಲ್ಲಿ ಕೂದಲಿಗೆ ದೊರೆಯಬೇಕಾದರೆ ಅಲ್ಲಿ ರಕ್ತಚಲನೆ ಸರಿಯಾಗಿರಬೇಕು. ಅದಕ್ಕಾಗಿ ನಿತ್ಯವೂ ಎಣ್ಣೆ ಹಚ್ಚಿ ಕೂದಲಿನ ಬುಡವನ್ನು ತಿಕ್ಕಬೇಕು. ಕೊಬ್ಬರಿ ಎಣ್ಣೆ, ಎಳ್ಳೆಣ್ಣೆ, ಅಥವಾ ಬಾದಾಮಿ ಎಣ್ಣೆ ಇವನ್ನು ಬಳಸಿ ಅಂಗೈಯಿಂದ ಗಟ್ಟಿಯಾಗಿ ತಿಕ್ಕದೆ. ಬೆರಳುಗಳ ತುದಿಯಿಂದ ವರ್ತುಲಾಕಾರವಾಗಿ ತಲೆಯ ಚರ್ಮವನ್ನು ತಿಕ್ಕಬೇಕು. ಇದರಿಂದ

ನಿಯಾಗುತ್ತಿರುವ ಕೂದಲು ಉದುರಿ ಹೋಗಿ ... ಸ್ಥಳದಲ್ಲಿ ಹೊಸ ಕೂದಲು ಬರುತ್ತವೆ. ತಲೆಯಲ್ಲಿ ಹೇನು. ಹೊಟ್ಟು ಆಗದಂತೆ ಲಕ್ಷ್ಯವಹಿಸಬೇಕು.

೨ ಚಮಚೆ ಮೆಂತೆ, ೧ ಚಮಚೆ ಕೊತ್ತಂಬರಿ ಕಾಳು. ೧ ಚಮಚೆ ಜೀರಿಗೆ. ರಾತ್ರಿ ನೆನೆ ಹಾಕಿ ಬೆಳಿಗ್ಗೆ ರುಬ್ಬಿ ತಯಾರಾದ ಪೇಸ್ಟಿಗೆ ಲಿಂಬೆ ಹುಳಿ ಸೇರಿಸಿ ತುದಿ ಬೆರಳಿನಿಂದ ಕೂದಲ ಬುಡಕ್ಕೆ ತಿಕ್ಕಬೇಕು. ಎರಡು ತಾಸು ಬಿಟ್ಟು ತಲೆ ಸ್ನಾನ ಮಾಡಬೇಕು. ಇದರಿಂದ ಹೊಟ್ಟನ್ನು ನಿವಾರಿಸಬಹುದು.

ಹೊಟ್ಟು ಕೂದಲಿನ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ. ಎರಡು ದಿನ ಇಟ್ಟ ಹುಳಿ ಮೊಸರನ್ನು ತಲೆಗೆ ಹಚ್ಚಿ ಸ್ನಾನ ಮಾಡುವದರಿಂದ ಹೊಟ್ಟಿನ ನಿವಾರಣೆಯಾಗುತ್ತದೆ.

ತತ್ತಿಯ ಬಿಳಿಯ ಭಾಗವು ಪ್ರೋಟೀನಯುಕ್ತವಾಗಿರುವದರಿಂದ ಕೂದಲಿಗೆ ಹಚ್ಚಿ ಸ್ನಾನ ಮಾಡಬೇಕು. ಶ್ಯಾಂಪುವಿನಂತೆ ಉಪಯೋಗಿಸಬೇಕು. ಕೂದಲಿಗೆ ಹೊಳಪು ಬಂದು ರೇಶ್ಮೆಯಂತೆ ಮೃದುವಾಗುವವು. ಅಲ್ಲದೆ ಕೂದಲಿನ ಬೆಳವಣಿಗೆಯಾಗುವದು.

ಮೆಹಂದಿಯನ್ನು ಸ್ನಾನಕ್ಕಿಂತ ಒಂದು ತಾಸು ಮೊದಲು ಹಚ್ಚಿಕೊಂಡು ಸ್ನಾನ ಮಾಡುವದರಿಂದ ಬಿಳಿಕೂದಲು ಕೆಂಪಗಾಗುವವು. ಕರಿ ಕೂದಲು ತಮ್ಮ ಬಣ್ಣವನ್ನು ಕಳೆದುಕೊಳ್ಳುವದಿಲ್ಲ.

ಮುಖ : "Face is the Index of the mind"

ಮನೋಭಾವನೆಗಳನ್ನು ತೋರ್ಪಡಿಸುವ ಮುಖವು ಸೌಂದರ್ಯವಲ್ಲದಿದ್ದರೂ ಆಕರ್ಷಕವಾಗಿರಬೇಕು. ಕಣ್ಣುಗಳ ತೇಜ, ಮುಖದ ಮೋಹಕತೆ, ನಿಲುವು, ನಗೆ ಇವು ಚೆಲುವಿಕೆಗೆ ಮೆರಗು ಕೊಟ್ಟಂತೆ.

ವ್ಯಾಪಾರಿ ಮನೋಭಾವದಿಂದ ತಯಾರಿಸಿದಂತಹ ಸೌಂದರ್ಯ ವರ್ಧಕಗಳು ರಾಸಾಯನಿಕ ಮಿಶ್ರಣ ಇರುವದರಿಂದ ಚರ್ಮದ ಅಂದವನ್ನೇ ಕೆಡಿಸಿಬಿಡುತ್ತವೆ. ಒಳ್ಳೆಯ ಕಂಪನಿಗಳ ಸೌಂದರ್ಯ ವರ್ಧಕಗಳನ್ನು ಮಾತ್ರ ಉಪಯೋಗಿಸುವದು ಉತ್ತಮ. ಆದರೆ ನೈಸರ್ಗಿಕ ವಸ್ತುಗಳಾದ. ಕಡಲೆ ಹಿಟ್ಟು. ಸವತೆಕಾಯಿ. ಗಜ್ಜರಿ. ಟೊಮೆಟೊ. ಹಾಲು. ಮೊಸರು. ತತ್ತಿ. ಲಿಂಬೆಹಣ್ಣು ಇವು ಕೂಡ ಸೌಂದರ್ಯವರ್ಧಕ ವಸ್ತುಗಳಾಗಿವೆ. ಇವುಗಳನ್ನು ಉಪಯೋಗಿಸುವದರಿಂದ ಯಾವ ತೊಂದರೆಯೂ ಆಗುವದಿಲ್ಲ.

ಮುಖ್ಯವಾಗಿ ಮುಖವೃತೆಯಿಂದ ಮುಖದ ಸೊಬಗು ಅಂದಗೆಡುತ್ತದೆ. ಜೊತೆಗೆ ಮನಸ್ಸು ಸಿಡುಕುತ್ತದೆ. ಅದ್ದರಿಂದ ಮೊದಲು ಮಲಬದ್ಧತೆಯನ್ನು ನಿವಾರಿಸಿಕೊಳ್ಳಬೇಕು. ಮನಸ್ಸು ಸದಾ ಹರುಷದಿಂದಿರಬೇಕು.

ಮುಖದ ಚರ್ಮವು ಎರಡು ರೀತಿಯದಾಗಿದ್ದು ೧)ಒಣದಾದದ್ದು ೨)ತೇವವುಳ್ಳದ್ದು.

ಒರಟು ಚರ್ಮದವರು ರಾತ್ರಿ ಮಲಗುವ ಮೊದಲು ಮುಖವನ್ನು ಸ್ವಚ್ಛವಾಗಿ ತೊಳೆದು ಎಳ್ಳಿನ ಎಣ್ಣೆಯನ್ನು ಮುಖಕ್ಕೆ ಮೃದುವಾಗಿ ಸವರಿ ಬಟ್ಟೆಯಿಂದ ತಿಕ್ಕಬೇಕು. ಬೆಳಿಗ್ಗೆ ಬಿಸಿನೀರಿನಿಂದ ಮುಖವನ್ನು ತೊಳೆಯಬೇಕು. ಎಣ್ಣೆಯ ಜಿಡ್ಡು ತೆಗೆಯಲು ಕಡಲೆ ಹಿಟ್ಟನ್ನು ಉಪಯೋಗಿಸಬೇಕು. ಇದರಿಂದ ಚರ್ಮವು ಮೃದುವಾಗುವದು.

ಜಿಡ್ಡು ಚರ್ಮದವರು ಸ್ವಲ್ಪ ಬಿಸಿನೀರಿನಲ್ಲಿ ಲಿಂಬೆರಸ ಬೆರೆಸಿ ಮುಖಕ್ಕೆ ಹಚ್ಚಬೇಕು. ಅಥವಾ ಲಿಂಬೆರಸವನ್ನು ಗ್ಲಿಸರಿನಿನಲ್ಲಿ ಸೇರಿಸಿ ಹಚ್ಚಬಹುದು. ಚಂದನ, ಅರಿಷಿಣ, ರಾತ್ರಿ ಹಚ್ಚಿಕೊಂಡು ಬೆಳಿಗ್ಗೆ ಮುಖ ತೊಳೆಯುವದರಿಂದ ಜಿಡ್ಡು ನಾಶವಾಗಿ ಮುಖವು ಕಾಂತಿಯುತವಾಗುತ್ತದೆ.

ಒಣ ಚರ್ಮದವರು ಸೋಪನ್ನು ಉಪಯೋಗಿಸದೆ, ಹೆಸರುಹಿಟ್ಟು, ಕಡ್ಲೆಹಿಟ್ಟು, ಸೀಗೆಕಾಯಿ ಪುಡಿ, ಸ್ಯಾಂಡಲ್‌ವುಡ್ ಪೌಡರ ಮತ್ತು ಅರಿಷಿಣ ಎಲ್ಲವನ್ನು ಸೇರಿಸಿ ನೀರಿನೊಂದಿಗೆ ಪೇಸ್ಟ ಮಾಡಿ ಮುಖ ಮತ್ತು ಮೈಗೆ ಹಚ್ಚಿ ತೊಳೆಯಬೇಕು. ಇದರಿಂದ ಚರ್ಮಕ್ಕೆ ಮಿದುತನ ಬರುವದು. ಇದನ್ನು ಆ್ಯಂಟಿಬಯೋಟಿಕ್‌ದಂತೆ ಉಪಯೋಗಿಸಬೇಕು.

ಅರಿಷಿಣವನ್ನು ಮುಖಕ್ಕೆ ಮತ್ತು ಕೈಗಳಿಗೆ ಹಚ್ಚಿ ಸ್ನಾನ ಮಾಡಬೇಕು. ಸಣ್ಣ ರೋಮಗಳನ್ನು ನಾಶಪಡಿಸುವ ಶಕ್ತಿ ಅರಿಷಿಣಕ್ಕೆ ಇದೆ. ಇದನ್ನು ಪೇರ್‌ರಿಮೂವರಂತೆ ಉಪಯೋಗಿಸಬಹುದು.
ಸವತೆಕಾಯಿರಸ, ಗಜ್ಜರಿ ಮತ್ತು ಕಲ್ಲಂಗಡಿರಸಗಳಿಗೆ ಜೇನುತುಪ್ಪ, ತತ್ತಿಯ ಬಿಳಿಭಾಗ ಸೇರಿಸಿ ಮುಖಕ್ಕೆ ಹಚ್ಚುವದರಿಂದ ಚರ್ಮದ ಆರೋಗ್ಯ ಹೆಚ್ಚುತ್ತದೆ. ಕಪ್ಪುಚುಕ್ಕೆಗಳು ಮಾಯವಾಗುವವು.

ಪನ್ನೀರನ್ನು ಉಪಯೋಗಿಸುವದರಿಂದ ಮುಖದ ಮೇಲೆ, ಕುತ್ತಿಗೆಗೆ ನೀರಿಗೆಗಟ್ಟುವದನ್ನು ತಡೆಗಟ್ಟಬಹುದು.

ಕಂಚಿನ ಪಾತ್ರೆಯಲ್ಲಿ ಒಂದು ವಾರದವರೆಗೆ ಮೊಸರನ್ನಿಟ್ಟು ತಾಮ್ರದ ತುಂಡಿನಿಂದ ಚನ್ನಾಗಿ ಕಲಕಿ ಹಸಿರು ಬಣ್ಣ ತಾಳಿದಾಗ ಅದನ್ನು ಮೊಡವೆಗಳಿಗೆ ಆಯಿಂಟಮೆಂಟಾಗಿ ಬಳಸಬಹುದು.

೩೫ ವರ್ಷಕ್ಕೆ ಮೇಲ್ಪಟ್ಟವರು ಮುಖದ ಚರ್ಮ ಬಿಗಿಯಾಗಿರಲು (ನಿರಿಗೆಗಟ್ಟದಂತೆ) ವಾರಕ್ಕೊಮ್ಮೆ ಈ ಕೆಳಗಿನ ಕ್ರಮವನ್ನು ಅನುಸರಿಸಬೇಕು.

ಮೊಟ್ಟೆಯ ಬಿಳಿಭಾಗಕ್ಕೆ ಸಮಪ್ರಮಾಣದಲ್ಲಿ ಜೇನುತುಪ್ಪ, ಮೈದಾಹಿಟ್ಟು ಸೇರಿಸಿ ಪೇಸ್ಟಮಾಡಬೇಕು. ಮುಖವನ್ನು ಮೊದಲು ಹಾಲಿನಿಂದ ತೊಳೆಯಬೇಕು. ಹತ್ತು ನಿಮಿಷ ಬಿಟ್ಟು ಕೋಲ್ಡ್ ಕ್ರೀಂ ಲೇಪಿಸಿ, ತಯಾರಿಸಿದ ಪೇಸ್ಟನ್ನು ಮುಖ, ಕುತ್ತಿಗೆಗೆ ಹಚ್ಚಬೇಕು. ಹದಿನೈದು ನಿಮಿಷಬಿಟ್ಟು ಒಂದು ಶುಭ್ರವಾದ ನೂಲಿನ ಬಟ್ಟೆಯನ್ನು ಬಿಸಿನೀರಿನಲ್ಲಿ ಅದ್ದಿ ಮುಖವನ್ನು ಒರೆಸಬೇಕು ನಂತರ ಮುಖಕ್ಕೆ ತಣ್ಣೀರನ್ನು ಹಾಕಿ ತೊಳೆಯಬೇಕು.

ಹುಬ್ಬುಗಳು : ಕಾಮನ ಬಿಲ್ಲನ್ನು ಹೋಲುವ ಹುಬ್ಬುಗಳು ತುಂಬ ಆಕರ್ಷಕ ಅವರವರ ಮುಖಕ್ಕೆ ಹೋಲುವಂತೆ ನಿರ್ದಿಷ್ಟ ಆಕಾರವನ್ನು ಕೊಟ್ಟು ಹೆಚ್ಚಿನ ಹುಬ್ಬಿನ ಕೂದಲುಗಳನ್ನು ದಾರದಿಂದ ಇಲ್ಲವೇ ಪ್ಲಕರದಿಂದ ತೆಗೆದು ಹಾಕಬೇಕು. ಈ ಕ್ರಮವನ್ನು ನಿಯಮಿತವಾಗಿ ಅನುಸರಿಸುತ್ತಿರಬೇಕು. ದಟ್ಟವಾಗಿ ಮತ್ತು ಕಪ್ಪಾಗಿ ಬೆಳೆಯಲು ಕಣ್ಣಿನ ರೆಪ್ಪೆಗೂ, ಹುಬ್ಬಿಗೂ ಔಡಲ ಎಣ್ಣೆಯನ್ನು ಉಪಯೋಗಿಸಬೇಕು.

ಕಣ್ಣುಗಳು : ಸೌಂದರ್ಯವನ್ನು ಸವಿಯುವ ಕಣ್ಣುಗಳ ಬಗ್ಗೆ ಪ್ರತಿಯೊಬ್ಬರೂ ಕಾಳಜಿವಹಿಸಲೇಬೇಕು. ಅದರಲ್ಲೂ ಹೆಣ್ಣಿಗೆ ಸೌಂದರ್ಯ ಇಮ್ಮಡಿಸುವದು ಕಣ್ಣಿನಿಂದಲೇ, ಕಣ್ಣುಗಳು ಹೊಳಪುಗೊಳ್ಳಲು-ಗುಲಾಬಿ ಪಕಳೆಗಳನ್ನು ಒಂದು ಕಪ್ಪು ನೀರಿನಲ್ಲಿ ನೆನೆ ಇಟ್ಟು ಆ ನೀರಿನಿಂದ ಕಣ್ಣುಗಳನ್ನು ತೊಳೆಯಬೇಕು. ಗುಲಾಬಿ ಪಕಳೆ ಬದಲು ಕೊತ್ತಂಬರಿ ಎಲೆಯನ್ನು ಉಪಯೋಗಿಸಬಹುದು. ಹಾಲಲ್ಲಿ ಅದ್ದಿದ ಅರಳೆಯನ್ನು ಕಣ್ಣಿನ ಮೇಲೆ ೨೫–೩೦ ನಿಮಿಷ ಇಡುವದರಿಂದ ಕಣ್ಣಿನ ಸುತ್ತಲೂ ಇದ್ದ ಕಪ್ಪು ಕಲೆಯನ್ನು ನಿವಾರಿಸಬಹುದು. ಗಜ್ಜರಿ, ಸೌತೆಕಾಯಿ, ಬಸಳೆಸೊಪ್ಪು ಸೇವಿಸುವದು ಕಣ್ಣಿಗೆ ಒಳ್ಳೆಯದು. ರಾತ್ರಿ ಮಲಗುವ ಮುನ್ನ ಕಣ್ಣಿಗೆ ಬಳಸಿದ ಮೇಕಪ್ಪನ್ನು ತೆಗೆಯಬೇಕು.

ಮನೆಯಲ್ಲಿಯೇ ತಯಾರಿಸಿದ ಕಾಡಿಗೆಯನ್ನು ಹಚ್ಚುವದು ಒಳ್ಳೆಯದು. ಪೇಟೆಯಲ್ಲಿ ಸಿಗುವ ಸುರಮಾ ಮತ್ತು ಕಾಡಿಗೆಗಳು ರಸಾಯನ ಮಿಶ್ರಿತ ಇರುವದರಿಂದ ಕಣ್ಣುಗಳು ಬೇಗನೆ ಕೆಡುವ ಸಂಭವ ಹೆಚ್ಚು.

ಡಾಕ್ಟರರ ಸಲಹೆ ಪ್ರಕಾರ ಕನ್ನಡಕವನ್ನು ಬಳಸಬೇಕು. ಬಿಸಿಲಿನಲ್ಲಿ ಉತ್ತಮವಾದ ಕನ್ನಡಕವನ್ನು ಮಾತ್ರ ಉಪಯೋಗಿಸಬೇಕು.



ಸೌಂದರ್ಯಕ್ಕೆ ಆಭರಣದ ಕುಂದಣ!

ಕು। ರಾಜೇಶ್ವರಿ

ತುಟಿಗಳು : ಹವಳದಂಥ ತುಟಿಗಳು ಮೃದುವಾಗಿದ್ದರೇ ಚೆನ್ನ. ಬಣ್ಣವನ್ನು ಅತಿಶಯವಾಗಿ ಬಳಸುವದರಿಂದ ತುಟಿಗಳು ಒಡೆದು ತಮ್ಮ ಅಂದವನ್ನು ಕಳೆದುಕೊಂಡು ಬಿಡುತ್ತವೆ. ವಿಶೇಷ ಸಮಾರಂಭಗಳಿಗೆ ಮಾತ್ರ ಬಣ್ಣವನ್ನು ಉಪಯೋಗಿಸಬೇಕು.

ಕಪ್ಪಗಿನವರು ಚಾಕಲೇಟು, ಗುಲಾಬಿ, ಕೆಂಪು ಮೊದಲಾದ ದಟ್ಟವಾದ ಬಣ್ಣವನ್ನು ಉಪಯೋಗಿಸಬೇಕು. ಬೆಳ್ಳಗಿನವರು ತಿಳುವಾದ ಬಣ್ಣವನ್ನು ಮಾತ್ರ ಉಪಯೋಗಿಸಬೇಕು. ತುಟಿಗಳಿಗೆ ರಾತ್ರಿ ಮಲಗುವಾಗ, ಬೆಣ್ಣೆ ಇಲ್ಲವೆ ಹಾಲಿನ ಕೆನೆಯನ್ನು ಹಚ್ಚುಬೇಕು.

ಹಲ್ಲುಗಳು : ಎಲ್ಲರೂ ದಾಳಿಂಬರಿಯಂಥ ಹಲ್ಲುಗಳನ್ನೇ ಹೊಂದಿದವರು ಇರುವದಿಲ್ಲ ಆದರೆ ಹಲ್ಲಿನ ಆರೋಗ್ಯದ ಬಗ್ಗೆ ಪ್ರತಿಯೊಬ್ಬರೂ ಕಾಳಜಿವಹಿಸುವದು ಅತ್ಯವಶ್ಯ ಆಗಾಗ ದಂತ ವೈದ್ಯರಿಂದ ಚಿಕಿತ್ಸೆ ಪಡೆಯುತ್ತಿರಬೇಕು.

ಬಾಯಿ ವಾಸನೆ ಬರುತ್ತಿದ್ದರೆ ಲಿಂಬೆಸಿಪ್ಪೆಗೆ ಉಪ್ಪನ್ನು ಹಚ್ಚಿ ಹಲ್ಲುಜ್ಜಬೇಕು. ಪ್ರತಿಯೊಂದು ಊಟದ ನಂತರ ಹಲ್ಲುಜ್ಜಲೇಬೇಕು. ಬಿಳಿಯಾದ ಸುಂದರವಾದ ಹಲ್ಲುಗಳಿಂದ ನಕ್ಕಾಗ ಸೌಂದರ್ಯ ಹೊರಸೂಸುವದು. ಸದಾ ಅವರನ್ನೇ ನೋಡುತ್ತಾ ಇರಬೇಕೆಂಬ ಆಶೆಯಾಗುವದು.

ಕೈಕಾಲುಗಳು : ಮುಖವನ್ನು ಮಾತ್ರ ಶೃಂಗರಿಸಿಕೊಂಡು ಕೈಕಾಲುಗಳಿಗೆ ಲಕ್ಷಕೊಡದಿದ್ದರೆ ಸುಂದರ ವ್ಯಕ್ತಿತ್ವ ನಾಶವಾದಂತೆ. ಸುಂದರವಾದ ಕಾಲು ಮತ್ತು ಕೈಗಳಿಂದ, ಸೌಂದರ್ಯ ಹೆಚ್ಚುವದು ಮೊದಲು ಯೂರೋಪಾ ಪದ್ಧತಿಯಲ್ಲಿ ಸ್ತ್ರೀಯು ಇದ್ದಾಗ ಅವಳ ಕಾಲುಗಳನ್ನು ನೋಡಿ ಅವಳ ಸುಂದರತೆಯನ್ನು ಲೆಕ್ಕ ಹಾಕುತ್ತಿದ್ದರಂತೆ. ಹೀಗೆ, ನಾವು ಕೈ ಕಾಲುಗಳ ಕಾಳಜಿ ತೆಗೆದುಕೊಂಡರೆ ಅವು ನಮ್ಮ ಕಾಳಜಿ ತೆಗೆದುಕೊಳ್ಳುತ್ತವೆ.

ಬಹಳಷ್ಟು ಕಷ್ಟವಾದ ಕೆಲಸಗಳನ್ನು ಮಾಡುವದರಿಂದ ಕೈಗಳಿಗೆ ಬಿರುಸುತನ ಬರುತ್ತದೆ. ಮೇಲಿಂದ ಮೇಲೆ ಸೋಪಿನಿಂದ ಕೈಗಳನ್ನು ತೊಳೆಯಬಾರದು.

ಗ್ಲಿಸರೀನ್ನು ತಂಗಿನ ನೀರಿನಲ್ಲಿ ಸೇರಿಸಿ ಕೈಗಳಿಗೆ ಹಚ್ಚಬೇಕು ಲಿಂಬೆಸಿಪ್ಪೆ ಮತ್ತು ಕೆನೆ ಹಚ್ಚಿ ತಿಕ್ಕುವದರಿಂದ ಕೈ ಕಾಲುಗಳಿಗೆ ಹೊಳಪು ಬರುತ್ತದೆ.

ವಾರಕ್ಕೊಮ್ಮೆ ಎಣ್ಣೆಯಿಂದ ಕೈ ಕಾಲುಗಳನ್ನು ತಿಕ್ಕಿ ಸ್ನಾನ ಮಾಡಬೇಕು.

ಪಾದಗಳ ಹಿಮ್ಮಡಗಳು ಒಡೆದಲ್ಲಿ ಕುದಿಸಿದ ಬಟಾಟೆ ಇಲ್ಲವೆ ಟೊಮೆಟೊ ಲಿಂಬೆ ರಸ ಹಚ್ಚಬೇಕು.

ಬೆಚ್ಚಗಿನ ನೀರಲ್ಲಿ ಉಪ್ಪನ್ನು ಸೇರಿಸಿ ಪಾದಗಳನ್ನು ೧೦ ನಿಮಿಷ ಇಡುವದರಿಂದ ದಣಿವು ಆರಿ ಶಕ್ತಿಯುತವಾಗುತ್ತವೆ. ಬೆರಳುಗಳಿಗೆ ಮದರಂಗಿ ಹಚ್ಚುವದರಿಂದ ತಂಪಾಗಿ ಅಂದವೂ ಹೆಚ್ಚುತ್ತದೆ.

ಹುಲ್ಲಿನ ಮೇಲೆ ಚಪ್ಪಲಿ ಹಾಕದೆ ಸ್ವಲ್ಪ ಹೊತ್ತು ಅಡ್ಡಾಡುವದರಿಂದ ಕಾಲಿನ ಸೌಂದರ್ಯ ಹೆಚ್ಚುತ್ತದೆ.

ಪಾದಗಳು ಬೆವರುತ್ತಿದ್ದರೆ ಪೊಟ್ಯಾಸಿಯಂ ಪ
ಮ್ಯಾಂಗನೇಟ ಪುಡಿ ಹಾಕಿದ ನೀರಲ್ಲಿ ಕಾಲಿನ
ಇಳಿಬಿಟ್ಟು ಕುಳಿತುಕೊಳ್ಳಬೇಕು. ನಂತರ ಪಾ
ವನ್ನು ಚೆನ್ನಾಗಿ ಒರೆಸಿ ಸ್ಟಾರ್ಚ್ ಪುಡಿ ಇಲ್ಲ
ಟಾಲ್ಕಂ ಪೌಡರ ಹಚ್ಚಬೇಕು.

ಕಾಕುಳ್ಳನ್ನು ಸುಟ್ಟು ಅದರ ಬೂದಿಯನ್ನು
ಅಂಗೈ ಅಂಗಾಲುಗಳಿಗೆ ತಿಕ್ಕಿದರೆ ಬೆವರುವ
ಕಡಿಮೆಯಾಗುತ್ತದೆ.

ಕಾಲು ಚೀಲಗಳನ್ನು ಧರಿಸುವವರು ಪಾ
ಗಳಿಗೆ ಗಂಧಕದ ಪುಡಿಯನ್ನು ಸವರಿಕೊಳ್ಳಬೇಕು.

ಮುಖ್ಯವಾಗಿ ದೇಹದ ಪ್ರತಿಯೊಂದು ಅಂಗಾ
ಗಗಳ ಸ್ವಚ್ಛತೆಯ ಕಡೆಗೆ ಗಮನ ಕೊಟ್ಟಾಗ ಮಾತ್ರ
ಸುಂದರತೆಯು ಹೂವಾಗಿ ಅರಳುತ್ತದೆ. ನಿಯಮಿ
ತವಾದ ವ್ಯಾಯಾಮದಿಂದ ಕಟ್ಟುನಿಟ್ಟಿನಿಂದ
ದೇಹದ ಆಕೃತಿಯನ್ನು ಕಾಪಾಡಿಕೊಳ್ಳಬಹುದು

ಪ್ರತಿ ಫ್ಯಾಶನ್ನಿನ ಹಿಂದೆ ಬದಲಾವಣೆಗಾಗಿ
ಕಾತರ, ಸೌಂದರ್ಯ ದೃಷ್ಟಿ ಇರುವುದೆಂಬುದನ್ನು
ನಾವು ಮರೆಯ ಕೂಡದು, ಒಬ್ಬೊಬ್ಬರ
ಸೌಂದರ್ಯ ಕಲ್ಪನೆಯು ಒಂದೊಂದು ವಿಧ
ಹೀಗಾಗಿ ನಾನಾ ಬಗೆಯ ಫ್ಯಾಶನ್ನುಗಳು ಹುಟ್ಟಿ
ಕೊಂಡಿವೆ. ಇಂಥವುಗಳಲ್ಲಿ ಕೆಲವು ನಿಜವಾಗಿಯೂ
ಆಕರ್ಷಕವಾಗಿವೆ. ಕೆಲವು ಮಾತ್ರ ಸೌಂದರ್ಯದ
ಹೆಸರಿನಲ್ಲಿ ಮನಸ್ಸಿನ ಚಂಚಲತೆಯನ್ನು ಉದ್ವೇಗ
ವನ್ನೂ ತೋರಿಸುವ ಸಾಧನೆಗಳಾಗಿವೆ.

# ಕೃಷ್ಣಬಾದದ ಭೂತ

ಗೋವಿಂದಮೂರ್ತಿ ದೇಸಾಯಿ

**ಮಹಾರಾಜ ರಾಮಸಿಂಗನಿಗೆ ಶ್ವೇತ ಯುವತಿಯರೆಂದರೆ ತುಂಬ ಪ್ರೀತಿ. ಅವರಿಗಾಗಿ ತನ್ನ ಸಂಸಾರ ರಾಜ ಮರ್ರ್ಯಾದೆಗಳನ್ನೂ ಬಿಡಲು ಸಿದ್ಧ. ಅವರನ್ನು ಪಡೆಯಲು ಆತನು ಹೂಡಿದ ಭೂತದಸಂಚು ಅವನಿಗೇ ಮುಳುವಾಯಿತು.**

ಜೇನ್ ಫಿಲಿಪ್ ಮೇಜರ ಬಡತಿ ಪಡೆದು
ಇಂಗ್ಲಂಡದಿಂದ ಭಾರತಕ್ಕೆ ವರ್ಗವಾಗಿ ಬಂದರು.
ೃಷ್ಣಬಾದದ ದಂಡಿನ ಛಾವಣಿಗೆ ಅವರನ್ನು
ಾಕಲಾಯಿತು. ಕೃಷ್ಣಬಾದ ಆಗ ಭಾರತದಲ್ಲಿ
ಂದು ಮುಖ್ಯ ದಂಡಿನ ಛಾವಣಿಯಾಗಿತ್ತು.
ೇನ ಫಿಲಿಪ್ಪರು ತಮ್ಮ ಹೆಂಡತಿ ಸಿಂತಿಯಾ
ಅವಳ ತಂಗಿ ಜೆನ್ನೀಫರಳನ್ನು ಕರಕೊಂಡು
ುರತದವರೆಗೂ ಹಡಗದಲ್ಲಿ ಬಂದು, ಅಲ್ಲಿಂದ
ೇಲುಗಾಡಿಯಲ್ಲಿ ಕೃಷ್ಣಬಾದವನ್ನು ತಲುಪಿ
ದರು. ಫಿಲಿಪ್ ಕೃಷ್ಣಬಾದಕ್ಕೆ ಬರುವ
ುನ್ನ, ಅಲ್ಲಿಯ ಮಹಾರಾಜರಾಗಿದ್ದ ರಾಮ
ಿಂಗರಿಗೆ ಒಂದು ಪರಿಚಯಪತ್ರವನ್ನು ತಂದಿ
್ದರು. ಅದರ ಜೊತೆ ಮಹಾರಾಜರಿಗೆ ನಜರಾಣೆ
ಯನ್ನು ಕೊಡಲು ಹಲವಾರು ವಸ್ತುಗಳನ್ನು
ತಂದಿದ್ದರು. ಆ ಪದಾರ್ಥಗಳಲ್ಲಿ ಮಾತನಾಡುವ
ಎರಡು ಅನರ್ಘ್ಯ ಮಾಣಿಕ್ಯಗಳಿದ್ದವು! ಅಪೂರ್ವ
ಲಾವಣ್ಯವತಿಯರಾದ ಮರಿಯಾ ಮತ್ತು
ೂಲಿಯಸ್ಕ ರನಿಸ್ ಸಹೋದರಿಯರೇ ಆ
ಎರಡು ಮಾಣಿಕ್ಯಗಳಾಗಿದ್ದವು. ಪೋರ್ತು
ಗಾಲದ ರಾಜನಾಗಿದ್ದ ಮೂರನೇ ಜಾನ್,
ಲಿಸ್ಬನ್ನದಲ್ಲಿ ಸ್ಥಾಪಿಸಿದ್ದ ಅಭಯಾಶ್ರಮದಲ್ಲಿ
ಬೆಳೆದ ಹುಡಿಗೆಯರು ಇವರಾಗಿದ್ದರು.
ಗೌರವಸ್ಥ ಮನೆತನದ ಹುಡಿಗೆಯರು ಅನಾಥ
ರಾದರೆ, ಅವರನ್ನು ಈ ಆಶ್ರಮದಲ್ಲಿ ಬೆಳೆಸಿ
ಶಿಕ್ಷಣವನ್ನಿತ್ತು, ಅವರು ಯೌವನದ ಅಂಚನ್ನು
ತಲುಪಿದೊಡನೆ, ಹಡಗದಲ್ಲಿ ಹಿಂದುಸ್ತಾನಕ್ಕೆ
ರೆತಂದು ಇಲ್ಲಿಯ ರಾಜಮಹಾರಾಜರಿಗೋ
ಅಥವಾ ಅವಿವಾಹಿತ ಬ್ರಿಟಿಶ ಅಧಿಕಾರಿಗಳಿಗೋ
ುಲಾಮರಂತೆ ಮಾರುತ್ತಿದ್ದರು. ಅದೊಂದು
ವರ್ಣಸಂಕರವನ್ನು ಬೆಳೆಸುವ ವಿದೇಶಿಯರ
ಗತ್ತಾಗಿತ್ತು!

ಸಿಪಾಯಿ ಬಂಡಾಯವಾಗಿ ಅರ್ಧ ಶತಮಾನ
ಕಳೆದಿದ್ದರೂ, ಭಾರತಕ್ಕೆ ಸೈನಿಕ ಸೇವೆಗೆಂದು
ಬರುತ್ತಿದ್ದ ಬ್ರಿಟಿಶ ಅಧಿಕಾರಿಗಳಿಗೆ ಕನ್ಯೆ
ಯನ್ನು ಕೊಡಲು ಇಂಗ್ಲಂಡದವರು ಹಿಂದು
ಮುಂದೆ ನೋಡುತ್ತಿದ್ದರು. ಸೈನ್ಯಾಧಿಕಾರಿ
ಗಳೆಂದರೆ, ಸದಾ ಯುದ್ಧದಲ್ಲಿ ಇರುತ್ತಿದ್ದು
ದರಿಂದ ಅವರ ಹೆಂಡಂದಿರಿಗೆ ಭಾರತದ ಕಡು
ಬಿಸಿಲಲ್ಲಿ ಏಕಾಕಿಯಾಗಿ ಕಾಲಕಳೆಯುವದೇ
ಕಷ್ಟದಾಯಕವೆಂದು ಕನ್ಯಾಪಿತೃಗಳ ಕಲ್ಪನೆ
ಯಾಗಿತ್ತು! ಆದರೆ ಅಂದು ಬ್ರಿಟನ್ನದ
ಯುವಕರಿಗೆ ಭಾರತದಲ್ಲಿಯೇ ಭವಿಷ್ಯವಿತ್ತು.
ಇದರಿಂದ ಇಂಗ್ಲಂಡದ ವಧುಗಳಿಗೆ ವರಗಳ
ಕೊರತೆಯಿತ್ತು. ಆದರೂ ಇಂಗ್ಲಂಡದ ಕನ್ಯಾ
ಪಿತೃಗಳು ತಮ್ಮ ಹೆಣ್ಣುಮಕ್ಕಳನ್ನು ಭಾರತ
ದಲ್ಲಿ ಸೇವೆಸಲ್ಲಿಸುವ ಆಂಗ್ಲನಿಗೆ ಕೊಡಲು
ಹಿಂಜರಿಯುತ್ತಿದ್ದರು! ಹೀಗಾಗಿ ಬ್ರಿಟಿಶ
ಅಧಿಕಾರಿಗಳು ಇಲ್ಲಿ ತಮ್ಮ ಕಾಮಬಾಧೆಯ
ಉಪಶಮನಕ್ಕಾಗಿ ಅನೇಕ ಅನೈತಿಕ ಮಾರ್ಗ
ಗಳನ್ನು ಕಲ್ಪಿಸಿಕೊಳುತ್ತಿದ್ದರು. ಹಾಗೆ ನೋಡಿ
ದರೆ, ಲಗ್ನವಾಗಿ ಭಾರತಕ್ಕೆ ಬಂದ ಬ್ರಿಟಿಶ
ಮೇಮಸಾಹೇಬಾರು ಸಾಮ್ರಾಜ್ಞಿಯಂತೆ ಮೆರೆ
ಯುತ್ತಿದ್ದರು. ಅವರ ಕಾಲುಕೈಗಳಿಗೊಂದು
ಆಳು! ಬೇಡಿದ್ದು ಬಾಯಲ್ಲಿ ಬಂದು ಬೀಳು
ತ್ತಿತ್ತು! ಇಂಗ್ಲಂಡದಕ್ಕಿಂತಲೂ ಭಾರತದ
ಜೀವನ ಸುಖವಾಗಿತ್ತು!

ಮಹಾರಾಜ ರಾಮಸಿಂಗರ ತಂದೆ ಕೃಷ್ಣ
ಸಿಂಗ ವೈಸರಾಯರಿಗೆ ಹೇಳಿ ತಮ್ಮ
ರಾಜಧಾನಿ ಕೃಷ್ಣಬಾದದಲ್ಲಿ ಒಂದು ದಂಡಿನ
ಛಾವಣಿಯನ್ನು ತೆರೆಸಿದ್ದರು. ಛಾವಣಿಯವರಿಗೆ
ಬೇಕಾಗುವ ಅನುಕೂಲತೆಗಳನ್ನೆಲ್ಲಾ ಅವರು
ಮಾಡಿಕೊಟ್ಟಿದ್ದರು. ಹೀಗಾಗಿ ಕೃಷ್ಣಬಾದ ಸಣ್ಣ
ಸಂಸ್ಥಾನದ ರಾಜಧಾನಿಯಾಗಿದ್ದರೂ, ನೂರಾರು
ಬ್ರಿಟಿಶ ಅಧಿಕಾರಿಗಳು ದಂಡಿನಛಾವಣಿಯಲ್ಲಿ
ಇರುತ್ತಿದ್ದರು! ಹೀಗಾಗಿ ಮಹಾರಾಜ ರಾಮ
ಸಿಂಗರು ಸದಾ ಬ್ರಿಟಿಶ ಅಧಿಕಾರಿಗಳ ಮಧ್ಯ
ದಲ್ಲಿಯೇ ಇರುತ್ತಿದ್ದರು. ಮೇಲಿಂದ ಮೇಲೆ ಅವ
ರನ್ನು ತಮ್ಮ ಅರಮನೆಗೆ ಭೋಜನಕೂಟಕ್ಕೆ
ಆಹ್ವಾನಿಸುತ್ತಲೇ ಇರುತ್ತಿದ್ದರು. ಮಹಾರಾಜರ
ಶಿಕ್ಷಣವು ಕೂಡ ಈಟನ್, ಆಕ್ಸಫರ್ಡ ಮತ್ತು
ಫ್ರಾನ್ಸಗಳಲ್ಲಿ ಆಗಿತ್ತು. ಅವರ ಉಚ್ಚಾರಗಳು
ಆಕ್ಸಫರ್ಡ-ಉಚ್ಚಾರದಂತಿದ್ದವು. ಅವರ ವೇಷ
ಭೂಷಣ, ರುಚಿ-ಅಭಿರುಚಿಗಳು ಥೇಟ ಪಾಶ್ಚಾ-
ತ್ಯರಂತೇ ಇದ್ದವು. ಅವರು ಅಲ್ಲಿರುವಾಗ ಶ್ವೇತ
ವರ್ಣದ ಹುಡುಗೆಯರ ಜೊತೆಯೇ ಸುತ್ತುತ್ತಿ
ದ್ದರು. ಅದನ್ನು ಕೇಳಿದ್ದ ತಂದೆ ಕೃಷ್ಣಸಿಂಗರು
ಮಗನು ಆಕ್ಸಫರ್ಡದಲ್ಲಿ ಇರುವಾಗಲೇ ಅವನನ್ನು





ಭಾರತಕ್ಕೆ ಕರೆಸಿಕೊಂಡು ಮದುವೆಯನ್ನು ಮಾಡಿಬಿಟ್ಟರು. ಅದರಿಂದ ಅವನು ಸುಧಾರಿಸಬಹುದೆಂದು ತಿಳಿದಿದ್ದರು. ವಧು ಕೃಷ್ಣಸಿಂಗರ ಜ್ಯೇಷ್ಠ ಪುತ್ರಿ ಸರಸ್ವತಿರಾಜೇ ಅವರ ಮಗಳು ಸೀತಾರಾಜೇ! ಮುಟ್ಟಿದರೆ ಮಾಸುವಂತಹ ಮುತ್ತಿನಂಥ ಹುಡಿಗೆ. ರವಿವರ್ಮ ಚಿತ್ರದಲ್ಲಿ ಬಿಡಿಸಿದಂತಹ ಕಣ್ಣು ಮೂಗುಗಳು! ಮದುವೆಯಾದಾಗ ರಾಮಸಿಂಗರಿಗೆ ಇಪ್ಪತ್ತು ವರುಷ; ಸೀತಾರಾಜೇಗೆ ಹದಿನಾರು. ಮದುವೆಯ ಮುಂದೆ ರಾಮಸಿಂಗ ತಂದೆಗೆ "ಅಕ್ಕರಾಜೇಗೆ ತನ್ನ ಮಗಳನ್ನು ನಮ್ಮ ಮನೆತನಕ್ಕೇ ಕೊಡಬೇಕೆಂಬ ಹಟವಿದ್ದರೆ, ತಮ್ಮ ಲಕ್ಷ್ಮಣಸಿಂಗನಿಗೆ ಏಕೆ ಕೊಡಬಾರದು?" ಎಂದು, ಕೇಳಿದ್ದರು. ಕೃಷ್ಣಸಿಂಗ ಸಿಟ್ಟಿಗೆದ್ದು, ಹಟದಿಂದ ರಾಮಸಿಂಗರಿಂದಲೇ ಸೀತಾರಾಜೇಗೆ ಮಂಗಳಸೂತ್ರವನ್ನು ಕಟ್ಟಿಸಿದ್ದರು! ಆದರೆ ಅವಳು ರಾಮಸಿಂಗರಿಗೆ ಸ್ವಲ್ಪವೂ ಸೇರಲಿಲ್ಲ! ರಾಮಸಿಂಗ ಮರಳಿ ಆಕ್ಸಫರ್ಡ್‌ಕ್ಕೆ ಹೋಗುವಾಗ ಸೀತಾರಾಜೇಗೆ ಅವಳ ಹಾಲುಗಲ್ಲದ ಮೇಲೆ ಒಂದು ಮುತ್ತನ್ನೂ ಕೊಡಲಿಲ್ಲವೆಂದು ಸೀತಾರಾಜೇಗೆ ವ್ಯಥೆ! ಆದರೆ ರಾಮಸಿಂಗರಿಗೆ ಬಿಳಿ ಹುಡಿಗೆಯರ ಗೀಳು ಹತ್ತಿದ್ದು ಆ ಮುಗ್ಧ ಹುಡಿಗಿಗೇನು ಗೊತ್ತು! ಶುಭ್ರ ತ್ವಚೆಯ ಲಿಪ್‌ಸ್ಟಿಕ್ ತುಟಿಗಳ ಮೇಲೆ ಒಂದು ಮುತ್ತನ್ನು ಕೊಡಲು ಯುವರಾಜ ರಾಮಸಿಂಗರು ಆಗ ನೂರಾರು ಪೌಂಡುಗಳನ್ನು ವ್ಯಯಿಸುತ್ತಿದ್ದರು. ಹೀಗಾಗಿ ಈ ದುಂದು ರಾಜಕುಮಾರನ ಹಿಂದೆ ಹತ್ತೆಂಟು ಬಿಳಿ ಹುಡಿಗೆಯರು ಸದಾ ಅಲೆಯುತ್ತಿದ್ದರು. ಅವರ ಫ್ರಾಕುಗಳಲ್ಲಿ ಸಿಕ್ಕಿ ಹಾಕಿಕೊಂಡ ರಾಮಸಿಂಗರಿಗೆ ಭಾರತದ ಅಪ್ಸರೆಯರೂ ಶೂರ್ಪನಖಿಯರಂತೆ ಕಾಡಾಗಿ ಕಾಣಿಸಹತ್ತಿದರು! ಬಿಳಿತ್ವಚೆಯ ಹೆಣ್ಣು ಭಾರತವನ್ನು ಬಿಟ್ಟು ಬೇರಾವ ದೇಶದ್ದಿದ್ದರೂ ಅವರಿಗೆ ಸೇರುತ್ತಿದ್ದರು!

ತಂದೆ ಕೃಷ್ಣಸಿಂಗ ಇನ್ನೂ ಕೆಲಕಾಲ ಬದುಕಿರುತ್ತಿದ್ದರೆ, ರಾಮಸಿಂಗರಿಗೆ ಇನ್ನಷ್ಟು ಬಿಳಿ ಹುಡಿಗೆಯರ ಸಂಗದಲ್ಲಿ ಕಾಲ ಕಳೆಯಲು ಅನುಕೂಲವಾಗುತ್ತಿತ್ತೇನೋ! ಆದರೆ ಕೃಷ್ಣಸಿಂಗ ಆಕಸ್ಮಿಕವಾಗಿ ಕಣ್ಣು ಮುಚ್ಚಿದ್ದರಿಂದ, ರಾಮಸಿಂಗರು ಇಂಗ್ಲಂಡದಿಂದ ಬಂದು ಕೃಷ್ಣಬಾದ ಸಂಸ್ಥಾನದ ಸಿಂಹಾಸನವನ್ನೇರಿದರು. ರಾಮಸಿಂಗರಿಗೆ ಮಹಾರಾಜರ ಪಟ್ಟವಾದಾಗ ಸೀತಾರಾಜೇ ಮಹಾರಾಣಿಯಾದಳು! ಅರಮನೆಯ ಹಿರಿಯ ಹೆಂಡತಿ ಮಹಾರಾಣಿಯಾಗುವ ಸಂಪ್ರದಾಯವಿತ್ತು!

ವಿದೇಶದಿಂದ ಬಂದ ರಾಮಸಿಂಗರು ಸದಾ ಬ್ರಿಟಿಷ ಅಧಿಕಾರಿಗಳೊಂದಿಗೆ ಪಾನಕೂಟಕ್ಕೋ ಬೇಟೆಗೋ ಹೋಗುತ್ತಿದ್ದರಲ್ಲದೆ, ತಮ್ಮ ಅರಮನೆಗೆ ಅವರನ್ನೂ ಅವರ ಕುಟುಂಬದವರೊಂದಿಗೆ ಭೋಜನಕೂಟಕ್ಕೆ ಆಹ್ವಾನಿಸಹತ್ತಿದರು. ಆದರೆ ಈ ಯಾವ ಸಮಾರಂಭಗಳಿಗೂ ಅವರು ಸೀತಾರಾಜೇಯನ್ನು ಕರೆತರುತ್ತಿರಲಿಲ್ಲ. ದಸರೆ, ದೀಪಾವಳಿಗಳಂತಹ ಒಂದೆರಡು ಹಬ್ಬಗಳಲ್ಲಿ ಮಾತ್ರ ಮಹಾರಾಜ ರಾಮಸಿಂಗರು ಮಹಾರಾಣಿಯೊಂದಿಗೆ ಸಾರ್ವಜನಿಕರಲ್ಲಿ ಕಾಣಿಸಿಕೊಳ್ಳುತ್ತಿದ್ದರು. ಹೀಗಾಗಿ ಸೀತಾರಾಜೇ ಅಂತಃಪುರದಲ್ಲಿ ಬಂಧಿಯಂತೆಯೇ ಇದ್ದಳು. ಅವಳು ಹೆಸರಿಗೆ ಮಾತ್ರ ಮಹಾರಾಣಿ. ಮಹಾರಾಜರು ಅವಳಿಗೆಂದಾದರೂ ಒಂದು ಮುತ್ತನ್ನು ಕೊಟ್ಟಿದ್ದರೊ ಇಲ್ಲವೋ!

ಜೀನ ಫಿಲಿಪ್‌ರು ಸಿಂತಿಯಾ ಮತ್ತು ಜೇನ್ನಿಫರಳನ್ನು ಕರಕೊಂಡು ಅರಮನೆಗೆ ಬಂದು ಪರಿಚಯ ಪತ್ರವನ್ನು ಮತ್ತು ತಂದ ನಜರಾಣೆಗಳನ್ನು ಮಹಾರಾಜರಿಗೆ ಅರ್ಪಿಸಿದರು. ಲಾರ್ಡ ಅಕಲಂಡರಿತ್ತ ಪತ್ರವನ್ನು ಓದಿ ಮಹಾರಾಜರು "ಫಿಲಿಪ್ ಇವರು ನನ್ನ ಸ್ನೇಹಿತರು ನಿಮಗೂ ಪೋಲೋ ಆಟದಲ್ಲಿ ಅಭಿರುಚಿಯಿದೆಯಂತೆ... ಅಂದ ಮೇಲೆ ನಮ್ಮಿಬ್ಬರ ಹವ್ಯಾಸಗಳು ಒಂದೇ ಆದಂತಾಯಿತು. ಕ್ಯಾಪ್ಟನ್ ಪೋರ್ಟಲಂಡ್ ಛಾವಣಿಯಲ್ಲಿ ನಿಮ್ಮ ವಾಸಕ್ಕೆ ಬಂಗ್ಲೆಯನ್ನು ಕೊಡದಿದ್ದರೆ, ಛಾವಣಿಯಲ್ಲಿರುವ ನಮ್ಮ ಒಂದು ಬಂಗ್ಲೆಯನ್ನು ನಿಮಗೆ ಕೊಡುತ್ತೇವೆ. ಸಿಂತಿಯಾ ಮತ್ತು ಜೆನ್ನೀಫರ ಅವಳಿ ಜವಳಿ ಸಹೋದರಿಯಂತೆ ಇದ್ದಾರಲ್ಲ... ಸಿಂತಿಯಾ ನೀನು ಭಾರತಕ್ಕೆ ಹೊಸಬಳು. ಇಲ್ಲಿಯ ಜೀವನವೆಂದರೆ ತುಂಬಾ ಬೇಸರಿಕೆ ತರುವಂತಹ ಜೀವನ ಮತ್ತು ಭಾರತವೆಂದರೆ ಸಹರಾ ಉಸುಕಿನ ಬೈಲಿನಷ್ಟು ಒಣದಾದದ್ದು ಎಂದು ಇಂಗ್ಲಂಡದಲ್ಲಿ ನಿನಗೆ ಯಾರಾದರೂ ಹೇಳಿರಬೇಕು. ನಿನ್ನ ಗಂಡ ಯುದ್ಧಕ್ಕೆ ಹೋದರೆ ಬಂಗ್ಲೆಯಲ್ಲಿ ನಿನಗೆ ಜೀವನವು ಬರಡೆನಿಸಬಹುದು. ಆಗ ನೀನು ನಮ್ಮ ಅರಮನೆಗೆ ಬಂದುಬಿಡು. ಇಲ್ಲಿ ಒಂದು ಪುಟ್ಟ ಲಂಡನ್ನಿದೆ. ಆದರೆ ಲಂಡನ್ನದ ಹವೆಯನ್ನು ಮಾತ್ರ ಇಲ್ಲಿ ಹಿಡಿದಿಡಲು ಸಾಧ್ಯವಾಗಿಲ್ಲ ಅಷ್ಟೇ!... ಈ ಅರಮನೆ ನಿಮ್ಮದೆಂದೇ ಭಾವಿಸಿರಿ" ಎಂದು ಆಡಿದ ತಿಳಿಹಾಸ್ಯದ ಮಾತುಗಳು ಮೂವರಿಗೂ ಹಿಡಿಸಿದವು. ಮೂರೇ ಕ್ಷಣಗಳಲ್ಲಿ ಮೂವತ್ತು ವರುಷ ಸಂಬಂಧವಿದ್ದಷ್ಟು ಆತ್ಮೀಯತೆ ಬೆಳೆಯಿತು. ಮಹಾರಾಜರು ಅಂದು ಅವರಿಗೆ ರಾತ್ರಿ ಅಲ್ಲಿ ಭೋಜನವನ್ನು ಮಾಡಿಕೊಂಡು ಹೋಗಲು ಆಗ್ರಹಪಡಿಸಿದರು,

ಸಿಂತಿಯಾ ಮತ್ತು ಜೆನ್ನೀಫರ ಅಂತಃಪುರದ ಉದ್ಯಾನವನ್ನು ನೋಡಿಬರಲು ಹೋದಾಗ ಫಿಲಿಪ "ಮಹಾರಾಜ, ಪೋರ್ತುಗಾಲದಿಂದ ತಮಗೆರಡು ಅಮೂಲ್ಯವಾದ ಮುತ್ತುಗಳನ್ನು ತಂದಿದ್ದೇನೆ. ತಮ್ಮ ಕೊರಳಿಗೆ ಅವು ಖಂಡಿತ ಒಪ್ಪುವವು. ತಮಗೆ ವಿದೇಶೀ ಬಿಳಿ ಹುಡಿಗಿಯರೆಂದರೆ ತುಂಬಾ ಪ್ರೀತಿಯೆಂದು ಲಾರ್ಡ ಅಕಲಂಡ ನನಗೆ ಸೂಚಿಸಿದ್ದರು. ಅದಕ್ಕೆ ನಾನು ಬರುವಾಗ ಲಿಸ್ಬನ್‌ದಲ್ಲಿ ಇವರನ್ನು ಕೊಂಡುಕೊಂಡು ಬಂದಿದ್ದೇನೆ. ಇಬ್ಬರೂ ಅಪೂರ್ವ ಲಾವಣ್ಯವತಿಯರು. ಮರಿಯಾ ಮತ್ತು ಜ್ಯೂಲೀ ಅವರ ಅಧರ ಮತ್ತು ಕೆನ್ನೆಗಳಿಗೆ ಯಾವ ಪುರುಷರ ಅಧರಗಳೂ ಈ ವರೆಗೆ ಸ್ಪರ್ಶಿಸಿಲ್ಲವೆಂದು ನಾನು ನಿಮಗೆ ಭರವಸೆ ಕೊಡಬಲ್ಲೆ. ಪುರುಷರ ತೋಳುಗಳಲ್ಲಿಯೂ ತಮ್ಮ ಕೋಮಲ ತೋಳುಗಳನ್ನು ಸೇರಿಸಿಲ್ಲ ಇವರು ಈ ಕಾಲ ಜಾರೊಂದಿಗೂ ನರ್ತಿಸಿಲ್ಲ! ತಾವೇ ಅವರ ಮೊಸಲನ್ನು ಮುರಿಯಬೇಕು... ತಮ್ಮ

ಅಪ್ಪಣೆಯಾದರೆ...!" ಎಂದು, ಮಹಾರಾಜರ ಮುಖವನ್ನು ನೋಡಿದರು. ಮಹಾರಾಜರ ಮುಖ ಪ್ರಸನ್ನವಾಯಿತು.

"ಫಿಲಿಪ್ ನಿಮಗೆ ತುಂಬಾ ಧನ್ಯವಾದಗಳು. ನೀವು ನಮ್ಮ ದೇಶಕ್ಕೆ ಬರುವ ಮುನ್ನವೇ ನಮ್ಮ ಬಲವನ್ನು ಅರಿತು ಬಂದಿರುವಿರಿ. ಈಗ ಅವರೆಲ್ಲಿ" ಎಂದರು.

"ನಾವಿಳಿದ ಭವನ ಅತಿಥಿಗೃಹದಲ್ಲಿ ಇದ್ದಾರೆ..." ಎಂದು, ಫಿಲಿಪ್ ಹೇಳಿದರು.

''ಇದೇನು, ರಸಭರಿತ ಮಾವಿನಹಣ್ಣುಗಳನ್ನು ನಮ್ಮ ಮುಂದೆ ಹೆಚ್ಚಿಟ್ಟು ನಮ್ಮನ್ನು ಮಾತಿ ಗೆಳೆದಂತೆ ಮಾಡಹತ್ತಿದ್ದೀರಿ'' ಎಂದು, ಮಹಾರಾಜರು ನಕ್ಕರು. ಮಹಾರಾಜನಿಗೆ ಅವರನ್ನು ನೋಡುವ ತವಕವಾಗಿತ್ತು.

ಮುಂದೆ ಅರಮನೆಯ ಕಾರು ಭಾವಣಿಯ ಅತಿಥಿಗೃಹಕ್ಕೆ ಹೋಗಿ, ಸೋದರಿಯರಿಬ್ಬರನ್ನು ಕರೆತಂದಿತು. ಇಬ್ಬರೂ ಅಪ್ಸರೆಯರೇ! ಒಬ್ಬಳು ಊರ್ವಶಿ, ಇನ್ನೊಬ್ಬಳು ರಂಭೆ ! ಇಬ್ಬರೂ ಅಂಜಿದ ಜಿಂಕೆಗಳಂತೆ ಕಣ್ಣರಳಿಸಿ ನಿಂತಿದ್ದರು. ಮಹಾರಾಜರು ಅವರ ಕೈಕುಲುಕಿ "ನೀವಿಬ್ಬರೂ ಈಗ ಕೃಷ್ಣಬಾದ ಸಂಸ್ಥಾನದ ರಾಜಪರಿವಾರಕ್ಕೆ ಸೇರಿದಂತಾಯಿತು. ಇಂದಿನಿಂದ ನಿಮ್ಮ ರಕ್ಷಣೆಯ ಭಾರ ನಮ್ಮದು. ನೀವಿಲ್ಲಿ ನಿರ್ಭೀತಿಯಿಂದ ಇರ ಬಹುದು" ಎಂದು, ಹೇಳುತ್ತಾ ತಮ್ಮ ಬದಿಗೆ ಮರಿಯಾ ಮತ್ತು ಜೂಲಿಯಾರನ್ನು ಕೂಡಿಸಿ ಕೊಂಡರು. ಮಹಾರಾಜರ ಮಾತುಗಳಿಂದ ಅವರಿಬ್ಬರಲ್ಲಿ ಆಸೆ ಭರವಸೆಗಳೊಡನೆ ವಿಶ್ವಾಸವು ಮೂಡಿತು. ಅಭಯಾಶ್ರಮದಲ್ಲಿ ಗೊತ್ತುಗುರಿ ಗಳಿಲ್ಲದೆ ಬೆಳೆದ ಅವರಿಗೆ ಈಗ ಒಂದು ನೆಲೆ ಸಿಕ್ಕಂತಾಗಿತ್ತು. ಮಳೆಗೆ ಹೆದರಿ ರೆಕ್ಕೆಗಳನ್ನು ಮುಚ್ಚಿಕೊಂಡ ಹಕ್ಕಿ ಮಳೆ ನಿಂತಮೇಲೆ ಮೆಲ್ಲನೆ ರೆಕ್ಕೆಗಳನ್ನು ಬಿಡಿಸಿಕೊಂಡು ಪರಿಸರಕ್ಕೆ ಹೊಂದಿ ಕೊಳ್ಳುವಂತೆ ಸಹೋದರಿಯರಿಬ್ಬರು ಮಹಾರಾಜ ಮತ್ತು ಫಿಲಿಪ್‌ರ ಮಾತುಗಳಲ್ಲಿ ಮೆಲ್ಲನೆ ಪಾಲ್ಗೊಳ್ಳಹತ್ತಿದರು. ಭೋಜನದ ಮೇಜಿನಲ್ಲಿ ಕುಳಿತ ಸಿಂತಿಯಾ, ಜೆನ್ನಿಫರ, ಮರಿಯಾ ಮತ್ತು ಜ್ಯೂಲಿ ಅವರ ಸೌಂದರ್ಯ ಆಸ್ವಾದನೆಯಲ್ಲಿ ಮಹಾರಾಜರು ಊಟವನ್ನೆ ಮರೆತು ತದೇಕಚಿತ್ತದಿಂದ ಅವರನ್ನೇ ನೋಡಹತ್ತಿದರು. ಉಳಿದವರಿಗೆಲ್ಲಾ ಮಹಾರಾಜರು ಆಗ್ರಹಮಾಡಿ ಬಡಿಸಿಸಹತ್ತಿದರು. ಭೋಜನದ ಸಮಯಕ್ಕಾದರೂ ಮಹಾರಾಣಿಯರು ಹೊರಗೆ ಬರುವರೆನೋ ಎಂದು ಸಿಂತಿಯಾ ಹಾದಿ ಕಾಯ್ದಳು. ಆದರೆ ಸೀತಾರಾಜೇ ಅಲ್ಲಿ ಕಾಣಿಸಿ ಕೊಳ್ಳಲಿಲ್ಲ. ಮಹಾರಾಣಿಯೆಂದರೆ ದಂತದ ಬೊಂಬೆಯಷ್ಟು ಸುಂದರಳಿರುವಳೆಂದು ಸಿಂತಿಯಾ ಯಾರಿಂದಲೋ ಕೇಳಿದ್ದಳು. ಅದಕ್ಕೆ ಸಿಂತಿಯಾಗೆ ಅವಳನ್ನು ನೋಡುವ ತವಕವಾಗಿತ್ತು. ಆದರೆ ಸಂಪ್ರದಾಯವೇನಿದೆಯೋ ಎಂದು ಸಿಂತಿಯಾ ಮಹಾರಾಜರಿಗೆ ಅವಳ ಬಗ್ಗೆ ಕೇಳಲಿಲ್ಲ. ಫಿಲಿಪ್ ಮತ್ತು ಸಿಂತಿಯಾ, ಮಹಾರಾಜರ ಪ್ರಥಮ ಭೇಟಿಯಲ್ಲಿಯೇ ಅವರ ಪೂರ್ಣ ವಿಶ್ವಾಸವನ್ನು ಪಡೆದರು. ಅಂದು ರಾತ್ರಿ ವಿಳಂಬವಾಗಿದ್ದರಿಂದ ಮಹಾರಾಜರು, ಫಿಲಿಪ್, ಸಿಂತಿಯಾ ಮತ್ತು ಜೆನ್ನೀಫರಳನ್ನು ತಮ್ಮ ಕಾರಿನಲ್ಲಿ ಕಳಿಸಿದರು.

ಮುಂದೆ ಎರಡೇ ದಿವಸಗಳಲ್ಲಿ ಕ್ಯಾಪ್ಟನ್ ಪೋರ್ಟಲ್ಯಾಂಡ ಮೇಜರ ಫಿಲಿಪ್‌ರಿಗೆ ಒಂದು ವಿಶಾಲಬಂಗ್ಲೆಯನ್ನು ತೆರವು ಮಾಡಿಸಿ ಕೊಟ್ಟನು. ಸಿಂತಿಯಾಳನ್ನು ಕರಕೊಂಡು ಹೋಗಿ ಬಂಗ್ಲೆಯನ್ನು ತೋರಿಸಿಕೊಂಡು ಬಂದನು. ಫಿಲಿಪ್ ಈಗಾಗಲೇ ತಮ್ಮ ಕೆಲಸಕ್ಕೆ ಹಾಜರಾಗಿದ್ದರು. ಫಿಲಿಪ್‌ರು ಹೊಸ ಬಂಗ್ಲೆಗೆ ಹೋದೊಡನೆ, ಮಹಾರಾಜರು ತಮ್ಮ ಒಂದು ಹಳೆಯ ಕಾರನ್ನು ಫಿಲಿಪ್‌ರಿಗೆ ಮಾರಿದರು. ಇದರಿಂದ ಭಾವಣಿಯಲ್ಲಿ ಈಗ ಫಿಲಿಪ್‌ರ ಅಂತಸ್ತು ಏರಿತು. ಫಿಲಿಪ್‌ರು ಮಹಾರಾಜ ರಾಮಸಿಂಗರ ಪರಮ ಸ್ನೇಹಿತರೆಂದು ದಂಡಿನಲ್ಲಿ ಎಲ್ಲ ಅಧಿಕಾರಿಗಳು ಮಾತನಾಡಹತ್ತಿದರು. ಕೆಲ ಜ್ಯೇಷ್ಠ ಅಧಿಕಾರಿಗಳು ಫಿಲಿಪ್‌ರನ್ನು, ಮಹಾರಾಜರಿಗೆ ಅವರು ಯಾವ ಮೋಡಿಯನ್ನು ಮಾಡಿದರೆಂದು ಕೇಳಹತ್ತಿದರು. ಭಾವಣಿಯ ದಂಡಿನ ಅಧಿಕಾರಿಗಳು ವರುಷದಲ್ಲಿ ಹತ್ತೆಂಟು ಸಲ ಮಹಾರಾಜರ ಆಮಂತ್ರಿತ ಅತಿಥಿಗಳಾಗಿ ಅರಮನೆಗೆ ಹೋಗಿಬರುತ್ತಿದ್ದರೆ, ಫಿಲಿಪ್‌ರು ವಾರದಲ್ಲಿ ಎರಡು ಸಲ ಅರಮನೆಯ ಭೋಜನಕ್ಕೆ ಹೋಗಹತ್ತಿದರು. ಒಂದೊಂದು ಸಲ ಫಿಲಿಪ್‌ರಿಗೆ ಆಗದಿದ್ದರೆ, ಸಿಂತಿಯಾ ಮತ್ತು ಜೆನ್ನಿಫರರಿಬ್ಬರೇ ಅರಮನೆಗೆ ಹೋಗಿ ಮಹಾರಾಜರೊಡನೆ ಹರಟೆಯನ್ನು ಹೊಡೆದು, ಅವರ ಅತಿಥ್ಯವನ್ನು ಸ್ವೀಕರಿಸಿಬರಹತ್ತಿದರು. ಭಾರತದಲ್ಲಿ ಮನರಂಜನೆ ಮತ್ತು ಮೋಜುಮಾಡಲು ಅವಕಾಶಗಳಿಲ್ಲವೆಂಬ ಮಾತುಗಳನ್ನು ಈಗ ಸಿಂತಿಯಾ ಒಪ್ಪಲು ಸಿದ್ಧಳಿರಲಿಲ್ಲ. ಮಹಾರಾಜರಿದ್ದುದರಿಂದ ಅವಳಿಗೆ ಬೇಸರಿಕೆಯೇ ಬರಲಿಲ್ಲ. ಆದರೆ ಉಳಿದ ಭಾವಣಿಯ ಹೆಂಗಸರೆಲ್ಲ ಮನೆಯಲ್ಲಿಯೇ ಕಾಲವನ್ನು ಕಳೆಯಬೇಕಾಗಿದ್ದರಿಂದ ಬೇಸರಿಸಹತ್ತಿದರು. ಗಂಡಂದಿರು ಯುದ್ಧಕ್ಕೆ ಹೋದರೆ ಈ ಹೆಂಡಂದಿರ ಗೋಳನ್ನು ಯಾರೂ ಕೇಳುವಂತಿರಲಿಲ್ಲ ! ಮಧ್ಯಾಹ್ನ ಯಾವುದಾದರೂ ಬಂಗ್ಲೆಯಲ್ಲಿ ಒಂದೆಡೆ ಸೇರಿ ಹರಟೆಯನ್ನು ಕೊಚ್ಚುತ್ತಿದ್ದರು. ಆದರೆ ಅದೆಷ್ಟು ಹರಟೆಯನ್ನು ಹೊಡೆಯುವದು. ಈ ಗೋಳನ್ನು ಕೇಳಿಯೇ ಇಂಗ್ಲಂಡದ ವಿವಾಹಯೋಗ್ಯ ಹುಡುಗಿಯರು ಮದುವೆಯಾಗಿ ಭಾರತಕ್ಕೆ ಬರಲು ಸಿದ್ಧರಿರಲಿಲ್ಲ. ಆದರೆ ಬ್ರಿಟಿಷ ಯುವಕರಿಗೆ ನೌಕರಿಗಳು ಬೇಕಾಗಿದ್ದರೆ ಅವರು ಭಾರತಕ್ಕೆ ಬರಬೇಕಿತ್ತು. ಇಂಗ್ಲಂಡದಲ್ಲಿ ಅವರಿಗೆ ನೌಕರಿಯೇ ಸಿಗುತ್ತಿರಲಿಲ್ಲ. ಇಂಗ್ಲಂಡದ ಯುವತಿಯರು ಭಾರತಕ್ಕೆ ಬರುವ ತರುಣ ಅಧಿಕಾರಿಗಳನ್ನು ಮದುವೆ



ಸರ್ವರಿಗೂ ದೀಪಾವಳಿಯ ಹಾರ್ದಿಕ ಶುಭಾಶಯಗಳು–

ಫೋನ: ೬೨೧೭೬

ಸ್ಥಾಪನೆ: ೧೯೩೪

# ದಿ. ಮರಾಠಾ ಕೋ-ಆಪರೇಟಿವ್ ಬ್ಯಾಂಕ್ ಲಿ.,

## ಮರಾಠಾಗಲ್ಲಿ, ಹುಬ್ಬಳ್ಳಿ.




೩೦–೬–೧೯೮೬ ರ ಬ್ಯಾಂಕಿನ ಸಾಂಪತ್ತಿಕ ಸ್ಥಿತಿ (ಲಕ್ಷಗಳಲ್ಲಿ)

ಮೆಂಬರರ ಸಂಖ್ಯೆ: ೨೭೦೨
ಪಾವತಿಯಾಗಿರುವ
ಶೇರಮೊಬಲಗು; ೧೦.೮೬
ಠೇವುಗಳು: ೫೮.೯೫

ದುಡಿಯುವ ಭಂಡವಾಳ: ೭೮.೯೪
ಸದಸ್ಯರುಗಳಿಗೆ
ಕೊಟ್ಟ ಸಾಲದ ರಕಮು; ೫೪.೩೮
ರಿಜರ್ವ ಫಂಡ: ೯.೧೩

ಆಡಳಿತ ವರ್ಗ :–
೧) ಶ್ರೀ ಎಂ. ಜಿ. ಭಿಲ್ಲೆ
೨) ಡಾ॥ ಎಚ್. ಎನ್. ಸಿಂಧೆ D·S·A·C· & A·V·S·
೩) ಶ್ರೀ ವ್ಹಿ. ಎಂ. ಜಾಧವ B.A.
೪) ಶ್ರೀ ಟಿ. ಎಚ್. ಸಿಂಧೆ
೫) ಶ್ರೀ ಎಸ್. ಆರ್. ಪೋಳ
೬) ಶ್ರೀ ಜಿ. ಎಚ್. ಜಾಧವ
೭) ಶ್ರೀ ಎಸ್. ಕೆ. ಕದಂ B· E· (Civil)

ನಮ್ಮ ಬ್ಯಾಂಕು ವಿವಿಧ ಠೇವುಗಳ ಮೇಲೆ ಆಕರ್ಷಣೀಯ ಬಡ್ಡಿ ಕೊಡುವುದು ಠೇವುಗಳ ಭದ್ರತೆಗಾಗಿ ಡಿಪಾಜಿಟ್ ಇನ್ಸುರನ್ಸ ರಕಮನ್ನು ಅಳವಡಿಸಿ ಕೊಳ್ಳಲಾಗಿದೆ. ಗ್ರಾಹಕರು ತಮ್ಮ ಉಳಿತಾಯದ ಹಣವನ್ನು ನಮ್ಮ ಬ್ಯಾಂಕಿನ ವಿವಿಧ ಠೇವುಗಳಲ್ಲಿ ತೊಡಗಿಸಿ ಹೆಚ್ಚಿನ ಬಡ್ಡಿಯ ಲಾಭ ಪಡೆಯಬೇಕಾಗಿ ವಿನಂತಿ.

ಶ್ರೀ ಕೆ. ಎಂ. ಮೋಹಿತೆ
B.Sc. LLB. (Spl.)
ಮ್ಯಾನೇಜರ

ಶ್ರೀ ವ್ಹಿ. ಪಿ. ಗಣೇಶಕರ
ವಾಯಿಸ್ ಚೇರಮನ್

ಶ್ರೀ ಎಸ್. ಎಲ್. ಕಾಟಕರ
B.A. LLB. (Spl.)
ಚೇರಮನ್

---

# ಶ್ರೀ ಜಗದ್ಗುರು ಉಜ್ಜಯಿನಿ ಸದ್ಧರ್ಮ ಸಿಂಹಾಸನ
# ಜ್ಞಾನಗುರು ವಿದ್ಯಾಪೀಠ ಉಜ್ಜಯಿನಿ (ಕೂಡ್ಲಿಗಿ ತಾಲೂಕ)

## SREE JAGADGURU UJJAINI SADDHARMA SIMHASANA
## GNANAGURU VIDHYA PEETHA, OOJENI,

Administrative Office : BANDIMOTE, BALLARY-583 101.

ಅಧ್ಯಕ್ಷರು :– ಶ್ರೀ ಶ್ರೀ ಶ್ರೀ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಮಹಾಸ್ವಾಮಿಗಳು
ಕಾರ್ಯದರ್ಶಿ :– ಶ್ರೀ ಎಸ್. ಎಂ. ದಕ್ಷಿಣಾಮೂರ್ತಿ

ಈ ಸಂಸ್ಥೆಯ ಆಶ್ರಯದಲ್ಲಿ ಧಾರ್ಮಿಕ ಮತ್ತು ಲೌಕಿಕ ಸಂಸ್ಥೆಗಳು ೩೦

(೧) ಸಂಸ್ಕೃತ ಪಾಠಶಾಲೆಗಳು
(೨) ಪ್ರಾಥಮಿಕ ಶಾಲೆಗಳು
(೩) ಪ್ರೌಢ ಶಾಲೆಗಳು
(೪) ಪದವಿ ಪೂರ್ವ ಮಹಾವಿದ್ಯಾಲಯಗಳು
(೫) ಶಾರೀರಕ ಶಿಕ್ಷಣ ತರಬೇತಿ ಕೇಂದ್ರ
(೬) ಉಚಿತ ಪ್ರಸಾದ ನಿಲಯಗಳು

ನಾಗುವಂತೆ ಪ್ರೋತ್ಸಾಹಿಸಲು ಸರಕಾರವು ಯುವತಿಯರು ದುರ್ದೈವದಿಂದ ವಿಧವೆಯಾ ದರೆ ಅವರ ಗಂಡಂದಿರಿಗೆ ಸೇವೆಯಲ್ಲಿದ್ದಾಗ ಗುತ್ತಿದ್ದ ಹದಿನೈದು ನೂರು ರೂಪಾಯಿ ಸಂಬಳದಷ್ಟೇ ಪಿಂಚಣಿಯನ್ನು ಅವರಿಗೆ ಕೊಡು ತ್ತಿದ್ದರು. ಅದರಿಂದ ಅವರು ಇಂಗ್ಲಂಡಕ್ಕೆ ಹೋಗಿ ಸ್ವಚ್ಛಂದ ಜೀವನವನ್ನು ನಡೆಸಲು ಅನು ಕೂಲವಾಗಬೇಕೆಂಬ ವಿಚಾರ ಅವರದಿತ್ತು. ಅಂತಲೇ ಬ್ರಿಟಿಶ ಹೆಣ್ಣಿಗೆ ಸಧವೆಯಾದರೂ, ಹದಿ ನೈದುನೂರು ರೂಪಾಯಿ ಬೆಲೆ ಮತ್ತು ವಿಧವೆ ಯಾದರೂ ಹದಿನೈದು ನೂರು ರೂಪಾಯಿ ಬೆಲೆ ಎಂದುಹಾಸ್ಯಮಾಡುತ್ತಿದ್ದರು.

ಬ್ರಿಟನ್ನದಲ್ಲಿ ಇದ್ದರೆ ತನ್ನ ತಂಗಿಗೆ ಯೋಗ್ಯ ಜೊತೆ ಸಿಗುವದು ದುಸ್ತರವಾಗುವದೆಂದು. ಸಿಂತಿಯಾ ಜೆನ್ನೀಫರಳನ್ನು ಭಾರತಕ್ಕೆ ಕರೆತಂದಿ ದ್ದಳು. ಇಲ್ಲಿಗೆ ಮೇಲಿಂದಮೇಲೆ ಬರುತ್ತಿದ್ದ ಬ್ರಿಟೀಶ ತರುಣ ಅಧಿಕಾರಿಯೊಬ್ಬನಿಗೆ ಅವಳನ್ನು ಮದುವೆ ಮಾಡಿಕೊಡುವದೇ ಸಿಂತಿಯಾಳ ಉದ್ದೇಶ ವಾಗಿತ್ತು. ತಾನು ತುಟಿ ಬಿಚ್ಚಿದರೆ ಮಹಾರಾಜ ರಾಮಸಿಂಗನೇ ಜೆನ್ನಿಫರಳ ಕೈಹಿಡಿದು ಅವಳನ್ನು ಮಹಾರಾಣಿ ಪಟ್ಟಕ್ಕೇರಿಸುವರೆಂಬ ವಿಶ್ವಾಸ ಸಿಂತಿಯಾಳದಾಗಿತ್ತು. ಆದರೆ ಅವಳಿಗೆ ಇದು ಬೇಕಿರಲಿಲ್ಲ. ಒಂದು ದಿವಸ ಫಿಲಿಪ್ ಮನೆಗೆ ಬರುವಾಗ ಸ್ಯಾಂಡಿ ಕ್ಯಾಂಪ್‌ಬೆಲ್ ಎಂಬ ತರುಣ ಅಧಿಕಾರಿಯನ್ನು ಕರೆತಂದು, ಅವರ ಆವಾರದಲ್ಲಿದ್ದ ಅತಿಥಿಗೃಹದಲ್ಲಿ ವಾಸಿಸಲು ಅನುವು ಮಾಡಿಕೊಟ್ಟನು. ಸ್ಯಾಂಡೀ ಸ್ಟೇಶನ್ ಸ್ಟಾಫ್ ಆಫೀಸರನೆಂದು ನೇಮಕವಾಗಿ ಬಂದಿದ್ದನು. ಅವನು ಆಯರ್ಲಂಡದವನಿದ್ದನು. ಅವನು ಬಂದ ಎಂಟೇ ದಿವಸಗಳಲ್ಲಿ ಫಿಲಿಪ್‌ರ ಸಂಸಾರಕ್ಕೆ ಹೊಂದಿಕೊಂಡನು. ಬೇರೆಯವ ರೊಡನೆ ಸ್ನೇಹವನ್ನು ಬೆಳೆಸುವ ಕಲೆ ಸಿಂತಿಯಾಗೆ ಕರಗತವಾಗಿತ್ತು. ಅವಳು ಮಾತನಾಡುವಾಗ ಸ್ಯಾಂಡಿಯು ವಿವಾಹವಾಗಿಲ್ಲವೆಂದು ತಿಳಿದು ಕೊಂಡಳು. ಮಾತು, ನಡತೆಗಳಲ್ಲಿ ಸ್ಯಾಂಡಿ ಅತ್ಯಂತ ವಿನಯದಿಂದ ವರ್ತಿಸುತ್ತಿದ್ದನು, ಸ್ಯಾಂಡಿಗೂ ಮಾತುಗಳು ಬೇಕಾಗುತ್ತಿದ್ದುದ ರಿಂದ ಸಿಂತಿಯಾಗೆ ಅನುಕೂಲವಾಯಿತು. ಹೀಗಾಗಿ ಇಬ್ಬರೂ ಮಾತುಗಳಲ್ಲಿ ಮಗ್ನರಾದರೆ ಸಮಯ ಸರಿದದ್ದೇ ತಿಳಿಯುತ್ತಿರಲಿಲ್ಲ. ಮುಂದೆ ಸಿಂತಿಯಾ ಜೆನ್ನೀಫರಳನ್ನು ಸ್ಯಾಂಡಿಯ ಹಿಂದೆ ಬಿಟ್ಟಳು. ಒಂದು ಸಲ ಅವಳು ಸ್ಯಾಂಡಿಯನ್ನು ಕರಕೊಂಡು ಹೋಗಿ ರಾಮಸಿಂಗರಿಗೆ ಪರಿಚಯ ಸಿದಳು. ಈಗ ಮೂವರ ಜೊತೆ ಸ್ಯಾಂಡಿಯೂ ಮಹಾರಾಜರೊಡನೆ ಅರಮನೆಯಲ್ಲಿ ಸಹ ಭೋಜನವನ್ನು ಮಾಡಹತ್ತಿದನು. ಕಾರಿನಲ್ಲಿ ಹೋಗುವಾಗ, ಸಿಂತಿಯಾ ಗಂಡನ ಜೊತೆ ಮುಂದೆ ಕುಳಿತು, ಹಿಂದೆ ಸ್ಯಾಂಡೀ ಜೆನ್ನಿಫರ ಳೊಡನೆ ಕುಳಿತುಕೊಳ್ಳುವಂತೆ, ಮಾಡುತ್ತಿದ್ದಳು: ಸ್ಯಾಂಡೀ ಅದೇಕೋ ಸಿಂತಿಯಾಳ ಜೊತೆ ಮಾತ ನಾಡಿದಷ್ಟು ಜೆನ್ನೀಫರಳ ಜೊತೆ ಮಾತನಾಡು ತ್ತಿರಲಿಲ್ಲ. ಸಿಂತಿಯಾಳಂತೂ ಸ್ಯಾಂಡೀ ತನ್ನ ತಂಗಿಗೆ ತಕ್ಕವನಾದ ವರನೆಂದು ನಿರ್ಧರಿಸಿದಳು. ಸಿಂತಿಯಾ ಮತ್ತು ಜೆನ್ನೀಫರ ಅವಳಿ-ಜವಳಿ ಯವರಂತೆ ಕಾಣುತ್ತಿದ್ದರು. ಜೆನ್ನೀಫರ ಸುಂದ ರಳೇ ಇದ್ದುದರಿಂದ ಯಾರೂ ಅವಳ ಕೈಯನ್ನು ಹಿಡಿಯಬಹುದಿತ್ತು. ಆದರೆ ಸಿಂತಿಯಾಗೆ ಸ್ಯಾಂಡೀಯಂತಹ ಸುಂದರ, ಸುಸ್ವಭಾವದ ಗಂಡು ಬೇಕಿತ್ತು.

ಅದೊಂದು ದಿವಸ ಕ್ರಿಸ್‌ಮಸ್‌ದ ಮುಂದೆ ಸ್ಯಾಂಡೀ ಮೆಲ್ಲನೆ ಫಿಲಿಪ್ ಮತ್ತು ಸಿಂತಿಯಾಳ



"ಸದ್ಯ ಅತ್ಲಾಗೆಲ್ಲೂ ವರ್ಗವಾಗದೇ ಇರೋದ್ರಿಂದ ನಿಮ್ಮ ಕೆಲಸವನ್ನ ನಿಧಾನವಾಗಿಯಾದ್ರೂ ಮಾಡಿಕೊಡ್ತಾರೆ..... ಕೇಳ್ದಷ್ಟು ಕೊಡಿ, ಪರವಾಗಿಲ್ಲಾ...."

ಮುಂದೆ ಇನ್ನೊಂದು ವಾರದಲ್ಲಿ ಕೋಲಂ-ಬೋಕ್ಕೆ ಹೋಗಿ ತನ್ನ ಪ್ರಿಯತಮೆಯನ್ನು ಕರೆತರುವದಾಗಿ ಹೇಳಿದನು. ಆಗ ಸಿಂತಿಯಾಳಿಗೆ ಆಘಾತವಾದಂತಾಯಿತು. ಸ್ಯಾಂಡಿ ಬೇರೆ ಯವಳನ್ನು ಪ್ರೀತಿಸಿರಬಹುದೆಂದು ಸಿಂತಿಯಾ ಅದೆಂದೂ ಭಾವಿಸಿರಲಿಲ್ಲ. ಸ್ಯಾಂಡಿಯ ಸುಂದರ ಕೈಗಳನ್ನು ಹಿಡಿಯುವವಳು ಇಟಲಿಯ ಕಾರ್ಮೆನ್ ವಾಸರಿ ಎಂದು ತಿಳಿಯಿತು. ಇವರಿಬ್ಬರ ಪ್ರೇಮ ಎರಡು ವರುಷಗಳಿಂದ ನಡೆದುಬಂದಿತ್ತು. ಸ್ಯಾಂಡಿ ಇಂಗ್ಲಂಡದಿಂದ ಹೊರಡುವ ಮೊದಲೇ, ಕಾರ್ಮೆನ್‌ಳು ಇಟಲಿಯ ಬಂದ್ರಿಶ್ ಬಂದರದಿಂದ ಹೊರಡುವ ದಿವಸವೂ ನಿರ್ಧಾರವಾಗಿತ್ತು. ಸ್ಯಾಂಡೀ ಅವಳನ್ನು ಕೋಲಂಬೋದಲ್ಲಿ ಹಡಗ ದಿಂದ ಇಳಿಸಿಕೊಂಡು, ಅಲ್ಲಿಯ ಚರ್ಚ ಒಂದರಲ್ಲಿ ವಿವಾಹವಾಗಿ, ಅವಳೊಡನೆ ಅಲ್ಲಿಯೇ ವಿವಾಹದ ರಜೆಯನ್ನು ಕಳೆದು, ಕೃಷ್ಣಬಾದಕ್ಕೆ ಬರುವ ದಿವಸವನ್ನು ಪೂರ್ವಭಾವಿಯಾಗಿ ಗೊತ್ತು ಪಡಿಸಿದ್ದನು. ಆದರೆ ಅವನು ಈ ರಹಸ್ಯವನ್ನು ಯಾರಿಗೂ ಬಿಟ್ಟುಕೊಟ್ಟಿರಲಿಲ್ಲ. ಇದನ್ನು ಕೇಳಿದ ಸಿಂತಿಯಾಗೆ ಅವಳ ಆಶಾಗೋಪುರವು ಕುಸಿದಂತಾಯಿತು. ಮುಂದೆ ಎಂಟೇ ದಿವಸಗಳಲ್ಲಿ ಸ್ಯಾಂಡೀ ರೇಲಿನಿಂದ ಧನುಷ್ಕೋಟಿಗೆ ಹೋಗಿ, ಅಲ್ಲಿಂದ ಹಡಗಿನಿಂದ ತಲೈಮನ್ನಾರಿಗೆ ಹೋದನು. ಅವನು ಹೋಗುವಾಗ ಕಾರ್ಮೆ ನ್‌ಳ ಕನಸುಗಳನ್ನು ಕಾಣುತ್ತಲೇ ಹೋದನು. ಅವಳನ್ನು ಯಾವಾಗ ಅಪ್ಪಿಕೊಂಡು ಚುಂಬನ ಗಳನ್ನು ಕೊಟ್ಟೇನೋ ಎಂದು ಅವನ ಮನಸ್ಸು ತವಕ ಪಡುತ್ತಿತ್ತು. ಎರಡು ವರುಷಗಳ ಕಾಲ ಕಾರ್ಮೆನ್‌ಳೊಡನೆ ಸರಸವಾಡಿದ ಅವನ ಜೀವಕ್ಕೆ ಈಗ ಸಾರ್ಥಕತೆಯನ್ನು ಕಾಣುವ ಕಾಲ ಬಂದಿತ್ತು. ಹಡಗ ಬಂದ ಕೆಲವೇ ಕ್ಷಣಗಳಲ್ಲಿ ಸ್ಯಾಂಡಿ ಕಾರ್ಮೆನ್‌ಳ ಪ್ರೀತಿಯಲ್ಲಿ ಒಂದಾಗಿ ಕರಗಿಹೋಗುವವನಿದ್ದನು. ಹಡಗ ಬರುವ ಕ್ಷಣಗಳನ್ನೇ ಅವನು ಕೋಲಂಬೋ ಬಂದರದಲ್ಲಿ ನಿಂತು ಎಣಿಸುತ್ತಿದ್ದನು. ಹಡಗವು ಬರುವ ತನ್ನ ಹೊತ್ತಿಗೆ ಬಂದರೂ, ಸ್ಯಾಂಡಿಗೆ ಅದು ವಿಲಂಬವಾದಂತೆ ಕಾಣಹತ್ತಿತು. ಹಡಗವು ಬಂದುನಿಂತಾಗ ಸ್ಯಾಂಡಿ ಪುಲಕಿತ ಗೊಂಡನು. ಇನ್ನೇನು ಕೆಲವೇ ಕ್ಷಣಗಳಲ್ಲಿ ಕಾರ್ಮೆನ್ ತನ್ನ ತೋಳತೆಕ್ಕೆಯಲ್ಲಿ ಸಿಕ್ಕು ವಳೆಂದು ಸ್ಯಾಂಡಿ ಬಣ್ಣಬಣ್ಣದ ಕನಸು ಗಳನ್ನು ಕಾಣಹತ್ತಿದನು. ಒಬ್ಬೊಬ್ಬರೇ ಪ್ರಯಾಣಿಕರು ಇಳಿಯಹತ್ತಿದರು. ಕೆಳಗೆ ಗದ್ದಲವಿದ್ದುದರಿಂದ ಇಳಿದ ಪ್ರಯಾಣಿಕರು ಬಂಧುಬಳಗದವರೊಂದಿಗೆ ಒಂದಾಗಿ ಹೋಗು ತ್ತಿದ್ದರು. ಸ್ಯಾಂಡಿಗೆ ಕಾರ್ಮೆನ್ ಇಳಿದದ್ದೇ ಕಾಣಲಿಲ್ಲ. ಆ ಹಡಗದಿಂದ ಬಂದ ಪ್ರಯಾಣಿ ಕರಲ್ಲಿ ಮಿಸ್ ಕಾರ್ಮೆನ್ ವಾಸರಿಯ ಹೆಸ ರಿತ್ತು. ಎಲ್ಲ ಪ್ರಯಾಣಿಕರೂ ಇಳಿದಮೇಲೆ ಕೆಳಗೆ ನಿಂತವರನ್ನು ಹಡಗದಮೇಲೆ ಹೋಗಲು ಬಿಟ್ಟರು. ಸ್ಯಾಂಡೀ ನೇರವಾಗಿ ಅವಳ ಕ್ಯಾಬಿ ನ್ನಿಗೆ ಹೋದನು. ಆದರೆ ಅಲ್ಲಿ ಯಾರೂ ಇರಲಿಲ್ಲ. ಅವಳೇನಾದರೂ ಕೆಳಗಿಳಿದು ತನ್ನನ್ನು ಹುಡುಕುತ್ತಿರಬಹುದೇನೋ ಎಂದು ಒಂದೊಂದೇ ಕ್ಯಾಬಿನ್ನಿನ ಮುಂದೆ ಹಾಯ್ದು ಕೆಳಗೆ ಬರ ಹತ್ತಿದ್ದನು. ಆಗ ಧೂಮ್ರಪಾನದ ಕೋಣೆ ಯಲ್ಲಿ ಕಾರ್ಮೆನ್ ಇದ್ದದ್ದು ಸ್ಯಾಂಡಿಗೆ ಕಂಡಿತು. ಅದರಿಂದ ಅವನಿಗಾದ ರೋಮ ಹರ್ಷವನ್ನು ನೋಡುವಂತಿತ್ತು! ಆದರೆ ಅವಳ ಜೊತೆ ಸುಂದರವಾದ ಒಬ್ಬ ಫ್ರೆಂಚ ಯುವಕನೊಬ್ಬನಿದ್ದನು. ಕಾರ್ಮೆನ್‌ಳು, ಸ್ಯಾಂಡೀ ಬಂದರೂ ಏಳದೇ ಹಾಯ್ ಎಂದು ಅವನ ಕೈ ಹಿಡಿದು ಸ್ಯಾಂಡಿ ಇವನು ನನ್ನ ಪ್ರಿಯತಮ ಮೋನೆಸೂರ ಡಿ ಲಾ ರೋಚೆ ನೀನು ಹೇಗಿದ್ದಿಯಾ?" ಎಂದು ಏನೂ ಗೊತ್ತಿಲ್ಲದವಳಂತೆ ಸ್ಯಾಂಡಿಯೊಡನೆ ಮಾತನಾಡಹತ್ತಿದಳು. ಫ್ರೆಂಚ ಸಂಸ್ಕೃತಿಗನು ಗುಣವಾಗಿರೋಚೇ ಕಾರ್ಮೆನ್‌ಳನ್ನು ಸ್ಯಾಂಡಿಯ ಹತ್ತಿರ ಬಿಟ್ಟು ಸ್ವಲ್ಪ ಹೊರಗೆ ಹೋದನು. ಆಗ ಕಾರ್ಮೆನ್ "ಸ್ಯಾಂಡೀ ನನ್ನನ್ನು ಮರೆತು

ಹಿದು. ಬರ್ರಿಟಿಶ ಬಂದರದಲ್ಲಿ ಹಡಗವನ್ನೇ ರುವಾಗ ನಿನ್ನನ್ನೇ ವಿವಾಹವಾಗುವದಾಗಿ ನಾನು ನಿರ್ಧರಿಸಿದ್ದೆ. ನಮ್ಮ ಈ ಎರಡು ವರುಷಗಳ ಸರಸವು ನಾನು ಕೋಲಂಬೋ ಬಂದರೆಯನ್ನು ತಲುಪಿ ನಿನ್ನನ್ನು ನೋಡಿ ಕೂಡನೆ ಸಾಕಾರವಾಗುವ ಸಂತೋಷದಲ್ಲಿದ್ದೆ. ಅದರಂತೆ ನಿನಗೂ ನಾನು ಬರೆದಿದ್ದೆ. ನಾನು ನಿನ್ನನ್ನು ತುಂಬಾ ಪ್ರೀತಿಸಿದ್ದೆ. ಒಂದೆರಡು ರಾತ್ರಿ ಈ ಹಡಗದಲ್ಲಿ ಒಂಟಿಯಾಗಿ ಕಳೆಯು ವಾಗ ನಿನ್ನದೇ ಮೂರ್ತಿ ನನ್ನ ಕಣ್ಣೆದುರು ಬರುತ್ತಿತ್ತು. ಆದರೆ ಹಡಗದಲ್ಲಿ ನನಗೆ, ಬ್ರಿಟಿಶ ಅಧಿಕಾರಿಯ ಹೆಂಡತಿಯಾಗಿ ಹೋದರೆ ಆ ಬೇಸರಿಕೆಯ ದಿವಸಗಳನ್ನು ಕಳೆಯುವದು ಕಷ್ಟವಾಗುವದೆಂದು ಹಲವರು ಹೇಳಿದರು. ಆಗ ಈ ರೋಚಿ ಭೆಟ್ಟಿಯಾದ. ಇವನು ಚೀನಾ ದಲ್ಲಿ ರಾಯಭಾರಿ ಸಿಬ್ಬಂದಿಯಲ್ಲಿ ಇರುವನು. ಚೀನಾದ ಜೀವನವೆಂದರೆ ರಸಭರಿತ ಜೀವನ ವೆಂದು ಹೇಳಿದನು. ರೋಚಿ ನನಗೆ ತುಂಬಾ ಸೇರಿದನು. ನಾವು ಹಲವಾರು ರಾತ್ರಿಗಳನ್ನು ಒಂದೇ ಹಾಸಿಗೆಯ ಮೇಲೆ ಕಳೆದಿದ್ದೇವೆ. ನೀನು ದಯವಿಟ್ಟು ಬೇರೆ ಹುಡಿಗೆಯನ್ನು ಮದುವೆ ಯಾಗು. ನಿನ್ನ ಭಾವೀ ವೈವಾಹಿಕ ಜೀವನವು ಸುಖವಾಗಲಿ" ಎಂದು ಹೇಳಿದಳು. ಸ್ಕ್ಯಾಂಡೀ ನಿಂತಲ್ಲಿಯೇ ಕುಸಿದು ಬಿದ್ದನು. ಕಾರ್ಮೆನ್ ಮೆಲ್ಲನೆ ಅವನ ತೋಳುಗಳಲ್ಲಿ ಕೈಹಾಕಿ ಹಡಗದ ಕೆಳಗೆ ಹೋಗಿ ಇಳಿಸಿ ಬಂದಳು. ಬರುವಾಗ ಸಮಾಧಾನಮಾಡಿಬಂದಳು. ಇದ ರಿಂದ ನಿರಾಶನಾದ ಸ್ಕ್ಯಾಂಡೀ ಕೃಷ್ಣಬಾದ ಬಿಟ್ಟ ಎಂಟೇ ದಿವಸಗಳಲ್ಲಿ ಮರಳಿ ಕೃಷ್ಣ ಬಾದಕ್ಕೆ ಬಂದನು. ಅವನಿಗೆ ಹೊರಗೆ ಹೋಗಿ ಯಾರಿಗೂ ತನ್ನ ಮುಖವನ್ನು ತೋರಿಸುವ ದಾಗಲಿಲ್ಲ. ಅವನಿಗೆ ಅವಮಾನವಾದಂತೆನಿಸಿತ್ತು! ಅವನು ತುಂಬಾ ನೊಂದುಕೊಂಡಿದ್ದನು. ಸ್ಕ್ಯಾಂಡೀ ಬಂದು ಆಗಲೇ ಎರಡು ದಿವಸಗಳಾ ದವೆಂದು ಅವನ ಮನೆಯನ್ನು ಕಸಗೂಡಿಸುವ ಸೇವಕ ಹೇಳಿದಾಗ, ಸಿಂತಿಯಾಗೆ ಎಲ್ಲಿಲ್ಲದ ಆಶ್ಚರ್ಯ. ಸ್ಕ್ಯಾಂಡೀ ಭಗ್ನಹೃದಯಿಯಾಗಿ ಕೋಲಂಬೋದಿಂದ ಬಂದ ಸುದ್ದಿ ಸೇವಕರಿಂದ ಸೇವಕರಿಗೆ ಹರಡಿ ದಂಡಿನ ಭಾವಣಿಯ ತುಂಬಾ ಪಸರಿಸಿತು. ಸಿಂತಿಯಾ ತಾನೇ ಹೋಗಿ ಸ್ಕ್ಯಾಂಡಿಯನ್ನು ಮಾತನಾಡಿಸಿದಾಗ ಅವನು ಅಲ್ಲಿ ನಡೆದದ್ದನ್ನೆಲ್ಲಾ ಹೇಳಿದನು. ಸಿಂತಿಯಾ ಸ್ಕ್ಯಾಂಡಿಯನ್ನು ಸಮಾಧಾನಪಡಿಸಿ "ಗಂಡುಹೆಣ್ಣಿನ ಪ್ರಣಯ ಜೀವನದಲ್ಲಿ ಇವು ನಡೆಯುವವೇ ! ಸ್ಕ್ಯಾಂಡೀ, ತಪ್ಪು ನಿನ್ನದಲ್ಲ. ಆ ಕಲ್ಲುಹೃದಯದ ಕಾರ್ಮೆನ್‌ಳದು." ಎಂದು ಹೇಳಿದಾಗ, ಸ್ಕ್ಯಾಂಡಿಯ ಹೃದಯವು ಏಷ್ಟೋ ಹಗುರಾದಂತೆನಿಸಿತು. ಸಿಂತಿಯಾ ಅಂದು ರಾತ್ರಿ ಸ್ಕ್ಯಾಂಡಿಯನ್ನು ತಮ್ಮ ಮನೆಗೆ ಭೋಜನಕ್ಕೆ ಆಹ್ವಾನಿಸಿದಳು. ಆಗ ಫಿಲಿಪ್‌ರೂ ಸ್ಕ್ಯಾಂಡಿ ಯನ್ನು ಸಾಂತ್ವನಗೊಳಿಸಿದರು. ಮುಂದೆ ಈ

## ಇಂದಿನ ಹೊಸತು...ನಾಳೆಗೆ ಹಳತು

ಹೊಸ ಜನರ ಹೊಸ ಮುಖವ ನೋಡಲು ಕುತೂಹಲ
ಹೊಸ ನಾಡು ಹೊಸ ಬಗೆಯು ತಿಳಿವ ಚಿತ್ತ ಚಪಲ;
ಹೊಸ ಹೊಸತು ಕಾಣುವಾ ಹೊಸತುಪಡೆಯುವ ಭಾವನೆ ಗಾಳ
ಹೊಸತೆಲ್ಲವೂ ನಾಳೆ ಹಳತಾಗುವುದೋ...ಮಣ್ಣಿನ ಮಗ !

–ದೊಡ್ಡ ರಂಗೇಗೌಡ

ಸಂಗತಿಯನ್ನು ಕೇಳಿದ ಮಹಾರಾಜರು ಸ್ಕ್ಯಾಂಡಿ ಯನ್ನು ಆಹ್ವಾನಿಸಿ ಸಿಂತಿಯಾ ಮತ್ತು ಜೆನ್ನೀ ಫರಳ ಮುಂದೆ "ಸ್ಕ್ಯಾಂಡಿ, ನೀನು ಗಂಡು, ನೀನು ಮನಸ್ಸು ಮಾಡಿದರೆ ಕಾರ್ಮೆನ್ ಳಂತಹ ಹತ್ತು ಸುಂದರ ಹೆಣ್ಣುಗ ಳನ್ನು ಪಡೆಯಬಹುದು. ನೀನು ಅಂಗೈಯ ಲ್ಲಿಯೇ ನೆಲ್ಲೀಕಾಯಿಯನ್ನಿಟ್ಟುಕೊಂಡು ನೆಲು ವಿಗೆ ಹೋಗಿ ಹುಡುಕಿದಂತಾಯಿತು." ಎಂದು ಹಾಸ್ಯಮಾಡಿದರು. ಆಗ ಜೆನ್ನೀಫರ ಲಜ್ಜೆ ಯಿಂದ ಮುಖವನ್ನು ಕೆಳಗೆಹಾಕಿದಳು. ಅದನ್ನು ನೋಡಿದ ಸ್ಕ್ಯಾಂಡಿಗೆ ತಾನೀಗಲೇ ಅದೇಕೆ ಜೆನ್ನೀ ಫರಳ ಕೈಹಿಡಿಯಬಾರದೆಂದೆನಿಸಿತು. ಸಿಂತಿಯಾ ಸಮಯ ಸಾಧಿಸಿ ಜೆನ್ನೀಫರಳ ಬಗ್ಗೆ ಸ್ಕ್ಯಾಂಡೀ ಯನ್ನು ಕೇಳಿದರಾಯಿತೆಂದು ಅಷ್ಟಕ್ಕೇ ಆ ಮಾತನ್ನು ಬೇರೆ ಮಾತಿಗೆ ತಿರುಗಿಸಿದಳು. ಜೆನ್ನೀಫರಳು ಸ್ಕ್ಯಾಂಡಿಯ ಜೊತೆಗಾತಿಯಾ ಗುವ ದಿವಸಗಳು ಸಮೀಪಿಸಹತ್ತಿವೆಯೆಂದು ಸಿಂತಿಯಾಗೆ ಸಮಾಧಾನವಾಗಿತ್ತು. ಆದರೆ ಮುಂದೆ ಎರಡೇ ದಿವಸಗಳಲ್ಲಿ ಒಂದೊಂದು ಯುನಿಟಿಗೆ ಒಬ್ಬೊಬ್ಬ ಆಫೀಸರನನ್ನು ಕೃಷ್ಣ ಬಾದದಲ್ಲಿ ಬಿಟ್ಟು ಉಳಿದೆಲ್ಲ ಸೈನ್ಯವೂ ಕಾನ ಪುರಕ್ಕೆ ಹೊರಡಬೇಕೆಂದು ಸರಕಾರೀ ಆಜ್ಞೆ ಪ್ರಕಟವಾಯಿತು. ಪಾಪ ಫಿಲಿಪ್‌ರು ಇದ್ದಕ್ಕಿ ದ್ದಂತೆ ಗಂಟು ಕಟ್ಟಿಕೊಂಡು ಕಾನಪುರಕ್ಕೆ ಹೋದರು. ಸ್ಕ್ಯಾಂಡೀ ಒಬ್ಬನೇ ಅವರ ಯುನಿಟಿನಲ್ಲಿ ಕೃಷ್ಣಬಾದದಲ್ಲಿ ಉಳಿದಿದ್ದನು. ಫಿಲಿಪ್‌ರು ಕಾನಪುರಕ್ಕೆ ಹೋಗುವ ಅವಸರ ದಲ್ಲಿ ತಮ್ಮ ಕಾರನ್ನು ನಡೆಸಲು ಕೃಷ್ಣಪ್ರಸಾದ ಎಂಬ ಡ್ರೈವ್ಹರನನ್ನು ನಿಯಮಿಸಿದರು. ಅವನು ಅರಮನೆಯಲ್ಲಿ ಮಹಾರಾಣಿಯವರ ಕಾರನ್ನು ನಡೆಸುತ್ತಿದ್ದನು. ಮಹಾರಾಜರ ಶಿಫಾರಸ್ಸಿನ ಮೇಲೆ ಅವನು ಫಿಲಿಪ್‌ರ ಡ್ರೈವ್ಹರನಾದನು. ಸಾಹೇಬರು ಊರಲ್ಲಿ ಇಲ್ಲದಾಗ ಮೇಮಸಾಹೀಬಾರೇ ಯಜಮಾನ ರಾಗುತ್ತಿದ್ದರು. ಭಾವಣಿಯಲ್ಲಿ ಆಗ ಅವರದೇ ಕಾರಭಾರ. ಭಾವಣಿಯ ನೂರಾರು ಬಂಗ್ಲೆಗಳಲ್ಲಿ ಸಾಹೇಬರು ಇಲ್ಲದ್ದರಿಂದ, ಭಾವಣಿ ಈಗಂತೂ ಬಿಕೋ ಅನ್ನುತ್ತಿತ್ತು. ರಾತ್ರಿಯಲ್ಲಿ ಜನ ಸಂಚಾರವಿಲ್ಲದೇ ಭಯಾನಕ ವೆನಿಸ ಹತ್ತಿತು. ಎಲ್ಲ ಮೇಮಸಾಹೀಬರು ತಮ್ಮ ಸೇವಕ ಯರು ರಾತ್ರಿ ಮನೆಗೆ ಹೋಗದಂತೆ ನಿರ್ಬಂಧಿಸ ಹತ್ತಿದರು. ಸಿಂತಿಯಾ ಕೂಡ ಡ್ರಾಯ್ವ್ಹರ ಕೃಷ್ಣಪ್ರಸಾದ, ಬಟ್ಲರ್, ಅಡಿಗೆಯವನು, ಸೇವಕರಾದ ಸಿಂಜಿ, ಜಮುನಾ, ಗಂಗೂ ತಮ್ಮ ಬಂಗ್ಲೆಯಲ್ಲಿಯೇ ಮಲಗಬೇಕೆಂದು ಹೇಳಿಬಿಟ್ಟಳು ಬಂಗ್ಲೆಯ ಹೊರಗೆ ಬೇರೆ ಇಬ್ಬರು ಆಳುಗಳು ಮಲಗಿಕೊಳ್ಳಹತ್ತಿದರು. ಕಾನಪುರಕ್ಕೆ ಹೋದ ಸೈನ್ಯವು ಕನಿಷ್ಠ ಆರು ತಿಂಗಳಾದರೂ ಅಲ್ಲಿರ ಬೇಕೆಂಬ ಸುದ್ದಿ ಭಾವಣಿಗೆ ಬಂದಾಗ, ಭಾವಣಿ ಹೆಂಗಸರೆಲ್ಲಾ ಚಿಂತಾಕ್ರಾಂತರಾದರು. ಕೆಲವು ಮೇಮಸಾಹೀಬಾರಂತೂ ಅತ್ತೇ ಬಿಟ್ಟರು. ಕೆಲವರು ತಾವು ಮರಳಿ ಇಂಗ್ಲಂಡಕ್ಕೆ ಹೋಗುವ ವಿಚಾರವನ್ನು ಮಾಡಹತ್ತಿದರು. ಹಗಲಿಡೀ ಹೆಂಗಸರು ಒಂದು ಬಂಗ್ಲೆಯಲ್ಲಿ ಸೇರಿ ಹರಟೆ ಯನ್ನು ಹೊಡೆಯಹತ್ತಿದರು. ಆದರೆ ಯಾವ ಹೆಣ್ಣಿನ ಮುಖದ ಮೇಲೆಯೂ ಕಳೆ ಇರಲಿಲ್ಲ. ಗಂಡಸರು ಜೊತೆಯಿದ್ದರೇ ಈ ಬಿಳಿ ಹೆಂಗಸರ ಸಡಗರವನ್ನು ನೋಡಬೇಕಿತ್ತು! ಆದರೆ ಗಂಡ ಸರೇ ಇರಲಿಲ್ಲ!

ಒಂದೇ ತಿಂಗಳಲ್ಲಿ ಸಿಂತಿಯಾಗೆ ಒಂಟಿ ಜೀವನ ವನ್ನು ನಡೆಸುವುದು ದುಸ್ತರವೆನಿಸಹತ್ತಿತು. ಫಿಲಿಪ್‌ನ ಕೈ ಹಿಡಿದ ಮೇಲೆ ಅವಳೆಂದೂ ಇಷ್ಟು ದೀರ್ಘಕಾಲ ಗಂಡನಿಂದ ದೂರ ಇರಲಿಲ್ಲ. ಈಗ ಅವಳಿಗೆ ಹಿಂದುಸ್ಥಾನವೆಂದರೆ ಬರಡು ಜೀವನದ ತವರೆಂದು ಅನಿಸಹತ್ತಿತು. ಬೇಸರಿಕೆಯನ್ನು ಕಳೆಯಲು ಸಿಂತಿಯಾ ಈಗ ಮೇಲಿಂದ ಮೇಲೆ ಅರಮನೆಗೆ ಹೋಗಿಬರಹತ್ತಿದಳು. ಮಹಾರಾಜ ರಾಮಸಿಂಗರಿಗೂ ಅದೇ ಬೇಕಾಗಿತ್ತು. ಸಿಂತಿ ಯಾಳನ್ನು ಖುಷಿಯಲ್ಲಿಡಲು ಅವರು ಹಲವಾರು ಮನೋರಂಜನೆಯ ಕಾರ್ಯಕ್ರಮಗಳನ್ನು ಏರ್ಪ ಡಿಸಹತ್ತಿದರು. ಜೆನ್ನೀಫರ ಅಕ್ಕನ ಜೊತೆ ಬರಲು ಒಮ್ಮೊಮ್ಮೆ ಒಲ್ಲೆನೆಂದರೆ, ಸಿಂತಿಯಾ ಳೊಬ್ಬಳೇ ಅರಮನೆಗೆ ಹೋಗಿ ಬರಹತ್ತಿದಳು. ರಾಮಸಿಂಗರು ಸಿಂತಿಯಾಳನ್ನು ಮೂರು ನಾಲ್ಕು

ಸಲ ಬೇಟೆಗೂ ಕರಕೊಂಡು ಹೋಗಿ ಬಂದರು. ಅವಳಿಗೆ ಮಹಾರಾಜರ ಜೊತೆ ಇದ್ದರೆ ಈಗ ಕಾಲ ಸರಿದದ್ದೇ ತಿಳಿಯುತ್ತಿರಲಿಲ್ಲ. ಸಿಂತಿಯಾ ಸದಾ ಮಹಾರಾಜರೊಂದಿಗೆ ನಗುವದು ಕೇಳಿಯುವದು ಅರಮನೆಯಲ್ಲಿ ಕಹಿವಾತಾವರಣವನ್ನುಂಟುಮಾಡಹತ್ತಿತು. ಇದನ್ನು ಕೇಳಿದ ಅಕ್ಕಾರಾಜೇಗೆ ತಮ್ಮ ಮಗಳನ್ನು ರಾಮಸಿಂಗನಿಗೆ ಕೊಟ್ಟದ್ದು ಮೂರ್ಖತನವಾಯಿತೆಂದು ಅನಿಸಹತ್ತಿತು. ಸೀತಾರಾಜೇ ಮಾತ್ರ ಎಲ್ಲವನ್ನೂ ನುಂಗಿಕೊಂಡು ಸುಮ್ಮನಿದ್ದಳು. ಅವಳಿಗೆ ಮನೆತನದ ಗೌರವವು ದೊಡ್ಡದಾಗಿ ಕಾಣಿಸಿತು. ಆ ಗೌರವವನ್ನು ಕಾಪಾಡಲು, ಅವಳು ಎಂತಹ ತ್ಯಾಗಕ್ಕೂ ಸಿದ್ಧಳಾದಳು. ಅಂತಃಪುರದ ಇತಿಹಾಸದಲ್ಲಿ ಇಂತಹ ಘಟನೆಗಳು ಆಗೀಗ ಘಟಿಸುತ್ತಲೇ ಇರುವವೆಂದು, ಸೀತಾರಾಜೇ ಸಮಾಧಾನಪಟ್ಟುಕೊಂಡಳು! ಅರಮನೆಯ ಉಳಿದ ಸಿಬ್ಬಂದಿ

ಕೇಳಿದ್ದಳು. ಈ ಹಿಂದೆ ಈ ಬಂಗ್ಲೆಯಲ್ಲಿ ಒಬ್ಬ ಸಕ್ಕರೆಯ ವ್ಯಾಪಾರಿ ಇದ್ದನಂತೆ. ಅವನು ವ್ಯಾಪಾರದಲ್ಲಿ ದಿವಾಳಿ ತೆಗೆದಾಗ, ಹೆಂಡತಿಯನ್ನು ಕಾನಪುರಕ್ಕೆ ಕಳಿಸಿ, ಗಂಟಲನ್ನು ಕೊರಕೊಂಡು ಆತ್ಮಹತ್ಯೆಯನ್ನು ಮಾಡಿಕೊಂಡಿದ್ದನಂತೆ. ಅವನ ರಕ್ತವೆಲ್ಲಾ ಬಂಗ್ಲೆಯ ತುಂಬಾ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದಿತಂತೆ. ಅದೇ ಭೂತವೇನಾದರೂ ಈಗ ಬಂದಿತೇನೋ ಎಂದು ಸಿಂತಿಯಾ ನಡುಗಹತ್ತಿದಳು. ಛಾವಣಿಯಲ್ಲಿಯ ಒಂದೊಂದು ಬಂಗ್ಲೆಗೂ ಒಂದೊಂದು ದೆವ್ವದ ಇತಿಹಾಸವಿದೆಯೆಂದು ಸೇವಕರು ಮಾತನಾಡಿಕೊಳ್ಳುತ್ತಿದ್ದುದು ಸಿಂತಿಯಾಳ ಕಿವಿಗೆ ಬಿದ್ದಿತ್ತು. ಸಿಂತಿಯಾ ಕೂಡಲೇ ಜೆನ್ನೀಫರಳನ್ನು ಎಬ್ಬಿಸಿದಳು. ಗಾಢವಾದ ನಿದ್ರೆಯಲ್ಲಿದ್ದ ಅವಳಿಗೆ ಇದೇನೂ ಗೊತ್ತಿರಲಿಲ್ಲ. ಅಷ್ಟರಲ್ಲಿ, ಸಿಂತಿಯಾಳ ಕೋಣೆಯ ಹಿಂದೆಯೇ ಮಲಗುತ್ತಿದ್ದ ಸಿಂಜಿ ಓಡುತ್ತ ಬಂದು

ದಂತಾಯಿತು. ಆ ನೆರಳು ಓಡುತ್ತ ಓಡುತ್ತ ಬಂಗ್ಲೆಯ ಹೊರಗೆ ಹೋಯಿತು...'' ಎಂದು ಹೇಳುತ್ತಿರುವಾಗ ಭಯಭೀತರಾಗಿದ್ದರು. ಅಂದು ರಾತ್ರಿ ಯಾರೂ ಪುನಃ ಮಲಗಲಿಲ್ಲ. ಅಡಿಗೆಯಾಳು ಜಗನ್ನಾಥನು ''ಮೇಮಸಾಹೀಬಾ, ಈ ದೆವ್ವವು ಹಂಚುಗಳಿಂದಲೂ ಇಳಿಯುತ್ತದಂತೆ'' ಎಂದು ಹೇಳಿದನು. ಆ ಬಂಗ್ಲೆಯ ಕಿಡಕಿಗಳಿಗೆ ಕಬ್ಬಿಣದ ಸಲಾಕೆಗಳು ಇರದ್ದರಿಂದ ಅಲ್ಲಿಂದೇನಾದರೂ ಭೂತವು ಬಂದಿತೇನೋ ಎಂದು ಜೆನ್ನೀಫರ ಕೇಳಿದ್ದಕ್ಕೆ ಚಂದೂ ಹೀಗೆ ಉತ್ತರವನ್ನಿತ್ತನು. ಕೃಷ್ಣ ಪ್ರಸಾದನು ''ಮೇಮಸಾಬ, ನಾಳೆ ಮಾಂತ್ರಿಕನನ್ನು ಕರಕೊಂಡು ಬಂದು ಈ ಭೂತಕ್ಕೆ ಬಂದೋಬಸ್ತು ಮಾಡಿಸಬೇಕು'' ಎಂದು ಸೂಚಿಸಿದನು. ಅಂತೂ ಸಿಂತಿಯಾಗೆ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಅವಳೇ ಗರಬಡಿದವಳಂತೆ ಕಾಣಹತ್ತಿದಳು.



ಯವರಿಗೂ ಮಹಾರಾಜರು ಸಿಂತಿಯಾಳನ್ನು ಕರಕೊಂಡು ಅಲೆಯುವದು ಸರಿಬರಲಿಲ್ಲ. ಆದರೆ ಮಹಾರಾಜರಿಗೆ ಇದನ್ನು ಯಾರು ಹೇಳಬೇಕು ? ಮಹಾರಾಜರು ಲಜ್ಜೆಗೆಟ್ಟಿದ್ದರು !

ಕೃಷ್ಣಬಾದಿನಲ್ಲಿ ಮಾಮೂಲಿ ಜೀವನವು ಸಾಗಿತ್ತು. ಅದೊಂದು ರಾತ್ರಿ ಎರಡು ಘಂಟೆಗೆ ಸಿಂತಿಯಾಗೆ ಬಂಗ್ಲೆಯ ಹಿಂದಿನಿಂದ ನರಳುವ ಶಬ್ದವು ಕೇಳಿಬಂದಿತು. ಅದರಿಂದ ಎಚ್ಚರವಾಗಿ ಅವಳಿಗೆ ನಿದ್ರೆ ಬರಲಿಲ್ಲ. ನರಳುವಿಕೆ ಹೆಚ್ಚಾಯಿತು. ಕೂಡಲೇ ಸಿಂತಿಯಾ ಎದ್ದು ಸ್ವಿಚ್ ಹಾಕಿದಳು. ಇದ್ದಕ್ಕಿದ್ದಂತೆ ಆ ಧ್ವನಿ ಕಡಿಮೆಯಾಯಿತು. ಸಿಂತಿಯಾಗೆ ಅದೇನಾದರೂ ಭೂತಚೇಷ್ಟೆಯೇನೋ ಎಂದು ಅನಿಸಿತು. ಈ ಬಂಗ್ಲೆಯ ಬಗ್ಗೆ ಅವಳು ಹಲವಾರು ದೆವ್ವದ ಕಥೆಗಳನ್ನು

''ಮೇಮಸಾಹೀಬಾ, ಇದು ಖಂಡಿತ ಆ ವ್ಯಾಪಾರಿಯ ಭೂತ. ನನ್ನ ದೇಹದ ಮೇಲೆ ಕೈಯಾಡಿಸಿ ನನ್ನ ಸೆರಗನ್ನು ಕಿತ್ತಿ ಒಗೆಯಿತು. ನನ್ನನ್ನು ಗಟ್ಟಿಯಾಗಿ ಅಪ್ಪಿಕೊಂಡಿತು... '' ಎಂದು, ಹೇಳುತ್ತಿರುವಾಗ ಅವಳ ಮುಖವು ತುಂಬಾ ಕಪ್ಪಿಟ್ಟಿತ್ತು. ಅವಳು ಗಡಗಡನೆ ನಡುಗ ಹತ್ತಿದ್ದಳು. ಮುಂದೆ ಬಟ್ಲರ ಚಂದೂ ಬಂದು ''ಮೇಮಸಾಹೀಬಾ, ನರಳುವದನ್ನು ಕೇಳಿದಿರಾ?'' ಎಂದನು. ಹೊರಗಿನಿಂದ ಕೃಷ್ಣ ಪ್ರಸಾದ ಧಾವಿಸಿ ಬಂದು ''ಮೇಮಸಾಹೀಬಾ, ನಾಳೆ ನಾವು ಮಹಾರಾಜರಿಗೆ ಹೇಳಿ ಬೇರೆ ಬಂಗ್ಲೆಗೆ ಹೋಗೋಣ'' ಎಂದನು. ಗಂಗೂ ಮತ್ತು ಜಮುನಾ ಬಂದು ''ಮೇಮಸಾಹೀಬಾ, ನಮ್ಮ ಕುತ್ತಿಗೆಗಳ ಮೇಲೆ ಯಾರೊ ಕೈಯಾಡಿಸಿ

ಅಕ್ಕನನ್ನು ನೋಡಿ ಜೆನ್ನೀಫರಳೂ ಅಂಜಿದಳು.

ಮರುದಿವಸ ಛಾವಣಿಯಲ್ಲಿ ತುಂಬಾ ಈ ದೆವ್ವದ ಸುದ್ದಿ ಕಾಳ್ಗಿಚ್ಚಿನಂತೆ ಹರಡಿತು. ಆಗ ಬೇರೆ ಬಂಗ್ಲೆಗಳ ಸೇವಕರು ಈ ಬಂಗ್ಲೆಯಿಂದ ದೆವ್ವದ ನರಳುವಿಕೆಯನ್ನು ಕೇಳಿದ್ದಾಗಿ ಖಚಿತಪಡಿಸಿದರು. ಸಿಂತಿಯಾ ಮರುದಿವಸ ಮುಂಜಾನೆ ಮಹಾರಾಜರಿಗೆ ಹೇಳಬೇಕೆಂದು ಅರಮನೆಗೆ ಹೋದಳು. ಆದರೆ ಮಹಾರಾಜರು ಅಂದೇ ನಸುಕಿನಲ್ಲಿ ಕಾರಿನಿಂದ ಮುಂಬೈಗೆ ಹೋದರೆಂದು ಕಾರಭಾರಿ ಹೇಳಿದಾಗ ಸಿಂತಿಯಾಗೆ ಅಳು ಬಂದಿತು. ಈಗ ಅವಳ ದುಃಖದಲ್ಲಿ ಪಾಲ್ಗೊಳ್ಳಲು ಅಲ್ಲಿ ಯಾರೂ ಇರಲಿಲ್ಲ! ಮಹಾರಾಜರಿದ್ದರೆ ಮುದ್ದು ಮಾಡುತ್ತಿದ್ದರೆಂದು ಅವಳಿಗೆ ಮತ್ತಷ್ಟು ವ್ಯಥೆಯಾಯಿತು! ನಂತರ ಪೋಲಿಸ

ಠಾಣೆಗೆ ಹೋಗಿ ಹೇಳಿದಾಗ "ಮೇಮಸಾಹೇಬಾ, ನಿಮ್ಮ ಭಾವಣಿಯಲ್ಲಿಯೇ ಸಾವಿರಾರು ದೆವ್ವಗಳಿವೆ. ಹಿಂದುಸ್ಥಾನದ ಈ ದೆವ್ವಗಳು ಒಮ್ಮೆ ಕಾಡಲು ಹತ್ತಿದರೆ, ಅವು ಪ್ರಾಣವನ್ನು ಬಲಿ ಬೇಡುವ ತನಕಾ ಶಾಂತವಾಗುವದಿಲ್ಲ... ಆದರೂ ನಾಳಿನಿಂದ ಅತ್ತಕಡೆ ನಾವು ಪೋಲಿಸ ಗಸ್ತು ಹಾಕುತ್ತೇವೆ. ನೀವು ಗಾಬರಿಯಾಗ ಬೇಡಿರಿ" ಎಂದು ಪೋಲಿಸ ಅಧಿಕಾರಿಯು ಭರವಸೆ ಕೊಟ್ಟು ಸಿಂತಿಯಾಳನ್ನು ಕಳಿಸಿದನು.

ಮರುದಿವಸ ಪೋಲಿಸರು ಇವರ ಬಂಗ್ಲೆಯತ್ತ ಗಸ್ತು ತಿರುಗಿದರು. ಅಂದು ರಾತ್ರಿ ಏನೂ ಆಗಲಿಲ್ಲ. ಮಹಾರಾಜರು ಬಂದ ಮೇಲೆ ಸಿಂತಿಯಾ ಹೋಗಿ ಈ ಘಟನೆಯನ್ನು ಹೇಳಿದಾಗ" ...ಎಲ್ಲಿಯ ದೆವ್ವಗಳು! ನಿನ್ನದು ಹುಚ್ಚು ಕಲ್ಪನೆ...ನಾಳೆ ನಾನೇ ಬಂದು ಅಲ್ಲಿ ನಿನ್ನೊಡನೆ ಮಲಗುತ್ತೇನೆ...ಆ ದೆವ್ವ ಆಗ ಹೇಗೆ ಬರುತ್ತದೆ ನೋಡೋಣ" ಎಂದು ಹಾಸ್ಯಮಾಡಿದರು. ಮಹಾರಾಜರ ಈ ಮಾತು ಕೇಳಿ ಸಿಂತಿಯಾಳ ಮುಖವೆಲ್ಲ ಆರಕ್ತವಾಯಿತು. ನಿಜವಾಗಿಯೂ ಅವಳಿಗೆ ಈಗ ಮಹಾರಾಜರ ತೋಳಿನಲ್ಲಿ ತನ್ನ ತೋಳನ್ನು ಹಾಕಿ, ಅವರ ಎದೆಯ ಮೇಲೆ ತನ್ನ ತಲೆಯನ್ನು ಇಡಬೇಕೆನಿಸಿತ್ತು. ಮಹಾರಾಜರ ಮಾತಿನಿಂದ ಸಿಂತಿಯಾ ಗೆಲುವಾದಳು. ಅವಳ ಎದೆ ಈಗ ಹಗುರಾಯಿತು. ಈಗಂತೂ ಅವಳಿಗೆ ಮಹಾರಾಜರು ಎದುರಿಗಿದ್ದರೆ ಫಿಲಿಪ್‌ನ ನೆನಪು ಕೂಡ ಬರುತ್ತಿರಲಿಲ್ಲ. ಆರು ತಿಂಗಳಾದರೂ ಫಿಲಿಪ್‌ನಿಂದ ಯಾವ ಸುದ್ದಿಯೂ ಬಂದಿರಲಿಲ್ಲ. ಕೃಷ್ಣಬಾದದಲ್ಲಿ ಜೀವನ ಯಥಾಸ್ಥಿತಿಯಲ್ಲಿತ್ತು. ಸ್ಯಾಂಡಿಗೂ ಕಚೇರಿಯಲ್ಲಿ ಇಷ್ಟು ಕೆಲಸವಿರುತ್ತಿತ್ತಲ್ಲ, ಅವನು ತನ್ನ ಬಂಗ್ಲೆಗೆ ಬರುವಾಗ ರಾತ್ರಿಯಾಗುತ್ತಿತ್ತು. ಸಿಂತಿಯಾಗೆ ಅವನನ್ನು ಭೆಟ್ಟಿಯಾಗಿ, ಜೆನ್ನೀಫರಳನ್ನು ಲಗ್ನಮಾಡಿಕೊಳ್ಳಬೇಕೆಂದು ಹೇಳಬೇಕೆನಿಸಿತ್ತು. ಆದರೆ ಅವಳೇ ಮೇಲಿಂದ ಮೇಲೆ ಅರಮನೆಗೆ ಹೋಗುತ್ತಿದ್ದುದರಿಂದ ಸ್ಯಾಂಡಿಯ ಭೆಟ್ಟಿಯೇ ಆಗುತ್ತಿರಲಿಲ್ಲ. ಭೂತಚೇಷ್ಟೆಯಾದ ಮೇಲೆ ಸ್ಯಾಂಡೀ ತಾನೇ ಬಂದು "ಸಿಂತಿಯಾ, ನನ್ನನ್ನೇಕೆ ನೀವು ಕೂಗಲಿಲ್ಲ. ನಿಮ್ಮ ಬದಿಯಲ್ಲಿಯೇ ನಾನಿದ್ದೇನೆ. ನನ್ನ ಹತ್ತಿರ ಪಿಸ್ತೂಲಿದೆ..." ಎಂದು ಭರವಸೆ ಕೊಟ್ಟನು. ಆಗ ಸಿಂತಿಯಾಗೆ ತಾನೆಲ್ಲಿ...ದರೂ ಎಡವಹತ್ತಿದ್ದೇನೋ ಎಂದೆನಿಸಿತು. ಈಗ ಭಾವಣಿಯ ಇತರ ಹೆಂಗಸರು ಹಾದಿಯಲ್ಲಿ ಭೆಟ್ಟಿಯಾದರೂ ಸಿಂತಿಯಾಳೊಡನೆ ಮನಸ್ಸನ್ನು ಬಿಚ್ಚಿ ಮಾತನಾಡುತ್ತಿರಲಿಲ್ಲ. ಜೆನ್ನೀಫರ ಕೂಡ ಅಕ್ಕನೊಡನೆ ಮೊದಲಿನ ಆತ್ಮೀಯತೆಯಿಂದ ಮಾತನಾಡುತ್ತಿರಲಿಲ್ಲ.

ಒಂದು ರಾತ್ರಿ ಇದ್ದಕ್ಕಿದ್ದಂತೆ ಬಂಗ್ಲೆಯ ಕಿಡಕಿಯ ಬಾಗಿಲುಗಳೆಲ್ಲಾ ಬಡಕೊಳ್ಳಹತ್ತಿದವು. ಅಳುವ-ನರಳುವ ಧ್ವನಿ ಕೇಳಿಬರಹತ್ತಿತು. ಜೆನ್ನೀಫರಳು ಚೀರಿದಂತೆ ಸಿಂತಿಯಾಗೆ ಕೇಳಿಸಿತು. ಅವಳು ಎದ್ದು ಸ್ವಿಚ್ ಹಾಕಿದರೆ ದೀಪಗಳೇ ಹತ್ತಲಿಲ್ಲ. ಹೊರಗೆ ಸುತ್ತಲೂ ಗಾಢಾಂಧಕಾರವು ಹರಡಿತ್ತು. ಒದರಿ ಮಾತನಾಡಬೇಕೆಂದರೆ ಅವಳ ಧ್ವನಿಯೇ ಏಳಲಿಲ್ಲ. ಅವಳು ಅಂಜಿಕೆಯಿಂದ ಬೆವರಹತ್ತಿದ್ದಳು. ಆದರೂ ಸಿಂತಿಯಾ ಕತ್ತಲ್ಲೆಯಲ್ಲಿ ಕೈಯಾಡಿಸಿ ಒಂದು ಸಣ್ಣ ಮೇಣಬತ್ತಿಯನ್ನು ಹಚ್ಚಿದಳು. ಅಷ್ಟರಲ್ಲಿ ಜೆನ್ನೀಫರ ಓಡುತ್ತ ಬಂದು ಸಿಂತಿಯಾಳನ್ನು ಅಪ್ಪಿಕೊಂಡಳು. ಅವಳ ಮೈಮೇಲಿನ ವಸ್ತ್ರಗಳೆಲ್ಲಾ ಅಸ್ತವ್ಯಸ್ತವಾಗಿದ್ದವು. ಅವಳ ಕಣ್ಣುಗಳಿಂದ ಧಾರಾಕಾರವಾಗಿ ಜಲಬಿಂದುಗಳು ಉರುಳುತ್ತಿದ್ದವು. ಅವಳಿಗೆ ಏನಾಗಿದೆಯೆಂದು ಹೇಳಲು ಬರಲಿಲ್ಲ. ಆಮೇಲೆ ಬೇರೆ ಮೇಣಬತ್ತಿಗಳನ್ನು ಹುಡುಕಿ ಹಚ್ಚುವಷ್ಟರಲ್ಲಿ ಬಂಗ್ಲೆಯ ಕಿಡಕಿಗಳಿಂದ ಯಾರೋ ಹಾರಿಹೋದಂತಾಯಿತು. ಸಿಂಜಿ ನಡುಗುತ್ತ ಬಂದು "ಮೇಮಸಾಹೇಬಾ ಈಗಲೇ ನನ್ನನ್ನು ಮನೆಗೆ ಕಳಿಸಿರಿ. ದೆವ್ವವು ನನ್ನ ಸರ್ವಸ್ವವನ್ನೂ ಸೂರೆಮಾಡಿತು ..." ಎಂದು ಅಳಹತ್ತಿದಳು. ಗಂಗಾ, ಜಮುನಾ, ಕೃಷ್ಣಪ್ರಸಾದ, ಬಟ್ಲರ, ಕುಕ್ ಓಡಿಬಂದರು. ಈ ಸದ್ದನ್ನು ಕೇಳಿದ ಸ್ಯಾಂಡಿ ಬದಿಯ ಅತಿಥಿಗೃಹದಿಂದ ಧಾವಿಸಿ ಬಂದನು. ಅವನ ಕೈಯಲ್ಲಿ ಪಿಸ್ತೂಲಿತ್ತು. ಜೆನ್ನೀಫರ ಅಳುತ್ತ ಅಕ್ಕನನ್ನು ಅಪ್ಪಿಕೊಂಡು "ನನ್ನನ್ನು ಇಂಗ್ಲಂಡಕ್ಕೆ ಕಳಿಸಿಬಿಡು. ನಾನಿಲ್ಲಿ ಇರಲಾರೆ... ದೆವ್ವವು ನನ್ನನ್ನು ಕೆಡಿಸಿದೆ..." ಎಂದು, ಹೇಳಹತ್ತಿದಳು. ಅದನ್ನು ಕೇಳಿದ ಸಿಂತಿಯಾ ಮತ್ತು ಸ್ಯಾಂಡೀ ಜೆನ್ನೀಫರಳನ್ನು ಸಮಾಧಾನಪಡಿಸಿದರು. ಅಂದು ಸ್ಯಾಂಡೀ ಅಲ್ಲಿಯೇ ಮಲಗಿದನು. ಮರುದಿವಸ ಎದ್ದುನೋಡಿದರೆ, ಬಂಗ್ಲೆಯ ಹೊರಗಿದ್ದ ಸ್ವಿಚ್‌ಬೋರ್ಡನ್ನು ಯಾರೋ ಕಿತ್ತಿಒಗೆದಿದ್ದರು. ಅಲ್ಲದೆ, ಭಾವಣಿಯಲ್ಲಿ ಎಲ್ಲಿಯೂ ದೀಪಗಳು ಹತ್ತದಂತೆ ಕಿಡಿಗೇಡಿತನವನ್ನು ಮಾಡಿದ್ದರು. ರಾತ್ರಿ ಯಾರೋ ಜೆನ್ನೀಫರಳ ಕೋಣೆಗೆ ಬಂದು ಅವಳ ಬಾಯಲ್ಲಿ ಅರಿವೆಹಾಕಿ ಅವಳನ್ನು ವಿವಸ್ತ್ರಳನ್ನಾಗಿ ಮಾಡಿ ಅವಳ ಗೌರವವನ್ನು ಕಳೆಯಲು ಪ್ರಯತ್ನಿಸಿದ್ದರು. ಭೂತವೇ ಅದಿರಬೇಕೆಂದು ಜೆನ್ನೀಫರ ಗಾಬರಿಯಾಗಿದ್ದಳು. ಸಿಂಜಿಯಂತೂ ಅಳುತ್ತ "ಮೇಮಸಾಹೇಬಾ ನಾನು ಕೆಟ್ಟುಹೋಗಿ ನನಗೆ ಬಸಿರಾದಂತೆ ಅನಸಹತ್ತಿದೆ..." ಎಂದು ಹೇಳಿದಳು. "ಸಿಂಜಿ...ನೀನು ವಿಧವೆ...ಅದು ಹೇಗೆ ಬಸಿರಾದೆ... ನಿನ್ನ ಹೊಟ್ಟೆಯಲ್ಲಿರುವ ಪಿಂಡದ ತಂದೆ ಯಾರು? ... ನೀನು ಏನೋ ನಾಟಕವನ್ನಾಡಹತ್ತಿರುವಿ..." ಎಂದು ಹೆದರಿಸಿದಳು. ಸಿಂಜಿ ಮತ್ತಷ್ಟು ಅಳುತ್ತ "ನನ್ನ ಹೊಟ್ಟೆಯಲ್ಲಿರುವ ಈ ಪಿಂಡದ ತಂದೆ ನಿಮ್ಮ ಬಂಗ್ಲೆಯ ಭೂತ.. ನಾನು ನಾಳೆಯಿಂದ ಕೆಲಸಕ್ಕೇ ಬರುವದಿಲ್ಲ..." ಎಂದು, ಅಳುತ್ತ ಮನೆಗೆ ಹೊರಟೇಬಿಟ್ಟಳು. ಅವಳ ಹಿಂದೆ ಒಬ್ಬೊಬ್ಬರೇ ಆಳುಗಳು ತಮ್ಮ ಮನೆಗೆ ಹೊರಟುಹೋದರು. ಈಗ ವಿಶಾಲವಾದ ಬಂಗ್ಲೆಯಲ್ಲಿ ಸಿಂತಿಯಾ ಮತ್ತು ಜೆನ್ನೀಫರ ಇಬ್ಬರೇ ಉಳಿದರು. ಜೆನ್ನೀಫರಳಂತೂ ಹುಚ್ಚಳಂತಾದಳು. ಸಿಂತಿಯಾಗೆ ಮುಂದೇನು ಮಾಡಬೇಕೆಂಬುದೇ ತಿಳಿಯಲಿಲ್ಲ. ಅವಳು ಧಾವಿಸಿ ಅರಮನೆಗೆ ಹೋಗಿ ಮಹಾರಾಜರಿಗೆ ಹೇಳಿದಳು.


"ವಯಸ್ಸಿಗೆ ತಕ್ಕಂಥ ಮರ ನೆಡಬೇಕಲ್ವ?"


"ಸಭೆಯಲ್ಲಿ ವಿರೋಧಿಗಳನ್ನ ಬೆದರಿಸೋಕೆ- ಅಣಿಗಿದೇ ಅಸ್ತ್ರ"

ಮಹಾರಾಜ ರಾಮಸಿಂಗರು. ಅದನ್ನು ಕೇಳಿ ಸಹಾನುಭೂತಿ ಪ್ರದರ್ಶಿಸಿ "ಸಿಂತಿಯಾ... ಭೂತ ಚೇಷ್ಟೇ ಸತ್ಯವೋ ಅಸತ್ಯವೋ ಗೊತ್ತಿಲ್ಲ. ಫಿಲಿಪ್ ಬರುವತನಕಾ ನೀನು ಮತ್ತು ಜೆನ್ನೀಫರ ನಮ್ಮ ಅರಮನೆಗೆ ವಾಸಿಸಲು ಬಂದುಬಿಡಿರಿ" ಎಂದು ಹೇಳಿದರು. ಸಿಂತಿಯಾಗೆ ಆನಂದವೆನಿಸಿತು. ಅವಳು ಅರಮನೆಗೆ ಬರಲು ಸಿದ್ಧಳಾದಳು. ಆದರೆ ಜೆನ್ನೀಫರ ಅರಮನೆಗೆ ಬಂದಿರಲು ಸುತರಾಂ ಒಪ್ಪಲಿಲ್ಲ. ಇನ್ನೂ ಸೇವೆಯಲ್ಲಿದ್ದ ಕೃಷ್ಣ ಪ್ರಸಾದ ಮತ್ತು ಮಾಳಿ ಬೋಲಾರಾಮರೊಂದಿಗೆ ತಾನು ಆ ಭೂತಬಂಗ್ಲೆಯಲ್ಲಿಯೇ ಇರುವದಾಗಿ ಅವಳು ಹೇಳಿದಾಗ ಸಿಂತಿಯಾಗೆ ಸಿಟ್ಟು ಬಂದಿತು. ತಕ್ಷಣ ಅವಳೊಬ್ಬಳೇ ತನ್ನ ವಾಸ್ತವ್ಯವನ್ನು ಅರಮನೆಗೆ ಬದಲಾಯಿಸಿದಳು. ಅಲ್ಲಿ ಅವಳಿಗೆ ರಾಜೋಚಿತ ಸ್ವಾಗತವು ದೊರೆಯಿತು. ಜೆನ್ನೀಫರಳು ಸ್ಯಾಂಡಿಯ ಸಹಾಯ ಪಡೆದು ಮರಳಿ ಅಕ್ಕನಿಗೆ ಹೇಳದೇ ಇಂಗ್ಲಂಡಕ್ಕೆ ಹೋಗಬೇಕೆಂದು ಯೋಚಿಸಹತ್ತಿದಳು. ಅಲ್ಲದೆ, ಮಹಾರಾಜರನ್ನು ಕಂಡರೆ ಅವಳಿಗೆ ಆಗುತ್ತಿರಲಿಲ್ಲ! ಅವರು ಅಕ್ಕನನ್ನು ತಮ್ಮ ಬುಟ್ಟಿಯಲ್ಲಿ ಹಾಕಿಕೊಂಡು, ಭಾವನಿಗೆ ಮೋಸ ಮಾಡುತ್ತಿರುವರೆಂಬ ಸಂಶಯ ಇವಳಲ್ಲಿ ಬಲವಾಗಿತ್ತು. ಹಿಂದಿನ ರಾತ್ರಿ ತನ್ನನ್ನು ವಸ್ತ್ರವಿಹೀನಳನ್ನಾಗಿ ಮಾಡಿ ಮಾನಭಂಗ ಮಾಡಲು ಯತ್ನಿಸಿದ ಕೈಗಳು ಭೂತದ್ದೋ ಅಥವಾ ಮನುಷ್ಯರ ಕೈಗಳೋ ಎಂದು ಇನ್ನೂ ಜೆನ್ನೀಫರ ನಿರ್ಧರಿಸಬೇಕಿತ್ತು. ಭೂತಚೇಷ್ಟೆಯಲ್ಲಿ ಮಹಾರಾಜರ ಹಸ್ತಕ್ಷೇಪವಿದೆಯೇನೋ ಎಂದು ಜೆನ್ನೀಫರ ಸಾಶಂಕಳಾಗಿದ್ದಳು. ಹಿಡಿದರೆ ಹಾರಿ ಹೋಗುತ್ತಿದ್ದ ಸಿಂತಿಯಾ ಹಕ್ಕಿ ಈ ಮಹಾರಾಜರ ಅಂಗೈಯಲ್ಲಿ ಸಿಕ್ಕಿಬಿದ್ದಿತ್ತು. ಅದಕ್ಕೆ ಈಗ ಅಲ್ಲಿಂದ ಹಾರಿ ಹೋಗುವ ಮನಸ್ಸಾಗಲಿಲ್ಲ. ರಾಮಸಿಂಗರಿಗೆ ತುಂಬಾ ಸಂತೋಷವಾಗಿದ್ದರೂ, ತಮ್ಮ ಬಲೆಗೆ ಒಂದೇ ಹಕ್ಕಿ ಸಿಕ್ಕಿ ಬಿದ್ದಿದ್ದರಿಂದ ಸ್ವಲ್ಪ ನಿರಾಶೆಯಾಗಿತ್ತು! ಜೆನ್ನೀಫರಳನ್ನು ಅಲ್ಲಿಂದ ಹಾರಿಸಿಕೊಂಡು ಬರುವಲ್ಲಿ ಈಗ ಅವರು ಬಲೆಯನ್ನು ಒಡ್ಡಹತ್ತಿದರು. ಸ್ಯಾಂಡಿಯ ಸಹಾಯದಿಂದ ಇರುತ್ತಿದ್ದ ಜೆನ್ನೀಫರಳನ್ನು ಬೇರ್ಪಡಿಸುವದೆಂದರೆ, ಸ್ಯಾಂಡಿಯನ್ನೇ ಮುಗಿಸಿಬಿಟ್ಟರಾಯಿತೆಂದು ಮಹಾರಾಜರು ವಂಚಕರಿಗೆ ಹೇಳಿಬಿಟ್ಟರು!

ಸಿಂತಿಯಾ ಅರಮನೆಗೆ ಬಂದೊಡನೆ ಅಂತಃಪುರದ ಕಣ್ಣುಗಳು ಕೆಂಪಾದವು. ಮನೆತನದ ಗೌರವವು ಹಾಳಾಗುವದೆಂದು ಸೀತಾರಾಜೇ ನೊಂದುಕೊಳ್ಳಹತ್ತಿದಳು. ಸಿಂತಿಯಾ ಕೃಷ್ಣಬಾದದ ಮಹಾರಾಣಿಯಾಗುವಳೆಂದು ಅರಮನೆಯ ಕಂಬಗಳಲ್ಲೆ ಮಾತನಾಡಹತ್ತಿದವು.



ಇದನ್ನು ತೀರಿಸುವ ಅಗತ್ಯವಿಲ್ಲವಂತೆ ಹೌದಾ ಸ್ವಾಮಿ.......!

ಅದನ್ನು ಕೇಳಿದ ಸೀತಾರಾಜೇ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಸಿದ್ಧತೆಯನ್ನು ನಡೆಸಿದಳು. ಯಾರಿಂದಲೊ ಇದನ್ನು ಅರಿತ ಲಕ್ಷ್ಮಣಸಿಂಗರು ಅಕ್ಕಾರಾಜೇನನ್ನು ಕರೆದುಕೊಂಡು ಬಂದು ಸೀತಾರಾಜೇನ ಜೊತೆ ಇರಲು ಹೇಳಿದರು. ತಾನು ಏನಾದರೂ ಉಪಾಯ ಮಾಡಿ ಮನೆತನದ ಗೌರವವನ್ನು ಕಾಪಾಡುವದಾಗಿ ಸೀತಾರಾಜೇಗೆ ಅವನು ಆಶ್ವಾಸನವನ್ನಿತ್ತನು. ಸಿಂತಿಯಾ ಅರಮನೆಗೆ ಬಂದಂದಿನಿಂದ ಮಹಾರಾಜರ ಕಾಮಕೇಳಿ ಅರಮನೆಯಲ್ಲಿ ಎಲ್ಲರಿಗೂ ಕಾಣುವಂತೆ ನಡೆಯಹತ್ತಿತು. ಅರಮನೆಯಲ್ಲಿ ಮರಿಯಾ ಮತ್ತು ಜ್ಯೂಲಿ ಇದ್ದರೂ ಅವರೊಡನೆ ಮಹಾರಾಜರು ಬಹಿರಂಗವಾಗಿ ಅದೆಂದೂ ಸರಸವನ್ನಾಡುತ್ತಿರಲಿಲ್ಲ. ಆದರೆ ಸಿಂತಿಯಾಳೊಂದಿಗೆ ಅವರು ಅರಮನೆಯ ಮರ್ಯಾದೆಯ ಎಲ್ಲೆಯನ್ನು ಮೀರಿ ನಡೆಯಹತ್ತಿದರು.

ಮುಂದೆ ಒಂದೇ ತಿಂಗಳಲ್ಲಿ ಏನಾಯಿತೋ ಏನೋ, ಮರಿಯಾ ಮತ್ತು ಜ್ಯೂಲೀ ರಕ್ತಕಾರಿ ಸತ್ತರು. ಅವರು ಸತ್ತದ್ದು ಭೂತಚೇಷ್ಟೆಯಿಂದಲೇ ಎಂದು ಅರಮನೆಯಲ್ಲಿ ಎಲ್ಲರೂ ಮಾತನಾಡಿಕೊಳ್ಳಹತ್ತಿದರು. ಆದರೆ ರಾಮಸಿಂಗರಿಗೆ ಮಾತ್ರ ಅವರಿಬ್ಬರೂ ವಿಷಪ್ರಾಶನದಿಂದ ಸತ್ತಿರಬೇಕೆಂದು ಅನಿಸಿತು. ಇನ್ನು ಆ ಪ್ರಯೋಗವು ಸಿಂತಿಯಾಳ ಮೇಲೆ ನಡೆಯಬಹುದೆಂದು ರಾಮಸಿಂಗರು ಅಂಜಿದರು. ಬಂಗ್ಲೆಯ ಭೂತ ಅರಮನೆಗೂ ಬಂದಿತಲ್ಲಾ ಎಂದು ಸಿಂತಿಯಾ ಭೀತಳಾದಳು. ಮಹಾರಾಜರು ಸಿಂತಿಯಾಗೆ ಅದು ಭೂತವಲ್ಲವೆಂದು ಹೇಳಿದರೂ ಅವಳು ಅದನ್ನು ಒಪ್ಪಲು ಸಿದ್ಧಳಿರಲಿಲ್ಲ; ಮಹಾರಾಜರಿಗೆ ಅವರ ಮಂತ್ರ ಅವರಿಗೆ ತಿರುಗಿ ಬಂದಂತಾಗಿತ್ತು. ತಾವು ಏಕಾದರೂ ಭೂತಚೇಷ್ಟೆಯನ್ನು ಎಬ್ಬಿಸಿದೆವೋ ಎಂದು ಅವರಿಗೆ ಈಗ ಅನಿಸಹತ್ತಿತು. ಬಂಗ್ಲೆಯ ಭೂತವನ್ನು ಎಬ್ಬಿಸಿದವರು ತಾವೇ ಎಂದು ಸಿಂತಿಯಾಗೆ ಹೇಳಲು ಅವರಿಗೆ ಮನಸ್ಸಾಗಲಿಲ್ಲ. ಆದರೆ ಸಿಂತಿಯಾಗೆ ಮಾತ್ರ ಅರಮನೆಯಲ್ಲಿ ಇರಲೂ ಅಂಜಿಕೆಯಾಗಹತ್ತಿತು. ಮಹಾರಾಜರಿಗೆ ಅವಳು ಏನು ಹೇಳಿದಳೋ ಏನೋ! ಅದೊಂದು ದಿವಸ ಮಹಾರಾಜರು ಕೃಷ್ಣಬಾದದ ಸಿಂಹಾಸನವನ್ನು ತ್ಯಜಿಸಿ ಅವಳೊಂದಿಗೆ ಇಂಗ್ಲಂಡಕ್ಕೆ ಹೋಗಿಬಿಟ್ಟರು. ಈಗ ಕೃಷ್ಣಬಾದದ ಅರಮನೆಯಲ್ಲಿ ಶಾಂತಿ ನೆಲೆಸಿತ್ತು.

ವಿದೇಶಕ್ಕೆ ಹೋಗಬೇಕಿದ್ದ ಜೆನ್ನೀಫರ ಭಾರತದಲ್ಲಿಯೇ ಉಳಿದಳು. ಭಾರತದಲ್ಲಿ ಇರಬೇಕೆಂದಿದ್ದ ಸಿಂತಿಯಾ ವಿದೇಶಕ್ಕೆ ಹೋದಳು. ಆದರೆ ಈಗ ಜೆನ್ನೀಫರ ಒಂಟಿಯಾಗಿರಲಿಲ್ಲ. ಸ್ಯಾಂಡಿಯನ್ನು ಜೊತೆಗಾರನನ್ನಾಗಿ ಮಾಡಿಕೊಂಡು ಆ ಭೂತ ಬಂಗ್ಲೆಯಲ್ಲಿ ಹಾಯಾಗಿ ಇದ್ದಳು. ಫಿಲಿಪ್ ಮರಳಿ ಕೃಷ್ಣಬಾದಕ್ಕೆ ಬಂದಾಗ ನಡೆದು ಹೋದದ್ದನ್ನು ಕೇಳಿ ಹುಚ್ಚನಾದನು.

ಲಕ್ಷ್ಮಣಸಿಂಗ ಈಗ ಕೃಷ್ಣಬಾದದ ಮಹಾರಾಜರಾದರು. ಅವರು ಸೀತಾರಾಜೇಯನ್ನು ವಿವಾಹವಾಗಿ ಅವಳನ್ನು ಕೃಷ್ಣಬಾದದ ಮಹಾರಾಣಿಯನ್ನಾಗಿ ಮಾಡಿದರು. ಸೀತಾರಾಜೇ ಮಹಾರಾಣಿಯಾದೊಡನೆ, ತಮ್ಮ ಒಡೆತನದ ಭಾವಣಿ ಬಂಗ್ಲೆಗಳನ್ನೆಲ್ಲಾ ಕೆಡವಿಸಿಬಿಟ್ಟಳು. ಮಹಾರಾಜರಿಂದ ವೈಯಿಸರಾಯರಿಗೆ ಶಿಫಾರಸ್ಸು ಮಾಡಿಸಿ, ದಂಡಿನ ಭಾವಣಿಯನ್ನು ಅಲ್ಲಿಂದ ಕಿತ್ತಿ ಬೇರೆ ಊರಿಗೆ ಹಾಕಬೇಕೆಂದು ಬರೆಯಿಸಿದಳು. ಅವಳಿಗೆ ಈ ಶ್ವೇತತ್ವಚೆಯ ಹೆಂಗಸರನ್ನು ಕಂಡರೆ ಸೇರದಂತಾಯಿತು. ಅವಳು ತನಗೆ ಮಕ್ಕಳು ಹುಟ್ಟಿದರೆ ಅದೆಂದೂ ವಿದೇಶಕ್ಕೆ ಕಳಿಸುವದಿಲ್ಲವೆಂದು ನಿರ್ಧರಿಸಿದಳು. ರಾಮಸಿಂಗ ಮಹಾರಾಜರು ಕೃಷ್ಣಬಾದದಲ್ಲಿ ಎಬ್ಬಿಸಿದ ಭೂತಚೇಷ್ಟೆ ಅವರನ್ನೇ ಬಲಿತಿಂದಿತು! ಲಕ್ಷ್ಮಣಸಿಂಗ ಎಬ್ಬಿಸಿದ ಭೂತಚೇಷ್ಟೆ ಕೃಷ್ಣಬಾದದ ಮರ್ಯಾದೆಯನ್ನು ಕಾಯ್ದಿತು. ಮರಿಯಾ ಮತ್ತು ಜ್ಯೂಲೀ ರಕ್ತಕಾರಿ ಸತ್ತದ್ದೇ ಲಕ್ಷ್ಮಣಸಿಂಗರ ದೆವ್ವದ ಪೆದರಿಕೆಯಿಂದ !



# ಕನ್ನಡ ಸಾಹಿತ್ಯದ ಮುನ್ನೋಟ

ಡಾ|| ರಾ. ಯ. ಧಾರವಾಡಕರ

**ಕನ್ನಡ ಸಾಹಿತ್ಯವು ಬೆಳೆದು ಬಂದ ಬಗೆ ಕುತೂಹಲಪೂರ್ಣ. ಚಂಪೂಕಾವ್ಯಗಳು ಷಟ್ಪದಿಗಳು, ವಚನಗಳು, ಹಾಡುಗಳು, ಕೀರ್ತನೆಗಳು, ರಗಳೆಗಳು ಹೀಗೆ ಪ್ರಾಚೀನ ಮತ್ತು ಮಧ್ಯಯುಗದಲ್ಲಿ ಸಾಹಿತ್ಯವು ಅನೇಕ ರೂಪ ಪಡೆಯಿತು. ರಾಮಾಯಣ ಮಹಾಭಾರತಗಳು, ಧಾರ್ಮಿಕಭಾವನೆಗಳು, ರಾಜರಾಣಿಯರ ವೈಭವಗಳು ಗ್ರಂಥರಚನೆಗೆ ಪ್ರೇರಣೆ ನೀಡಿದವು. ಇಪ್ಪತ್ತನೆಯ ಶತಮಾನವು ಕನ್ನಡ ಸಾಹಿತ್ಯದಲ್ಲಿ ಹೊಸ ಅಧ್ಯಾಯವನ್ನು ಪ್ರಾರಂಭಿಸಿತು. ಪಾಶ್ಚಿಮಾತ್ಯ ಸಾಹಿತ್ಯ ಸಂಸ್ಕೃತಿಯ ಸಂಪರ್ಕದಿಂದಾಗಿ ರಮ್ಯ, ನವೋದಯ, ಪ್ರಗತಿಶೀಲ ಇತ್ಯಾದಿ ಅನೇಕ ಪಂಥಗಳು ಬೆಳೆದವು. ದಲಿತ, ಬಂಡಾಯ ವರ್ಗಸಂಘರ್ಷಗಳು ಸಾಹಿತ್ಯದ ಇನ್ನು ಹಲವು ಮುಖಗಳಾಗಿವೆ. ಕನ್ನಡ ಬರಹಗಾರರೂ ಹಲವು ವೃತ್ತಿಯಲ್ಲಿ ತೊಡಗಿದವರು. ವೈಜ್ಞಾನಿಕ ಆವಿಷ್ಕಾರಗಳು ಹೊಸ ದಿಗಂತವನ್ನು ತೋರಿವೆ. ಹೀಗಾಗಿ ಹೊಸಬಗೆಯ ಸಾಹಿತ್ಯ ಸೃಷ್ಟಿಯು ಮುಂದಿನ ವರುಷಗಳಲ್ಲಿ ನಡೆಯುವದೆಂದು ಒಂದು ವಿಚಾರ ಇಲ್ಲಿ ನಿರೂಪಿತ.**

## ಹಿನ್ನೆಲೆ : ಅಂದು

ಕಾಲಕಾಲಕ್ಕೆ ಅಭಿವ್ಯಕ್ತವಾದ ಜನತಾ ಭಾವನೆಗೆ ಸ್ಪಂದಿಸಿದುದು ಕನ್ನಡ ಸಾಹಿತ್ಯದ ವೈಲಕ್ಷಣ್ಯವಾಗಿದೆ. ಹತ್ತನೆಯ ಶತಮಾನದಿಂದ ಹನ್ನೆರಡರ ವರೆಗೆ ಹೋರಾಟಗಳ ಕಾಲವಾಗಿತ್ತು. ಪ್ರಬಲರಾದ ರಾಷ್ಟ್ರಕೂಟರು, ಚಾಲುಕ್ಯರು ರಾಜ್ಯವಾಳಿದ, ಹೋರಾಡಿದ ಕಾಲವದು. ಅಂತೆಯೇ ಈ ರಾಜರ ಆಶ್ರಯದಲ್ಲಿದ್ದ ಪಂಪ, ಪೊನ್ನ, ರನ್ನ ಮೊದಲಾದ ಕವಿಗಳು ಮಹಾಭಾರತ ಮತ್ತು ರಾಮಾಯಣದ ಕಥೆಗಳನ್ನು ಹೇಳುವ ನೆಪದಲ್ಲಿ ತಮ್ಮ ತಮ್ಮ ಆಶ್ರಯದಾತರನ್ನೂ ಪ್ರಶಂಸಿಸಿಕೊಂಡರು. ಪಡೆಯಡೆಯು ಕಡೆಯು ಒಡವರ ಕುಡೆ, ಪಡೆದ ಬಿರುದು ತನ್ನದಲ್ಲ ಎಂದು ರನ್ನ ತನ್ನ ಹೆಗ್ಗಳಿಕೆಯನ್ನು ಹೇಳಿಕೊಂಡ. ಈ ಕಾಲದ ಕಾವ್ಯವೆಲ್ಲ ಪ್ರೌಢವಾಗಿ 'ಮಾರ್ಗ' ರೂಪವನ್ನು ತಾಳಿತ್ತು. ಸಂಸ್ಕೃತ ಭೂಯಿಷ್ಠವಾದ ಬಂಧ, ಶೈಲಿ, ಕಾವ್ಯ ವರ್ಣನೆಗಳು ಹೆಚ್ಚಾಗಿ ಈ ಕಾಲದಲ್ಲಿ ಕಂಡು ಬರುತ್ತವೆ. ಪಂಪನ ಕಾವ್ಯದಲ್ಲಿ ಅರಿಕೇಸರಿ ಕಥಾನಾಯಕ. "ವೈರಿನರೇಂದ್ರೋದ್ದಾಮ ದರ್ಪೋದಳನನೆ ಕಥಾನಾಯಕಂ ಮಾಡಿ ಸಂದರ್ಜುನನೊಳ್ ಪೋಲ್ವೀ ಕಥಾಭಿತ್ತಿಯನನು ನಯದಿಂ ಪೇೞಲೆಂದೆತ್ತಿಕೊಂಡೆಂ" ಎಂದು ಪಂಪ ತನ್ನ ಭಾರತದ ಬಗ್ಗೆ ಹೇಳುತ್ತಾನೆ.

ರನ್ನನ ಆಶ್ರಯದಾತ ಸತ್ಯಾಶ್ರಯ. ಪಂಪನದು ವಿಕ್ರಮಾರ್ಜುನ ವಿಜಯವಾದರೆ, ರನ್ನನದು 'ಸಾಹಸಭೀಮ ವಿಜಯ'. ಆದರೆ, ಈ ಕ್ಷಾತ್ರ ಪರಂಪರೆಯ ಕೂಡವೇ ಕವಿ ಸಹಜವಾದ, ಜೈನ ಧರ್ಮದ ಮೂಲ ಸೂತ್ರಗಳಾದ ಸತ್ಯ, ಅಹಿಂಸೆ, ತ್ಯಾಗ, ವೈರಾಗ್ಯ ಮೊದಲಾದ ಗುಣಗಳು ಈ ಕವಿಗಳ ಆಗಮಿಕ ಕಾವ್ಯಗಳಲ್ಲಿ ಪ್ರತಿಧ್ವನಿಗೊಂಡಿವೆ. ನಾಗಚಂದ್ರ "ರಾಗದ್ವೇಷ ನಿಬಂಧಮಪ್ಪ ಕೃತಿಯಂ ಪೇಳ್ದು ಅಖಿಲಮಂ ರಾಗಾವಿಲಂ ಮಾಳ್ಪ ವಿದ್ಯಾಗರ್ವಗ್ರಹ ಪೀಡಿತರ್... ಬಿತ್ತಿ ಬೆಳೆವಂತಕ್ಕುಂ ವಿಷೋದ್ಯಾನಮಂ" ಎಂದು ಅಭಿಪ್ರಾಯವನ್ನೂ ವ್ಯಕ್ತಮಾಡಿದ್ದಾನೆ, ಸಾರದೆ ಸಾರಮಪ್ಪ ಜಿನಧರ್ಮಮಂ ಆತ್ಮಂ, ಅಸಾರಮಪ್ಪುದಂ ಸಾರಮಿದೆಂದು ನಂಬಿ, ತನಗಲ್ಲದುದಂ ತನಗಪ್ಪುದೆಂದು, ಕೇದಾರ, ವಿಹಾರ, ಸೋದರ, ಕೃಶೋದರ, ಸುಂದರದಾರ, ದಾರಕೋದಾರ ವಿಮೋಹದೊಳ್ ತೊಡರ್ದು ದಾರುಣ-ದುಃಖಮಂ ಎಯ್ದುದಿರ್ಕುಮೆ?- ಎಂಬುದು ಅವನ ಅನಿಸಿಕೆ. ಆದ್ದರಿಂದ ಈ ಸಂಸಾರ ಅ-ನಿತ್ಯ, ಅ-ಸಾರ. ಭಾವಿಪೊಡೆ ಅಸಾರಮಂ ಈ ಸಂಸಾರಂ. ಅಂತೆಯೇ, ಅವನು ತನ್ನ ಆತ್ಮಕ್ಕೆ ಬೋಧಿಸುವುದೆಂದರೆ-

ಕಡೆಯಿಲ್ಲದ ಸಂಸಾರದ  
ಕಡೆಗಾಣಲ್ ಬಗೆವೆಯಪ್ಪೊಡೆನ್ನುಕ್ತಿಗೊಂಡಂ  
ಬಡು ಜೀವ, ನಿನ್ನ ಕಾಲಂ  
ಪಿಡಿವಂ, ಧರ್ಮಮನೆ ಮುಗುಳೆ-  
ಬಲ್ವಿಡಿವಿಡಿಯಾ ॥

ಸಾರಾಂಶ : ೧೦ ರಿಂದ ೧೨ನೆಯ ಶತಮಾನ ಕಾಲದಲ್ಲಿ ಕ್ಷಾತ್ರ ಮತ್ತು ವೈರಾಗ್ಯ- ಎರಡೂ ಭಾವಗಳ ಅಭಿವ್ಯಕ್ತವನ್ನೂ, ಬರವಣಿಗೆಯಲ್ಲಿ 'ಮಾರ್ಗ' ಪ್ರಧಾನವಾದ ಶೈಲಿಯನ್ನು ಕಾಣುತ್ತೇವೆ.

ನಾವು ಹನ್ನೆರಡನೆಯ ಶತಮಾನಕ್ಕೆ ಬರುವುದರಲ್ಲಿಯೇ ಬಸವಣ್ಣನವರ ಮಹಾವ್ಯಕ್ತಿತ್ವದ ಮೂಲಕ ಮನುಷ್ಯ ಈ ಜೀವನದಲ್ಲಿಯೇ ಸ್ವರ್ಗ - ನರಕಗಳನ್ನು ಕಾಣುವಂತಾಯಿತು. ಸಂಸಾರ ಅಸಾರವಲ್ಲ, ನಿಸ್ಸಾರವಲ್ಲ. ಹಾವಿನ ಹಲ್ಲಕಳೆದು ಹಾವನಾಡಿಸಬಲ್ಲಡೆ, ಹಾವಿನ ಸಂಗವೇ ಲೇಸು ಕಾಣಯ್ಯ. ಸಂಸಾರದೊಳಗಿದ್ದೂ, ಮನುಷ್ಯ ಒಳ್ಳೆಯವನಾಗಿ ಬಾಳಬಹುದು, ಒಳ್ಳೆಯವನಾಗಿ ನಡೆದುಕೊಳ್ಳಬಹುದು. ಇದರಿಂದ ಸಮಾಜದ ದೀನ-ದಲಿತರ ಕಣ್ಣಲ್ಲಿಯೂ ಆಸೆಯ ಬೆಳಕು ಕಾಣುವಂತಾಯಿತು. ಈ ಕಾಲಕ್ಕೆ ಶುದ್ಧಕನ್ನಡ ಶೈಲಿಯ, ಗದ್ಯದ ರೀತಿಯ, ಆತ್ಮಾಭಿವ್ಯಕ್ತಿ ಮತ್ತು ಸಮಾಜಸುಧಾರಣೆಯ ಬರವಣಿಗೆ ಕಂಡುಬಂದಿತು. ಅಯ್ಯಾ ಎಂದರೆ ಸ್ವರ್ಗ, ಎಲವೊ ಎಂದರೆ ನರಕ-ಎಂಬ ಸರಳ

ವಾಕ್ಯಗಳು, ಉದಾತ್ತವಿಚಾರಗಳು, ಕಂಡು ಬಂದವು. ಸಾಹಿತ್ಯ ಹೆಚ್ಚಾಗಿ ಸಮಾಜಸಮ್ಮುಖಿ, ಆತ್ಮಾಭಿವ್ಯಕ್ತಿರೂಪವಾಗಿ ಪರಿವರ್ತನಗೊಂಡಿತು. ಬರವಣಿಗೆಯಲ್ಲಿಯೂ ಹಿಂದಿನ ಅರಮನೆಯ ಉಪಮೆ, ರೂಪಕಗಳು ಕಂಡುಬರದೆ, ಜನರ ದಿನನಿತ್ಯದ ಅನುಭವದಲ್ಲಿ ಕಾಣುವ ಹಾವು, ಏತ, ನಾಯಿ, ಓತೀಕಾಟ, ಮರ್ಕಟ, ಗೋಸುಂಬೆ, ಕಾಗೆ, ಅತ್ತಿಯ ಹಣ್ಣು, ಕೆರಹು-ವೊದಲಾದ ಪಶುಪಕ್ಷಿವಸ್ತುಗಳು ಉಪಮೆ ರೂಪಕಗಳ ಆಗರ ವಾದುವು. ಸಾಹಿತ್ಯ ಜನರ ಸಮೀಪಕ್ಕೆ ಹೆಚ್ಚಾಗಿ ಬಂದಿತು. ನಾನಾವರ್ಣದ ಸಂಸಾರ ಹಾವು-ಹಾವಾಡಿಗನ ಸ್ನೇಹದಂತೆ. ಏತ ತಲೆವಾಗಿದ ಡೇನು ಗುರುಭಕ್ತನಾಗಬಲ್ಲುದೆ? ಹೊರಸಿ ಕೊಂಡು ಹೋದ ನಾಯಿ ವೊಲನೇನ ಹಿಡಿವುದು? ಕೊಂಬಿನ ಮೇಲಿನ ಮರ್ಕಟನಂತೆ ಲಂಘಿಸುವು ದೆನ್ನ ಮನವು. ಹೊತ್ತಿಗೊಂದು ವರಿಯಪ್ಪ ಗೋಸುಂಬೆಯಂತೆ ಎನ್ನ ಮನವು. ಕಾಗೆ ಕರೆಯದೆ ತನ್ನ ಬಳಗವ? ಎನ್ನ ಚಿತ್ತವು ಅತ್ತಿಯ ಹಣ್ಣು ಕಾಣಾ, ಹಾಗದ ಕೆರಹ ಹೊರಗೆ ಕಳೆದು, ದೇಗುಲಕ್ಕೆ ಹೋಗಿ, ನಮಸ್ಕಾರ ಮಾಡುವವನಿಗೆ, ತನ್ನ ಕೆರಹಿನ ಧ್ಯಾನವಲ್ಲದೆ, ದೇವರ ಧ್ಯಾನವಿಲ್ಲ. ಕೆರಹಿ-ನಂತೆ ಸಾಮಾನ್ಯ ವಸ್ತುವಷ್ಟೇ ಅಲ್ಲದೆ, ಸೂಳೆ, ಸಂತೆಯ ಸೂಳೆ ವೊದಲಾದವರೂ ಉಪಮಾ ವಿಷಯವಾದರೂ. ಕೂಸುಳ್ಳ ಸೂಳೆ – ಒತ್ತೆಯ ಕೊಂಡರೆ, ಕೂಸಿಂಗಲ್ಲ, ಬೊಜಗಂಗಲ್ಲ. ಸೂಳೆಯ ಮಗ ಮಾಳವ ಮಾಡಿದರೆ, ತಾಯ ಹೆಸರಾಯಿತ್ತಲ್ಲದೆ, ತಂದೆಯ ಹೆಸರಿಲ್ಲ. ಸಂತೆಯ ಗುಡಿಲ ಸೂಳೆಗೆ ಕೊಂತವಳವಡುವುದೆ? ಅರ್ಥಾತ್, ಇಂದಿನ ಇಪ್ಪತ್ತನೇಯ ಶತಮಾನದ ಲೇಖಕ ಉಪಯೋಗಿಸಬಹುದಾದ ಉಪಮೆ ರೂಪಕಗಳನ್ನು ಬಸವಣ್ಣನವರು ಈಗ ಎಂಟು ನೂರು ವರ್ಷಗಳ ಹಿಂದೆಯೇ ಉಪಯೋಗಿಸಿ-ದರು. ಅಷ್ಟೇ ಅಲ್ಲ, ಬಸವಣ್ಣನವರ ಮಹ ಮನೆಯಲ್ಲಿ ಕಟ್ಟಿಗೆಯ ಕಾಯಕದವರೂ, ಆಚ್ಚುಕ್ಕಿಯವರು, ಮಡಿವಾಳ ಕಾಯಕದವರು, ಮಾದರು,— ವೊದಲಾದ ಸಮಾಜದ ವಿವಿಧ ಸ್ತರಗಳ ಭಕ್ತರೂ ಬಂದು ಸೇರಿದರು. ಸ್ವಾಭಾ-ವಿಕವಾಗಿಯೇ ಇವರ ಬರವಣಿಗೆಯಲ್ಲಿ ಇವರ ಸಾಮಾಜಿಕ ಅನುಭವ ಮತ್ತು ಇವರ ವೃತ್ತಿಯ ಉಪಮೆ-ರೂಪಕಗಳನ್ನು ಕಾಣುತ್ತೇವೆ, ಒಂದರ್ಥ ದಲ್ಲಿ, ಇಂದಿನ ದಲಿತ ಸಾಹಿತ್ಯದ ಮೂಲ ಬೇರನ್ನು ನಾವು ವಚನ ಕಾಲದಲ್ಲಿಯೇ ಕಾಣ ಬಹುದು. ಇದು ಸಾಮಾನ್ಯ ಜನತೆ, ಜನತೆಯ ಉದ್ಧಾರಕ್ಕಾಗಿ, ಆತ್ಮೋದ್ಧಾರಕ್ಕಾಗಿ, ನಿರ್ಮಾಣ ಮಾಡಿದ ಸಾಹಿತ್ಯ.

ಪತ್ತನೆಯ ಶತಮಾನದಲ್ಲಿ ರಾಮಾಯಣ ಮಹಾಭಾರತಗಳ ನಾಯಕರೇ ಕಾವ್ಯನಾಯಕರಾ ಗಿದ್ದರೆ, ೧೩ ನೆಯ ಶತಮಾನದಿಂದ ಮುಂದೆ ಶಿವ ಮತ್ತು ಶಿವಶರಣರು ಕಾವ್ಯನಾಯಕರಾಗಿ ದ್ದಾರೆ. ಅಷ್ಟೇ ಅಲ್ಲ; ಹೆಚ್ಚು ಕಡಿಮೆ ಸಮ ಕಾಲೀನರಾಗಿದ್ದ, ಬಸವಣ್ಣ (ಬಸವರಾಜ ದೇವರ ರಗಳೆ) ಪ್ರಭುದೇವ (ಪ್ರಭುಲಿಂಗಲೀಲೆ) ಚೆನ್ನ ಬಸವಣ್ಣ (ಚೆನ್ನಬಸವ ಪುರಾಣ), ಸಿದ್ಧರಾಮ (ಸಿದ್ಧರಾಮ ಪುರಾಣ), ಆದಯ್ಯ (ಸೋಮ ನಾಥ ಚರಿತ್ರೆ) ವೊದಲಾದವರ ಬಗೆಗೆ ರಚಿತ ವಾದ ಕೃತಿಗಳನ್ನು ಕಾಣುತ್ತೇವೆ. ಬರವಣಿಗೆ ಮಾತ್ರ ಪುನಃ ಪ್ರೌಢತೆಯ ಕಡೆಗೇ ವಾಲುತ್ತಿದೆ.

**ಇಂದು :**

ಹದಿನೈದರ ಮುಂದಿನ ಶತಮಾನಗಳಲ್ಲಿ ಹೆಚ್ಚಾಗಿ ಭಕ್ತಿಪ್ರಧಾನವಾದ ಕೃತಿಗಳನ್ನು ಕಂಡರೆ, ೧೯ನೆಯ ಶತಮಾನದ ಅಂತ್ಯ ಮತ್ತು ೨೦ರ ಪ್ರಾರಂಭದಲ್ಲಿ ಸಾಹಿತ್ಯ ಮತ್ತೆ ಸುಳಿದೆಗೆದು ಬೆಳೆದದ್ದನ್ನು ಕಾಣುತ್ತೇವೆ. ೧೯ರ ಅಂತ್ಯ ಮತ್ತು ೨೦ರ ಪ್ರಾರಂಭದಲ್ಲಿ ಕನ್ನಡ ಸಾಹಿತ್ಯ ಸೂರ್ಯಪಾನ ಇಂಗ್ಲೀಷ ಸಾಹಿತ್ಯ, ಬಂಗಾಲಿ ಮತ್ತು ಮರಾಠಿ ಸಾಹಿತ್ಯಗಳ ಸಾ ಸೂರ್ಯನ ಕಡೆಗೆ ಮುಖ ಮಾಡಿ ತತ್ಪರಿಣಾಮವಾಗಿ, ಇಂಗ್ಲೀಷ ಸಾಹಿ ಅನೇಕ ಪ್ರಮುಖ ಮತ್ತು ಅ – ಪ್ರಮು ಕೃತಿಗಳು ಕನ್ನಡದಲ್ಲಿ ಭಾಷಾಂತರ, ರೂಪಾಂತರಗೊಂಡವು. ಮುದ್ರಣ ಪ್ರಾರಂಭ ಹೊಸಕ್ರಾಂತಿ ಮತ್ತಷ್ಟು ರಭಸದಿಂದ ಮು ವರಿಯಿತು.

ನೃಪತುಂಗಾದಿಗಳ ಕಾಲದಲ್ಲಿ ಪದ್ಯ ಸು ಜನತಾ ಹೃದ್ಯವಾಗಿದ್ದರೆ, ಮುದ್ರಣ "ಪದ್ಯಂ ವಧ್ಯಂ; ಗದ್ಯಂ ಹೃದ್ಯಂ" ಆಯಿ 'ಮಹಾಕಾವ್ಯಗಳಲ್ಲಿ ಕಂಡುಬಂದ ಅಷ್ಟಾ ವರ್ಣನೆಗಳನ್ನು ಕೈಬಿಡಲಾಯಿತು, "ಸಕಲಾ ರ್ಯಾಮಿ ಜೀವಪ್ರಕರ ವಿವಿಧ ಚೈತನ್ಯರೂ ಜಗದ್ವ್ಯಾಪಕಭಾವಂ ವಿಷ್ಣುವೆಂದು" ಭಾವಿ ದೃಷ್ಟಿ ಮರೆಯಾಗಿ ಸಾಹಿತ್ಯ "ಸುಖಿಸಲ್ವಾ ವಾಯಿತು. "ರಕ್ಷಣದಕ್ಷ ದಕ್ಷಿಣಭುಜಂ ಲ ಧರಂ "ಎಂದು ವೊದಲಾದ 'ಕ್ಷ' ಕಿರಣ ಮಾಯವಾಗಿ ಶುದ್ಧಕನ್ನಡದ ಬರವಣಿಗೆ ರೂ ಗೊಂಡಿತು. "ಕರ್ಣಾಣಸರದೊಳ್ ಚೆಂಬ ಕೋದಂತಿರೆ" ಕನ್ನಡ – ಸಂಸ್ಕೃತ ಮಿಶ್ರ ಬಂದಿತು. "ಕನ್ನಡಂ ಕತ್ತುರಿಯಲ್ತೆ?" ಪಟ್ಟವನ್ನು ಪಡೆಯಿತು. ಕಾವ್ಯ ರಸಾತ್ಮಕ ಮನಸ್ಸು ಹಿಡಿಯುವಂತೆ ಆಗಬೇಕು ಪ್ರಜ್ಞೆ ನೆಲೆಸಿತು. ಅರ್ಥಾತ್, ತನ್ನ ಕಾ ಓದುಗ ಬಯಸಿದ್ದನ್ನು ಮುದ್ರಣ ಗಮ ಅಂಥ ಹೊಸ ಸಾಹಿತ್ಯ ನಿರ್ಮಿತಿಯ ಮೂ ಕನ್ನಡಸಾಹಿತ್ಯಕ್ಕೆ ಹೊಸಮಾರ್ಗವನ್ನು ತ ಕೊಟ್ಟಿ.

೧೯ರ ಅಂತ್ಯ ೨೦ರ ಪ್ರಾರಂಭದಲ್ಲಿ ಇಂಗ್ಲಿ ಸಾಹಿತ್ಯದ ಮೂಲಕ ಹೊಸಗಾಳಿ ಬೆಳಕು ಕನ್ನಡಸಾಹಿತ್ಯದಲ್ಲಿ ಕಂಡು ಬಂದವು. ೧೯೨೧ ಈ ಬಗ್ಗೆ ಬರೆಯುತ್ತ ಈ. ಪಿ. ರೈಸ್ ಅ ಹೀಗೆ ಹೇಳುತ್ತಾರೆ.

**"With the nineteenth centu begins an entirely new period Kanarese literature broug about by the influence English rule in India, the imp of European civilisation, and t introduction of Western Scien fic methods of research a ideals of scholarship".**

ಇದರ ಪರಿಣಾಮವಾಗಿ ಇಂಗ್ಲೀಷದ ಪ್ರಸಿ ವಾದ ಮತ್ತು ಅಷ್ಟು ಪ್ರಸಿದ್ಧವಲ್ಲದ ಅನ ಕೃತಿಗಳು ಕನ್ನಡದಲ್ಲಿ ಭಾಷಾಂತರಗೊಂಡ ಅಪ್ರಸಿದ್ಧ ಕೃತಿಗಳಲ್ಲಿ 'ಸುಮತಿ ಮ



---

*ಹೆಚ್ಚಿನ ವಿವರಗಳಿಗಾಗಿ 'ಸಾಹಿತ್ಯ ಸಮಿ
—ರಾ. ಯ, ಧಾರವಾಡಕರ

ಮಾರರ ಚರಿತ್ರೆ' (ಎಂ. ಎಸ್. ಪುಟ್ಟಣ್ಣ) ೯೩, 'ಕನ್ಯಾವಿತಂತು' (ಎಂ. ಎಲ್. ಕಂಠೇಗೌಡ) ೧೮೯೫, 'ಉಲ್ಲಾಸಿನಿ' ಣ್ಣಾಜಿರಾವ್ ಮಲ್ಲೇಶ್ವರ) ೧೯೦೨, ಎಸೆಲಾಸ್' (ಜೀವಾಜಿ ಗೋಡೆ) ೧೯೦೨- ಾದಲಾದುವನ್ನು ಹೇಳಬಹುದು. ಇಂಗ್ಲೀ- ನ ಈ ಪ್ರಭಾವದ ಮೂಲಕ, ಕನ್ನಡದಲ್ಲಿ ) ಗದ್ಯಕ್ಕೆ ಪ್ರಾಶಸ್ತ್ಯಬಂದಿತು. (೨) ಪದ್ಯ ಲ್ಲಿ ಪ್ರಾಸ ಕೈಬಿಟ್ಟಿತು. (೩) ವೃತ್ತ, ಕಂದಾದಿ ಳು ಹೊಸಬಂಧದ ರೀತಿಯ ಶರಷಟ್ಪದಿಗೆ ರ್ಾರ್ಗವಮಾಡಿಕೊಟ್ಟವು. (೪) ಸಾಹಿತ್ಯದಲ್ಲಿ ತಿಕಾರನ ವ್ಯಕ್ತಿತ್ವದ ಅಭಿವ್ಯಕ್ತಿ ಪ್ರಾರಂಭ ಾಯಿತು. (೫) ಉಜ್ವಲವಾದ ಕನ್ನಡ ಸೇವಾ ಲ್ಪನೆ, ಭಾರತೀಯತ್ವ ಮತ್ತು ಸ್ವ-ತ್ವದ ಕಲ್ಪ ಗಳು ಕಂಡುಬಂದವು. (೬) ಕಾದಂಬರಿ, ಸಣ್ಣ ಥೆ, ಕವನರಚನೆ, ನಿಬಂಧ, ಚರಿತ್ರೆ, ಪುರಾಣ ಥೆಗಳ ಹೊಸಬಗೆಯ ನಿರೂಪಣೆ ಮೂಡಿ ಬಂದವು. (೭) ಶೈಕ್ಷಣಿಕ ಕೃತಿರಚನೆ, ಪತ್ರಿಕಾ ಸಾಹಿತ್ಯ, ಆಡಳಿತದ ಗದ್ಯಶೈಲಿ, ಕ್ರೈಸ್ತಸಾಹಿತ್ಯ- ಇವೆಲ್ಲ ಕಂಡುಬಂದವು. (೮) ಕನ್ನಡ ಬರವಣಿಗೆ ಯಲ್ಲಿ ವಿರಾಮ ಚಿಹ್ನೆಗಳು ಕಾಣಹತ್ತಿದವು.

ಸಾಹಿತ್ಯದ ದೃಷ್ಟಿಯಿಂದ ಮುಖ್ಯವಾಗಿ ಈ ಕಾಲದಲ್ಲಿ ೧೯ನೆಯ ಶತಮಾನದ ರೋಮ್ಯಾಂ- ಟಿಕ್ ಕವಿಗಳಾದ ಷೆಲಿ, ಕೀಟ್ಸ್, ಬೈರನ್, ವರ್ಡ್ಸ್‌ವರ್ಥ ಮೊದಲಾದವರ ಪ್ರಭಾವ ಅತಿ ಶಯವಾಗಿ ಆಯಿತು. ಬೇಂದ್ರೆಯವರ ಕವನ ಗಳಲ್ಲಿ ಕಾಣುವ ವ್ಯಕ್ತಿತ್ವನಿರೂಪಣೆ, ಆಡು ಭಾಷೆಯ ಸೊಗಸು, ರಮ್ಯತೆ, ನಿಸರ್ಗವರ್ಣನೆ, ಋತುಗಳ ವಿವರಣೆ-ವರ್ಡ್ಸ್‌ವರ್ಥ, ಷೆಲಿಯ ಕಾವ್ಯಗಳನ್ನು ನೆನಪಿಗೆ ತರುತ್ತವೆ. "ಷೆಲಿಯಲ್ಲಿ ಸೆಲೆಯಾಗಿ ಹರಿದ ವಾಣಿ" ತಮ್ಮ ಕಾವ್ಯದಲ್ಲಿ ಬರಬೇಕೆಂದು ಸ್ವತಃ ಕವಿಗಳೇ ಹೇಳಿದ್ದಾರೆ. ಕುವೆಂಪು, ಬೇಂದ್ರೆಯವರ ಕೃತಿಗಳನ್ನು ಓದು ವಾಗ ನಾವು ಅರಮನೆಯ ಉಸಿರುಗಟ್ಟುವ ವಾತಾವರಣವನ್ನು ಬಿಟ್ಟು, ಹುಲ್ಲುಗಾವಲಿನಲ್ಲಿ ಹಾಯ್ದುಬಂದಂತೆ ಅನಿಸುತ್ತದೆ. ಮಳೆಬಿಲ್ಲು ಕೈಗೆ ಎಟುಕುತ್ತದೆ. ಸಂಪಿಗೆ, ಮಂದಾರ, ಪಾರಿ ಜಾತಗಳ ಕಂಪು ಮೂಗಿಗೆ ತಾಕುತ್ತದೆ.

"ಕಲ್ಪವೃಕ್ಷ ವೃಂದಾವನಂಗಳಲಿ
ಹೇಗೋ ಹೊಕ್ಕುಬಂದೆ."

"ನಾನು ಬಡವಿ, ಆತ ಬಡವ"

"ಬಾ ಭೃಂಗವೆ ಬಾ"

"ನಾರೀ ನಿನ ಮಾರಿ ಮ್ಯಾಲ"- ಮೊದಲಾದವು ಆ ಕಾಲದ ಯುವಕರ ಮನಸ್ಸನ್ನು ಸೂರೆ ಗೊಂಡವು. ಅಡಿಗರ ಮೊದಲ ಕವಿತೆಗಳು, ನರಸಿಂಹ ಸ್ವಾಮಿಯವರ ಪ್ರೇಮಕವನಗಳು- ಈ ರಮ್ಯ ಇಲ್ಲವೆ ರೊಮ್ಯಾಂಟಿಕ್ ಕಾಲದ ಮೈಲುಗಂಬಗಳಾಗಿವೆ. ಎಚ್. ನಾರಾಯಣ ರಾವ್, ಬಿ. ಎಂ. ಶ್ರೀ. ಇಂಗ್ಲೀಷದ ಅನೇಕ ಗೀತೆಗಳನ್ನು ಕನ್ನಡಕ್ಕೆ ತಂದರು. ಆದರೆ,







ಬಾಳು ಬರೀ ಸಿಹಿಯಾಗಿಲ್ಲವಲ್ಲ. ಮಳೆ ಹನಿಯ ಹಿಂದೆ ಮೋಡವೂ ಇದೆ; ಮಿಂಚೂ ಇದೆ, ಹೆದರಿಸುವ ಕರಾಳ ಗುಡುಗೂ ಇದೆ. ಈ ವಾಸ್ತವದ ಕಲ್ಪನೆ ಮೂಡಿದ್ದು ಅನಂತರ ಬಂದ, ನವ್ಯ ಮತ್ತು ಅತಿ ನವ್ಯ ಕವಿಗಳಲ್ಲಿ. ರೊಮ್ಯಾಂ- ಟಿಕ್ ಆಗಿ ವಿನಾಯಕರು ಪ್ರಾರಂಭ ಮಾಡಿದ್ದರೂ "ಶರಧಿಗೆ ಕೊಡದಿರು ಷಟ್ಪದಿಯ ದೀಕ್ಷೆಯನು" ಎಂದು ಸಾರಿ ನವ್ಯ ಮಾರ್ಗವನ್ನು ಪ್ರತಿಪಾದಿಸು ವವರಲ್ಲಿ ಒಬ್ಬರಾದರು. ಅಡಿಗ, ನರಸಿಂಹ ಸ್ವಾಮಿ, ರಾಮಚಂದ್ರ ಶರ್ಮ- ಮೊದಲಾದವರ ಅನಂತರದ ಕವನಗಳು ಹಳೆಯ ಮೂರ್ತಿಗಳ ಭಂಜನದಲ್ಲಿ ತೊಡಗಿದವು. ಸನಾತನಿಗಳ ಹಾಗೆ ಕಂಡ, ರೊಮ್ಯಾಂಟಿಕ್ ಕೃತಿ ರಚನೆ ಮಾಡಿದ, ಪಾವೆಂ ಆಚಾರ್ಯರಂಥವರೂ ಕಾವ್ಯ ಕಲ್ಪನೆಗೆ ಈ ಹೊಸ ತಿರುವನ್ನು ಕೊಟ್ಟರು. ನಗ್ನಳಾಗಿ ಸ್ನಾನ ಮಾಡುತ್ತಿದ್ದ ಯಾವ ಸ್ತ್ರೀಯೂ ಯಾರೂ ತನ್ನನ್ನು ನೋಡಬಾರದೆಂದೇ ಅಪೇಕ್ಷಿಸುತ್ತಾಳೆ. ಶ್ರೀಕೃಷ್ಣ ಗೋಪಿಕಾಸ್ತ್ರೀಯರ ಸೀರೆಗಳನ್ನು ಅಪಹರಿಸಿದಾಗ, ಅವರು ಅನೇಕ ವಿಧವಾಗಿ ಹಲಬುತ್ತಾರೆ, ಅವನಲ್ಲಿ ಯಾಚಿಸುತ್ತಾರೆ. ಆದರೆ ಆಚಾರ್ಯರ ಈ ಗೋಪಿಕಾಸ್ತ್ರೀಯ ಚಿತ್ರವನ್ನು ನೋಡಿ:

**ಗೋಪಿ**

ಪ್ರತಿಯೊಬ್ಬ ಗೋಪಿಯೂ
ಏಕಾಂತದಲ್ಲಿ,
ಸೀರೆಯನು ಬಿಚ್ಚಿಟ್ಟು
ಇಳಿಯುವಳು ಕಾಳಿಂದಿಯಲ್ಲಿ.
ಕ್ಷಣಕ್ಕೊಮ್ಮೆ ಹಾರುವುದು
ದಡದ ಕದಂಬದತ್ತ
ದೃಷ್ಟಿ ಪಕ್ಷಿ-
ಯಾವ ಗೋಪಾಲ ಯಾವಾಗ ಬರುವನೋ
ಎಂದು
ಬೆಚ್ಚಿ, ಬೆಚ್ಚಿ
ಆದರೂ,
ತೋರಮೊಲೆಗಳ ಮೇಲೆ
ನೀರ ಮಣಿಗಳ ಮಾಲೆ
ಮಿನುಗಿಸುತ ಮೇಲೆ ಬಂದು,
ಸೀರೆ-ಕುಪ್ಪಸವ ಇದ್ದಲ್ಲೆ ಕಂಡು,
ಸೂಸುವಳು ತನಗು ಕೇಳಿಸದಂತೆ
ನ-ಸು- ನಿ-ರಾ-ಶೆಯ ನಿಟ್ಟುಸಿರನೊಂದು.

ಯಾವನಾದರೂ ಗೋಪಾಲ ಬಂದು ಅವಳ ಸೀರೆ-ಕುಪ್ಪಸಗಳನ್ನು ಕದಿಯಬೇಕೆಂದೇ ಅವಳ ಆಸೆ ಇತ್ತೇನೋ! **Wasted Beauty !!**

ಪಾವೆಂರ ಕವನ ವಸ್ತುವಿನಲ್ಲಿ ಕಾಣುವ ಈ ನವ್ಯತೆಯನ್ನು ಅವರ ಶೈಲಿಯಲ್ಲಿಯೂ ಕಾಣು ತ್ತೇವೆ. ತಮ್ಮ ಮೂಗಿನ ತುದಿಗೆ ಕುಳಿತ 'ನೊಣ'ದ ಬಗ್ಗೆ ಅವರು ಬರೆದ ಈ ಕವಿತೆಯ ಶೈಲಿಯನ್ನು ನೋಡಿ :

ನನ್ನ ಮೂಗಿನ ತುದಿಗೆ
ಕುಳಿತಿರುವುದೊಂದು ನೊಣ
ತೆರೆದ ಬಾಗಿಲ ಮುಂದೆ
ನಿಂತ ಯೋಗಿಯ ಹಾಗೆ
ಒಳಗೆ ನುಸುಳಿ ಕದಿಯಲೋ
ಇಲ್ಲೆ ಭಿಕ್ಷೆ ಕರೆಯಲೋ !
**For it has been said**
**An open door tempts a Saint...**
ನಾನು ಅಂಗಾತ ಮಲಗಿದ್ದೇನೆ.
**Like some Gulliver**
**In some Lilliput**
ನನಗೂನು ಅನುಮಾನ
**The silken threads of doubt**
**Bind me down to earth**
ಹೊಡೆಯಲೋ ಬಿಡಲೋ ಈ ನೊಣವನ್ನ.[೧]

---

೧ ಕೆಲವು ಪದ್ಯಗಳು ೧೯೭೮

ಕಾಲಕ್ರಮದಲ್ಲಿ ಈ ನವ್ಯ, ಅನೇಕ ಪತ್ರಿಕೆಳ ಕವನಗಳಲ್ಲಿ ಅತಿನವ್ಯಕ್ಕೆ ಎಡೆಮಾಡಿಕೊಟ್ಟಿತು. ಸಾಮಾನ್ಯವಾಗಿ ಬಯ್ಗಳೆಂದು ಎಣಿಸುವ ಅನೇಕ ಪದಗಳು ಕಾವ್ಯಮಾನ್ಯತೆಯನ್ನು ಪಡೆದವು, ಉದಾಹರಣೆಗೆ ೧೯೭೪ ನ್ನು ಸ್ವಾಗತಿಸುವ ಈ ಕವನವನ್ನು ನೋಡಬಹುದು.:

೭೩ ರ ಡಿಸೆಂಬರಿನ ನೆನಪ ಚಳಿ ಹೊದ್ದು
೭೪ ರ ಗ್ರೀಷ್ಮದ ಉರಿ-
ಯತ್ತ ಹೆಜ್ಜೆಯಿಕ್ಕುತ್ತಿರುವ
ಮನುವಿನ ಮಕ್ಕಳೆ, ಸ್ವಾಗತವು ನಿಮಗೆ - -
ಇದ್ದರಿಂದ,
೭೩ ರ ನರಸತ್ತ ಹಸಿರುನೆನಪುಗಳ
ಬುತ್ತಿ ಹೊತ್ತ
ಬೋಳಿ ಮಕ್ಕಳೇ ಬನ್ನಿ.
ಈ ನೆಲದಲ್ಲಿ, ಉಸಿರಿದ್ದಲ್ಲಿ, ಕೊಂಚ
ಸಿಟ್ಟ ತನ್ನಿ, ನೋವ ತನ್ನಿ, ನಿರಾಶೆ ತನ್ನಿ,
ವೇದನೆ ತನ್ನಿ.

(೧೯೭೪)

ಈ ಸಿಟ್ಟು, ಈ ನೋವು, ಈ ನಿರಾಶೆ, ವೇದನೆ, ಉದ್ರೇಕ ಹೆಚ್ಚಾಗಿ ಅನಂತರದ ಬಂಡಾಯ ಮತ್ತು ದಲಿತ ಸಾಹಿತ್ಯಗಳಲ್ಲಿ ಹೆಚ್ಚಾಗಿ ಕಂಡು ಬಂದವು. ಸಮಾಜದ ಒಂದು ಭಾಗಕ್ಕೇ ಪಾರ್ಶ್ವವಾಯು ಹೊಡೆದರೆ, ಸಮಾಜಪುರುಷ ಮುಂದೆ ಸಾಗಲಾರ. ಅನೇಕ ಐತಿಹಾಸಿಕ ಮತ್ತು ಸಾಮಾಜಿಕ ಕಾರಣಗಳ ಮೂಲಕ ಎಲ್ಲ ಅವಕಾಶಗಳು ಕೆಲವೇ ವರ್ಗಕ್ಕೆ ಸಿಗುತ್ತಿದ್ದವು. ಇನ್ನು ಕೆಲವು ವರ್ಗಗಳು ಅವಕಾಶಗಳಿಂದ ವಂಚಿತರಾಗಿರುತ್ತಿದ್ದವು. ಅವರಿಗೆ ಶಿಕ್ಷಣವಿಲ್ಲ; ಅನುಕೂಲವಿಲ್ಲ; ವಾಸಿಸಲು ಗುಡಿಸಲಿಲ್ಲ ಅವರು ಹುಟ್ಟುವದು ಕೊಂಪೆಯಲ್ಲಿ; ಉಸಿರಾಡಿಸುವುದು ಕೊಂಪೆಯಲ್ಲಿ; ಬೆಳೆಯುವುದು ಕೊಂಪೆಯಲ್ಲಿ; ಸತ್ತು ಮಣ್ಣು ಕಾಣುವುದು ಕೊಂಪೆಯಲ್ಲಿ. ಪಾಶ್ಚಿಮಾತ್ಯ ಶಿಕ್ಷಣದ ಪ್ರಭಾವದ ಮೂಲಕ ರಾಜಕೀಯ ತತ್ತ್ವಪ್ರಣಾಲಿಗಳ ಮೂಲಕ, ವಿದ್ಯಾಭಿತರಣೆಯು ಸಾಂಘೀಕರಣದ ಮೂಲಕ ಅವಕಾಶ ವರ್ಜಿತರಾದ ಈ ಜನ ಸುದೈವದಿಂದ ಅವಕಾಶವನ್ನು ಪಡೆಯುವಂತಾಯಿತು. ರಾವಣನ ಸಿಂಹಾಸನದ ಪಾವಟಿಗೆಯಾಗಿ ಹಾಕಲಾಗಿದ್ದ ಶನಿ ತನ್ನ ದೃಷ್ಟಿಯನ್ನು ಮೇಲೆ ಮಾಡುವಂತಾಯಿತು. ಇದರಿಂದ ರಾವಣ ಸಿಂಹಾಸನ ಅಲುಗಾಡಿತು. ಷೇಕ್ಸ್‌ಪಿಯರ ಹೇಳಿದ ಹಾಗೆ, ಭಾಷೆ ಗೊತ್ತಿರದ ಕ್ಯಾಲಿಬನ್‌ನಿಗೆ ಭಾಷೆ ಕಲಿಸಿದಾಗ, ಅವನು ಮೊದಲು ಮಾಡುವುದೆಂದರೆ, ಈ ವರೆಗೆ ತನಗೆ ಭಾಷೆಯನ್ನು ಕಲಿಸದಿದ್ದವರ ಮೇಲೆ ಉಗುಳುವುದು, ಅವರನ್ನು ಬಯ್ಯುವುದು. ಯಾವ ವ್ಯವಸ್ಥೆ ಈ ವರೆಗೆ ಈ ಜನರನ್ನು ತನ್ನ ಪಾದತಲದಲ್ಲಿ ಹಾಕಿ ಅವರನ್ನು ವಿಲಿವಿಲಿ ಒದ್ದಾಡಿಸಿತ್ತೋ, ಆ ವ್ಯವಸ್ಥೆಯನ್ನು ಬಯ್ದು ಈ ಕವಿಗಳಿಗೆ ಸಮಾಧಾನವಿಲ್ಲ; ತೃಪ್ತಿಯಿಲ್ಲ. ವ್ಯವಸ್ಥೆಯ ವಿರುದ್ಧ ರೋಷ, ಕನಲಿಕೆ, ಉದ್ರೇಕ, ಆವೇಗಗಳು ಈ ಬಂಡಾಯ ಮತ್ತು ದಲಿತ ಸಾಹಿತ್ಯದ ಅಭಿವ್ಯಕ್ತಿಗಳಾಗಿವೆ. ಮೂಕನಿಗೆ ಬಾಯಿ ಬಂದಾಗ, ತನ್ನ ಮೂಕತ್ವಕ್ಕೆ ಕಾರಣರಾದವರ ಮೇಲೆ ಉಗುಳುವಂತೆ ಅತಿನವ್ಯದವರೆ ಹೇಳಿದ್ದರು.




ನಿಮ್ಮಪ್ಪನ್ನಂಗ ಬರೆವೆ–

ಹದ್ದಿನಂತಹ ಹಳೆಯುದೆಲ್ಲವನು
ಒದ್ದು ಓಡಿಸಿಬಿಡುವೆ
ಮೂಳರಿಗೆ ಗುಂಡಿಕ್ಕುವೆ
ಜೇನು– ಬೆಳದಿಂಗಳೊಡನೆ
ಇನ್ನು ಚಿನ್ನಾಟ ಸಾಕು
ಬಿಸಿಲು ಬೆಂಕಿಗಳೊಡನೆ
ತೀವ್ರ ಗೆಳೆತನ ಬೇಕು. ....
ಹೊಸದು ಬರೆಯುವೆ ಅಡ್ಡದಾರಿ ಹಿಡಿದು
ತಿಗ–ತುಟಿ ಗಟಾರ ದುರ್ನಾತವನು ತುಂಬಿ
ಈಗಾಗಲೇ ಚೆನ್ನಾಗಿ ಬರೆದು ಹೆಸರಾಗಿರುವ
ನವ್ಯರನೇ ಹದಗೆಡಸಿ ಸದೆಬಡಿಯುವೆ !
ಅನಿಸಿದ್ದನ್ನು ಅನ್ನಿಸಿದ ಹಾಗೆ ಕಾರಿಕೊಂಡು
ಕಂತೆ, ಪುರಾಣ, ಕಾವ್ಯ, ಕತೆಗಳ ಮೇಲೆಲ್ಲ
ಹೊಸ ವಿಮರ್ಶೆಯ ನೆಪದಿಂದ ಮೂತ್ರಿಸಿ
ಭರದಿಂದ ಸಾರಿಸಿ ಅತಿ ನವ್ಯನಾಗುವೆ ....

ನಿಮ್ಮಪ್ಪನ್ನಂಗ ಬರೆವೆ
ನಮ್ಮಪ್ಪನಾಣೆ ....
(ರವೀಂದ್ರ ಕರ್ಜಗಿ ·ದಿಗಂಬರ ಪುಟ ೯)

ಅತಿನವ್ಯರ ಈ ರೋಷ ಸಾರ್ವತ್ರಿಕವಾಗಿದ್ದರೆ ದಲಿತ ಸಾಹಿತ್ಯದಲ್ಲಿ ಇದು ಹಿತಾಸಕ್ತರ, ಮೇಲ್ವರ್ಗದವರೆನ್ನಿಸಿಕೊಂಡ ಶೋಷಕರ, ದಬ್ಬಾಳಿಕೆ ನಡೆಸಿದವರ ವಿರುದ್ಧ ತಿರುಗಿಸಿದ ಮೂಲಕ ಈ ಮೈದಾನ ತೋಫಾಗಿದೆ.

"ದಲಿತ ಸಾಹಿತ್ಯ"ದ ವ್ಯಾಖ್ಯೆ ಇಲ್ಲಿ ಅನವಶ್ಯಕ. ಅದು ದಲಿತರಾದವರು ದಲಿತರಿಗಾಗಿ ಬರೆದ ಸಾಹಿತ್ಯವೋ ? ಮೇಲ್ವರ್ಗದವರೂ ದಲಿತರ ಬಗ್ಗೆ ಬರೆದ ಸಾಹಿತ್ಯವೋ ! ಅಥವಾ ದಲಿತರು ತಮ್ಮ ಜೀವನವನ್ನು ಬಿಟ್ಟು, ಉಳಿದವರ ಬಗ್ಗೆ ಬರೆದ ಸಾಹಿತ್ಯವನ್ನು ಒಳಗೊಳ್ಳುವುದೋ ?.... ಇದರ ಬಗ್ಗೆ ಸಾದೃಶ್ಯವನ್ನು ನಾವು ಅಮೇರಿಕೆಯ "ನಿಗ್ರೋ ಸಾಹಿತ್ಯ"ದಲ್ಲಿ ಕಾಣುತ್ತೇವೆ. ಅಮೇರಿಕೆಯ ನಿಗ್ರೋ ಜನ ನಮ್ಮಲ್ಲಿಯ ದಲಿತರಿದ್ದ ಹಾಗೆ, ಪ್ರಾರಂಭದಲ್ಲಿ ಅವರು ನಿರ್ಮಿಸಿದ ಸಾಹಿತ್ಯವೆಲ್ಲ ತಮ್ಮ ಕಷ್ಟ, ಕಾರ್ಪಣ್ಯ, ನೋವು, ಸಂಕಟಗಳನ್ನು ವಿವರಿಸುವ, ಇದರ ಬಗ್ಗೆ ರೋಷ ವ್ಯಕ್ತಪಡಿಸುವ ಸಾಹಿತ್ಯವೇ ಆಗಿತ್ತು. ಕಾಲಕ್ರಮದಲ್ಲಿ ಇದು ಹೆಚ್ಚಿನ ಕಲಾತ್ಮಕ ಅಭಿವ್ಯಕ್ತಿಗೂ ಅನುವು ಮಾಡಿಕೊಟ್ಟಿತು. ಒಂದು ಮಾತು ಮಾತ್ರ ನಿಜ. ದಲಿತರ ಬಗ್ಗೆ ಬರೆಯುವ ಇತರರು ತಾವು ಕಂಡದ್ದನ್ನು, ಊಹಿಸಿದ್ದನ್ನು ಮಾತ್ರ ಬರೆಯಬಲ್ಲರು. ದಲಿತರೇ ಬರದರೆ, ಅನುಭವಿಸಿದ್ದನ್ನೆ ಬರೆಯುತ್ತಾರೆ. ಎಲ್ಲ ಸಾಹಿತ್ಯವೂ ಪರಭಾಷಾ ಪ್ರವೇಶವೇ ಆಗಿದ್ದರೂ, ದಲಿತರಲ್ಲದವರು ದಲಿತರ ಬಗ್ಗೆ ಬರೆದದ್ದು ಎರಡು ಮಾರು ದೂರದ್ದಾಗಿರುತ್ತದೆ. ದಲಿತರದು ಸ್ವಾನುಭವ; ಇತರರದು ಊಹ್ಯ ಅನುಭವ. ಆ ರೋಷ, ಆ ಅಭಿವ್ಯಕ್ತಿ, ಆ ವೇದನೆ ಬರಬೇಕಾದುದು

ದಲಿತರಾದವರ ಹೃದಯದಿಂದಲೆ. ಅಮೇರಿಕೆಯ 'Afro-American, Writing' ದಲ್ಲಿ Long ಮತ್ತು Collier ಅವರು ನಿಗ್ರೊ ಸಾಹಿತ್ಯದ ಬಗ್ಗೆ ಹೀಗೆ ಹೇಳುತ್ತಾರೆ :

All writings by Americans of African descent, whether or not they write about that which is uniquely black? Writings by nonblacks which treat the Afro... American experience with insight or Sympathy'... there is a rationale in confining the study of Afro... American literary experience to the works of Afro .. American writers (only) . few books are our weapons and the only one which are lively to enable as to Survive. *Therefore, we must distinguish, as never before, between the profound and the Superficial between the felt, and the observed, between the soul and slick*",

ಆದ್ದರಿಂದ, ದಲಿತರ ಮೂಕವೇದನೆಯನ್ನು ಕವಿ ಸಿದ್ಧಲಿಂಗಯ್ಯನಂಥವರೇ ಬಣ್ಣಿಸಬಲ್ಲರು. :

ಹಸಿವಿನಿಂದ ಸತ್ತೋರು, ಸೈಜುಗಲ್ಲು
ಹೊತ್ತೋರು,
ಒದೆಸಿಕೊಂಡು ಒರಗಿದೋರು,
ನನ್ನ ಜನಗಳು. –
ಬಡ್ಡಿಯನ್ನು ತೆತ್ತೋರು, ಭಾಷಣಗಳ
ಬೆಂಕಿಯಲ್ಲಿ
ಬೆಂದು ಬೂದಿಯಾದೋರು
ನನ್ನ ಜನಗಳು– –
ಪರಮಾತ್ಮನ ಹೆಸರಹೇಳಿ, ಪರಮಾನ್ನ
ಉಂಡಜನಕೆ
ಬೂಟು-ಮೆಟ್ಟು ಹೊಲೆಯೋರು
ನನ್ನ ಜನಗಳು ॥

ದಲಿತಸ್ತ್ರೀಯರ ಬಗ್ಗೆ ಈ ವರೆಗೆ ಇದ್ದ ಮೇಲ್ವರ್ಗದವರ ಭಾವನೆಗಳಿಗೆ ಕುದಿದು, ಲಾವಾ ರಸವನ್ನು ಸೂಸುವ ಈ ಕವಿತೆಯನ್ನು ನೋಡಿ :

ಈವರೆಗೆ ಬೆಚ್ಚಗೆ ಮಲಗಿದವರನ್ನು ಎಚ್ಚರಿಸುವ ಕವಿತೆಇದು. ಬರೆದವರು ಒಬ್ಬ ಮಹಿಳೆ.

**ಬೇಡತಿಯರು**

ನಾವು ಬೇಡತಿಯರು ಸ್ವಾಮಿ,
ಬೇಡತಿಯರು,
ಗುಡ್ಡಗಾಡಿನಿಂದ ಹರಿದುಬಂದ ನೀರೆಯರು.
ದಾರಿ ಬಿಡಿ, ತೀರ ಸೇರುತೇವೆ,
ನಿಮ್ಮ ಹರಿಗೋಲಿಗೆ ಹುಟ್ಟು ಹಾಕಿ
ದಣಿದಿದ್ದೇವೆ. ಇನ್ನು ಮಟ್ಟಹಾಕುವದೊಂದು
ಬಾಕಿ ಇದೆ.
ನಾವು ವೇಶ್ಯೆಯರು , ನಿಮ್ಮ ದಾಸಿಯರು,
'ಆಗಿದ್ದ ಕಾಲ' ಈಗಿಲ್ಲ ಎನ್ನುವಂತಿಲ್ಲ
ಆದರೂ ಅಲ್ಲಲ್ಲಿ ಕಾಸುತ್ತಿದ್ದೇವೆ
ನಿಮ್ಮ ಬುರುಡೆಗೆ ಬಿಸಿನೀರು.
ಗಿರಿಬಾಲೆಯರು ನಾವು । ಕಪ್ಪಿದ್ದರೂ
ಕಸ್ತೂರಿ।
ಇಂದಲ್ಲ ನಾಳೆ, ಆಗಬಲ್ಲೆವು ನಿಮ್ಮ
ಒಡತಿಯರು
ನೆನಪಿರಲಿ, ನಾವು ಬೇಡತಿಯರು[೧]

ಇದೇ ಮಾಲಿಕೆಗೆ ಸಿದ್ದಲಿಂಗಯ್ಯನವರ 'ಹೊಲೆ ಮಾದಿಗರ ಹಾಡು', 'ಸಾವಿರಾರು ನದಿಗಳು'; ಕೆ.ಎಂ. ಮುನಿಕೃಷ್ಣಪ್ಪನವರ 'ಮೊದಲು ಗೊತ್ತಿರಲಿಲ್ಲ: ಚೆನ್ನಣ್ಣ ವಾಲೀಕಾರ ಅವರ 'ಮಾದರ ಸಾಬವ್ವನ ಗೋರಿಗೀತೆ', ಕಾಳೇಗೌಡ ನಾಗವಾರ ಅವರ 'ಕಂಬಾವಳಿಯಲ್ಲಿ ಗಂಗಾಲಗ್ನ', ಬಿ.ನರಸಪ್ಪ ಅವರ 'ಪೂವಾಳೆ', ಅರವಿಂದ ಮಾಲಗತ್ತಿಯವರ 'ಕಪ್ಪು ಕಾವ್ಯ' ದೇವನೂರ ಮಹದೇವ ಅವರ ಕೃತಿಗಳು - ಮೊದಲಾದವುಗಳನ್ನು ಹೇಳಬಹುದು. ಒಟ್ಟು ಘೋಷಣೆ;

ದಲಿತರು ಬರುವರು ದಾರಿಬಿಡಿ
ದಲಿತರ ಕೈಗೆ ರಾಜ್ಯಕೊಡಿ.
ಕೋಟಿ ಕೋಟಿ ಕನಸುಗಳೊಂದಿಗೆ
ಹತ್ತಿ ಉರಿಯುವ ಮನಸುಗಳೊಂದಿಗೆ
ಗುಡುಗು ಮಿಂಚಿನ ಘೋಷಣೆಯಲ್ಲಿ
ಭೂಕಂಪನಗಳ ಭಾಷೆಗಳಲ್ಲಿ
ಬಂತೊ ದಲಿತರ ಮೆರವಣಿಗೆ,
ನೆಲಕೆ ಕಾಲುಗಳ ಬರವಣಿಗೆ, (ಸಾವಿರಾರು
ನದಿಗಳು)

ಈ ಪ್ರತಿಭಟನೆಗೆ 'ಮೇಲ್ವರ್ಗ'ದವರು ಮಣಿಯದಿದ್ದರೆ, ಈ ಆಹ್ವಾನ :

ಇಕ್ರಲಾ ಒದೀರ್ಲಾ
ಈ ನನ್ ಮಕ್ಕಳ ಚರ್ಮ ಎಬ್ರಲಾ
ದೇವ್ರು ಒಬ್ನೆ ಅಂತಾರೆ, ಒಣಿಗೊಂದೊಂದು
ತರಾ ಗುಡಿಕಟ್ಸವ್ರೆ
ಎಲ್ಲಾರೂ ದೇವ್ರು ಮಕ್ಳು ಅಂತಾರೆ
ಹೊಲೇರ್ನ ಕಂಡ್ರೆ ಹಾವ್ ಕಂಡಾಂಗಾಡ್ತಾರೆ.
ಹೋಟ್ಲು, ಬಾವಿ, ಮನೆ ಯಾವುದ್ಕೂ
ಸೇರ್ಸಲ್ವಲ್ರೊ
ನಮ್ ಹೇಲ್ ತಿನ್ನೋ ನಾಯ್ನ
ಕ್ವಾಣೇವಳಕ್ ಬುಟ್‌ಕತ್ತಾರೆ
ನಾವ ಮಾತ್ರ ಬ್ಯಾಡಾ...
(ಹೊಲೆ ಮಾದಿಗರ ಹಾಡು
ಸಿದ್ದಲಿಂಗಯ್ಯ, ೧೯೭೫)

**ಮುಂದು:**

ಇಲ್ಲಿ ವ್ಯಕ್ತವಾದ ರೋಷವನ್ನು ನೋಡಿದರೆ, ಸಮಾಜ ಯಾವ ರೀತಿ ಕುದಿಗೊಳ್ಳುತ್ತಿದೆ ಎಂಬುದು ಅರ್ಥವಾಗುತ್ತಿದೆ. ಕೊಳಲಿನ ಮೆಲ್ಲುಲಿ ಜನತೆಯನ್ನು ಎಬ್ಬಿಸದಿದ್ದಾಗ, ರಣಹಲಗೆಯೇ ಬೇಕು. ಆ ರಣಹಲಗೆ ದಲಿತ ಸಾಹಿತ್ಯದಲ್ಲಿ ಇಂದು ಬಾರಿಸುತ್ತಿದೆ. ...

ಆದರೆ, ಇನ್ನು ಮುಂದೂ ಇದೇ ಆಕ್ರೋಶ, ರೋಷಾವೇಶ ಉಳಿದುಕೊಂಡು ಬರಬಹುದೇ? ಆಕ್ರೋಶ ಸ್ಥಾಯಿಯಲ್ಲ ಸಮಾಜದಲ್ಲಿ ಬದಲಾವಣೆಯಾದಂತೆ ಅದು ಉಪಶಮನಗೊಳ್ಳಲೇಬೇಕು. ಈಗ ೫೦-೬೦ ವರ್ಷಗಳ ಹಿಂದಿನ ಪರಿಸ್ಥಿತಿಯನ್ನು ನೋಡಿದರೆ, ಅನೇಕ ದಲಿತರು ಒಳ್ಳೆಯ ಶಿಕ್ಷಣ ಹೊಂದಿದ್ದಾರೆ. ಸಮಾಜದಲ್ಲಿ ಗಣ್ಯಸ್ಥಾನ ಹೊಂದಿದ್ದಾರೆ. ಇದೇ ಪ್ರಕ್ರಿಯೆ ಮುಂದುವರಿದಲ್ಲಿ ಉಳಿದ ಮೇಲ್ವರ್ಗದವರಲ್ಲಿಯಂತೆ ದಲಿತರಲ್ಲಿಯೂ ಬಹುಮಟ್ಟಿಗೆ ಜನ ಸುಶಿಕ್ಷಿತರಾಗಬಹುದು. ಆಗ, ಈ ಎಲ್ಲರಿಗೂ ಉದ್ಯೋಗ ಮತ್ತು ಅವಕಾಶಗಳನ್ನು ಕಲ್ಪಿಸಿಕೊಡಲು ಸಮಾಜ ಸಿದ್ಧವಾಗಿರಬೇಕು. ಇಲ್ಲದೆ ಹೋದರೆ ಈ ವರ್ಗದಲ್ಲಿಯೇ ಪರಸ್ಪರ ಸ್ಪರ್ಧೆ ಪ್ರಾರಂಭವಾಗಿ ಮೇಲ್ವರ್ಗದ ಬಗೆಗಿನ ಈ ಆಕ್ರೋಶದ ಸಾಹಿತ್ಯ, ಇನ್ನೂ ಹೆಚ್ಚು ಕಲಾತ್ಮಕವಾದ, ಸಾರ್ವತ್ರಿಕವಾದ ಸಾಹಿತ್ಯ ನಿರ್ಮಿತಿಗೆ ಎಡೆಮಾಡಿಕೊಡಬಹುದು. ಉಕ್ಕೇರಿಬಂದ ಸಮುದ್ರ ತನ್ನ ಉನ್ನತವಾದ ಪಾತಳಿಯನ್ನು ಪುನಃ ಕಂಡುಕೊಳ್ಳಬಹುದು. ಆಗ ಸಮಾಜದಲ್ಲಿ ಕಂಡುಬರುವ ವರ್ಗಗಳು ಎರಡೇ ಎರಡು-ಒಂದು ಶೋಷಕ ವರ್ಗ, ಇನ್ನೊಂದು ಶೋಷಿತ ವರ್ಗ. ಈ ವರ್ಗ ಧರ್ಮದ ಹೆಸರಿನಲ್ಲಿ ಇರಬಹುದು, ಆರ್ಥಿಕ ದೃಷ್ಟಿಯಿಂದ ಇರಬಹುದು; ಇಲ್ಲವೇ ಅವಕಾಶಗಳ ದೃಷ್ಟಿಯಿಂದ ಇರಬಹುದು. ೨೧ ನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ ನಾವು ಪ್ರಾಯಶಃ ಈ ಶೋಷಕ ಮತ್ತು ಶೋಷಿತ ವರ್ಗಗಳ ನಡುವಿನ ಘರ್ಷಣೆಯನ್ನು ಕಾಣುತ್ತೇವೆ. ಒಂದು ವಿಧದ ಕೇಂದ್ರೀಕರಣ Polarisation ಪ್ರಾರಂಭವಾಗುತ್ತದೆ.

ಎರಡನೆಯದಾಗಿ, ನಾವು ಐತಿಹಾಸಿಕ ಹಿನ್ನೆಲೆಯನ್ನು ಗಮನಿಸಿದಾಗ, ಇಂಗ್ಲೀಷ ಸಾಹಿತ್ಯದಲ್ಲಿ ೧೯ ನೆಯ ಶತಮಾನದ ಪ್ರಾರಂಭ ಕಾಲದಲ್ಲಿ ಕಂಡುಬಂದ ರಮ್ಯ Romantic ಸಾಹಿತ್ಯ, ಕನ್ನಡದಲ್ಲಿ ೮೦-೯೦ ವರ್ಷಗಳ ನಂತರ ಕಂಡು ಬಂದಿತು. ಅರ್ಥಾತ್ ಈ ಚಳು

---

[೧] ಕಾರಂತರ 'ಚೋಮನ ದುಡಿ' ತುಲನೆ ಮಾಡಿ.

'Afro-American Writing', Long & Collier, Newyork Uni. Press, 1972, ಪು. ೨.

[೧] ನಾನು ನನ್ನವರು, ಸುಕನ್ಯಾಮಾರುತಿ, ೧೯೮೫.

ವಳಿಗಳು ಕನ್ನಡಕ್ಕೆ ಕಾಲಿಡಲು ಸುಮಾರು ಒಂದು ನೂರು ವರ್ಷಗಳು ಹಿಡಿದುವು. ಹಾಗೆಯೇ, ಸದ್ಯ ಯುರೋಪೀಯ ಸಾಹಿತ್ಯದಲ್ಲಿ ಸ್ಫುಟವಾಗಿ ಕಂಡು ಬರುವ ಒಲವುಗಳು ೨೧ನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿಯೂ ಕಂಡು ಬರಬಹುದು.

ಮೂರನೆಯದಾಗಿ ತಮ್ಮ ತಮ್ಮ ವಿದ್ಯಾರ್ಥಿ ದೆಸೆಯಲ್ಲಿ ಸಾಹಿತ್ಯದಲ್ಲಿ ಕೃಷಿ ಮಾಡಿದ ಅನೇಕರು ಜೀವನದಲ್ಲಿ ಬೇರೆ ಬೇರೆ ವೃತ್ತಿಗಳನ್ನು ಆಯ್ದುಕೊಳ್ಳಬಹುದು, ಅವರು ಡಾಕ್ಟರರಾಗಬಹುದು; ಎಂಜಿನಿಯರ್ ಆಗಬಹುದು; ರಾಜಕಾರಣಿಯಾಗಬಹುದು; ವಕೀಲರಾಗಬಹುದು; ನ್ಯಾಯಾಧೀಶರಾಗಬಹುದು. ಈ ವೃತ್ತಿಯ ಜನಗಳೆಲ್ಲ ಇನ್ನು ಮುಂದು ಬರೀ ಪಾರಂಪರಿಕ ಹೂವು, ಹಣ್ಣು, ಕೋಗಿಲೆ, ಕಾಜಾಣಗಳ ಬಗ್ಗೆ ಮಾತ್ರ ಬರೆಯದೆ, ತಮ್ಮ ತಮ್ಮ ವೃತ್ತಿಯಲ್ಲಿ ತಮಗೆ ಉಂಟಾದ ಅನುಭವಗಳ ಬಗ್ಗೆ ಬರೆಯಬಹುದು. ಈ ವರೆಗಿನ ಕನ್ನಡ ಸಾಹಿತ್ಯ ನಿರ್ಮಿತಿ ಹೆಚ್ಚು ಕಡಿಮೆ ಶಿಕ್ಷಕರನ್ನೇ ಮಧ್ಯಬಿಂದುವಾಗಿರಿಸಿಕೊಂಡಿತ್ತು. ಆ ಶಿಕ್ಷಣ ಕ್ಷೇತ್ರಗಳ ಪರಿಮಿತಿಯಲ್ಲಿಗೇ ಸಾಹಿತ್ಯ ನಿರ್ಮಿತಿಯಾಯಿತು. ಇನ್ನು ಉಳಿದ ಈ ವೃತ್ತಿಗಳವರ ರಚನಾತ್ಮಕ ಸಾಹಿತ್ಯ ನಿರ್ಮಿತಿ ಹೆಚ್ಚಾಗಿ ಪ್ರಾರಂಭವಾಗಬಹುದು. ದಿ. ರಾಶಿಯವರ ಕೃತಿ ರಚನೆಗಳಲ್ಲಿ ಇದರ ದಿಕ್ಸೂಚಿಯನ್ನು ನಾವು ಈಗಾಗಲೇ ಕಂಡಿದ್ದೇವೆ. ಇತ್ತೀಚೆ ಪ್ರಕಟವಾದ 'ಜೀವನ ಚಿತ್ರಗಳು' ಎಂಬ ಕಥಾಸಂಕಲನದಲ್ಲಿ ಒಬ್ಬ ಯುವ ವಕೀಲರು ಕಪ್ಪು ಕೋಟಿನ ಒಳಗೆ ಅವಿತಿರುವ ಕಲ್ಮಷದ ಬಗ್ಗೆ ಚೆನ್ನಾಗಿ ಚಿತ್ರಿಸಿದ್ದಾರೆ. ಇತ್ತೀಚೆ ಒಬ್ಬ ಮಾಜಿ ಎಂ. ಎಲ್. ಎ. ಗಳು ಬರೆದ ಒಂದು ಕವಿತೆಯಲ್ಲಿ ನಮ್ಮ ರಾಜಕೀಯ ಧೋರಣೆ ಸೋಮಾರಿತನವನ್ನು ಹೇಗೆ ಪೋಷಿಸುತ್ತಿದೆಯೆಂಬುದರ ಬಗ್ಗೆ ಮನೋಜ್ಞವಾಗಿ ವರ್ಣಿಸಿದ್ದಾರೆ:

ವಾಸಕ್ಕೊಂದು ಮನೆ, ಯೌವನ ಬಂದಾಗ
ಸರಕಾರಿ ತಾಳಿ, ತಾಳಿಗೊಂದೊಂದು ಕೊಡ
ಬೇಕು, ಒಂದೊಂದು ಕೋಳಿ, –ಬಸುರಿಯಾದಾಗ
ಸಿಗುವುದು ಹೆರಿಗೆ ಭತ್ಯೆ, ಮತ್ತೇನುಗೊತ್ತೆ,
ಮಕ್ಕಳಾದಾಗ ಪುಕ್ಕಟೆ ಪಾಟಿ-ಪುಸ್ತಕ-ಅರಿವೆ-
ಮತ್ತೇಕೆ ಗೋಗರೆವೆ?

ಕುಂಟುಮಕ್ಕಳಾದರೆ, ಅಂಗ ವಿಕಲರ ಸೌಲತ್ತು
ನಿನಗೆ ಬಂದಾಗ ಮುದಿತನ, ಇದೆಯಲ್ಲ
ವೃದ್ಧಾಪ್ಯವೇತನ,
ನೀನು ಸತ್ತರೆ ಯಾಕೆ ಜೀಯಾ ಕಾಳಜಿ
ಮಿಯಾ ಬೀಬಿ ಹೋತೋ ರಾಜಿ
ಕ್ಯಾಕರೇಗಾ ಕಾಜಿ?
ಇದೆಯಲ್ಲಾ ಹೆಂಡತಿಗೆ ವಿಧವಾವೇತನ
ಅಪಘಾತದಲ್ಲಿ ಸತ್ತರೆ, ಸರಕಾರಿ ಹಣ-ಹಣ,




ಕುಟುಂಬಕ್ಕೆ ಪರಿಹಾರಧನ,
ಜೇಬಿಗೆ ಕೈ ಹಾಕಿದ್ದಕ್ಕೆ, ಅಲ್ಲಲ್ಲ ತಂತಿ
ಕತ್ತರಿಸಿದ್ದಕ್ಕೆ
ಸ್ವಾತಂತ್ರ್ಯಯೋಧರ ವಿಶ್ರಾಂತಿ ವೇತನ ..೧

ಇಷ್ಟೇ: ಇವನ್ನೆಲ್ಲ ಪಡೆಯುವ ಚಾಲಾಕಿ ಬುದ್ಧಿವಂತಿಕೆ ಮಾತ್ರ ವ್ಯಕ್ತಿಗೆ ಬೇಕು. ಆಳುವ ಸರಕಾರಕ್ಕೆ ನಿನ್ನ ಓಟೊಂದಿದ್ದರೆ ಸಾಕೋ ಇನ್ನೂ ನಿನಗೆ ಹೊಸ ಸವಲತ್ತು ಬೇಕೋ? ಇದೆಲ್ಲ ಸಾಲದೆಂದು ಬೊಬ್ಬೆ ಹಾಕೋ-ಇದನ್ನು ಬರೆದವರು ಸ್ವತಃ ರಾಜಕಾರಣಿಯಾದವರು ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು.

ನಾಲ್ಕನೆಯದಾಗಿ, ವಿಜ್ಞಾನ ಹೆಚ್ಚಾಗಿ ಜನಪ್ರಿಯವಾದಂತೆ, **Scientific Romances** ಹೆಚ್ಚೆಚ್ಚು ಬರಬಹುದು.– ಇಂಗ್ಲೀಷನಲ್ಲಿ ಫ್ರ್ಯಾಂಕೆನ್‌ಸ್ಟೀನ್, ಎಚ್. ಜಿ. ವೆಲ್ಸ್ ಅವರ **Time Machine** ಮೊದಲಾದವುಗಳು ಬಂದ ಹಾಗೆ. ಪ್ರೊ. ರಾಜಶೇಖರ ಭೂಸನೂರಮಠ ಅವರು ಈ ದಿಸೆಯಲ್ಲಿ ಈಗಾಗಲೇ ಸಾಕಷ್ಟು ಕೃಷಿಮಾಡಿದ್ದಾರೆ.

ಐದನೆಯದಾಗಿ, ನಮ್ಮ ಹಳಗನ್ನಡ ಸಾಹಿತ್ಯ ಅಂಗ ವಂಗ ಕಳಿಂಗ ಚೇರ, ಚೋಳ, ಪಾಂಡ್ಯ, ಕಾಂಭೋಜ, ಸಿಂಹಳ, ಬರ್ಬರ ಮೊದಲಾದವುಗಳ ಉಲ್ಲೇಖಕ್ಕೆ ಮಾತ್ರ ಸೀಮಿತಗೊಂಡಿತ್ತು. ವೈಜ್ಞಾನಿಕ ಪ್ರಗತಿಯ ಮೂಲಕ ಇಂದು ಪ್ರಪಂಚ ಆಕುಂಚನಗೊಂಡಂತೆ, ಫ್ರಾನ್ಸ್, ಇಂಗ್ಲಂಡ, ಅಮೇರಿಕೆ, - ಮೊದಲಾದ ದೇಶಗಳು ನಡುಮನೆ ಪಡಸಾಲೆಗಳಾಗಿವೆ. ಈ ದೇಶಗಳ ಹಿನ್ನೆಲೆಯೂ ನಮ್ಮ ಸಾಹಿತ್ಯದಲ್ಲಿ ಇಂದು ಅಭಿವ್ಯಕ್ತಗೊಳ್ಳುತ್ತಲಿವೆ. ೨೧ ನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ ಅಂತಾರಾಷ್ಟ್ರೀಯ ಕಥಾ ಭಿತ್ತಿ ಕಂಡುಬರಬಹುದು.

ಆರನೆಯದಾಗಿ, ವೇಗದ ಯುಗ ಮುಂದುವರಿದಂತೆಲ್ಲ, ಮಾನವನ ಹೃದಯ ಪುನಃ ಶಾಂತಿಯನ್ನು ಬಯಸಬಹುದು. ಆಗ ನಮ್ಮ ಹಳೆಯ ಪುರಾಣ, ರಾಮಾಯಣ, ಭಾಗವತ, ಮಹಾಭಾರತ, ಬೌದ್ಧ, ಜೈನ-ವೀರಶೈವ ಕಥೆಗಳ ಹೊಸರೀತಿಯ ಅರ್ಥ ವಿವರಣೆ ಪ್ರಾರಂಭವಾಗಬಹುದು.

ಏಳನೆಯದಾಗಿ, ಭರದಿಂದ ಅಪಮೌಲ್ಯೀಕರಣ ಹೊಂದುತ್ತಿರುವ ರಾಜಕೀಯ ಮತ್ತು ಸಾಮಾಜಿಕ ಮೌಲ್ಯಗಳ ಪುನರುತ್ಥಾನಗಾಗಿ, ಸ್ವಾತಂತ್ರ್ಯ ಹೋರಾಟದ ಕಾಲದ ನೆನಹುಗಳ, ಆ ಕಾಲದ ವೀರರ ಚರಿತ್ರಗಳ ನಿರೂಪಣೆ ಪ್ರಾರಂಭವಾಗಬಹುದು.

ಎಂಟನೆಯದಾಗಿ, ಸಾಹಿತ್ಯವಸ್ತುವಿನ ದೃಷ್ಟಿಯಿಂದ ಈ ಒಲವುಗಳು ಕಂಡುಬಂದರೆ, ಅಭಿವ್ಯಕ್ತಿಯ ದೃಷ್ಟಿಯಿಂದಲೂ ಬದಲಾವಣೆಗಳನ್ನು ಕಾಣಬಹುದು. ಕಾವ್ಯನಿರ್ಮಿತಿಯಲ್ಲಿ ಹಿಂದಿನ ಖ್ಯಾತ ವೃತ್ತಗಳು, ಕಂದಗಳು, ಪ್ರಾಸ, ಛಂದಸ್ಸುಗಳೆಲ್ಲ ಹೋಗಿ ಮುಕ್ತಛಂದದ ಬರವಣಿಗೆ ಬರಬಹುದು, ಉಪಮೆ-ಅಲಂಕಾರಗಳ ದೃಷ್ಟಿಯಿಂದಲೂ, ಭಿನ್ನ ಭಿನ್ನ ವೃತ್ತಿಗಳ ಜನರು ಸಾಹಿತ್ಯದಲ್ಲಿ ಕೃಷಿ ಮಾಡಲು ತೊಡಗುವುದರಿಂದ ಅವರವರ ಜೀವನಾನುಭವದ ದೃಷ್ಟಾಂತಗಳು, ಉಪಮೆ - ಅಲಂಕಾರಗಳು ಸಾಹಿತ್ಯದಲ್ಲಿ ಕಂಡು ಬರಬಹುದು. ಉದಾಹರಣೆಗೆ, ರೊಮ್ಯಾಂಟಿಕ್ ಪದ್ಧತಿಯ ಕಾವ್ಯರಚನೆಯ ಕಾಲಕ್ಕೆ ತನ್ನ ಪ್ರೇಯಸಿಯನ್ನು ಕಂಡ ಪ್ರಿಯಕರನ ಮೈ ನವಿರೇಳುತ್ತಿತ್ತು. ಅವಳು ಅವನ ಕಣ್ಣಿಗೆ—

ರಂಭೆ ಮೇನಕೆಯಂತೆ, ನೂರ ಜಹಾನಳಂತೆ
ನೂರು ಮುಮುತಾಜರಂತೆ,

೧ ಒಡಲಾಳದ ಬೆಂಕಿ-ಮಲ್ಲಿಕಾರ್ಜುನ ಬನ್ನಿ, – ೧೯೮೬

ತುಂಬಿಜವ್ವನ ತುಂಬಿತುಳುಕಿ ಹರಿಯುವ ಹುಣ್ಣಿ-
ಮೆಯ ಚಂದ್ರ ಬಿಂಬದಂತೆ...
ಮಿಂಚುಗಳ ಗೊಂಚಲವ ಹಿಡಿದ ಚಂಚಲಲಕ್ಷ್ಮಿ,
ಕಮಲವನ ಕಮಲೆಯಂತೆ
ಇಂಚರದ ಬುಲಬುಲಕೆ ಮೆಚ್ಚುಮಾಡಿದ ಇಚ್ಛೆ-
ಗಾರ್ತಿ ಗುಲರಾಣಿಯಂತೆ...[೧]

ಕಂಡುಬಂದರು.

ಆದರೆ, ಈಗಿನ ಅನೇಕ ಕವಿಗಳಲ್ಲಿ ಈ ರಂಭೆ, ಮೇನಕೆ, ನೂರಜಹಾನ, ಮುಮತಾಜ ಯಾರೂ ಇಲ್ಲ. ಆಧುನಿಕ ಡಾಕ್ಟರ ಕವಿಗಳೊಬ್ಬರು ತಮ್ಮ ನಲ್ಲೆಯನ್ನು ಕುರಿತು ಬರೆದ ಕವಿತೆ- ಹೀಗಿದೆ;

ನಲ್ಲೆ,
ನಿನ್ನ ನೆನಪಿಸಿಕೊಂಡಾಗಲೆಲ್ಲ
ನನ್ನ ನರನರದಲೆ ಕ್ಯಾಲ್ಸಿಯಂ
ಇಂಜೆಕ್ಷನ್ ತೆಗೆದುಕೊಂಡವರಂತೆ
ಮೈಯಲ್ಲ ರಷುಮ್ ಎಂದು ಕಾವೇರಿ
ಬೆವರುತ್ತದೆ.
ನಿನ್ನ ಬಿ. ಕಾಂಪ್ಲೆಕ್ಸಿನ ಜೊನ್ನ
ಟೆಸ್ಟ್ಯೂಬನಂಥ ಉದ್ದ ಮೊಂಡ ಮೂಗಲಿ
೫೦೦ ಕ್ಯಾಪಲೆಟ್ಟನಂಥ ಸಾಲಾದ ದಂತಪಂಕ್ತಿ
ಅರ್ಧ ವರ್ತುಲಾಕಾರದಲ್ಲಿ ಕಟ್ಟಿ ಕೆಳಗೆ ಇಳಿಬಿಟ್ಟ
ಸ್ಟೆಥಸ್ಕೋಪಿನಂಥ ಉದ್ದ ಜಡೆ
ಮುದ್ದಾದ ಗ್ಲ್ಯಾಕ್ಸೊ ಬೇಬಿಮುಖ
ನನ್ನ ಕ್ಲೋರೋಮೈಸಿಟಿನ ಅಪ್ಲಿಕ್ಯಾಪಿನಂಥ
ಕಣ್ಣುಗಳ ಮುಂದೆ ಹಾಯ್ದು ಹೋದಾಗ,
ಲಾಂಗ್ ಆ್ಯಕ್ಟಿಂಗ್ ಪೆನಿಸಿಲಿನ್ ತೆಗೆದುಕೊಂಡಂತೆ
ನೋವಾಗುತ್ತದೆ. ಹೃದಯದಲಿ ಕಸಿಪಿಸಿಯಾಗುತ್ತದೆ. ಇತ್ಯಾದಿ.[೧]

ಒಟ್ಟಾರೆ, ಕನ್ನಡ ಸಾಹಿತ್ಯ ಸ್ರೋತದ ಹಿಂದು ಮತ್ತು ಇಂದುಗಳನ್ನು ನೆನೆದಾಗ, ಮುಂದಿನ ಕನ್ನಡ ಸಾಹಿತ್ಯ ಹೀಗಾಗಬಹುದೇನೋ ಎನಿಸುತ್ತದೆ. ಹೀಗೆ ಆದರೂ ಆಗಬಹುದು; ಆಗದಿರಲೂಬಹುದು. ಆದರೆ, ಹಳೆಯ ಪರಂಪರೆ ಒಲವುಗಳನ್ನು ನೋಡಿದಾಗ, ಹೀಗೆ ಭವಿಷ್ಯದ ಆಕಾಶದಲ್ಲಿ ಊಹೆಯ ಗಾಳಿಪಟ ಬಿಡಲು ಅಡ್ಡಿ ಇಲ್ಲ ಎಂದು ಕಾಣುತ್ತದೆ.

೧ ಒಲವೆ ನಮ್ಮ ಬದುಕು-ಅಂಬಿಕಾತನಯದತ್ತ, ೧೯೭೭

೧ ತ್ರಿವಿಧಾ-ಡಾ. ಗೋವಿಂದ ಮಣ್ಣೂರ, ೧೯೮೬



# ‘ಸಾರ್ವಜನಿಕ ಸಲಹಾ ಕೇಂದ್ರ’

ಪ್ರಾ। ಜಿ. ಡಿ. ನಾಡಕರ್ಣಿ

**ಜನರ ಸಮಸ್ಯೆಗಳಿಗೆ ಪರಿಹಾರ ಸೂಚಿಸಲೆಂದು ಕೇಂದ್ರವೊಂದನ್ನು ತೆರೆದಾಗ ಅನೇಕ ವೃತ್ತಿಯ ಜನರು ಬರತೊಡಗಿದರು. ಅವರಿಗೆಲ್ಲ ತಮ್ಮ ವೃತ್ತಿಯಲ್ಲಿ ಯಶಸ್ಸು ಪಡೆಯಬೇಕಿತ್ತು. ಸಲಹಾಕೇಂದ್ರ ನೀಡಿದ ಅನೇಕ ಸಲಹೆಗಳು ಅವರಿಗೆ ನಿಜಕ್ಕೂ ಯಶಸ್ಸು ತರಬೇಕೆ ?**

ನಾವು ನಗರದಲ್ಲಿ ಸಾರ್ವಜನಿಕ ಸಲಹಾಕೇಂದ್ರವನ್ನು ತೆರೆದೊಡನೆಯೆ, ನಮ್ಮ ನಿರೀಕ್ಷೆ ಮೀರಿ ಜನರು ಧಾವಿಸತೊಡಗಿದರು. ಹಾಗೆ ನೋಡಿದರೆ, ನಾವು ಯಾವ ರಾಜಕೀಯ ಧುರೀಣನನ್ನೂ ಉದ್ಘಾಟನೆಗೆ ಕರೆದಿರಲಿಲ್ಲ. ಅಬ್ಬರದ ಪ್ರಚಾರವನ್ನೂ ಮಾಡಿರಲಿಲ್ಲ. ಅಂದರೂ ಸಲಹೆಗಳಿಗಾಗಿ ಜನರು ಸಾಲುಗಟ್ಟಿಕೊಂಡು ಬರಲಾರಂಭಿಸಿದರು. ಇದನ್ನು ಕುಟುಂಬ ಯೋಜನಾ ಕೇಂದ್ರವೆಂದು ಭಾವಿಸಿ, ನಮ್ಮ ಹತ್ತಿರ ಬಂದು ತಮಗೆ ನಾಲ್ಕು ಮಕ್ಕಳು ಈಗಾಗಲೇ ಆಗಿವೆಯೆಂದೂ, ಅದರಲ್ಲಿ ಕೊನೆಯದು ಅವಳಿ ಜವಳಿ ಜನನವೆಂದೂ ತಮ್ಮ ಕೊರಗನ್ನು ತೋಡಿಕೊಂಡರು. ಇದೇ ರೀತಿ ಮುಂದುವರೆದರೆ, ತಮ್ಮ ಮಕ್ಕಳದೇ ಒಂದು ಕ್ರಿಕೆಟ್ ತಂಡವನ್ನು ಇನ್ನು ಕೆಲವೇ ವರುಷಗಳಲ್ಲಿ ನಿರ್ಮಿಸುವಂತಾದೀತು ಎಂದರು ! ಅದಕ್ಕೆ ನಾವು ಮುಗುಳ್ನಕ್ಕು– “ಸ್ವಾಮಿ, ನಮ್ಮದು ಕುಟುಂಬ ಕಲ್ಯಾಣಕೇಂದ್ರವಲ್ಲ: ನೀವು ಬೇರೆ ಡಾಕ್ಟರಲ್ಲಿ ಹೋಗಿ ಸಲಹೆ ಪಡೆಯಿರಿ’’ ಎಂದು ಅವರನ್ನು ಹೇಳಿಕಳಿಸಬೇಕಾಯಿತು. “ಅವರಿಗೂ ಏನಾದರೂ ಉಪಯುಕ್ತ ಸಲಹೆ ಕೊಟ್ಟಿದ್ದರೆ ಆಗುತ್ತಿತ್ತು’’ ಎಂದು ನಮ್ಮ ಅಸಿಸ್ಟಂಟ್ ನುಡಿದದ್ದರಲ್ಲಿ ಅರ್ಥವಿದೆ ಎಂದು ನನಗೆ ಆ ಮೇಲೆ ಹೊಳೆಯಿತು.

ಅನೇಕ ವೃತ್ತಿಯ ಜನರು ತಮ್ಮ ವೃತ್ತಿಯಲ್ಲಿಯ ಯಶಸ್ಸಿಗಾಗಿ ನಮ್ಮಲ್ಲಿ ಸಲಹೆಗಳಿಗಾಗಿ ಬರುತ್ತಿದ್ದರು. ಅವರೆಲ್ಲರಲ್ಲಿ ಕೆಲವು ಅಂಶಗಳು ಸಾಮಾನ್ಯವಾಗಿರುತ್ತಿದ್ದವು. ಅವರು ಬುದ್ಧಿವಂತರಾಗಿದ್ದರೂ, ಹೆಚ್ಚಾಗಿ ಹಳೆಯಕಾಲದ ಪದ್ಧತಿಗಳನ್ನು ಅನುಸರಿಸುವವರು ಮತ್ತು ನೀತಿನಿಯತ್ತುಗಳಿಗೆ ಬಹಳ ಬೆಲೆ ಕೊಡುವವರಾಗಿದ್ದರು. ಇಂದಿನ ಅತ್ಯಾಧುನಿಕ, ನಾಗಾಲೋಟದ, ಸ್ಪರ್ಧಾತ್ಮಕ ವೃತ್ತಿಜೀವನದಲ್ಲಿ ಅವರು ಹಿಂದುಳಿದಿದ್ದರಲ್ಲಿ ಅಚ್ಚರಿಯೇನಿಲ್ಲ ಎಂದು ನಮಗನಿಸಿತು. ಕಾಲಕ್ಕೆ ತಕ್ಕಂತೆ ತಾಳಹಾಕಬೇಕಲ್ಲವೆ ? ಹಿಂದಿನ ಹರಿಶ್ಚಂದ್ರನ, ಧರ್ಮರಾಜನ ರೀತಿ-ನೀತಿಗಳು ಕ್ಷಣಕ್ಷಣಕ್ಕೆ ಬದಲಾಗುತ್ತಿರುವ ಇಂದಿನ ಜೀವನದಲ್ಲಿ ಹೇಗೆ ಯಶಸ್ಸನ್ನು ತಂದುಕೊಡಬಲ್ಲವು ? ನೀತಿ-ಸದಾಚಾರಗಳ ಇಂದಿನ ಕಲ್ಪನೆಯೇ ಬೇರೆ ಮತ್ತು ಪ್ರಸಂಗಕ್ಕೆ ತಕ್ಕಂತೆ ನ್ಯಾಯ-ನೀತಿಗಳು ಬದಲಾಗುತ್ತವೆ. ಎಂಬ ಅನುಭವದ ಕಟುಸತ್ಯವನ್ನು ಅವರಿಗೆ ನಾವು ಮನವರಿಕೆ ಮಾಡಿಕೊಡಬೇಕಾಯಿತು. ನಮ್ಮ ಹತ್ತಿರ ಬಂದ ಅನೇಕರಲ್ಲಿ ಕೆಲವರ ಸಮಸ್ಯೆಗಳ ಬಗೆಗೆ ಮಾತ್ರ ಹೇಳಬಯಸುತ್ತೇವೆ.

ಒಂದು ಸಂಜೆ, ಹಣೆಗೆ ನಾಮ ಹಚ್ಚಿಕೊಂಡು ಶಾಲು ಹೊದೆದುಕೊಂಡ ಒಬ್ಬ ಗಂಭೀರವ್ಯಕ್ತಿ ಬಂದರು. ಅವರ ಮುಖದ ಮೇಲೆ ಚಿಂತೆಯ ಗೆರೆಗಳು ಒಡೆದು ಕಾಣುತ್ತಿದ್ದವು. ವಿಚಾರಿಸಲಾಗಿ ಅವರೊಬ್ಬ ಹಳೆಯ ತಲೆಮಾರಿನ ಜ್ಯೋತಿಷಿ ಎಂದು ತಿಳಿದು ಬಂತು. ನಮ್ಮ ಕೇಂದ್ರವನ್ನು ಪ್ರಾರಂಭಿಸುವಾಗ ನಾವು ಯಾವ ಜ್ಯೋತಿಷಿಯನ್ನು ವಿಚಾರಿಸಲಿಲ್ಲ: ಮುಹೂರ್ತವನು ನೋಡಲಿಲ್ಲ ಎಂಬ ವಿಚಾರ ನನ್ನ ಮನಸ್ಸಿನಲ್ಲಿ ಪೊಳೆದು ಹೋಯಿತು.

“ಇಷ್ಟು ದಿವಸ ಚೆನ್ನಾಗಿಯೇ ನಡೆದ ನಮ್ಮ ಜ್ಯೋತಿಷ್ಯಕಾರ್ಯಾಲಯಕ್ಕೆ ಶುಕ್ರದೆಸೆ ಬಂದಿತ್ತು: ಈಗ ಅದೇನು ರಾಹುಕಾಲವೋ ತಿಳಿಯದು. ಜ್ಯೋತಿಷ್ಯಕಾರ್ಯಾಲಯವನ್ನು ಬಂದು ಮಾಡುವ ಪರಿಸ್ಥಿತಿಗೆ ಬಂದು ಬಿಟ್ಟಿದೆಯಲ್ಲ, ಇದಕ್ಕೇನು ಮಾಡುವದು ?’’ ಎಂದು ಶಾಸ್ತ್ರಿಗಳು ನಿಟ್ಟುಸಿರು ಬಿಟ್ಟರು.

ಉಳಿದವರಿಗೇ ಭವಿಷ್ಯವನ್ನು, ಗ್ರಹಗತಿಯನ್ನು ಪರಿಹಾರೋಪಾಯವನ್ನೂ ಎಷ್ಟೋವರ್ಷ ಹೇಳಿದ ಒಬ್ಬ ಜ್ಯೋತಿಷಿಗಳು ಈಗ ಹತಾಶರಾಗಿ ನಮ್ಮ ಸಲಹಾ ಕೇಂದ್ರಕ್ಕೆ ದಯಮಾಡಿಸಿದ್ದಕ್ಕೆ ನನಗೆ ಒಳಗೊಳಗೆ ನಗು ! ಜ್ಯೋತಿಷ್ಯ ಶಾಸ್ತ್ರವು ಜ್ಯೋತಿಷಿಗೇ ಕೈಕೊಡುತ್ತಿದೆಯಲ್ಲ ! “ನಮಗೇ ಮಾರ್ಗದರ್ಶನ ಮಾಡಬೇಕಾದವರು ಸಲಹೆಗಾಗಿ ನಮ್ಮ ಹತ್ತಿರವೇ ಬಂದಿದ್ದಾರಲ್ಲ !’’ –ಈ ವಿಚಿತ್ರ ಸತ್ಯವನ್ನು ಮರೆಮಾಚಿ ನಾನು–

‘‘ಪಂಡಿತರೇ ! ನೀವು ಜ್ಯೋತಿಷವನ್ನು ಆಳವಾಗಿ ಅಭ್ಯಾಸ ಮಾಡಿದ್ದಿರಿ: ಅದರ ಪ್ರಕಾರ ನಿಮ್ಮ ಸಲಹೆಗಳಿಗಾಗಿ ಬಂದವರಿಗೆ ಪರಿಹಾರೋಪಾಯವನ್ನು ಹೇಳುತ್ತಾ ಬಂದಿದ್ದೀರಿ. ಈಗ ನಿಮ್ಮ ವೃತ್ತಿಯಲ್ಲಿ ಹಿಂದೇಟು ಯಾಕೆ ಎಂಬುದು ನಿಮ್ಮ ಸಮಸ್ಯೆಯಷ್ಟೆ?” ಎಂದು ಕೇಳಿದೆ.

“ಹೌದು, ರಾಯರೇ! ಅದೇ ಪ್ರಶ್ನೆ ಈಗ ನನ್ನ ತಲೆ ತಿನ್ನತಾ ಇದೆ. ಇದರ ಬಗ್ಗೆ ಗ್ರಹಗತಿಯನ್ನು ಎಷ್ಟು ರೀತಿಯಿಂದ ಗುಣಾಕಾರ ಹಾಕಿ, ಲೆಕ್ಕಮಾಡಿ ನೋಡಿದರೂ, ಇದಕ್ಕೆ ಪರಿಹಾರ ಕಾಣಲೊಲ್ಲದು, ನೀವೇನಾದರೂ...”

ನಗೆಯನ್ನು ತಡೆದುಕೊಂಡು ನಾನು ನುಡಿದೆ- “ಶಾಸ್ತ್ರಿಗಳೇ! ಈ ನಿಮ್ಮ ಸಮಸ್ಯೆಗೆ ಜ್ಯೋತಿಷ್ಯ ಶಾಸ್ತ್ರದಿಂದ ಉತ್ತರ ದೊರೆಯಲಾರದು. ಡಾಕ್ಟರರಿಗೇ ರೋಗಬಂದರೆ, ಅದೇ ಡಾಕ್ಟರ್ ಸ್ವತಃ ತಾನೇ ಚಿಕಿತ್ಸೆ ಮಾಡಿಕೊಳ್ಳಬಲ್ಲನೇ? ಬೇರೆಯವರಿಗೆ ಚಿಕಿತ್ಸೆ ಮಾಡಬಹುದು. ಹಾಗೆ, ನಿಮ್ಮ ವೃತ್ತಿಯ ಸೋಲಿಗೆ ನಮ್ಮ ವ್ಯವಹಾರದ ಚಿಕಿತ್ಸೆ ಬೇಕು”.

ಶಾಸ್ತ್ರಿಗಳ ಮುಖದಲ್ಲಿ ಆಶಾಕಿರಣ ಮೂಡಿತು. ಆತುರದಿಂದ ಅವರು ‘‘ರಾಯರೇ! ಏನಾದರೂ ಸಲಹೆ-ಸೂಚನೆ ಇದ್ದರೆ ಹೇಳಿರಿ” ಎಂದರು.

ನಮ್ಮ ಅಸಿಸ್ಟಂಟ್ ಅವರ ಕೇಸ ರೆಕಾರ್ಡ ಮಾಡಿಕೊಂಡ ಬಳಿಕ ನಾನವರಿಗೆ ಹೇಳಿದೆ- “ಬೇಸರಪಟ್ಟುಕೊಳ್ಳಬೇಡಿರಿ, ಶಾಸ್ತ್ರಿಗಳೇ ಇದರಲ್ಲಿ ನಿಮ್ಮದೇನೂ ತಪ್ಪು ಇಲ್ಲ. ಕಾಲ ಬದಲಾಗಿದೆ. ಅಷ್ಟೆ. “ಕಾಲಾಯ ತಸ್ಮೈ ನಮಃ” ಎಂಬುದು ನಮಗಿಂತ ನಿಮಗೆ ಹೆಚ್ಚು ಗೊತ್ತು. ಈಗ ಜ್ಯೋತಿಷ್ಯ ಕೇಳಲಿಕ್ಕೆ ಬಂದವರು ಪೂರಾ




ಆ ಶಾಸ್ತ್ರದ ಮೇಲೆ ಭರವಸೆ ಇಟ್ಟಿರುವದಿಲ್ಲ. ಅದಕ್ಕೆ ನೀವು ಮೊದಲು ಅವರ ಮುಖ ನೋಡಬೇಕು. ಅವರ ಒಲವು ನೋಡಿಕೊಂಡು ಗ್ರಹಗತಿ ಇತ್ಯಾದಿ ಹೇಳಬೇಕು, ಈಗ ಉದಾಹರಣೆಗೆ ಒಂದು ಕನ್ಯೆಯ ಜಾತಕದಲ್ಲಿ ಮಂಗಳದೋಷ ಇದೆಯೆಂದು ತಿಳಿಯಿರಿ. ವರನ ತಂದೆಗೆ ಅದನ್ನು ಒಮ್ಮೆಲೇ ನೀವು ಹೇಳಿ ಬಿಡಬಾರದು."

"ಮತ್ತೆ?" ತಿಳಿಯದೆ ಸಮಾಷೆಯೇ ಪ್ರಶ್ನಿಸಿದರು ಶಾಸ್ತ್ರಿಗಳು. "ವರನ ತಂದೆಯ ಮುಖವನ್ನು ನೀವು ಸೂಕ್ಷ್ಮವಾಗಿ ನೋಡಿ. ಅವರಿಗೆ ಆ ಕನ್ಯೆ ಸ್ವೀಕರಿಸುವ ಇಚ್ಛೆ ಇದೆಯೋ ಹೇಗೆ ಎಂಬುದನ್ನು ತಿಳಿದುಕೊಳ್ಳಬೇಕು. ಹಾಗೆ ಇದ್ದರೆ -"ಮಂಗಳದೋಷ ಸ್ವಲ್ಪ ಇದ್ದರೂ, ಬೇರೆ ಒಳ್ಳೆಯ ಗ್ರಹಗಳು ಪ್ರಬಲವಾಗಿವೆ. ಅಲ್ಲದೆ, ಶಾಂತಿಯನ್ನು ನಡೆಸಬೇಕಾಗಿ ಬರುತ್ತದೆ" ಎಂದು ಹೇಳಬೇಕು. ಆಗ ಅವರ ಮನಸ್ಸಿಗೆ ನೆಮ್ಮದಿ ದೊರೆಯುತ್ತದೆ; ನಿಮ್ಮ ವೃತ್ತಿಯೂ ನಿರಾತಂಕವಾಗಿ ನಡೆಯುತ್ತದೆ."

"ಆದರೆ, ನಾವು ಹೀಗೆ ಎಂದೂ ಮಾಡಿಲ್ಲವಲ್ಲ, ರಾಯರೆ!" ಎಂದು ಸ್ವಲ್ಪ ಸಿಟ್ಟಿನಿಂದಲೇ ಶಾಸ್ತ್ರಿಗಳು ನುಡಿದರು.

"ಕೋಪಿಸಿಕೊಳ್ಳಬೇಡಿರಿ. ಹಿಂದಿನ ಕಾಲ ಈಗ ಹಿಂದಾಯಿತು. ಈಗ ನಿಮಗೆ ಮನಸಾ ಒಪ್ಪಿಗೆಯಾಗದಿದ್ದರೂ, ನಿಮ್ಮ ವೃತ್ತಿಯು ಮುಂದುವರಿಯಬೇಕಷ್ಟೇ? ಎಂದೆ ನಾನು, ಅಲ್ಲದೆ, ಅವರ ವೃತ್ತಿಯು ಹಿತದ ದೃಷ್ಟಿಯಿಂದ ಬೇರೆ ಸಲಹೆ ಕೊಡುತ್ತ ನಾನು--" ನೀವು ಜ್ಯೋತಿಷ್ಯ ಹೇಳುವಾಗ ಯಾವುದನ್ನೂ ಖಡಾಖಂಡಿತವಾಗಿ ಹೇಳಕೂಡದು. "ಪಂಚಭವತಿ, ಪಂಚ ನ ಭವತಿ" ಎಂಬ ಸ್ವರೂಪ ಆ ಶಾಸ್ತ್ರಕ್ಕೇ ಇದೆಯಲ್ಲ! ಕಳವಾದ ಮಾಲು ಉತ್ತರ ದಿಕ್ಕಿಗೋ, ದಕ್ಷಿಣ ದಿಕ್ಕಿಗೋ ಹೋಗಿದೆ ಎನ್ನಬೇಕು. ನಿಶ್ಚಿತವಾದ ಊರು ಹೇಳಬಾರದು. ವಿವಾಹದ ಸಮಸ್ಯೆ ಇದ್ದರೆ, ಮುಂದಿನ ಸಲದ ವೈಶಾಖದಲ್ಲಿ ವಿವಾಹ ಯೋಗವಿದೆ ಎನ್ನಬೇಕು. (ಏಕೆಂದರೆ, ವೈಶಾಖದಲ್ಲಿಯೇ ಅಲ್ಲವೆ ಹೆಚ್ಚು ವಿವಾಹಗಳು ಜರುಗುವುದು?) ನೌಕರಿಯಲ್ಲಿ ಬಡತಿ, ಟ್ರಾನ್ಸಫರ್‌ದ ಪ್ರಶ್ನೆ ಬಂದಾಗ, ಆ ವ್ಯಕ್ತಿಯ ಜಾತಿ, ಅವನಿಗೆ ಪರಿಚಿತವಿರುವ ಮೇಲಾಧಿಕಾರಿಗಳು ಇತ್ಯಾದಿ ತಿಳಿದುಕೊಂಡು ಹಾರಿಕೆಯ ಆದರೆ ಸಾಂತ್ವನವರ ಹೇಳಿಕೆ ಕೊಡಬೇಕು. ನಿಮಗೆ ಹಸ್ತಸಾಮುದ್ರಿಕ ತಿಳಿಯದಿದ್ದರೂ ಅವನ ಕೈಯನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು. ಇಂತಿಂಥ ಮಂತ್ರಿಗಳು, ಅಧಿಕಾರಿಗಳಿಗೆ ನೀವು ಹೇಳಿದ ಭವಿಷ್ಯ ಅಕ್ಷರಶಃ ಸತ್ಯವಾದದ್ದನ್ನು ಪರಿಣಾಮವಾಗುವಂತೆ ಹೇಳಬೇಕು. ಗಿರಾಕಿಯು ನಿಮ್ಮ ಹತ್ತಿರ ಬಂದ ಕೂಡಲೇ, "ಈಗ ನೀವು ಚಿಂತೆಯಲ್ಲಿದ್ದೀರಿ" ಎಂದು ಹೇಳಬೇಕು.(ಯಾಕೆಂದರೆ, ಚಿಂತೆಯುಳ್ಳವರಷ್ಟೇ ಜ್ಯೋತಿಷಿಗಳ ಹತ್ತಿರ ಹೋಗುವರಷ್ಟೇ?) "ಆ ಚಿಂತೆ ನಿವಾರಣೆಯಾಗುವ ಕಾಲ ಇನ್ನು ದೂರವಿಲ್ಲ"- ಎಂಬ ಭರವಸೆ ಕೊಡಬೇಕು."




ಶಾಸ್ತ್ರಿಗಳು ನನ್ನ ಮಾತಿಗೆ ನಸುನಕ್ಕರಾದರೂ ಅವರ ಮುಖದಲ್ಲಿ ವಿಷಾದದ ಕಳೆ ಇತ್ತು.

"ಅಂದ ಹಾಗೆ, ಶಾಸ್ತ್ರಿಗಳೇ! ನಿಮ್ಮ ಜ್ಯೋತಿಷ್ಯ ಕಾರ್ಯಾಲಯದಲ್ಲಿ ಯಾವ ಯಾವ ದೇವರ ಫೋಟೋ ಹಾಕಿದ್ದೀರಿ?"

"ಶ್ರೀ ಗಣಪತಿ ಮತ್ತು ಶ್ರೀಗಿರಿಜಾಶಂಕರರ ಭವ್ಯ ಫೋಟೋ ಹಾಕಿಸಿದ್ದೇನೆ, ಯಾಕೆ?"

"ಇಲ್ಲಿಯೂ ನೀವು ಸ್ವಲ್ಪ ತಪ್ಪಿರುವಿರಿ, ಶಾಸ್ತ್ರಿಗಳೇ. ನೀವು ಎಲ್ಲಾ ದೇವತೆಗಳ ಫೋಟೋ ಅಂದರೆ ಶ್ರೀಮಹಾಲಕ್ಷ್ಮಿ-ಸರಸ್ವತಿ, ಶ್ರೀವಿಷ್ಣು, ಶ್ರೀ ಆಂಜನೇಯ, ಇವರ ಫೋಟೋ ಹಾಕಲೂ ಮರೆಯಬಾರದು. ಅಲ್ಲದೆ, ಸಾಯಿಬಾಬಾ, ರಜನೀಶ ಮುಂತಾದವರ ಭಾವಚಿತ್ರ ಕೂಡ ತಪ್ಪದೆ ಹಾಕಬೇಕು. ಅಂದರೆ, ಎಲ್ಲಾ ಮತ-ಪಂಥಗಳ ಜನರೂ ಆಕರ್ಷಿತರಾಗುವರು."

ಈಗ ಶಾಸ್ತ್ರಿಗಳ ಮುಖದ ಮೇಲಿನ ಚಿಂತೆ ಕಡಿಮೆಯಾದಂತೆ ಕಂಡುಬಂದಿತು. ಸಾತ್ವಿಕರಾದ ಅವರ ಮನಸ್ಸಿನಲ್ಲಿ ನಡೆದ ಹೋರಾಟದ ತುಮುಲ ಅವರ ಮುಖದ ಮೇಲೆಯೂ ವ್ಯಕ್ತವಾಗುತ್ತಿತ್ತು. ನಮ್ಮ ಸಲಹೆಯ ಬಗ್ಗೆ ಫೀಯನ್ನು ಕೊಡಲು ಬಂದರು; ಆದರೆ, ನಾನದನ್ನು ನಿರಾಕರಿಸಿ ಅವರನ್ನು ಬಾಗಿಲವರೆಗೂ ಕಳಿಸಿಬಂದೆ.

ಮತ್ತೊಮ್ಮೆ ಒಬ್ಬ ಯುವಕರು ಸಲಹೆಗಾಗಿ ಬಂದರು. ಪ್ರಸಿದ್ಧ ಸಾಹಿತಿಯಾಗಬೇಕೆಂಬುದು ಅವರ ಹಂಬಲ. ಆದರೆ, ವಾರಪತ್ರಿಕೆ-ಮಾಸಪತ್ರಿಕೆಗಳಿಗೆ ಅವರು ಕಳಿಸಿದ ಎಷ್ಟೋ ಲೇಖನ-ಕವಿತೆಗಳು ಸ್ವೀಕೃತವಾಗದೆ ಮರಳಿಬರುತ್ತಿದ್ದವು. ವಿಚಾರಿಸಿದಾಗ, ಅವರು ಪದವೀಧರರೆಂದೂ, ಹಳಗನ್ನಡ-ಸಂಸ್ಕೃತ ಸಾಹಿತ್ಯ ಅಭ್ಯಾಸಮಾಡಿದವರೆಂದೂ ತಿಳಿಯಿತು. ಅವರಿಗೆ ಮರಳಿಬಂದ ಕವನ-ಲೇಖನಗಳನ್ನು ಅಲ್ಲಲ್ಲಿ ಓದಿನೋಡಿದೆ. ಅವರ ಬರವಣಿಗೆಯಲ್ಲಿ ಭಾಷಾಶುದ್ಧಿ ಇತ್ತು; ಲೇಖನಗಳಲ್ಲಿ ಸಂಸ್ಕೃತಸಾಹಿತ್ಯದ ಉಲ್ಲೇಖಗಳಿದ್ದರೆ, ಅವರ ಕವನಗಳಲ್ಲಿ ಸಾತ್ವಿಕತೆ, ನೀತಿ, ನೈಜ ಕಳಕಳಿ ಇದ್ದವು. ಇಂಥ ಲೇಖನಗಳು ಯಾಕೆ ಸ್ವೀಕೃತವಾಗಲಿಲ್ಲ ಎಂಬುದು ನಮಗೆ ಹೊಳೆಯಿತು.

"ನೋಡಿರಿ, ಕುಲಕರ್ಣಿಯವರೇ. ಹಾಗೆ ನೋಡಿದರೆ, ನಿಮ್ಮ ಲೇಖನಗಳು ಚೆನ್ನಾಗಿಯೇ ಇವೆ. ಒಳ್ಳೆಯ ಸಾಹಿತ್ಯದ ಲಕ್ಷಣಗಳೆಲ್ಲ ಇವೆ. ಆದರೆ, ಆಧುನಿಕ ಕಾಲದ ಮಣ್ಣಿನ ವಾಸನೆ, ವಾಸ್ತವತೆ ನಿಮ್ಮ ಕವಿತೆಗಳಲ್ಲಿ ಇಲ್ಲ. ಅಲ್ಲದೆ, ನೀವು ಒಳ್ಳೆಯದಕ್ಕೆ ಒಳ್ಳೆಯದೆಂದೂ, ಕೆಟ್ಟದ್ದಕ್ಕೆ ಕೆಟ್ಟದ್ದೆಂದೂ ಹೇಳಿಬಿಡುತ್ತೀರಿ!"

"ಅದು ತಪ್ಪೋ?"-ನಸುಕೋಪದಿಂದಲೇ ಕುಲಕರ್ಣಿ ಕೇಳಿದರು. ನಾನು ನಸುನಗುತ್ತ ಹೇಳಿದೆ- "ಅದು ತಪ್ಪಲ್ಲದಿದ್ದರೂ, ಇಂದಿನ ಆವಶ್ಯಕತೆಗಳಿಗೆ ಅನುಗುಣವಾಗಿ ನಿಮ್ಮ ಬರವಣಿಗೆಯಲ್ಲಿ ಪ್ರತಿಭಟನೆ ಇಲ್ಲ, ಬಂಡಾಯ ಪ್ರವೃತ್ತಿ ಇಲ್ಲ! ಸಂಪ್ರದಾಯ, ಕಂದಾಚಾರ, ಬಡತನ, ಶೋಷಣೆ ಇಂಥವುಗಳ ವಿರುದ್ಧ ನಿಮ್ಮ ಕವಿತೆಗಳಲ್ಲಿ ಕೂಗು ಕೇಳಿಬರುವುದಿಲ್ಲ. ಅಲ್ಲದೆ, ಅವು ಶೃಂಗಾರಪ್ರಧಾನವೂ ಆಗಿಲ್ಲ!"

"ಅಂದರೆ, ಹಾಗೆ ಬರೆದರೆ ಮಾತ್ರ ಅದು ಸಾಹಿತ್ಯವೋ? ಸಾಹಿತಿಗೆ ನಿರ್ಬಂಧ ಹಾಕುವುದು ಸರಿಯೇ?"

"ಆದರೆ, ಕುಲಕರ್ಣಿಯವರೇ, ಸಂಪಾದಕರು, ಪುಸ್ತಕಪ್ರಕಾಶಕರು ತಮ್ಮ ವ್ಯಾಪಾರದ ಕಡೆಗೆ ಲಕ್ಷ್ಯ ಕೊಡುತ್ತಾರೆ. ಜನರು ಕೊಂಡು ಓದುವ ಸಾಹಿತ್ಯ ಅವರು ಪೂರೈಸಬೇಕಾಗಿದ್ದರಿಂದ, ಜನರ ಅಭಿರುಚಿಗೆ ತಕ್ಕಂತೆ ಲೇಖನ ಪ್ರಕಟಿಸುತ್ತಾರೆ, ಪುಸ್ತಕಪ್ರಕಾಶನ ಮಾಡುತ್ತಾರೆ. ಹೀಗಾಗಿ, ಆದರ್ಶವನ್ನು ಚಿತ್ರಿಸುವ, ನೀತಿ ಸದಾಚಾರ ನಿರೂಪಿಸುವ ಮತ್ತು ಭಾಷಾಶುದ್ಧಿಗೆ ಮಹತ್ವಕೊಡುವ ನಿಮ್ಮಂಥ ಲೇಖಕರು ಹಿಂದುಳಿಯುತ್ತಾರೆ."

"ಹಾಗಾದರೆ, ನಾನೇನು ಮಾಡಬೇಕು ಎನ್ನುವಿರಿ?"

"ನಿರಾಶರಾಗಬೇಡಿರಿ. ಇಂದಿನ ಪ್ರಕಾಶಕರ, ಓದುಗರ ಅಭಿರುಚಿಯನ್ನು ಗಮನಿಸಿರಿ, ಅಲ್ಲದೆ, ಸಾಹಿತಿಗಳಲ್ಲಿಯ ಯಾವುದಾದರೊಂದು ಪ್ರಬಲ ಗುಂಪಿಗೆ ನೀವು ಸೇರಿಕೊಳ್ಳಿರಿ."

"ಯಾವುದೇ ಗುಂಪುಗಾರಿಕೆ ನನ್ನ ಸ್ವಭಾವದಲ್ಲಿಲ್ಲವಲ್ಲ!"

"ಇದು ನೋಡಿರಿ, ನಿಮ್ಮ ಸ್ವಭಾವದಲ್ಲಿ ಇಲ್ಲದಿದ್ದರೂ, ಸಾಹಿತ್ಯಕ್ಷೇತ್ರದಲ್ಲಿ ನೀವು ಹೆಸರು ಮಾಡಿಕೊಳ್ಳುವುದಿದ್ದರೆ, ಒಂದು ವಿಶಿಷ್ಟಗುಂಪಿಗೆ ನೀವು ಹೊಂದಿಕೊಂಡು ಅವರಿಂದ ಪ್ರಚಾರ ಮಾಡಿಕೊಳ್ಳಬೇಕು!"

ಶ್ರೀ ಕುಲಕರ್ಣಿಯವರ ಮನಸ್ಸು ನನ್ನ ಮಾತಿಗೆ ಒಡಂಬಡಲಿಲ್ಲ ಎಂಬುದು ಅವರ ಮುಖದ ಮೇಲಿಂದಲೇ ತಿಳಿಯಿತು.

"ಕಾಲ ತೀವ್ರಗತಿಯಿಂದ ಬದಲಾಗುತ್ತಿದೆ, ಕುಲಕರ್ಣಿಯವರೇ! **Survival of the**




**fittest** ಎಂಬ ಸೂತ್ರವನ್ನು ನೀವು ಕೇಳಿಲ್ಲವೆ? ಜನರ ಅಭಿರುಚಿಗೆ ತಕ್ಕಂತೆ ಕಥೆ-ಕವನ ಬರೆಯಿರಿ; ನಮ್ಮ ಅನುಭವದ ಮಾತು ಕೇಳಿರಿ."

ನಮ್ಮ ಸಲಹೆ-ಸೂಚನೆ ಹುಸಿಹೋಗಲಿಲ್ಲ; ಕುಲಕರ್ಣಿಯವರ ಕಥೆ-ಕವನಗಳು ಹೆಚ್ಚಾಗಿ ಪ್ರಕಟವಾಗತೊಡಗಿದವು. ಅಂತೂ, ನಮ್ಮ ಸಹಾಯ ಅವರಿಗೆ ದೊರೆಯಿತೆಂಬ ಸಮಾಧಾನ ನಮಗಾಯಿತು.

ಮತ್ತೊಂದು ದಿನ, ಒಳ್ಳೆಯ ಸೂಟ ಧರಿಸಿದ "ಸ್ಮಾರ್ಟ" ವ್ಯಕ್ತಿಯೊಬ್ಬರು ಆಗಮಿಸಿದರು. ಅವರು ಡಾಕ್ಟರರಿದ್ದು ದವಾಖಾನೆ ತೆರೆದು ಎಷ್ಟೋ ಕಾಲವಾದರೂ ಪ್ರ್ಯಾಕ್ಟೀಸ್ ಕೂತಿಲ್ಲ ಎಂಬುದು ಅವರ ಕಂಪ್ಲೇಂಟ ! ರೋಗ ನಿವಾರಣೆಗೆ ಅವರು ಚಿಕಿತ್ಸಾಕ್ರಮದಲ್ಲಿ ಯಾವ ವಿಧಾನ ಉಪಯೋಗಿಸುತ್ತಾರೆಂಬುದನ್ನು ನಾವು ತಿಳಿದುಕೊಂಡೆವು. ಅವರ ರೋಗನಿಧಾನ ಪದ್ಧತಿ ಮತ್ತು ಚಿಕಿತ್ಸಾಪದ್ಧತಿ ಶಾಸ್ತ್ರೀಯವಾಗಿದ್ದರೂ ಅವರು ತಮ್ಮ ವ್ಯವಸಾಯದಲ್ಲಿ ಏಕೆ ಮುಂದುವರಿದಿಲ್ಲ ಎಂಬುದನ್ನು ತಿಳಿಯಲು ನಮಗೆ ಬಹಳ ವೇಳೆ ಹಿಡಿಯಲಿಲ್ಲ.

"ರೋಗಿಗಳಿಗೆ ನಾನು ಬೆಳಗಿನಲ್ಲಿ ಬೇಗ ಎದ್ದು ವ್ಯಾಯಾಮ ಮಾಡಲು ಹೇಳುವೆ. ಚಹಾಪಾನ, ಸಿಗರೇಟು ಸೇವನೆ ನಿಲ್ಲಿಸಿ ಬಿಡಲು ಖಂಡಿತವಾಗಿ ಹೇಳಿಬಿಡುವೆ. ಆಹಾರದಲ್ಲಿ ಕರಿದದ್ದು ವರ್ಜ್ಯವಾಡಿ, ಪಥ್ಯದ ಊಟ ಮಾತ್ರ ಮಾಡಲು ಹೇಳುವೆ. ಅದರಿಂದ ರೋಗ ಕಡಿಮೆಯಾಗುವುದಲ್ಲದೆ, ಪ್ರತಿಬಂಧಕವೂ ಆಗುವುದಿಲ್ಲವೆ ? "

ನನಗೆ ಸ್ವಲ್ಪ ನಗೆ ಬಂದರೂ ಅದನ್ನು ತಡೆದುಕೊಂಡು-"ಇದು ನೋಡ್ರಿ, ಡಾಕ್ಟರರೇ! ನೀವು ಹೇಳಿದಂತೆ ರೋಗಿ ನಡೆದುಕೊಂಡರೆ ರೋಗ ಖಂಡಿತ ವಾಸಿಯಾಗುತ್ತದೆ, ಹೊಸದಾಗಿ ಯಾವ ರೋಗವೂ ಬರುವುದಿಲ್ಲ ಎಂಬುದು ನಿಜವಾದರೂ, ನಿಮ್ಮ ಕ್ರಮ ರೋಗಿಗಳಿಗೆ ರುಚಿಸಲಾರದು."

"ರುಚಿಸಲಿ ಬಿಡಲಿ, ಅವಶ್ಯವಿರುವದನ್ನು ಮಾಡಲು ಹೇಳುವುದು ಡಾಕ್ಟರರ ಧರ್ಮವಲ್ಲವೇ ? "—ಡಾಕ್ಟರರು ಕೇಳಿದರು.

"ನೀವು ಹೇಳುವುದು ಓಬೀರಾಯನ ಕಾಲದ್ದು, ಡಾಕ್ಟರರೇ ! ಇಂದಿನ ಪೇಶಂಟನಿಗೆ ತನ್ನ ಆಹಾರದಲ್ಲಿ, ಚಟಗಳಲ್ಲಿ ಯಾವ ಬದಲಾವಣೆ ಹೇಳುವ ಡಾಕ್ಟರರು ಬೇಕಾಗಿಲ್ಲ. ಪಥ್ಯ ಮಾಡಲು ಹೇಳುವ ಡಾಕ್ಟರರನ್ನಂತೂ ಅವರು ದೂರವಿಡುತ್ತಾರೆ! ತಾವು ಇರುವಂತೆಯೇ ಇದ್ದು. ಅವರ ರೋಗ ಅತಿತೀವ್ರ ಕಡಿಮೆಯಾಗಬೇಕು. ನೀವು ಇಂಜೆಕ್ಶನ್ ಕೊಡುತ್ತೀರೋ ಇಲ್ಲವೋ ?"

"ನಾ ಇಂಜೆಕ್ಶನ್ ಕೊಡುವದು ತೀರ ಕಡಿಮೆ. ಬಹಳ ಅನಿವಾರ್ಯವೆನಿಸಿದಾಗ ಮಾತ್ರ ಒಂದು ಇಂಜೆಕ್ಶನ್ ಕೊಡಬಹುದು. ಅದರಿಂದ ಅನೇಕ ದುಷ್ಪರಿಣಾಮಗಳಾಗುತ್ತವೆ. !"

ಇಲ್ಲಿಯೇ ರಹಸ್ಯವಿದೆ ನೋಡಿರಿ, ಡಾಕ್ಟರರೇ! ಇಂದಿನ ಪೇಶಂಟನಿಗೆ ಆತುರ ಬಹಳ. "ಇಂಜೆಕ್ಶನ್ ಕೊಡುವುದಿಲ್ಲೇನು ? ಎಂದು ಅವನೇ ಡಾಕ್ಟರರನ್ನು ಕೇಳುತ್ತಾನೆ. ನೀವು ಕೊಡದೆ ಹೋದರೆ, ಇಂಜೆಕ್ಶನ್ ಕೊಡುವ ಡಾಕ್ಟರರನ್ನು ಹುಡುಕಿಕೊಂಡು ಹೋಗುತ್ತಾನೆ."

"ಈ ವಿಷಯ ನನ್ನ ಗಮನಕ್ಕೂ ಬಂದಿದೆ."

"ಅಲ್ಲದೆ, ಡಾಕ್ಟರರಂತೂ ಪ್ರತಿಸಲ ಎರಡು ಇಂಜೆಕ್ಶನ್ ಕೊಡುತ್ತಾರೆ ! ಒಂದು ಔಷಧಿಯದು, ಇನ್ನೊಂದು ಕೇವಲ ಶುದ್ಧ ನೀರಿನದು ! ಬಿಲ್ ಮಾಡಲು ಎರಡು ಇಂಜೆಕ್ಶನ್ ಆಗಲಿಲ್ಲವೆ?"

"ಇದನ್ನೆಲ್ಲ ನಾನೂ ಕೇಳಿದ್ದೇನೆ. ಆದರೆ, ಇದು ಡಾಕ್ಟರರ ನೀತಿಸಂಹಿತೆಗೆ ಪೂರ್ತಿ ವಿರುದ್ಧವಾಗುವದಿಲ್ಲವೆ?"

ನಾನು ನಗುತ್ತ ಹೇಳಿದೆ- "ಬಹಳ ಹಳೆಯ ಕಾಲದ ಮಾತು ಹೇಳುತ್ತಾ ಇದ್ದೀರಿ ! ಈಗ ನೀತಿಯು ಕಲ್ಪನೆಯೂ ಬದಲಾಗುತ್ತ ನಡೆದಿದೆ. ಆದ್ದರಿಂದ, ಡಾಕ್ಟರರೇ ! ನೀವು ಪ್ರಾಚೀನ ಪದ್ಧತಿ ಬಿಟ್ಟು ಕಾಲಕ್ಕೆತಕ್ಕಂತೆ ಬದಲಾವಣೆ ಮಾಡಿಕೊಳ್ಳಿರಿ-ನಮ್ಮ ಅನುಭವದ ಹಿತೋಕ್ತಿ ಮರೆಯಬೇಡಿರಿ !"

ತಮಗೆ ಮನಸ್ಸಿಲ್ಲದಿದ್ದರೂ, ಕ್ರಮೇಣ, ತರುಣ ಡಾಕ್ಟರರು ನಮ್ಮ ಸಲಹೆಯಂತೆಯೇ ನಡೆದುಕೊಳ್ಳಲು ಆರಂಭಿಸಿದರು. ಈಗ ಅವರು ತಮ್ಮ ವೃತ್ತಿಯಲ್ಲಿ ತುಂಬಾ ಲಾಭ ಗಳಿಸುತ್ತಿದ್ದಾರೆ; ಇತ್ತೀಚೆಗೆ ಬಂಗಲೆ ಕಟ್ಟಿಸಿಕೊಂಡು, ಕಾರ್ ಇಟ್ಟಿದ್ದಾರೆ.

ಒಂದು ರವಿವಾರ ಮುಂಜಾನೆ ಒಬ್ಬ ತರುಣ ನಮ್ಮ ಕಾರ್ಯಾಲಯಕ್ಕೆ ಬಂದರು, ಅವರ ಮುಖದ ಮೇಲೆ ನಿರಾಸೆತಾಂಡವವಾಡುತ್ತಿತ್ತು. ವಿಚಾರಿಸಿದಾಗ ಅವರೊಬ್ಬ ಭಗ್ನಪ್ರಣಯಿ ಎಂದು ತಿಳಿದುಬಂತು. ಅವರನ್ನು ಪ್ರೀತಿಸಿದ ಹುಡುಗಿ ಈಗ ಅವರ ಬಗ್ಗೆ ಉದಾಸೀನಳಾಗಿದ್ದಾಳೆ! ಸರಿ; ಅವರಿಗೆ ನಾವು ಪ್ರೇಮದ ಪಾಠಗಳನ್ನು ಕ್ರಮವಾಗಿ ಹೇಳಿಕೊಟ್ಟೆವು. ಪ್ರೇಮಪತ್ರದ ಅನೇಕ ಮಾದರಿಗಳನ್ನು (ಕನ್ನಡ, ಹಿಂದಿಯಲ್ಲಿ) ತಯಾರಿಸಿಕೊಟ್ಟೆವು. ಅವುಗಳ ಪ್ರಯೋಗ ಯಶಸ್ವಿಯಾಯಿತೆಂದು ಅವರೇ ಬಂದು ತಿಳಿಸಿ ಹೋದರು. ಮತ್ತೊಂದು ದಿನ, "ಕಪಿ" (ಎಂದರೆ ಕನ್ಯಾಪಿತೃ) ಒಬ್ಬರು ಜೋಲು ಮೋರೆ ಹಾಕಿಕೊಂಡು ಬಂದರು. ಮಗಳರೂಪ ಸಾಧಾರಣವಾದ್ದರಿಂದ ಅವಳ ವಿವಾಹ ಮುಂದೆ ಮುಂದೆ ಹೋಗುತ್ತಲಿದೆ ಎಂಬುದು ತಿಳಿಯಿತು. "ಹುಡುಗಿ ಗೋದಿಗೆಂಪು ಬಣ್ಣದವಳಿದ್ದರೂ, ಸ್ಮಾರ್ಟ ಇದ್ದಾಳೆ, ಸಂಗೀತಬಲ್ಲವಳು" ಎಂದು ಹೇಳಲು ತಿಳಿಸಿದೆವು. ಅವರ ಮಗಳು ಕೆಲವೇ ಭಕ್ತಿಗೀತ, ಕೆಲವು ಸಿನೇಮಾ ಹಾಡು ಮಾತ್ರ ಕಲಿತು ಪ್ರತಿಸಲದ ಕನ್ಯೆನೋಡುವ ಸಂದರ್ಭದಲ್ಲಿ ಅವನ್ನೇ ಹಾಡಬೇಕೆಂದು ಸೂಚಿಸಿದೆವು. ನಮ್ಮ ಸೂಚನೆ ಈ ಸಂದರ್ಭದಲ್ಲಿಯೂ ಹುಸಿ ಹೋಗಲಿಲ್ಲ ! ಹಾಗೆಯೇ, ನಮ್ಮ ಸಲಹಾ ಕೇಂದ್ರಕ್ಕೆ-ದಾಂಪತ್ಯಜೀವನದ ಸಮಸ್ಯೆ ಎದುರಿಸುವವರು, ಫೇಲಾದ ವಿದ್ಯಾರ್ಥಿಗಳು, ಚುನಾವಣೆಯಲ್ಲಿ ಸೋತವರು, ಪಕ್ಷಕಾರರು ದೊರೆಯದ ವಕೀಲರು, ನಾಟಕ ಕಂಪನಿ ಮಾಲಕರು, ನಿರಾಸೆಗೊಂಡ ತಾಯಿ-ತಂದೆ-ಹೀಗೆ ನಾನಾ ಬಗೆಯ ಸಂತ್ರಸ್ತ ಜನರು ಬರುತ್ತಲೇ ಇದ್ದಾರೆ. ಅವರಿಗೆಲ್ಲ ನಮ್ಮ ವ್ಯಾವಹಾರಿಕ, ಉಪಯುಕ್ತ ಸಲಹೆ ಇದ್ದೇ ಇದೆ! ನೀವೂ ಒಂದು ಸಲ ನಮ್ಮ ಸಲಹಾಕೇಂದ್ರಕ್ಕೆ ಏಕೆ ದಯಮಾಡಿಸಬಾರದು? ●





# ತೂಕ

❋ ಪ್ರೇಮಾ ಭಟ್ಟ

ತೂಕದ ಬೊಟ್ಟನ್ನು ತಕ್ಕಡಿಗೆ ಹಾಕಿ ಅಕ್ಕಿಯನ್ನು ತೂಗಿದ. ಒಂದು ಎರಡು ಹತ್ತು ಕೇಜಿ ಆಯ್ತು. ಮತ್ತೊಂದು ಚೀಲ ಹಿಡಿದು ಇನ್ನೂ ಹತ್ತು ಕೇಜಿ ಹಾಕಿ ಎಂದ ಅನಂತಮಯ್ಯ. ಮನೆಯಲ್ಲಿ ಸದಾ ಬಡತನ. ಅನಂತಮಯ್ಯನ ಮಕ್ಕಳು ಬರುತ್ತಿದ್ದವು. ಹತ್ತು ಪೈಸೆಗೆ ಸಾಮಾನು ಕೇಳುತ್ತಿದ್ದವು. ಕಾಲಬದಲಾಗಿದೆ ಹತ್ತು ಪೈಸೆಗೆ ಯಾವ ಮಾಲು ಸಿಗುವದಿಲ್ಲ ಎನ್ನಲು ರಂಗಣ್ಣನಿಗೂ ಬಾಯಿ ಬರದು. ಅನಂತಮಯ್ಯನ ಮಕ್ಕಳು ಏನು ಕೇಳಿದರೂ ಅಳತೆಮಾಡದೆ ಕೈಯಲ್ಲಿ ತೆಗೆದು ಒಂದಿಷ್ಟು ಕೊಟ್ಟು ಕಳಿಸುತ್ತಿದ್ದ. ಈ ದಿನ ಅನಂತಮಯ್ಯ ಇಪ್ಪತ್ತು ಕೇಜಿ ಅಕ್ಕಿ ಕೊಂಡದ್ದು ನೋಡಿ ಆಶ್ಚರ್ಯವಾಯಿತು ರಂಗಣ್ಣನಿಗೆ. ಈ ಮಹರಾಯನಿಗೆ ಹಣ ಎಲ್ಲಿಂದ ಬಂತು ಎಂದು ಯೋಚಿಸಿದ. ದುಡ್ಡು ಕೊಡದೇ ಸಾಲ ಪಡೆದು ಹೋಗುತ್ತಾನೇನೋ ಎನಿಸಿತು. ಹಾಗೊಂದು ವೇಳೆ ಕೊಡದೆ ಹೋದರೆ ಇವನು ತೀರಿಸುವದು ಯಾವಾಗ ಎಂದುಕೊಂಡ. ಅಕ್ಕಿಯ ಜೊತೆಗೆ ದಿನಸಿ ಸಾಮಾನುಗಳನ್ನು ಅನಂತಮಯ್ಯ ಕಟ್ಟಿಸಿದಾಗ ಮತ್ತಷ್ಟು ಆಶ್ಚರ್ಯವಾಯಿತು ರಂಗಣ್ಣನಿಗೆ. ಅವನು ಸಾಮಾನು ಕಟ್ಟುತ್ತಿದ್ದಂತೆ ಕೇಳಿದ

''ವಿಶೇಷ ಏನಾದರೂ ಉಂಟ ?''

ಅಮ್ಮ ಕೆಲವು ದಿವಸಗಳಿಂದ ಹೇಳುತ್ತಿದ್ದಳು. ಅವಳ ಲೆಕ್ಕದಲ್ಲಿ ಒಂದು ಪವಮಾನ ಹೋಮ ಮಾಡಿಸಬೇಕಂತೆ. ನಾನು ಬಡವ ಇಂಥದಕ್ಕೆಲ್ಲ ಖರ್ಚುಮಾಡಲಿಕ್ಕೆ ನನ್ನಿಂದಾಗದು ಎಂದು ಹೇಳಿಬಿಟ್ಟರೆ ಅಮ್ಮನ ಉದ್ದುದ್ದ ಪುರಾಣ ನಿಲ್ಲುವದೇ ಇಲ್ಲ. ಅವಳಿಗೂ ವಯಸ್ಸಾಗಿದೆ ಹೇಗೊ ಒಂದು ಅವಳಿಗೆ ತೃಪ್ತಿಸಿಕ್ಕರಾಯ್ತು ಎಂದು ಯೋಚಿಸಿದೆ ಎಂದ ಅನಂತಮಯ್ಯ

"ಹಣಕ್ಕೆ ಏನು ಮಾಡಿದಿರಿ" ?.

ನನ್ನವಳನ್ನು ಕೇಳಿದೆ. ತನ್ನ ಕುತ್ತಿಗೆಯಲ್ಲಿದ್ದ ಒಂದೆಳೆ ಅವಲಕ್ಕಿ ಸರ ತೆಗೆದು ಕೊಟ್ಟಳು. ಅದನ್ನು ನಾನೇನು ಮಾಡಿಸಿದ್ದಲ್ಲ. ನನ್ನ ಕೈ ಹಿಡಿಯುವ ಸಂದರ್ಭದಲ್ಲಿ ಅವಳ ತಾಯಿ ಕುತ್ತಿಗೆಯಿಂದ ತೆಗೆದು ಇವಳ ಕುತ್ತಿಗೆಗೆ ವರ್ಗಾಯಿಸಿದ್ದನ್ನು ಇವತ್ತು ನಾನು ಮಾರಾಟಮಾಡಿ ಈ ಹಣ ತಂದೆ. ಈವಿಚಾರ ಅಮ್ಮನಿಗೆ ಹೇಳುವ ಹಾಗಿಲ್ಲ. ಹೇಳಿದರೆ ಒಂದು ಕಣ್ಣು ಸುಣ್ಣ ಒಂದು ಕಣ್ಣು ಬೆಣ್ಣೆ ಮಾಡುತ್ತೇನೆ ಎಂದಾಳು. ನಾನಂತೂ ಇಬ್ಬರನ್ನು ಸಮನಾಗಿ ಕಂಡಿದ್ದೇನೆ. ಎಲ್ಲೂ ತೂಕ ತಪ್ಪಿಲ್ಲ. ಒಂದೊಂದು ಸಾರೆ ಇವಳಿಗೆ ಇರುವ ಉದಾರತೆಗೆ ಮರುಗಬೇಕೆನಿಸುತ್ತದೆ ಅಷ್ಟೆ. ಹಾಗಂತ ಅವಳನ್ನೇನು ನಾನು ಅಟ್ಟಕ್ಕೆ ಏರಿಸಿಲ್ಲ. ರಂಗಣ್ಣ ನಿನಗೆ ಗೊತ್ತು ನನ್ನ ಸ್ವಭಾವ. ನಾನು ಯಾವತ್ತು ಯಾರ ಋಣವನ್ನೂ ಇಟ್ಟುಕೊಳ್ಳುವವನಲ್ಲ. ಮುಂದೆ ಅವಳದನ್ನು ತೀರಿಸಬಹುದು. ತೀರಿಸದಿದ್ದರೂ ಅವಳು ನನ್ನ ಕೈ ಹಿಡಿದವಳು ಎನ್ನುವ ಕಾರಣಕ್ಕೆ ಸ್ವಲ್ಪಬಿಗು ಕಡಿಮೆಮಾಡಿರಬಹುದು. ಯೋಚನೆ ಮಾಡು. ಇಷ್ಟಕ್ಕೆಲ್ಲ ನಾನು ಇವರಿಬ್ಬರನ್ನು ನೋಡಿಕೊಳ್ಳುವ ರೀತಿಯಲ್ಲಿ ತಪ್ಪಿದ್ದೇನೆ ಎಂದು ನಿನಗೆ ಅನಿಸಬಹುದೆ. ಅಮ್ಮನಿಗೆ ಅವಳ ತಲೆ ಕಂಡರೆ ಆಗದು. ತನ್ನ ಮಕ್ಕಳು ಏನು ಮಾಡಿದರೆ ಅದು ಸಮ ಎನ್ನುವ ಅವಳು ಸೊಸೆ ಮಾಡುವ ತಪ್ಪನ್ನು ಅಗಾಧ ಮಾಡಿ ಹೇಳುತ್ತಾಳೆ. ಇಷ್ಟಾದರೂ ಇವಳು ಪವಮಾನ ಹೋಮ ನಡೆಸಲಿಕ್ಕೆ ನೆರವಾಗಿದ್ದಾಳೆ. ಕೈ ಹಿಡಿದಿದ್ದೇನೆ ಅನ್ನುವುದಕ್ಕೆ ಅವಳ ಬಗ್ಗೆ ಹೇಳುವುದಲ್ಲ. ಇದಕ್ಕೆ ಒಂದೊಂದು ಸಾರೆ ಅವಳ ಬಗ್ಗೆ ನನಗೆ ಮರುಕ ಹೆಚ್ಚುತ್ತದೆ. ಏನು ಹೇಳ್ತಿಯ ರಂಗಣ್ಣ" ಎಂದ ಮಯ್ಯ.

ರಂಗಣ್ಣ ಸುಮ್ಮನೆ ತನ್ನಷ್ಟಕ್ಕೆ ನಕ್ಕ. ಅಷ್ಟಲ್ಲದೆ ಅಷ್ಟರಲ್ಲಿ ಗಿರಾಕಿಗಳು ಬಂದುದರಿಂದ ರಂಗಣ್ಣನಿಗೆ ಮಾತನಾಡಲು ಅವಕಾಶವಾಗಲಿಲ್ಲ. ಸಾಮಾನು ಪಡೆದು ಅನಂತಮಯ್ಯ ಹೊರಡುವ ಮೊದಲು.

"ನಾಡಿದ್ದು ಸೋಮವಾರ ಮನೆಯಲ್ಲಿ ಪವಮಾನ ಹೋಮ ಮಾಡಿಸುತ್ತಿದ್ದೇನೆ. ತಪ್ಪದೇ ಬಂದು ಹೋಗು. ನಿನ್ನ ಹೆಂಡತಿಗೂ ಈ ವಿಷಯ ತಿಳಿಸು. ಇಬ್ಬರೂ ಅಂಗಡಿ ಬಾಗಿಲು ಹಾಕಿ ಬಂದು ಬಿಡಿ, ಕೇಳಿಸ್ತಾ" ಎಂದ ಅನಂತಮಯ್ಯ.

"ಕೇಳಿಸ್ತು"

"ಖಂಡಿತ ಬಂದು ಬಿಡು" ಎಂದು ಮತ್ತೊಮ್ಮೆ ಎಚ್ಚರಿಸಿ ಅನಂತಮಯ್ಯ ಸಾಮಾನಿನ ಹೊರೆಯನ್ನು ಹೊತ್ತು ಮುಂದೆ ನಡೆದ. ದೂರದಲ್ಲಿ ಮತ್ತಾರೋ ಸಿಕ್ಕಿರಬೇಕು ಅನಂತಮಯ್ಯನಿಗೆ, ತನ್ನಂತೆ ಅವನ ಕೈಯಲ್ಲಿರುವ ಹೊರೆಯನ್ನು ನೋಡಿ ಪ್ರಸ್ತಾಪಿಸಿರಬೇಕು. ತನ್ನಲ್ಲಿ ಹೇಳಿದ ಎಲ್ಲ ವಿಷಯಗಳನ್ನು ಅನಂತಮಯ್ಯ ಅವನೊಂದಿಗೂ ಹೇಳುತ್ತಿರಬಹುದು. ತಾನೆಲ್ಲೂ ತೂಕ ತಪ್ಪುವುದಿಲ್ಲ ಎನ್ನುವ ಅನಂತಮಯ್ಯ ಹೆಂಡತಿಯನ್ನು ತುಸು ಹೆಚ್ಚಾಗಿ ಹೊಗಳಿದಂತೆ ಕಂಡಿತು ರಂಗಣ್ಣನಿಗೆ. ಅಂಗಡಿ ಮುಚ್ಚುವ ಹೊತ್ತಾದುದರಿಂದ ಅಂಗಡಿಗೆ ಬೀಗ ಹಾಕಿ ಊಟಕ್ಕಾಗಿ ಮನೆಗೆ ಹೊರಟ. ದಾರಿಯಲ್ಲಿ ನಡೆದು ಬರುವಾಗ ಅನಂತಮಯ್ಯನ ಮನೆಸಿಗುತ್ತದೆ. ಏಕೋ ಏನೋ ಮುಂದೆ ಹೋಗಲು ರಂಗಣ್ಣನ ಕಾಲು ತಡವರಿಸಿತು. ಒಂದು ಕ್ಷಣ ರಸ್ತೆ ಅಂಚಿನಲ್ಲಿ ನಿಂತುಕೊಂಡ. ಅನಂತಮಯ್ಯನ ಹೆಂಡತಿ ಕಾವೇರಿ ನೀರು ಮೊಗೆಯುತ್ತಿ

---

**ಮನೆಯಲ್ಲಿ ತನ್ನ ತಾಯಿ ಮತ್ತು ಹೆಂಡತಿ ಪರಸ್ಪರ ಕಾದಾಡದಂತೆ ಮಾಡಿದ ಅನಂತಯ್ಯನ ಗುಟ್ಟಾದರೂ ಏನು ? ಸ್ನೇಹಿತನ ಸಲಹೆ ಸಂಸಾರದಲ್ಲಿ ಸಮತೂಕ ತಂದುದು ರಂಗಣ್ಣನಿಗೆ ಹರ್ಷ ಉಕ್ಕಿಸಿತು.**

---

ದ್ದಳು. ಉಟ್ಟ ಸೀರೆಗೆ ನೂರಾರು ತೇಪೆಹಾಕಿರುವುದು ಕಂಡಿತು. ನೀರು ಮೊಗೆದು ಅವಳು ಸೊಂಟಕ್ಕೆ ಬಿಂದಿಗೆ ಏರಿಸಿಕೊಂಡು ಬೀದಿ ಬಾಗಿಲಿನಿಂದಲೇ ಅವಳು ಒಳಗೆ ಹೋಗಬೇಕು.

"ಕಾವೇರಮ್ಮ ಒಂದು ನಿಮಿಷ ನಿಲ್ಲಿ" ಎಂದು ಬೀದಿ ಅಂಚಿನಲ್ಲಿದ್ದ ರಂಗಣ್ಣ ಕೂಗಿದ.

"ಓ, ಏನು ರಂಗಣ್ಣನವರು, ಬೀದಿಯಲ್ಲೇ ನಿಂತು ಬಿಟ್ರಲ್ಲ ಬನ್ನಿ ಒಳಗೆ" ಎಂದಳು.

"ಇಲ್ಲ ಊಟಕ್ಕೆ ಹೊರಟಿದ್ದೆ. ಅಂದಹಾಗೆ ಪವಮಾನ ಹೋಮಮಾಡಿಸ್ತೀರ ಅಂತ ತಿಳೀತು. ನನ್ನ ಲೆಕ್ಕದಲ್ಲಿ ಒಂದು ಐವತ್ತು ತೆಂಗಿನಕಾಯಿ ಕಳಿಸ್ತೇನೆ. ಸಂಜೆ ಹೊತ್ತಿಗೆ, ಕಾಶಿನೋ, ವಿಶ್ವನೋ, ಬರ್ಲಿ" ಎಂದ.

"ಅಯ್ಯೋ!, ಅದಕ್ಯಾಕಷ್ಟೊಂದು ಸಂಕೋಚಿಸ್ತೀರ. ಬೇಕಾದನ್ನು ಇಟ್ಕೊಂಡು ಬೇಡವಾದುದನ್ನು ಕಳಿಸಿಕೊಡಿ."

"ನೋಡಿ ರಂಗಣ್ಣನವರೆ ನಿಮ್ಮ ರುಕ್ಮಿನ್ನ ಪವಮಾನ ಹೋಮದ ದಿನ ಕರ್ಕೊಂಡು ಬಂದು ಬಿಡಿ, ತಿಳೀತಾ" ಎಂದಳು.

"ಅಗತ್ಯವಾಗಿ" ರಂಗಣ್ಣ ಕಾವೇರಮ್ಮನಿಂದ ಬೀಳ್ಕೊಂಡು ಮನೆಯಕಡೆ ಹೆಜ್ಜೆಹಾಕತೊಡಗಿದ. ತಲೆಬಾಗಿಲಿನಲ್ಲಿ ನಿಂತಿದ್ದ ತಾಯಿಯ ಮುಖ ಕಂಡೊಡನೆ ರೇಗಿತು ರಂಗಣ್ಣನಿಗೆ. ರುಕ್ಕು ಒಳಗೆಲ್ಲೋ ಸೇರಿರಬೇಕು ಇನ್ನು ಇವಳು ಊಟಮಾಡುವುದಕ್ಕೂ ಬಿಡುವುದಿಲ್ಲ. ಅತ್ತೆ ಸೊಸೆಯರ ಜಗಳ ಹತ್ತಿ ಹರಿಯುವುದಲ್ಲ. ಇದರಿಂದ ಅವರಿ

ಪವಮಾನ ಹೋಮಮಾಡಿಸೋದಕ್ಕೆ ಕಾರಣವಂತೆ. ಕೊರಳ ಅವಲಕ್ಕಿ ಸರ ತೆಗೆದು ಗಂಡನ ಕೈಗೆ ಕೊಟ್ಟು ಬಿಟ್ಟಳಂತೆ"

"ಅವಳತ್ತೆಗೆ ಸರ ಕೊಟ್ಟಿದ್ದು ಗೊತ್ತಿಲ್ಲ ಎಂದನಲ್ಲ ಮತ್ತೆ"

"ಯಾರು!"

"ಅದೇ ಅನಂತಮಯ್ಯ"

"ಅನಂತಮಯ್ಯ ತನ್ನ ಹೆಂಡತಿಯ ತೂಕ ಹೆಚ್ಚಿಸಲಿಕ್ಕೆ ಈ ಮಾತು ಅಂದಿರಬಹುದು. ಈಗ ಇಲ್ಲಿ ಕಾಣುವುದಿಲ್ಲವ ನಿನ್ನ ಹೆಂಡತಿಯನ್ನು ಮೆಚ್ಚಿಸಲಿಕ್ಕೆ ನೀನು ಏನೆಲ್ಲ ಮಾಡುವುದು" ಎಂದಳು.



"ಸಂತೋಷ ದೇವರ ಕೆಲಸಕ್ಕೆ ಯಾರು ಮುಂದೆ ಬಂದ್ರೆ ಏನು?"

"ಬಟ್ನಲ್ಲಿ ನಮ್ಮತ್ತೆ ಆಸೆ ನಡೆಸಿಕೊಟ್ರೆ ಆಯ್ತು". ಎಂದಳು ಕಾವೇರಿ.

"ಯಜಮಾನರು ಇನ್ನು ಬರ್ಲಿಲ್ವೆ"

"ಇಲ್ಲ"

"ಅಂಗಡಿ ಕಡೆಗೆ ಬಂದಿದ್ರು"

"ಇನ್ನೆಷ್ಟು ಸಾಮಾನು ತರ್ತಾರೋ ಏನೋ. ಕೆಳಮನೆ ಹೊಳ್ಳರು ಪವಮಾನ ಹೋಮ ಅಂದ ಕೂಡ್ಲೆ, ಬೆಲ್ಲ, ತೊಗರಿ ಬೇಳೆ ಕಳ್ಸಿಕೊಟ್ಟಿದ್ದಾರೆ. ಏನೂ ತಿಳ್ಕೊಳ್ದೇ ಹೋದರೆ ರಂಗಣ್ಣನವರೆ ನಿಮ್ಮ ಬೆಲ್ಲ, ತೊಗರಿ ಬೇಳೆ, ವಾಪಸ್ಸು ಮಾಡ್ತಾ."

ಬ್ಬರಿಗೆ ಮಾತ್ರ ಏನು, ತನಗೂ ನೆಮ್ಮದಿ ಇಲ್ಲ. ಕಳೆದ ತಿಂಗಳು ರುಕ್ಕುಗೆ ಕಾಸಿನ ಸರಮಾಡಿಸಿಕೊಟ್ಟದ್ದು ಅಮ್ಮನಿಗೆ ಕಣ್ಣು. ಅಂಗಡಿಯ ಆದಾಯವನ್ನೆಲ್ಲ ಹೆಂಡತಿಗೆ ತುಂಬಿಸುತ್ತಾನೆ ಎಂದು ಹೇಳುತ್ತಿದ್ದಳು, ಅವಳಿಗಲ್ಲದೆ ಬೇರೆಯಾರಿಗೆ ಮಾಡಿಸಬೇಕು ತಾನು ಎನ್ನುವುದು ಅವಳಿಗೆ ಅರ್ಥವಾಗಬೇಡವೆ? ಯೋಚಿಸುತ್ತಲೇ ರಂಗಣ್ಣ ಒಳಗಡಿ ಇಡಬೇಕು. ಬಾಗಿಲ ಮಧ್ಯೆ ನಿಂತಿದ್ದ ಅಮ್ಮ ಕೇಳಿದಳು. "ಅನಂತಮಯ್ಯ ಅವರಮ್ಮನ ಹೆಸರಿನಲ್ಲಿ ಪವಮಾನ ಹೋಮ ಮಾಡಿಸುತ್ತಾನಂತೆ"

"ಯಾರು ಹೇಳಿದರು"

"ಲಕ್ಷ್ಮಮ್ಮ ಹರಿಕಥೆಗೆ ಬಂದವರು ಹೇಳಿದರು. ಸೊಸೆಯನ್ನು ಇನ್ನಿಲ್ಲದಷ್ಟು ಹೊಗಳಿದರು. ಅವಳು

ರೇಗಬೇಕು ರಂಗಣ್ಣ. ಆದರೆ ಏಕೋ ಏನೋ ಮೌನವಾಗಿ ಒಳಗಡಿಯಿಟ್ಟ. ರುಕ್ಕು ತಟ್ಟೆ ಲೋಟ ಇಟ್ಟು ಬಡಿಸಲು ಸನ್ನದ್ಧಳಾಗುತ್ತಿದ್ದವಳು

"ನಿಮ್ಮಮ್ಮ ಬೆಳಗಿನಿಂದ ಖಾರವಾಗಿದ್ದಾರೆ. ಅನಂತಮಯ್ಯ ಪವಮಾನ ಹೋಮ ತನ್ನ ತಾಯಿಯ ಹೆಸರಿನಲ್ಲಿ ಮಾಡಿಸುತ್ತಿದ್ದಾನೆಂದು ಇವರಿಗೆ ಚಿಂತೆ. ಅಂಥ ಮಕ್ಕಳನ್ನು ಪಡೆಯು[illegible]ದಕ್ಕೂ ಪುಣ್ಯಮಾಡಿರಬೇಕು. ಬಡತನದ ಪರಿಸ್ಥಿತಿಯಲ್ಲೂ ತಾಯಿಯ ಆಸೆಯನ್ನು ಈಡೇರಿಸು[illegible]ರುವ ಮಗ. ಎಷ್ಟು ಒಳ್ಳೆಯ ಮಗ. ಅಂಥ ಮ[illegible]ಳನ್ನ ನಾನೆಲ್ಲೂ ಕಂಡದ್ದಿಲ್ಲ. ಹೆಂಡತಿಯ ಕೈಗೊಂ[illegible]ಯಾಗಿ ಕುಣಿಯುವವರು ಹೆಚ್ಚು ಮಂದಿ ಎಂದೆ[illegible] ಹೇಳುತ್ತಿದ್ದರು. ನನ್ನೊಡನೆ ಪಟಗುಟ್ಟಿಬೇ[illegible] ಎಂದೆ, ಕೇಳಲಿಲ್ಲ. ನೀವು ಬಂದ ಮೇಲೆ ನಿಮ್ಮೊ[illegible]

ನೆಯೂ ಹೇಳರಬೇಕು ಎಂದಳು. ಯಾಕೋ ಏನೋ ಈಗಲೂ ರಂಗಣ್ಣ ಮಾತನಾಡಲಿಲ್ಲ. ಅಂಗಡಿಯಲ್ಲಿ ಸಾಮಾನುಗಳನ್ನು ತೂಗುವಾಗ ತೂಕದ ಬೊಟ್ಟು ಹಾಕದಿದ್ದರೆ ತಕ್ಕಡಿ ತೂಗುವದಿಲ್ಲ. ತಾನು ಇವರಿಬ್ಬರ ಮಾತಿಗೆ ಪಿಟ್ಟೆಂದು ನುಡಿಯದಿದ್ದರೆ ಎಲ್ಲ ಸರಿಹೋಗುತ್ತದೆ ಎಂದುಕೊಂಡ ರಂಗಣ್ಣ. ಮೌನವಾಗಿಯೇ ಊಟಮಾಡಿದವನು ಮೇಲೆದ್ದ. ರುಕ್ಕು ಹತ್ತಿರ ಬಂದು ಹೇಳಿದಳು.

"ನಿಮ್ಮನ್ನು ನಿಮ್ಮ ಕಿವಿ ಚುಚ್ಚಿರಬೇಕು. ಎಂದೂ ಇಲ್ಲದ ಮೌನ ಇಂದೇನು" ಎಂದಳು.

ಹೊರಗೆ ಬರುತ್ತಿದ್ದ ಹಾಗೆ ತಾಯಿ ಕೇಳಿದಳು. "ಅದೆಂತ ಮೋಡಿ ಮಾಡ್ತಾಳೋ ನಿನ್ನ ಹೆಂಡ್ತಿ ರುಕ್ಕು, ಸಾಮಾನ್ಯಳಲ್ಲ. ಹೇಗಿದ್ದವನು ಹೇಗಾದೆ. ಒಂದು ಕಾಲಕ್ಕೆ ಹುಲಿಯ ಹಾಗಿದ್ದೆ. ಅವಳು ಬಂದದ್ದೇ ಬಂದದ್ದು. ನೀನು ಇಷ್ಟು ಮೆತ್ತಗಾಗುತ್ತೀಯ ಅಂತ ಅಂದುಕೊಂಡಿರಲಿಲ್ಲ. ಅವಳಿಗೇನು ಹೆದರುವದು ನನ್ನ ಹೆಸರಿನಲ್ಲಿ ಒಂದು ಪವಮಾನ ಹೋಮ ಮಾಡಿಸು" ಎಂದಳು.

"ಅನಾವಶ್ಯಕ ಖರ್ಚು ಪವಮಾನ ಹೋಮ ಎಂದರೆ ಸುಮ್ಮನಾಯಿತೆ? ಪಾತ್ರೆ ಪರಡಿ ದಾನ ಕೊಡಬೇಕು. ಗೋದಾನ, ಭೂದಾನವನ್ನು ಸಹ ಇದ್ದವರು ಕೊಡುವುದುಂಟು. ಅವರಿಗೆ ಬೇರೆ ಕಸುಬಿಲ್ಲ. ಈ ದಾನಧರ್ಮದಿಂದ ಹೊಟ್ಟೆ ತುಂಬುವುದಿಲ್ಲ. ಬೆಳೆಯುವ ಮಕ್ಕಳ ಖರ್ಚು ವೆಚ್ಚ ಹೆಚ್ಚುತ್ತದೆ. ಇದೆಲ್ಲ ಅವರಿಗೆ ಗೊತ್ತಾಗುವದಿಲ್ಲ. ತಾನು ಏನು ಹೇಳಿದರೆ ಅದು ಮಾಡಬೇಕು ನಿಮಗೆ ನಿಮ್ಮ ಅಮ್ಮ ಹೆಚ್ಚು" ನನಗೆ ಅವರು ಆಡುವ ಒಂದೊಂದು ಮಾತು ಹೆಚ್ಚು ಎನಿಸುತ್ತದೆ. ನಿಮ್ಮನ್ನು ಹೆತ್ತಿದ್ದೇನೆ ಎನ್ನುವ ಒಂದೇ ಒಂದು ಕಾರಣಕ್ಕೆ ನನ್ನನ್ನು ತೊತ್ತಿಗಿಂತ ಕಡೆಯಾಗಿ ನಡೆಸಿಕೊಳುತ್ತಾರಲ್ಲ" ಎಂದಳು.

ಅಮ್ಮ ಅವಳ ಪಾಡಿಗೆ ಅವಳು ವಟಗುಟ್ಟುತ್ತಿದ್ದಳು. ಇವರ ಇಬ್ಬರ ನಡುವೆ ತಾನು ತೂಕದ ತಕ್ಕಡಿಯಾಗಿ ನಿಂತಿದ್ದೇನೆ. ಪರವಹಿಸಲು ಹೋದರೆ ಒಂದು ಏರಬಹುದು ಒಂದು ಜಾರಬಹುದು. ಮೌನವಾಗಿರುವುದೇ ವಾಸಿ ಎಂದುಕೊಂಡ ರಂಗಣ್ಣ ಬೀದಿ ಬಾಗಿಲಿಗೆ ಬರುತ್ತಿದ್ದ ಹಾಗೆ.

''ರಂಗಣ್ಣ'' ಎಂದು ಅಮ್ಮ ಕೂಗಿದಳು.

"ಇಲ್ಲಿ ನೋಡಿ" ಎಂದಳು ಹೆಂಡತಿ.

"ಅಂಗಡಿ ಬಾಗಿಲು ತೆರೆಯಬೇಕು. ಆಗಲೇ ಹೊತ್ತಾಗಿದೆ.'' ಹಿಂತಿರುಗಿಯೂ ನೋಡದೆ ರಂಗಣ್ಣ ಬೀದಿಗಿಳಿದವನು ಬಿರಬಿರನೆ ಹೋಗಿಬಿಟ್ಟ. ಅಂಗಡಿ ಬಾಗಿಲು ತೆಗೆಯುತ್ತಿದ್ದಂತೆ ಮನೆಕಡೆ ಯೋಚನೆ ಹೆಚ್ಚಿತು. ಚಿಕ್ಕ ವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡ ತಾಯಿ. ಹೊಟ್ಟೆಬಾಯಿ ಕಟ್ಟಿ ತನ್ನನ್ನು ಬೆಳೆಸಿದ್ದಾಳೆ. ಅವಳ ಆಸೆ ಏನಿದ್ದರೂ ತಾನು ನಡೆಸಿಕೊಡಬೇಕು. ಆದರೆ ಅದನ್ನೆಲ್ಲ ತೃಪ್ತಿಯಿಂದ ನಡೆಸಿಕೊಡಲು ತನ್ನಿಂದ ಸಾಧ್ಯವೇ ? ಯೋಚಿಸಿದ ರುಕ್ಕುವನ್ನು ಕಡೆಗಣಿಸುವ ಹಾಗಿಲ್ಲ. ಅವಳಿಂದಾಗಿಯೂ ತಾನು ಒಂದು ಸ್ಥಿತಿಗೆ ಬಂದು ತಲುಪಿದ್ದೇನೆ. ಅವಳ ಅಣ್ಣನ ಸಹಕಾರವಿಲ್ಲದೆ ಹೋಗಿದ್ದರೆ ಖಂಡಿತ ತಾನು ಅನಂತಮಯ್ಯನಂತೆ ಬಡತನದ ಬಾಳನ್ನು ಅನುಭವಿಸಬೇಕಾಗಿತ್ತು. ರುಕ್ಕು ಅಣ್ಣನನ್ನು ಕಾಡಿಬೇಡಿ ತನಗೊಂದು ಅಂಗಡಿ ಇರಿಸಿಕೊಟ್ಟಿದ್ದಳು. ಈವತ್ತು ಅವಳ ಅಣ್ಣನ ಸಾಲವನ್ನು ತೀರಿಸುವದಕ್ಕೂ ನೆರವಾಗಿದ್ದಾಳೆ. ಹೇಗಾದರೂ ಅತ್ತೆಸೊಸೆಯರ ಮನಸ್ಸನ್ನು ಒಂದುಗೂಡಿಸಬೇಕು. ಅವರಿಬ್ಬರೂ ನಗುನಗುತ್ತ ಬಾಳಿದರೆ ತನಗೂ ಹಿತ. ಯೋಚಿಸುತ್ತಲೆ, ಅವನು ಅಂಗಡಿ ಬಾಗಿಲು ತೆಗೆದ. ಅನಂತಮಯ್ಯನ ಹೆಂಡತಿಗೆ ಸಂಜೆ ಮಕ್ಕಳನ್ನು ಕಳಿಸಿಕೊಡಲು ಹೇಳಿದ್ದು ನೆನಪಿಗೆ ಬಂತು. ಒಂದು ಐವತ್ತು ತೆಂಗಿನ ಕಾಯಿಗಳನ್ನು ತೆಗೆದು ಒಂದೆಡೆ ಇರಿಸಿದ. ಮನೆಯಲ್ಲಿ ಹೇಳಿದ್ದರೆ ಅದಕ್ಕೂ ಹೆಂಡತಿ ತಾಯಿ ಇಬ್ಬರೂ ಸೇರಿ ಏನಾದರೊಂದು ಹಗರಣ ಎಬ್ಬಿಸಿ ತೆಂಗಿನ ಕಾಯನ್ನು ಕೊಡದಂತೆ ಮಾಡಿ ಬಿಡುತ್ತಿದ್ದರು. ಈ ಕಾರಣಕ್ಕಾಗಿಯೇ ರಂಗಣ್ಣ ಮನೆಯಲ್ಲಿ ಅನಂತಮಯ್ಯನಿಗೆ ತೆಂಗಿನಕಾಯಿ ಕೊಡುವ ವಿಷಯವನ್ನು ಹೇಳಿರಲಿಲ್ಲ. ಸಂಜೆ ಎಷ್ಟು ಹೊತ್ತಾದರೂ ವಿಶ್ವನಾಗಲಿ ಕಾಶಿಯಾಗಲಿ ಬರುವುದು ಕಾಣಿಸಲಿಲ್ಲ. ತಾನೇ ಹೋಗಿ ಕೊಟ್ಟು ಬಂದರೆ ಹೇಗೆ ಎನಿಸಿತು. ಅಂಗಡಿಯಲ್ಲಿದ್ದ ಕೆಲಸದ ಆಳಿಗೆ ಹೇಳಿ ಕಾಯಿಗಳನ್ನು ಒಂದು ಚೀಲದಲ್ಲಿ ತುಂಬಿಕೊಂಡು ಅನಂತಮಯ್ಯನ ಮನೆಗೆ ಹೊರಟ ರಂಗಣ್ಣ. ಅನಂತಮಯ್ಯನ ಹೆಂಡತಿ ಕಾವೇರಿ ದಿನಸಿ ಅಂಗಡಿಯಿಂದ ತಂದ ಸಾಮಾನುಗಳನ್ನು ಸ್ವಚ್ಛಗೊಳಿಸುವದರಲ್ಲಿ ತೊಡಗಿದ್ದಳು. ಅವಳ ಹತ್ತಿರದಲ್ಲೇ ಕುಳಿತು ಅವಳ ಅತ್ತೆ ಲಕ್ಷ್ಮಮ್ಮ ಭಾಗವತವನ್ನು ಗಟ್ಟಿಯಾಗಿ ಓದಿಕೊಳ್ಳುತ್ತಿದ್ದರು. ರಂಗಣ್ಣ ತೆಂಗಿನ ಕಾಯಿ ಮೂಟೆಯನ್ನು ಕೆಳಗಿಳಿಸಿದ್ದನ್ನು ನೋಡಿ ಕಾವೇರಿ ಕತ್ತಲಲ್ಲಿ ಯಾರೆಂದು ತಿಳಿಯದೆ ಹೊರಗೆ ಬಂದಳು.

"ಓ ನೀವಾ, ವಿಶ್ವ, ಕಾಶಿ ತಂದೆಯ ಜೊತೆಗೆ ಪೇಟೆಗೆ ಹೋಗಿದ್ದಾರೆ. ಈಗೇನು ಅವಸರವಾಗಿತ್ತು. ನಾಳೆ ಮಕ್ಕಳನ್ನು ಕಳಿಸುತ್ತಿದ್ದೆ" ಎಂದಳು ಕಾವೇರಿ. ಹಿಂದಿನಿಂದ ಬಂದ ಲಕ್ಷ್ಮಮ್ಮ

"ದೇವರು ನಿಮಗೆ ಚೆನ್ನಾಗಿ ಕೊಟ್ಟಿದ್ದಾನೆ ರಂಗಣ್ಣ. ನಿಮ್ಮ ಅಮ್ಮನ ಹೆಸರಿನಲ್ಲಿ ಒಂದು ಪವಮಾನ ಹೋಮ ಮಾಡಿಸಿ ಬಿಡಿ. ಇದ್ದವರಿಗೂ ಹೋದವರಿಗೂ ಇದರಿಂದ ಮುಕ್ತಿ ಉಂಟೆಂದು ಕೇಳಿದ್ದೇನೆ" ಎಂದರು. "ಹೌದು ರಂಗಣ್ಣನವರೇ, ಹಿರಿಯರು ಹೇಳುವುದೆಲ್ಲ ಒಳ್ಳೆಯದಕ್ಕೆ ಎಂದು ಅಂದುಕೊಂಡರಾಯ್ತು. ಇದರಿಂದ ನಷ್ಟವೇನು ಇಲ್ಲವಷ್ಟೆ" ಎಂದಳು ಕಾವೇರಿ. "ನೀವೆನ್ನುವ ಮಾತು ನಿಜ" ಎಂದರೂ, ಒಬ್ಬರಿಗೊಬ್ಬರಿಗೆ ಸರಿಯಿಲ್ಲದ ತಮ್ಮ ಮನೆಯಲ್ಲಿ ಇಂತಹದ್ದೊಂದು ಸಮಾರಂಭ ತೃಪ್ತಿಯಾಗಿ ನಡೆಯಬಹುದೆ? ಖಂಡಿತ ಸಾಧ್ಯವಿಲ್ಲ ಎನಿಸಿ ಮನಸ್ಸಿಗೆ ಪಿಚ್ಚೆನಿಸಿತು ರಂಗಣ್ಣನಿಗೆ. ಕಾಯಿಗಳನ್ನು ಅನಂತಮಯ್ಯನ ಮನೆಗೆ ತಲುಪಿಸಿ ಬಂದ ರಂಗಣ್ಣನಿಗೆ ತನ್ನ ಮನೆಯಲ್ಲಿ ದಿನದ ಆದರದ ಸ್ವಾಗತ ಹೆಂಡತಿಯಿಂದಾಗಲಿ ತಾಯಿಯಿಂದಾಗಲಿ ದೊರಕಲಿಲ್ಲ. ಸ್ನೇಹಿತನ ಮನೆಯಲ್ಲಿ ನಡೆಯುವ ಪವಮಾನ ಹೋಮ ತಾಯಿಯ ಮನಸ್ಸನ್ನು ಕಲಕಿಸಿದರೆ, ಹೆಂಡತಿಗೆ ತಾಯಿಯ ಮಾತನ್ನು ಕೇಳಿ ಎಲ್ಲಿ ಈ ಬಹುದೊಡ್ಡ ಖರ್ಚಿಗೆ ಗಂಡ ಸಮ್ಮತಿಸುವನೋ ಎಂಬ ಹೆದರಿಕೆಯಿಂದಾಗಿ ಯಾರೊಬ್ಬರೂ ರಂಗಣ್ಣನನ್ನು ಆದರದಿಂದ ಸ್ವಾಗತಿಸದಾದರೂ, ಅನಂತಯ್ಯನ ಪವಮಾನ ಹೋಮಕ್ಕೆ ರುಕ್ಕುವಾಗಲಿ ತಾಯಿಯಾಗಲಿ ಬರಲಿಲ್ಲ. ರಂಗಣ್ಣನೊಬ್ಬನೆ ಜೋಲು ಮೋರೆ ಹಾಕಿಕೊಂಡು ಬಂದುದನ್ನು ನೋಡಿ ಕಾವೇರಿ ಹತ್ತಿರ ಬಂದು ಕೇಳಿದಳು.

"ಏನು ರಂಗಣ್ಣನವರು ರುಕ್ಕು, ಬರಲಿಲ್ಲವೆ?"

"ಇಲ್ಲ" ಎಂದ ರಂಗಣ್ಣ. ಹೆಚ್ಚು ಪ್ರಶ್ನಿಸುವ ಗೋಜಿಗೆ ಕಾವೇರಿ ಹೋಗಲಿಲ್ಲ. ಹೊರಗೆ ಕೂತಿರಬಹುದು ಎಂದು ಕೊಂಡಿರಬಹುದೇನೋ ಎಂದುಕೊಂಡು ತಾನು ಹೆಚ್ಚಿಗೆ ಹೇಳಲು ಹೋಗದೆ ಸುಮ್ಮನೆ ಕುಳಿತುಕೊಂಡ. ಪೂಜೆಗೆ ಕುಳಿತ್ತಿದ್ದ ಲಕ್ಷ್ಮಮ್ಮ ರಂಗಣ್ಣನನ್ನು ನೋಡಿ ಎದ್ದು ಬಂದು ಕೇಳಿದರು.

"ರಾಮಕ್ಕ ಏಕೆ ಬರಲಿಲ್ಲ"

"ರುಕ್ಕು ಬರಲಿಲ್ಲ, ಅಮ್ಮನು ಹೊರಡಲಿಲ್ಲ" ಎಂದ ರಂಗಣ್ಣ.

"ತನ್ನ ಹೆಸರಿನಲ್ಲಿ ಪವಮಾನ ಹೋಮ ಮಾಡಿಸಲಿಲ್ಲ ಎಂಬ ಸಿಟ್ಟು ಇರಬಹುದು"

"ನಿಮ್ಮೊಂದಿಗೆ ಹಾಗಂದಳೇ ಅಮ್ಮ"

"ಕಳೆದವಾರವೆಲ್ಲ ಇದೇ ಮಾತು ಆಡುತ್ತಿದ್ದರು. ಅವರ ಮನಸ್ಸಿನ ತುಂಬ ಇದೇ ವಿಷಯ ತುಂಬಿ ಹೋಗಿದೆ. ರುಕ್ಕು ಏನಾದರು ಹೇಳಲಿ, ನಿನ್ನ ಪಾಡಿಗೆ ನಿನ್ನ ಕರ್ಮ ಮಾಡು, ನನ್ನ ಸೊಸೆ ಇದ್ದಾಳೆ ನೋಡು ಎಲ್ಲರಂತೆ ಅಲ್ಲವೇ ಅಲ್ಲ. ಇಂಥ ವಿಷಯಕ್ಕೆಲ್ಲ ಅವಳು ತಲೆ ಹಾಕುವುದೇ ಇಲ್ಲ" ಎಂದರು.

ಸ್ವಲ್ಪ ಹೊತ್ತಿನಲ್ಲಿ ಅನಂತಮಯ್ಯ ಬಂದು ಪ್ರಸ್ತಾಪಿಸಿದ. ಎಲ್ಲರಿಗೂ ಒಂದೇ ಬಗೆಯ ಉತ್ತರಕೊಟ್ಟು ರಂಗಣ್ಣನಿಗೆ ಸಾಕು ಬೇಕೆನಿಸಿತು. ಊಟವಾದ ಮೇಲೆ ಎಲ್ಲರೂ ಹೋಗುವುದನ್ನೇ ಕಾಯುತ್ತಿದ್ದ ರಂಗಣ್ಣ ಅನಂತಮಯ್ಯನ ಹತ್ತಿರ ಸ್ವಲ್ಪ ಮಾತನಾಡುವುದಿದೆ ಎಂದು ಕರೆದುಕೊಂಡು ಹೊರಗೆ ಬಂದ. ಇಬ್ಬರೂ ದಾರಿಗುಂಟ ಮಾತನಾಡುತ್ತ ಸಾಗುತ್ತಿದ್ದಂತೆ ಮುಖ್ಯ ವಿಷಯಕ್ಕೆ ಬಂದ ರಂಗಣ್ಣ.

"ನಿಮ್ಮ ಮನೆಯಲ್ಲಿ ಹಿಂದೆ ಅತ್ತೆ ಸೊಸೆಯರಿಗೆ ಅಂತಹ ವಿಶ್ವಾಸವಿದ್ದಂತೆ ಕಂಡಿರಲಿಲ್ಲ. ಈಗ ನೋಡಿದರೆ ಪೂರ್ತಿ ಬದಲಾಗಿರುವಂತೆ ಕಾಣುತ್ತದೆ. ಅದು ಹೇಗೆ" ಎಂದನು. ಸ್ವಲ್ಪ ತಡೆದು.

''ಇದಕ್ಕೇನು ಮದ್ದು ಮಾಡಿದೆ ಎಂಬದನ್ನು ನನಗೆ ಸ್ವಲ್ಪ ಹೇಳಿಕೊಡು'' ಎಂದ.

''ಹೆಂಗಸರ ಸ್ವಭಾವವೇ ಅಷ್ಟು, ನನ್ನ ಹೆಂಡತಿಯಾಗಲಿ, ನಿನ್ನ ಹೆಂಡತಿಯಾಗಲಿ ಅಥವಾ ನನ್ನ ತಾಯಿಯಾಗಲಿ ನಿನ್ನ ತಾಯಿಯಾಗಲಿ ಬೇರೆಯಲ್ಲ. ಹೆಂಗಸರು ಹೆಂಗಸರು ಮಾತನಾಡುತ್ತಾರೆ. ತೂಕ ತಪ್ಪದಂತೆ ಎಚ್ಚರವಹಿಸ ಬೇಕಾದವರು ಅವರಲ್ಲ ನಾವು. ನಿನಗೆ ಗೊತ್ತು ತೂಕ ಹಾಕುವವನಿಗೆ ಅಳತೆ ತಪ್ಪಿದರೆ ತೂಕ ಹೆಚ್ಚು ಕಡಿಮೆಯಾಗುತ್ತದೆ. ಅಳತೆ ತಪ್ಪಿ ಒಬ್ಬರಿಗೆ ಹೆಚ್ಚು ಸಾಮಾನು ದೊರಕಿತೂ ಅವರಿಗೆ ಸಂತೋಷ. ನಿನಗೆ ದುಃಖ. ಕಮ್ಮಿ ಹೋಯಿತೆ, ಅವರಿಂದ ನಿನಗೆ ಬೈಗಳ ತಪ್ಪಿದ್ದಲ್ಲ. ಆದ್ದರಿಂದ ಮನಸ್ಸನ್ನು ಸ್ಥಿಮಿತದಲ್ಲಿಟ್ಟುಕೊಂಡು ತೂಕ ಹಾಕುವಾಗ, ಎಚ್ಚರವಹಿಸುತ್ತಿಯ ಅಲ್ವ. ಹಾಗೇ ಸಂಸಾರ ಎಂದಿಟ್ಟುಕೊ. ತೂಕವಾಗಿರಬೇಕು. ನನ್ನ ಹೆಂಡತಿಗೆ ಹೇಳಿದೆ. ಅಮ್ಮ ನಿನ್ನನ್ನು ಬಹಳವಾಗಿ ಮೆಚ್ಚುತ್ತಾಳೆ. ನಿನ್ನ ಮುಂದಲ್ಲ ನಿನ್ನ ಹಿಂದಿನಿಂದ ಎಂದೆ ಇದೇ ಮಾತನ್ನು ಅಮ್ಮನಿಗೂ ಹೇಳಿದೆ, ನೋಡಮ್ಮ ನೀನು ಅವಳ ಬಗ್ಗೆ ತಳೆದಿರೋ ಭಾವನೇನೇ ಬೇರೆ, ರುಕ್ಕುಗೆ ನಿನ್ನ ಬಗ್ಗೆ ಇರುವ ಅಭಿಮಾನ ಕಂಡರೆ ನೀನೇನಂತಿಯೋ, ಅದೆಲ್ಲ ಒಬ್ಬರ ಮುಂದೆ ತೋರ್ಪಡಿಸುವುದಲ್ಲ ಎನ್ನುತ್ತಾಳೆ. ಬೇಕಾದರೆ. ಅವಳ ಗೆಳತಿಯರನ್ನೇ ಕೇಳು. ನಿನ್ನ ಬಗ್ಗೆ ಅವಳ ಎರಡು ಮಾತನಾಡಿದ್ದರೆ ಹೇಳು ಎಂದೆ. ಪರಸ್ಪರ ಇಬ್ಬರಲ್ಲೂ ವಿಶ್ವಾಸ ಪ್ರೀತಿ ಹುಟ್ಟುವಂತೆ ಮಾಡಿದವನು ನಾನು. ಇಬ್ಬರ ದೋಷವನ್ನು ನಯವಾಗಿ ತಿದ್ದಿದೆ. ಈ ಪ್ರಯೋಗವನ್ನು ನೀನು ಬೇಕಾದರೆ ಮಾಡಿ ನೋಡು, ತೂಕ ಹಾಕುವಾಗ ಹೇಗೆ ಎಚ್ಚರ ವಹಿಸುತ್ತಿಯೋ ಹಾಗೆ. ಸೂಕ್ಷ್ಮವಾಗಿರು ವಿಷಯ ಗೌಪ್ಯ ಅಷ್ಟೆ'' ಎಂದ.

ತೂಕದ ಬೊಟ್ಟು ಕೈಗೆತ್ತಿಕೊಂಡ ರಂಗಣ್ಣ ಮನೆಯಲ್ಲಿ ಆಗುತ್ತಿರುವ ಬದಲಾವಣೆಯನ್ನು ಕಂಡು ಹರ್ಷಿಸಿದ. ಇದ್ದಕ್ಕಿದ್ದಂತೆ ರುಕ್ಕು ಹೇಳಿದಳು.

"ಅತ್ತೆಮ್ಮನ ಹೆಸರಿನಲ್ಲಿ ಒಂದು ಪವಮಾನ ಹೋಮ ಮಾಡಿಸಿಬಿಡಿ. ಅವರ ಅಹೋರಾತ್ರಿಯ ಹಂಬಲ ಈಡೇರಿದರೆ ನನಗೂ ಸಂತೋಷವೇ ಎಂದಳು. ಮಾತಿಗೂ ಒಂದು ತೂಕ ಇರಬೇಕು. ಇಲ್ಲದಿದ್ದರೆ ಚೆನ್ನಲ್ಲ. ನಾನು ಅವರಿಗೆ ಹೇಳಿಯಾಗಿದೆ" ಎಂದಳು. ತಾನೇ ನಿಂತು ವಿಜೃಂಭಣೆಯಿಂದ ನಡೆಸಿಕೊಡುವುದಾಗಿ ಹೇಳಿದಳು. ರಂಗಣ್ಣ ಅನಂತಮಯನಿಗೆ ಹೇಳಿ ಬರಲು ಓಡಿದ. ಹಿಂದಿನಿಂದ ಅಮ್ಮ ಕೂಗಿದಳು.

"ರಂಗಣ್ಣ"

"ಏನು'' ಎಂದು ಹಿಂತಿರುಗಿದ.

''ತಕ್ಕಡಿಯವನು ಬಂದಿದ್ದಾನೆ. ಅಂಗಡಿಯ ತಕ್ಕಡಿಯ ಸರಪಳಿ ಮುರಿದಿದೆ ಎಂದಿದ್ದೆಯಲ್ಲ" ಎಂದಳು. ಹಿಂತಿರುಗಿ ಬಂದು ಮೊದಲು ಆ ತೂಕ ಹಾಕುವ ಸಾಧನವನ್ನು ತೆಗೆದುಕೊಂಡ ರಂಗಣ್ಣ.



# ಮೌಖ ಮತ್ಸರ

ಅನಂತ ಕಲ್ಲೋಳ

ನಮ್ಮ ಕಾರ್ಯಾಲಯದಲ್ಲಿಯ ರಾಷ್ಟ್ರಭಾಷಾ ಅಭಿವೃದ್ಧಿ ಸಮಿತಿಯವರು ನೌಕರದಾರರಿಗಾಗಿ ಹಿಂದಿ ಶಿಕ್ಷಣವರ್ಗಗಳನ್ನು ನಡೆಸಿದ್ದರು. ಈ ಶಿಕ್ಷಣವರ್ಗಗಳನ್ನು ಹಿಂದಿಯಲ್ಲಿ 'ಶಿಕ್ಷಾವರ್ಗ' ಎಂದೆನ್ನುತ್ತಿದ್ದರು. ನಮ್ಮ ಕಾರ್ಯಾಲಯದ ನೌಕರರು ಈ 'ಶಿಕ್ಷಾ' ವರ್ಗದ ಫಲಾನುಭವಿಗಳು ! ಈ ಹಿಂದೀ 'ಶಿಕ್ಷೆ'ಯನ್ನು ನೀಡಲು ಏಕಮಾತ್ರ ಶಿಕ್ಷಕರಿರುವದರಿಂದ ಮೌಖಿಕ್ ಪರೀಕ್ಷೆ ಸಂದರ್ಭದಲ್ಲಿ ಒಂದಿಬ್ಬರು ಅಧಿಕಾರಿಗಳನ್ನು 'ಮೌಖಿಕ್ ಪರೀಕ್ಷಾ ಮಂಡಳಿ'ಯ ಸದಸ್ಯರನ್ನಾಗಿ ನೇಮಿಸುತ್ತಾರಂತೆ. ಹಿಂದಿ ಮೌಖಿಕ್ ಪರೀಕ್ಷಾ ಮಂಡಳಿಯಲ್ಲಿ ನನ್ನನ್ನು ಓರ್ವ ಸದಸ್ಯನಾಗಿ ನೇಮಿಸಿದ್ದಾರೆ ಎಂಬ ಆಜ್ಞೆ ನನ್ನ ಕೈ ಸೇರಿದಾಗ ನಾನು ಗೊಂದಲದಲ್ಲಿ ಬಿದ್ದೆ.

'ಮೌಖಿಕ್ ಪರೀಕ್ಷೆ' ಎಂದರೇನು ಎಂಬುದೇ ಮೊದಲು ನನಗೆ ಹೊಳೆಯಲಿಲ್ಲ. ನಿಯಮಿತ ಕಾಲಾವಧಿಯಲ್ಲಿ ನಡೆಯುವ ಮಾಸಿಕ ಪರೀಕ್ಷೆ, ಷಾಣ್ಮಾಸಿಕ ಪರೀಕ್ಷೆ ಅಥವಾ ವಾರ್ಷಿಕ ಪರೀಕ್ಷೆ ನನಗೆ ಗೊತ್ತು. ಆದರೆ ಇದು ಮೌಖಿಕ್ ಪರೀಕ್ಷೆಯಂತೆ ! ಈ ಪರೀಕ್ಷೆಯ ಏನು ಏಂತುಗಳನ್ನೇ ಅರಿಯದ ನಾನು ಪರೀಕ್ಷಕ ಮಂಡಳಿಯ ಸದಸ್ಯನಾದುದು ವಿರೋಧಾಭಾಸದ ವಿಷಯವಾಗಿತ್ತು. ನನ್ನಿಂದ ಏನಾದರೂ ಆಭಾಸ ಆದೀತು ಎಂಬ ಭಯ ಶಂಕೆಗೆ ಕಾರಣವೂ ಆಗಿತ್ತು. ಆದರೆ ನಮ್ಮ ಹಿಂದೀವರ್ಗದ ಶಿಕ್ಷಕರು ಯೋಗ್ಯತೆ ಮತ್ತು ಅಧಿಕಾರ ಇವುಗಳಿಗೆ ಬಿಲ್‌ಕುಲ್ ಸಂಬಂಧವಿಲ್ಲ ಎಂದು ಮನಗಾಣಿಸಿದ ಮೇಲೆ ನಾನು ಸ್ವಲ್ಪ ಭರವಸೆ ತಾಳಿದೆ.

'ಮೌಖಿಕ್ ಪರೀಕ್ಷೆ' ಎಂದರೇನು ಎಂದು ಯಾರನ್ನಾದರೂ ಕಾರ್ಯಾಲಯದಲ್ಲಿ ಕೇಳೋಣ

**ಕೇಂದ್ರ ಸರಕಾರದ ಕಚೇರಿಗಳಲ್ಲಿ ನೌಕರರು ಹಿಂದಿಯನ್ನು ಕಡ್ಡಾಯವಾಗಿ ಕಲಿಯಲೇಬೇಕೆಂಬುದು ಸರಕಾರದ ಆದೇಶ. ಇದರಿಂದಾಗಿ ಎಂತೆಂಥ ಮೋಜುಗಳಾಗುತ್ತವೆ ! ಏನು ಕಥೆ ?**

ಎಂದರೆ ನನ್ನ ಆತ್ಮಪ್ರತಿಷ್ಠೆ ಅಡ್ಡ ಬರುತ್ತಿತ್ತು. ಈ ಆತ್ಮಪ್ರತಿಷ್ಠೆಯೊಂದು ಬಂಗಾರದ ಸಂಕೋಲೆಯೇ ಸೈ ! ಆಭರಣದಂತೆ ಅಪ್ಯಾಯಮಾನವಾಗಿ ಕಂಡರೂ ಅದು ತನ್ನ ಪರಿಮಿತಿಯನ್ನು ದಾಟಿ ವಿಷಯ ಏನು ಎಂಬುದನ್ನು ತಿಳಿಯ ಬಯಸುವ ನಮ್ಮ ಮನದ ಬಯಕೆಯನ್ನು ಕಟ್ಟಿಹಾಕುತ್ತದೆ. ಹೀಗಾಗಿ ಸಾಯಂಕಾಲ ಮನೆಗೆ ಮರಳುವ ವರೆಗೆ 'ಮೌಖಿಕ್' ಪದದ ಅಗಮ್ಯತೆಯ ಹುಳು ನನ್ನ ತಲೆಯನ್ನು ಕೊರೆಯುತ್ತಲೇ ಇತ್ತು.

ಮನೆಗೆ ಮರಳಿದ ಮೇಲೆ ಹೆಂಡತಿಯನ್ನು ಕೇಳಿದೆ. ಅವಳು ಹಿಂದಿಯಲ್ಲಿ ಅದಾವುದೋ 'ಪಂಡಿತ್' ಎಂಬ ಪರೀಕ್ಷೆ ಇದೆಯಲ್ಲ; ಆ ಕೋರ್ಸಿನ ಅರ್ಧಭಾಗ ಮುಗಿಸಿ 'ಅರ್ಧ ಪಂಡಿತ್'ಳಾಗಿದ್ದಾಳೆ. ನನ್ನ ಶಂಕೆಯನ್ನು ಅವಳಿಗೆ ನಿವೇದಿಸುತ್ತಲೆ ಅವಳು ಸರಾಗವಾಗಿ ಸಾರಿದಳು.

"ಅಯ್ಯ ಸುಡ್ಲಿ, ಇಷ್ಟ ಗೊತ್ತಿಲ್ಲೇನ್ ನಿಮಗ ? ಮೌಖಿಕ್ ಪರೀಕ್ಷಾ ಅಂದ್ರ ಬಾಯ್ಮಾತಿನ ಪರೀಕ್ಷಾ. **Viva voce test** ಊ..." ಅಂತ ಬಾಯಿಬಿಟ್ಟಳು.

ಅಂತೂ ಒಮ್ಮೆ ನನ್ನನ್ನು ಕಾಡುತ್ತಿದ್ದ ಚಿದಂಬರ ರಹಸ್ಯ ಬಯಲಾಗಿ ನನ್ನ ಕೈ ಸೇರಿದ ಆಜ್ಞೆಯ ಅರ್ಥ ನಿಚ್ಚಳವಾಯ್ತು. ಅದೇನೆಂದರೆ ನಾನು ಮತ್ತು ಇನ್ನಿಬ್ಬರು ಸೇರಿ ನಮ್ಮ ಕಾರ್ಯಾಲಯದ ನೌಕರ-ವಿದ್ಯಾರ್ಥಿಗಳ ಹಿಂದೀ **Viva voce test conduct** ಮಾಡಬೇಕಾಗಿದೆ ಎಂಬುದು.

ನನ್ನೊಡನೆ ನೇಮಿಸಲ್ಪಟ್ಟಿದ್ದ ಇನ್ನಿಬ್ಬರು ಪರೀಕ್ಷಕರು ಯಾರೆಂದರೆ ನನ್ನ ಮೇಲಾಧಿಕಾರಿ ಶ್ರೀ ಸಂತಾನ ಗೋಪಾಲ ಅಯ್ಯಂಗಾರರು ಮತ್ತು ನಮ್ಮ ಹಿಂದೀ ಶಿಕ್ಷಣ ಕೇಂದ್ರದ ಅಧ್ಯಾಪಿಕೆ ಕುಮಾರಿ ಶ್ಯಾಮಲಾದೇವಿ ಸಾ. ವ್ಯ

ಯವರು! (ಸಾ.ವಿ. ಎಂದರೆ ಸಾಹಿತ್ಯವಿಶಾರದ ಎಂಬುದು ನನಗೆ ತಿಳಿದಾಗಿತ್ತು!) ಶ್ರೀ ಸಂತಾನ ಗೋಪಾಲ ಅಯ್ಯಂಗಾರ್ಯರು ತಮ್ಮ ಹಿರಿ ಹುದ್ದೆಯ ಬಲದಿಂದ ಪರೀಕ್ಷಕ ಮಂಡಳಿಯ ಅಧ್ಯಕ್ಷರು. ಅವರಿಗೆ ಅವರ ಅರವಾ ಭಾಷೆಯನ್ನು ಉಳಿದು ಬರುತ್ತಿದ್ದ ಏಕಮಾತ್ರ ಅನ್ಯ ಭಾಷೆ ಎಂದರೆ ಇಂಗ್ಲೀಷ ಮಾತ್ರ! ಅವರಿಗಿಂತ ನಾನು ಕೊಂಚ ಮೇಲು. ಏಕೆಂದರೆ ಆಗಾಗ ಹಿಂದೀ ಸಿನೇಮಾಗಳನ್ನು ನೋಡುತ್ತ ಇದ್ದುದರಿಂದ ಮತ್ತು ಪೋರ್ಟರ್ ಹಾಗು ಜಟಕಾ ಸಾಬಿಗಳ ಜತೆ ಚರ್ಚೆ ಮಾಡುವ ಪ್ರಸಂಗಗಳು ನನ್ನ ಮೇಲೆ ಆಗಾಗ ಬರುತ್ತಿದ್ದುದರಿಂದ ಹಿಂದೀ ಭಾಷೆ ನನಗೆ ತೀರ ಅಪರಿಚಿತವೇನಲ್ಲ. ಕುಮಾರಿ ಶ್ಯಾಮಲಾದೇವಿಯುವರು ಸಾಹಿತ್ಯ ವಿಶಾರದರಾಗಿದ್ದರು. ಅಂದಮೇಲೆ "ಮೌಖಿಕ್" ಪರೀಕ್ಷೆಯನ್ನು ನಡೆಸುವುದರಲ್ಲಿ ಅವರದೇ ಮುಖ್ಯ ಪಾತ್ರ ಎಂದು ಬೇರೆ ಹೇಳಬೇಕಾಗಿಲ್ಲವಲ್ಲ!

ಸಂತಾನ ಗೋಪಾಲ ಅಯ್ಯಂಗಾರರು ತಮ್ಮ ಚೇಂಬರ್‌ವನ್ನು ಪರೀಕ್ಷಾ ಸ್ಥಾನವಾಗಿ ಮಾರ್ಪಡಿಸಿದರು. ಸಂತಾನ ಗೋಪಾಲ ಅಯ್ಯಂಗಾರರ ಎಡಬದಿಯಲ್ಲಿ ನಾನು ಮಂಡಿಸಿದೆ. ಅವರ ಬಲ ಪಾರ್ಶ್ವವನ್ನು ಶ್ಯಾಮಲಾದೇವಿಯುವರು ಅಲಂಕರಿಸಿದರು. ಅಯ್ಯಂಗಾರ ಸಾಹೇಬರು ನೌಕರ-ವಿದ್ಯಾರ್ಥಿಗಳಿಗೆ ಪ್ರಶ್ನೆ ಕೇಳುವ ಕೆಲಸವನ್ನು ಕುಮಾರಿ ಶ್ಯಾಮಲಾದೇವಿಯುವರಿಗೆ ಒಪ್ಪಿಸಿದರು. ಇಂಗ್ಲೀಷಿನಲ್ಲಿ ನಾನು ಯಾವುದಾದರೊಂದು ವಾಕ್ಯವನ್ನು ಹೇಳಿ ಅದನ್ನು ವಿದ್ಯಾರ್ಥಿಗಳಿಗೆ ಹಿಂದಿಯಲ್ಲಿ ಭಾಷಾಂತರಿಸುವಂತೆ ಆದೇಶ ನೀಡುವುದು ನನ್ನ ಕಾರ್ಯಭಾಗವಾಗಿತ್ತು. ಈ ಪ್ರಶ್ನೋತ್ತರ ಕಾಲದಲ್ಲಿ ನೌಕರ ವಿದ್ಯಾರ್ಥಿಯು ನೀಡುವ ಉತ್ತರ, ತೋರುವ ಆತ್ಮವಿಶ್ವಾಸ ಹಾಗು ಸಮಯ ಪ್ರಜ್ಞೆ ಇವುಗಳನ್ನು ಒಟ್ಟಾರೆ ಗಮನಿಸಿ ನಮಗೆ ಸರಿ ಕಂಡಂತೆ ನಾವು ಪ್ರತ್ಯೇಕವಾಗಿ ಗುಣಾಂಕಗಳನ್ನು ಬರೆದು ಅಯ್ಯಂಗಾರ ಸಾಹೇಬರಿಗೆ ತೋರಿಸುವುದು ಮತ್ತು ಇವುಗಳ ಆಧಾರದ ಮೇಲೆ ಅವರು ಕೊನೆಯ ನಿರ್ಣಯ ಕೈಗೊಂಡು ವಿದ್ಯಾರ್ಥಿಯ ಹೆಸರಿನ ಮುಂದೆ ಅದನ್ನು ನಮೂದಿಸುವುದು ಎಂದು ಪರೀಕ್ಷಾ ವಿಧಾನವನ್ನು ಅಯ್ಯಂಗಾರ ಸಾಹೇಬರು ಗೊತ್ತುಪಡಿಸಿದರು.

ಅವರಿಂದ ಸೂಚನೆ ಪಡೆದಾದ ಮೇಲೆ ನಾನು ಕೈಗಡಿಯಾರ ನೋಡಿಕೊಂಡು ಸಾಹೇಬರಿಗೆ ಕೇಳಿದೆ,

"ನೌಕರ ವಿದ್ಯಾರ್ಥಿಗಳ ಲಿಸ್ಟಿನಂತೆ ಸರತಿಯ ಪ್ರಕಾರ ಒಬ್ಬೊಬ್ಬರನ್ನಾಗಿ ಕರೆಸಿ ಪರೀಕ್ಷೆ ಪ್ರಾರಂಭಿಸೋಣವೇ?"

ಸಾಹೇಬರು ತಮ್ಮ ಕೈಗಡಿಯಾರ ನೋಡಿಕೊಂಡು,

"ಆವಾ ಆವಾ, ಸ್ಟಾರ್ಟ್ ದಿ ವರ್ಕ್" ಎಂದು ಅಪ್ಪಣೆ ಕೊಡಿಸಿದರು ಮತ್ತು ಮೂಗಿಗೆ ಒಂದು 'ದಂ' ನಸ್ಯ ಏರಿಸಿಕೊಂಡರು.

ಪರೀಕ್ಷೆ ಪ್ರಾರಂಭವಾಯಿತು. ನೌಕರ ವಿದ್ಯಾರ್ಥಿಗಳ ಲಿಸ್ಟಿನಲ್ಲಿಯ ಹೆಸರುಗಳು ಸರತಿಯ ಪ್ರಕಾರ ಕೂಗಲ್ಪಡುತ್ತಿದ್ದವು. ವಿದ್ಯಾರ್ಥಿಗಳು ಬರುತ್ತಿದ್ದರು. ಶ್ಯಾಮಲಾದೇವಿ ಪ್ರಶ್ನೆಗಳನ್ನು ಕೇಳುತ್ತಿದ್ದರು. ನಾನೂ ನಡುನಡುವೆ ಪ್ರಶ್ನೆ ಹಾಕುತ್ತಿದ್ದೆ. ನೌಕರವಿದ್ಯಾರ್ಥಿಗಳು ತಮಗೆ ಸರಿಕಂಡಂತೆ ಉತ್ತರ ಹೇಳುತ್ತಿದ್ದರು. ಹೀಗೆ ಪ್ರಶ್ನೋತ್ತರ ನಡೆದಾಗ ಶ್ರೀ ಸಂತಾನ ಗೋಪಾಲ ಅಯ್ಯಂಗಾರರು ಮೂಗಿನಲ್ಲಿ ನಸ್ಯ ತುರುಕುತ್ತಲೋ ಅಥವಾ ಕಿವಿಯಲ್ಲಿ ಕಡ್ಡಿಯನ್ನಾಡಿಸುತ್ತಲೋ ನಿರಾಳವಾಗಿ ಕುಳಿತಿರುತ್ತಿದ್ದರು. ಪ್ರಶ್ನೋತ್ತರಗಳು ಮುಗಿದ ಮೇಲೆ ವಿದ್ಯಾರ್ಥಿಯು ಚೇಂಬರಿನಿಂದ ಹೊರಬೀಳುತ್ತಲೆ ನಾನು ಮತ್ತು ಕು. ಶ್ಯಾಮಲಾದೇವಿ ಪ್ರತ್ಯೇಕವಾಗಿ, ಆಯಾ ವಿದ್ಯಾರ್ಥಿಗೆ ಎಷ್ಟು ಗುಣಾಂಕ ಕೊಡಬಹುದು ಎಂಬುದನ್ನು ಬರೆದು ಅಯ್ಯಂಗಾರ ಸಾಹೇಬರಿಗೆ ತೋರಿಸುತ್ತಿದ್ದೆವು. ಅವರು ನಾವು ತೋರಿಸಿದ ಅಂಕಗಳನ್ನು ನೋಡಿ ಬಾಯಿಂದ ಪುಟು ಪುಟು ಎಂದು ಏನೋ ಲೆಕ್ಕ ಮಾಡಿ ವಿದ್ಯಾರ್ಥಿಯ ಹೆಸರಿನ ಮುಂದೆ ತಮ್ಮ ಕೊನೆಯ ನಿರ್ಣಯವನ್ನು ಬರೆಯುತ್ತಿದ್ದರು. ಅವರು ಬಾಯಿಂದ ಏನೆಂದು ಪುಟುಪುಟಿಸುತ್ತಾರೆ ಮತ್ತು ಹೇಗೆ ಕೊನೆಯ ನಿರ್ಣಯವನ್ನು ಕೈಗೊಳ್ಳುತ್ತಾರೆ ಎಂಬುದನ್ನು ಕಂಡುಹಿಡಿಯಬೇಕೆಂದು ಕುತೂಹಲದಿಂದ ನಾನು ನನ್ನ ಖುರ್ಚಿಯನ್ನು ಅವರ ಖುರ್ಚಿಯ ಸಮೀಪಕ್ಕೆ ಸರಿಸಿ ಕುಳಿತು ನೋಡಿದೆ. ನಾನು ಮತ್ತು ಕು. ಶ್ಯಾಮಲಾದೇವಿಯುವರು ತೋರಿಸಿದ ಅಂಕಗಳನ್ನು ಅವರು ಕೂಡಿಸಿ ಬಂದ ಮೊತ್ತವನ್ನು ಎರಡರಿಂದ ಭಾಗಿಸಿ ಬಂದ ಸರಾಸರಿಯನ್ನು ಆಯಾ ವಿದ್ಯಾರ್ಥಿಯ ಹೆಸರಿನ ಮುಂದೆ ನಮೂದಿಸುತ್ತಿದ್ದರು. ಇಷ್ಟು ಮಾಡಿದ ಮೇಲೆ, ಮುಂದಿನ ವಿದ್ಯಾರ್ಥಿ ಬಂದು ಹೋಗುವ ವರೆಗೆ ಅವರಿಗೆ ನಸ್ಯಸೇವನೆಗೆ ಮತ್ತು ಕರ್ಣಶುದ್ಧೀಕರಣಕ್ಕೆ ಕಾಲಾವಕಾಶ ದೊರಕುತ್ತಿತ್ತು.



ಹೀಗೆ ಸಾಗಿತ್ತು ನಮ್ಮ ಮೌಖಿಕ್ ಪರೀಕ್ಷೆ! ಸರತಿಯ ಪ್ರಕಾರ ಶ್ರೀ ಶೆಣಾಯ್ ಚೇಂಬರಿನೊಳಗೆ ಬಂದ. ಅವನ ಪ್ರವೇಶವಾಗುತ್ತಿದ್ದಂತೆ ಕು. ಶ್ಯಾಮಲಾದೇವಿ ತಮ್ಮ ಕೇಶಕಲಾಪದ ಮೇಲೆ ಕೈಸವರಿಕೊಂಡು ಕೇಶಭೂಷಣ ಯಥಾಸ್ಥಿತಿಯಲ್ಲಿದ್ದ ಬಗ್ಗೆ ಖಾತ್ರಿ ಮಾಡಿಕೊಂಡರು. ಶೆಣಾಯ್‌ನನ್ನು ನೋಡುತ್ತಲೇ ಅವರ ಕಣ್ಣುಗಳಲ್ಲಿ ಹೊಸ ಹೊಳಪೊಂದು ಮಿಂಚಿ ಮಾಯವಾಯ್ತು. ಶೆಣಾಯ್ ಬರುತ್ತಿದ್ದಂತೇ ಕುಮಾರಿ ಶ್ಯಾಮಲಾದೇವಿಯುವರು ನಡೆಸಿದ ಚಲನವಲನಗಳನ್ನು ನೋಡಿ ನನಗೆ ಮೋಜೆನಿಸಿತು. ಶೆಣಾಯ್ ಗೌರಕಾಯದ ನವಯುವಕ. ನಮ್ಮ ಆಫೀಸಿನಲ್ಲಿ ಹೊಸದಾಗಿ ನೌಕರಿಗೆ ಸೇರಿದ್ದಾನೆ. ಟೈಟ್ ಪ್ಯಾಂಟ್ ರಂಗುರಂಗಿನ ಬುಶ್‌ಶರ್ಟು, ಹಣೆಯ ಮೇಲೆ ಲಾಸ್ಯವಾಡುತ್ತಿದ್ದ ದಿಲೀಪಕುಮಾರ್ ಸ್ಟೈಲಿನ ರಿಂಗುಲೆಟ್ಟು ಮತ್ತು ಕಣ್ಣಿನ ಸುತ್ತ ಬಳಿದ ಸುರಮಾ ಇವುಗಳಿಂದಾಗಿ ಕು. ಶ್ಯಾಮಲಾದೇವಿಯುವರ ಚಿತ್ತಚಂಚಲವಾದುದು ಸ್ಪಷ್ಟವಿತ್ತು. ಆತ ಒಳಬಂದು ವಿದ್ಯಾರ್ಥಿಯ ಖುರ್ಚಿಯ ಮೇಲೆ ಮಂಡಿಸಿದ ತರುವಾಯ ಕು. ಶ್ಯಾಮಲಾದೇವಿಯುವರು ತಮ್ಮ ಗಂಟಲನ್ನು ಸರಿಪಡಿಸಿಕೊಂಡಂತೆ ಮಾಡಿ ಪ್ರಶ್ನೆ ಕೇಳತೊಡಗಿದರು.

ಏಕೋ ಏನೋ, ಅವರ ಧ್ವನಿಯಲ್ಲಿ ಬಹಳ ಬದಲಾವಣೆಯಾಗಿತ್ತು. ಈ ಮೊದಲು ಬಂದ ವಿದ್ಯಾರ್ಥಿಗಳನ್ನು ಪ್ರಶ್ನಿಸುವಾಗ ಅವರ ಧ್ವನಿ, ವ್ಯಾಪಾರಿಗಳು ಗಿರಾಕಿಗಳಿಗೆ ಬೆಲೆಯನ್ನು ಹೇಳುವಾಗಿನ ದ್ವನಿಯಂತೆ ರುಕ್ಷವಾಗಿರುತ್ತಿತ್ತು. ಆದರೆ ಶ್ಯಾಮಲಾದೇವಿಯವರು ಶೇನಾಯ್‌ನನ್ನು ಪ್ರಶ್ನಿಸುವಾಗ ಅವರ ಧ್ವನಿಯಲ್ಲಿ ಪ್ರಯತ್ನಪೂರ್ವಕವಾಗಿ ತಂದ ಇಂಪು ಇತ್ತು; ಜೊತೆಗೆ ಸ್ವಲ್ಪ ಕಂಪನವೂ ಸೇರಿತ್ತು. ಶ್ಯಾಮಲಾದೇವಿಯವರ ಕಾತರ ನಯನಗಳಿಂದ ಹೊರಹೊಮ್ಮಿದ ಮೆಚ್ಚುಗೆ ತುಂಬಿದ ನೋಟ ಶೆನಾಯ್‌ನ ಹಣೆಯ ಮೇಲೆ ಲಾಸ್ಯವಾಡುತ್ತಿದ್ದ ಝುಲುಪಿಯಲ್ಲಿ ಸಿಲುಕಿತ್ತು. ಅವರು ಮುಂಖಾನು ಮುಂಖವಾಗಿ ಪ್ರಶ್ನೆಗಳನ್ನು ಕೇಳಿ ಶೆನಾಯ್‌ನ ಗಮನವನ್ನು ತಮ್ಮಲ್ಲಿ ಕೇಂದ್ರೀಕರಿಸುವ ಹವಣಿಕೆಯಲ್ಲಿದ್ದಂತಿತ್ತು. ನಾನು ಬೆರಗುಗಣ್ಣಿನಿಂದ ಒಮ್ಮೆ ಶೆನಾಯ್‌ನನ್ನು ಇನ್ನೊಮ್ಮೆ ಕು. ಶ್ಯಾಮಲಾದೇವಿಯವರನ್ನು ನೋಡುತ್ತಿದ್ದೆ. ನಡುವೆ ಒಂದು ಸಲ ಶ್ರೀ ಸಂತಾನಗೋಪಾಲ ಅಯ್ಯಂಗಾರರ ಕಡೆಗೆ ದೃಷ್ಟಿ ಹರಿಸಿದೆ. ಆದರೆ ಅವರ ಬೆರಳುಗಳಲ್ಲಿಯ ಕಡ್ಡಿ ಅವರ ಕಿವಿ ಸೇರಿ ತನ್ನ ಕಾಯಕದಲ್ಲಿ ತಲ್ಲೀನವಾಗಿತ್ತು. ಮತ್ತು ಅಯ್ಯಂಗಾರ ಸಾಹೇಬರು ಸಚ್ಚಿದಾನಂದ ನಿರ್ವಿಕಲ್ಪ ಸಮಾಧಿಯಲ್ಲಿ ಮುಳುಗಿದ ಮುಖಭಾವದಿಂದ ಶೂನ್ಯದಲ್ಲಿ ದೃಷ್ಟಿಯನ್ನು ಸ್ಥಿರೀಕರಿಸಿ ಕುಳಿತಿದ್ದರು.

ಶ್ಯಾಮಲಾದೇವಿ ಮತ್ತು ಶೆನಾಯ್ ಇವರ 'ಸವಾಲ್-ಜವಾಬ್' ಮುಗಿಯುವಂತೆ ತೋರಲಿಲ್ಲ. ಅದಕ್ಕೆ ತಡೆ ಹಾಕಬೇಕೆಂದು ಉದ್ದೇಶಿಸಿ ನಾನು ಶೆನಾಯ್‌ನಿಗೆ ಕೇಳಿದೆ,

"What do they call in Hindi for a crocodile ?"

ಶೆನಾಯ್ ನನ್ನೆಡೆ ನೋಡಿ ಪೆಚ್ಚು ನಗೆ ನಕ್ಕು ಸುಮ್ಮನುಳಿದ. ನನಗೆ ಗೊತ್ತಾಯ್ತು: ಆತನಿಗೆ ಈ ಪ್ರಶ್ನೆಗೆ ಉತ್ತರ ತಿಳಿಯದು ಎಂದು. ಕುಮಾರಿ ಶ್ಯಾಮಲಾದೇವಿಯವರಿಗೆ ಕೋಪ ಬಂದಂತೆ ನನಗನಿಸಿತು. ಮೊದಲನೆಯದಾಗಿ ನಾನು ನಡುವೆ ಪ್ರವೇಶಿಸಿ ಪ್ರಶ್ನೆ ಕೇಳಿದುದರಿಂದ ಶೆನಾಯ್ ಮತ್ತು ಅವರ ನಡುವೆ ನಡೆದ ಜುಗಲ್‌ಬಂದಿಗೆ ತಡೆಯುಂಟಾಗಿತ್ತು. ಎರಡನೆಯದಾಗಿ ಶ್ರೀ ಶೆನಾಯ್‌ನಿಗೆ ಉತ್ತರಿಸಲು ಆಗಿರಲಿಲ್ಲ. ಹೀಗಾಗಿ ಕು. ಶ್ಯಾಮಲಾದೇವಿಯವರಿಗೆ ಸಿಟ್ಟು ಬಂದಂತಿತ್ತು ಅವರು ನನ್ನೆಡೆಗೆ ಒಂದು ತೀಕ್ಷ್ಣಕಟಾಕ್ಷವನ್ನು ಬೀರಿ ಆಮೇಲೆ ಶ್ರೀ ಶೆನಾಯ್‌ನ ಕಡೆಗೆ ಹೊರಳಿ ಪ್ರಶ್ನೆ ಕೇಳಿದರು.

"ಮಗರ್ ಕೋ ಕಿತನೇ ಪಾಂವ್ ಹೋತೇ ಹೈಂ ? "



ಶೆನಾಯ್ ಬಲು ಚುರುಕು ಹುಡುಗ. ಆತ ಮೊದಲು ನನ್ನೆಡೆಗೆ ನೋಡಿ,

"Sir" now I recollect. In Hindi crocodile is called as 'ಮಗರ್' " ಆ ಮೇಲೆ ಕುಮಾರಿ ಶ್ಯಾಮಲಾದೇವಿಯವರನ್ನು ನೋಡುತ್ತ ಆತನೆಂದ,

"ಮಗರ ಕೋ ಚಾರ್ ಪಾಂವ್ ಹೋತೇ ಹೈಂ "

"ಬಹೂತ್ ಖೂಬ್! ಅಬ್ ತುಮ್ ಜಾ ಸಕ್ತೆ ಹೋ" ಕುಮಾರಿ ಶ್ಯಾಮಲಾದೇವಿಯವರು ಶೆನಾಯ್‌ನ ಮೌಖಿಕ್ ಪರೀಕ್ಷೆಯನ್ನು ಮುಕ್ತಾಯಗೊಳಿಸಿದರು.

ಕುಮಾರಿ ಶ್ಯಾಮಲಾದೇವಿಯವರು ಉಪಾಯವಾಗಿ ನನ್ನ ಮೇಲೆ ಸೇಡು ತೀರಿಸಿಕೊಂಡದ್ದನ್ನು ನೋಡಿ ನನಗೆ ಸಿಟ್ಟು ಬರುವುದಕ್ಕೆ ಬದಲು ತಮಾಷೆ ಎನಿಸಿತು. ನಾವು ಅಯ್ಯಂಗಾರ ಸಾಹೇಬರಿಗೆ, ಶೆನಾಯ್‌ನಿಗೆ ಕೊಡಬಹುದಾದ ಮಾರ್ಕುಗಳನ್ನು ಬರೆದು ತೋರಿಸಿದೆವು. ಯಥಾ ಪ್ರಕಾರ ಅವರು ಸರಾಸರಿ ತೆಗೆದು ಶೆನಾಯ್‌ನ ಹೆಸರಿನ ಮುಂದೆ ನಮೂದಿಸಿದರು. ನಾನು ಕಳ್ಳನೋಟ ಬೀರಿ ಅಯ್ಯಂಗಾರ ಸಾಹೇಬರು ಬರೆದ "average" ಎಷ್ಟೆಂದು ನೋಡಿದೆ ಅದನ್ನು ನೋಡಿದಾಗ ನನಗೆ ಅರಿವಾಯ್ತು, ಕುಮಾರಿ ಶ್ಯಾಮಲಾದೇವಿಯವರು ಶೆನಾಯ್‌ನಿಗೆ ಬಹಳ ಧಾರಾಳವಾಗಿ ಗುಣಾಂಕಗಳನ್ನು ದಯಪಾಲಿಸಿದ್ದರೆಂದು. ನಾನು ಮನಸ್ಸಿನಲ್ಲಿ ಅಂದುಕೊಂಡೆ, 'ವ್ಹಾರೇ ಲಕೀ ಚ್ಯಾಪ್' ಎಂದು.

ಶೆನಾಯ್‌ನ ತರುವಾಯ ಬಂದವಳು ನಮ್ಮ ಆಫೀಸಿನ ಟೈಪಿಸ್ಟ್ ಕು. ಶರ್ಮಿಲಾ! ಅವಳ ರೂಪ, ಕೇಶಭೂಷೆ ಮತ್ತು ವೇಷಭೂಷಣಗಳ ಮುಂದೆ ಕುಮಾರಿ ಶ್ಯಾಮಲಾದೇವಿಯವರು ನೇಸರಿನ ಪ್ರಖರ ತೇಜಸ್ಸಿನ ಮುಂದೆ ಮಬ್ಬಾಳವಾಗಿ ಕಾಣುವ ೧೫ ಕ್ಯಾಂಡಲ್ ಬಲ್ಬಿನಂತೆ ತೋರುತ್ತಿದ್ದರು. ಕು. ಶರ್ಮಿಲಾಳನ್ನು ನೋಡಿದಕೂಡಲೇ ಕು. ಶ್ಯಾಮಲಾದೇವಿಯವರ ಮುಖದಲ್ಲಿ ಸೂಕ್ಷ್ಮವಾದರೂ ಸ್ಪಷ್ಟವಾದ ಅಸೂಯೆಯ ಭಾವ ತೇಲಿತು. ಶರ್ಮಿಲಾ ಸ್ಥಾನಾಪನ್ನಳಾದ ಮೇಲೆ ಶ್ಯಾಮಲಾದೇವಿಯವರು ಪ್ರಶ್ನೆಗಳನ್ನು ಕೇಳತೊಡಗಿದರು. ಅವರು ಕೇಳುತ್ತಿದ್ದ ಪ್ರಶ್ನೆಗಳು ಮೊದಲಿನವುಗಳಿಗಿಂತ ತುಂಬ ಗಡಚಾಗಿದ್ದವು. ಶರ್ಮಿಲಾ ಉತ್ತರಿಸುವಾಗ ತಡವರಿಸುತ್ತಿದ್ದುದನ್ನು ನೋಡಿ ಶ್ಯಾಮಲಾದೇವಿಗೆ ಏನೋ ಒಂದು ತರದ ಕ್ರೂರ ಆನಂದವಾಗುತ್ತಿತ್ತು. ಈ ಆನಂದದಿಂದ ಉತ್ತೇಜಿತರಾಗಿ ಅವರು ಮತ್ತಷ್ಟು ಬಿಗಿಯಾದ ಪ್ರಶ್ನೆಗಳನ್ನು ಕೇಳುತ್ತಿದ್ದರು. ಹೀಗಾಗಿ ಶರ್ಮಿಲಾ ಮತ್ತಷ್ಟು ಧೃತಿಗೆಡುತ್ತಿದ್ದಳು. ನಾನು ಅವಳನ್ನು ಈ ಸ್ಥಿತಿಯಲ್ಲಿ ನೋಡಿ ಮನಸ್ಸಿನಲ್ಲಿ 'ಅಯ್ಯೋ ಪಾಪ!' ಎಂದು ಮರುಗಿದೆ. ಏನೇ ಇರಲಿ, ಅವಳು ಗಾಬರಿಯಾದಾಗ ಬಲು ಮುದ್ದಾಗಿ ಕಾಣುತ್ತಿದ್ದಳು. ಅವಳು ಕಪ್ಪನ್ನ ಕಣ್ಣೆವೆಗಳನ್ನು ಪಟಪಟ ಬಡಿಯುತ್ತಿದ್ದಾಗ ಕೆಂದಾವರೆಯ ಮಧ್ಯೆ ಭೃಂಗಾವಳಿಯು ತಾಲಬದ್ಧವಾಗಿ ಕವಾಯಿತು ಮಾಡುತ್ತಿದ್ದಂತೆ ತೋರುತ್ತಿತ್ತು. ನಾನು ಎಷ್ಟೊತ್ತು ಅವಳೆಡೆಗೆ ನೋಡುತ್ತಿದ್ದೆನೋ ಏನೊ! ಕುಮಾರಿ ಶ್ಯಾಮಲಾದೇವಿಯವರು ನನ್ನನ್ನು ಉದ್ದೇಶಿಸಿ.

"ನೀವೂ ಏನಾದರೂ ಪ್ರಶ್ನೆ ಕೇಳುವುದಿದ್ದರೆ ಕೇಳಿರಲ್ಲ." ಎಂದು ಜೋರಾಗಿ ಕೂಗಿದ್ದು ಕೇಳಿಸಿತು.

ನಾನು ತುಸು ಬೆಚ್ಚಿಬಿದ್ದೆ. ಅದೇ ಸಮಯದಲ್ಲಿ ನನ್ನ ಬಾಯಿಂದ 'ಚಶ್ಮೆ ಬದ್ದೂರ್' ಎಂಬ ಪದ ನನಗರಿವಿಲ್ಲದಂತೇ ಹೊರಬಿತ್ತು. ಶ್ಯಾಮ


ಕಳ್ಳನೊಂದಿಗೆ
ಹೋರಾಡಿ...ಕಷ್ಟ
ದಿಂದ ಈ ನಿಮ್ಮ
ಕಂಠಾಭರಣ ತಂದೆ....
ನೀವೀಗ ನನಗೆ ಒಳ್ಳೇ
ಭಕ್ಷೀಸು ಕೊಡಬೇಕು.....
ಮೇಡಂ....


ಭಕ್ಷೀಸು ಕೊಡೋಕೆ ಇದೇನು ಚಿನ್ನದ ಸರ
ಅಂತ ತಿಳಿದಿರಾ? ಇದರ ಬೆಲೆ ಎರಡೂವರೆ ರೂ.

ಲಾದೇವಿಗೆ ನಾನು 'ಚಷ್ಮೆಬದ್ದೂರ್' ಎಂದು ಉದ್ಗರಿಸಿದ್ದು ಕೇಳಿರಬೇಕು. ಏಕೆಂದರೆ ಅವರು ನನ್ನೆಡೆಗೆ ಕುತ್ಸಿತ ದೃಷ್ಟಿಯಿಂದ ನೋಡುತ್ತಿದ್ದರು. ನಾನು ಸ್ವಲ್ಪ ಸುಧಾರಿಸಿಕೊಂಡು. "ಚಷ್ಮೇ ಬಹದೂರ್‌ಕಾ ಮಾನೇ ಕ್ಯಾ?" ಎಂದು ಕುಮಾರಿ ಶರ್ಮಿಲಾಳಿಗೆ ಕೇಳಿದೆ. ಅರ್ಥಾತ್ ನಾನು ಗಡಿಬಿಡಿಸಿ ಆಂಗ್ಲ ವಾಕ್ಯದ ಪ್ರಶ್ನೆ ಹಾಕುವುದನ್ನು ಮರೆತೆ.

ಅವಳಿಗೆ ಅದರರ್ಥ ಗೊತ್ತಿರಲಿಲ್ಲ. ನಿಜ ಹೇಳಬೇಕೆಂದರೆ ನನಗೂ ಅದರರ್ಥ ಗೊತ್ತಿರ-ಲಿಲ್ಲ. ಯಾವುದೋ ಒಂದು ಹಿಂದಿ ಚಲನಚಿತ್ರದಲ್ಲಿ ನಾಯಕನು ಸುಂದರಳಾದ ನಾಯಕಿಯನ್ನು ಬೆರಗುಗಣ್ಣಿನಿಂದ ನೋಡುತ್ತ, ಚಷ್ಮೆಬದ್ದೂರ್, ಚಷ್ಮೆ ಬದ್ದೂರ್' ಎಂದು ಹಾಡುತ್ತಿದ್ದುದನ್ನು ಕೇಳಿದ ಮಸಕು ಮಸಕು ನೆನಪು 'ಏಕೋ ಏನೋ, ಸೌಂದರ್ಯವತಿಯರನ್ನು ನೋಡಿದಾಗಲೆಲ್ಲ ನನ್ನ ನಾಲಿಗೆಯಿಂದ 'ಚಷ್ಮೆ ಬದ್ದೂರ್' ಎಂಬ ಉದ್ಗಾರ ಅಪ್ರಯತ್ನವಾಗಿ ಹೊಮ್ಮುತ್ತಿತ್ತು. ಹೀಗಾಗಿ ಈಗ ಕುಮಾರಿ ಶರ್ಮಿಲಾಳನ್ನೂ ನೋಡಿದಾಗ, ನನಗರಿವಿಲ್ಲದಂತೇ ಈ ಪದ ನನ್ನ ಬಾಯಿಂದ ಹೊರಹೊಮ್ಮಿತ್ತು.

ಶರ್ಮಿಲಾ ಉತ್ತರಿಸಲಾಗದೇ ಸುಮ್ಮನುಳಿದಿದ್ದಳು. ನಾನು ಬೇರೆ ಯಾವ ಪ್ರಶ್ನೆ ಕೇಳಲಿ ಎಂದು ಯೋಚಿಸುತ್ತಿದ್ದಂತೇ ಕುಮಾರಿ ಶ್ಯಾಮಲಾದೇವಿಯವರು ಕುಮಾರಿ ಶರ್ಮಿಲಾಳಿಗೆ,

"ತುಮ್ ಜಾ ಸಕ್ತೇ ಹೋ" ಎಂದು ಅಪ್ಪಣೆ ಕೊಟ್ಟರು. ಶರ್ಮಿಲಾ ಹೊರಟು ಹೋದಳು. ಪೂರ್ಣಚಂದ್ರ ಅಸ್ತಮಿಸಿ ಕಾರ್ಮೋಡ ಮಾತ್ರ ಉಳಿದಂತಾಯ್ತು!

ಶರ್ಮಿಲಾ ಹೋದ ಕೂಡಲೆ ಶ್ಯಾಮಲಾದೇವಿ ಆತುರ ಆತುರವಾಗಿ ಕಾಗದದ ಮೇಲೆ ೧೫ ಎಂದು ಬರೆದು ಅಯ್ಯಂಗಾರ ಸಾಹೇಬ-ರಿಗೆ ತೋರಿಸಿದ್ದು ನನ್ನ ಕಣ್ಣಿಗೆ ಬಿತ್ತು. ಬಹುಶಃ ಇಷ್ಟೊಂದು ಕಡಿಮೆ ಅಂಕಗಳನ್ನು ಕು. ಶ್ಯಾಮಲಾದೇವಿ ಯಾರಿಗೂ ಕೊಟ್ಟಿರ-ಲಿಕ್ಕಿಲ್ಲ. ನನ್ನ ಮುಂದಾಲೋಚನೆ ನನ್ನಿಂದ ಹಾಳೆಯ ಮೇಲೆ '೬೫' ಎಂಬ ಅಂಕೆಯನ್ನು ಬರೆಸಿತು. ಅಯ್ಯಂಗಾರ ಸಾಹೇಬರು ನಾನು ಬರೆದ ಗುಣಾಂಕವನ್ನು ನೋಡಿದರು, ಆಮೇಲೆ ಮತ್ತೆ ಮೂಗಿಗೆ ನಸ್ಯ ಏರಿಸಿ ಲೆಕ್ಕ ಮಾಡಿ, ಸರಾಸರಿ ತೆಗೆದು ಶರ್ಮಿಲಾಳ ಹೆಸರಿನ ಮುಂದೆ "೪೦" ಎಂದು ನಮೂದಿಸಿದರು. ನಾನು ವಿಜಯೀ ಮುದ್ರೆಯಿಂದ ಶ್ಯಾಮಲಾದೇವಿ-ಯವರನ್ನು ನೋಡಿದೆ. ಅವರು ನನ್ನೆಡೆಗೆ ಇರಕಳು ಹೋರಿಯಂತೆ, ಅಲ್ಲಲ್ಲ, ಹಸುವಿನಂತೆ ಥೇ ಅಲ್ಲವೇ ಅಲ್ಲ; ಹೆಬ್ಬುಲಿಯಂತೆ ನೋಡಿದರು. 'ಅದೇ ಸಮಯಕ್ಕೆ ಸರಿಯಾಗಿ ಸಂತಾನ ಗೋಪಾಲ ಅಯ್ಯಂಗಾರ ಸಾಹೇಬರು 'ಆಂಕ್ಷೀ' ಎಂದು ಸೀನಿದ್ದು ಕೇಳಿತು. ನಾವಿಬ್ಬರೂ ಬೆಚ್ಚಿ ಅವರೆಡೆಗೆ ನೋಡಿದೆವು. ಅವರು ಮೂಗು ಒರೆಸಿಕೊಳ್ಳುತ್ತ ನುಡಿದರು.

"ಮಾತ್ಸರ್ಯಕ್ಕೆ ಬಲಿಯಾಗಿ ಅಭ್ಯರ್ಥಿಗೆ ದೊರೆಯಬೇಕಾದ ಗುಣಗಳ ಅಪಮೌಲ್ಯನ ಮಾಡುವುದಕ್ಕಾಗಲಿ ಅಥವಾ ಮೋಹಪರವಶರಾಗಿ ಅಭ್ಯರ್ಥಿಗೆ ಸಲ್ಲದ ಹೆಚ್ಚುಗಾರಿಕೆಯನ್ನು ನೀಡುವುದಕ್ಕಾಗಲಿ ನಮಗೆ ಅಧಿಕಾರವಿಲ್ಲ ಎಂಬುದನ್ನು ನೀವಿಬ್ಬರೂ ಗಮನಿಸದಲ್ಲೆಡಿ. ಹಿಂದೀ ಭಾಷೆ ನನಗೆ ಅಪರಿಚಿತವಿದ್ದರೂ ನೀವು ತೋರ್ಪಡಿಸಿದ ಭಾವನೆಗಳನ್ನು ನಾನು ಅರಿಯಬಲ್ಲೆ. ನಾನು ಈ ವರೆಗೆ ಅಂಗೀಕರಿಸಿದ ಸರಾಸರಿ-ಗುಣಾಂಕ-ವಿಧಾನದಿಂದ ಯಾವ ಅಭ್ಯರ್ಥಿಗೂ ಅನ್ಯಾಯವಾಗದಂತೆ ಎಚ್ಚರವಹಿಸಿದ್ದೇನೆ. ಆದರೆ ಯಾರಾದರೂ ಭಾವಪರವಶರಾಗಿ ಮೌಲ್ಯಮಾಪನ ಮಾಡಿದರೆ ನನ್ನ ವಿಧಾನ ಹುಸಿ ಹೋದೀತು. **Come on: call the next name** ಎಂದು ಉಪದೇಶಿಸಿ, ಮೂಗಿಗೆ ಮತ್ತೊಮ್ಮೆ ನಸ್ಯ ಭರಿಸಿದರು. ಮದ್ದು ತುಂಬಿದ ತೋಫು ಸಿಡಿಯುವ ಮೊದಲೇ ಕೆಲಸ ಪೂರೈಸುವ ಛಲ ಹೊತ್ತು ಮುಂದಿನ ಹೆಸರು ಕೂಗಿದೆ.

# ಹೆಸರಿನ ಹಿಂದೆ......

ಸೀರ್ನಳ್ಳಿ ಗಣಪತಿ








## ದೀಪಾವಳಿಯ ಹಾರ್ದಿಕ ಶುಭಾಶಯಗಳೊಂದಿಗೆ :

ಫೋನ : ಫ್ಯಾಕ್ಟರಿ : **78**
ಮನೆ : **51**

# ಶ್ರೀ ಗುರು ಕೊಟ್ಟೂರೇಶ್ವರ ಟ್ರೇಡರ್ಸ್

**ಕಾಟನ್ ಜನ್ನಿಂಗ್ ಆ್ಯಂಡ್ ಪ್ರೆಸ್ಸಿಂಗ್ ಫ್ಯಾಕ್ಟರಿ, ಕೊಟ್ಟೂರು**

# ಶ್ರೀ ವೀರೇಶ್ವರ ಟ್ರೇಡರ್ಸ್

**ಕಾಟನ್ ಮರ್ಚಂಟ್ಸ್, ಕೊಟ್ಟೂರು**

# ಶ್ರೀ ಡಿ. ಚನ್ನಮಲ್ಲಪ್ಪ & ಬ್ರದರ್ಸ್

**ಇಂಡಿಯನ್ ಆಯಿಲ್ ಡೀಲರ್ಸ, ಕೊಟ್ಟೂರು ಬ್ರ್ಯಾಂಚ್ : ಕೂಡ್ಲಿಗಿ**

# ಶ್ರೀ ಗುರು ಕೊಟ್ಟೂರೇಶ್ವರ ಲಾರಿ ಟ್ರಾನ್ಸ್‌ಪೋರ್ಟ್ಸ್

**ಕೊಟ್ಟೂರು ಬಳ್ಳಾರಿ ಜಿಲ್ಲಾ**

---



ದೀಪಾವಳಿಯ ಹಾರ್ದಿಕ
ಶುಭಾಶಯಗಳು

ಫೋನ : ಆಫೀಸ : **1176**
ಮನೆ : **404**

# ಕಪಿಲಾ ಲ್ಯಾಮಿನೇಟರ್ಸ,

**ಕವಳಿಗೇಟ ಹತ್ತಿರ, ಎಮ್, ಜಿ. ರೋಡ, ಬಿಜಾಪುರ**

ಸ್ಪೇಶಲ್ ಪಾಲಿಸ್ಟರ ಫಿಲ್ಮದಿಂದ ಮುಖ್ಯವಾದ ದಾಖಲೆ ಪತ್ರಗಳು, ಸರ್ಟಿಫಿಕೇಟಗಳು, ಐಡೆಂಟಿಟಿ ಕಾರ್ಡುಗಳು, ಮುಂತಾದವುಗಳನ್ನು ಜೀವನಪರ್ಯಂತ ಕಾಯ್ದಿಡಲು ಸ್ಪರ್ಧಾತ್ಮಕ ದರಗಳಲ್ಲಿ ಎರಡೂಬದಿಗೆ ಲ್ಯಾಮಿನೇಟ ಮಾಡಿ ಕೊಡಲಾಗುವದು. ಇಂದೇ ಸಂಪರ್ಕಿಸಿ. ಉತ್ತರ ಕರ್ನಾಟಕದಲ್ಲಿಯೇ ಪ್ರಪ್ರಥಮವಾದದ್ದು.

# ಕಪಿಲಾ ಟ್ರೇಡರ್ಸ

**ಮುದ್ರಣ ಕಾಗದ ಮತ್ತು ಸ್ಟೇಶನರಿ ವ್ಯಾಪಾರಸ್ಥರು**
**ಕವಳಿ ಗೇಟ ಹತ್ತಿರ, ಬಿಜಾಪುರ**

# ಪರಿಮಳಾ ಪಬ್ಲಿಸಿಟಿ

**ಎಲ್ಲ ಪತ್ರಿಕೆಗಳ ಪ್ರಮುಖ ಏಜೆಂಟರು ರಾಮಪ್ರಸಾದಗಲ್ಲಿ**
**ಬಿಜಾಪುರ**

ಫೋನ : **404. 1176**



# ಪುನರ್ದರ್ಶನ

— ಪರಾಗ

ಮಗು ಶಾಲೆಗೆ ಹೋಗುತ್ತಿರುತ್ತದೆ. ತಾಯಿಗೆ ಬರುತ್ತೇನೆ ಎಂದು ಹೇಳುತ್ತದೆ. ಹಾಗೆಯೇ ಹಿರಿಯರು, ಕಿರಿಯರು ಎಲ್ಲಿಗೇ ಹೋಗುವುದಿರಲಿ, ಹೋಗುತ್ತೇನೆ ಎಂದು ಹೇಳುವದಿಲ್ಲ. ಬರುತ್ತೇನೆ ಅಥವಾ ಹೋಗಿ ಬರುತ್ತೇನೆ ಎಂದೇ ಹೇಳುತ್ತಾರೆ.

ವರಕವಿ ದ. ರಾ. ಬೇಂದ್ರೆ ಅವರು ಧಾರವಾಡ ಬಿಟ್ಟು ಸೊಲ್ಲಾಪುರಕ್ಕೆ ಹೊರಟಿದ್ದರು. ಆದರೆ "ನಾವುಬರ್ತೀವಿ ಇನ್ನ" ಎಂದೇ ಹಾಡಿದರು. ಅವರಿಗೆ ಧಾರವಾಡಕ್ಕೆ ಮರಳಿ ಬರುವ ಅಪೇಕ್ಷೆ ಇದ್ದಿತು, ಅವರ ಅಪೇಕ್ಷೆ ಈಡೇರಿತು. ಕೂಡ.

ಆದರೆ ಪಾಶ್ಚಿಮಾತ್ಯರಲ್ಲಿ ಈ ಪರಿಪಾಠವಿಲ್ಲ. **'I shall go and come'** ಎಂದು ಹೇಳಿ, ದರೆ ಗಂಡ ಹೊರಗೆ ಹೋಗಿದ್ದಾನೆ ಎಂದು ಹೇಳಬಯಸಿದ ಹೆಂಡತಿ **'They have gone out** ಎಂದು ಹೇಳುಷ್ಟೇ ನಗೆಪಾಟಲೆಗೆ ಗುರಿಯಾಗಬೇಕಾಗುತ್ತದೆ.

ಹೋಗುತ್ತೇನೇ ಎಂದು ಹೇಳಿದರೆ, ಹೋಗಿಯೇ ಬಿಡಬಹುದು, ತಿರುಗಿ ಬರಲಿಕ್ಕಿಲ್ಲ ಎಂಬ ಮೂಢನಂಬಿಕೆಯ ಭಯದಿಂದ ಹಾಗೇ ಹೇಳುವ ವಾಡಿಕೆ ನಮ್ಮಲ್ಲಿ ಬೆಳೆದು ಬಂದಿರಬೇಕೆಂದು ಕೆಲವು ಸಂಪ್ರದಾಯ ವಿರೋಧಿಗಳು ಮೂದಲಿಸಬಹುದು.

ಇದು ಬರಿ ಮೂಢನಂಬಿಕೆಯಾಗಿರಬಾರದು. ಇದಕ್ಕೆ ಒಂದು ಒಳ್ಳೆ ಸಂಸ್ಕೃತಿಯ ಹಿನ್ನೆಲೆ ಇರುವ ಸಾಧ್ಯತೆಯೂ ಇದೆ. ಅಥವಾ ಆ ಸಂಸ್ಕೃತಿಯಲ್ಲಿ ಬೆಳೆದುಬಂದ ಜೀವನದೃಷ್ಟಿಯೇ ಈ ಪರಂಪರೆಗೆ ಕಾರಣವಾಗಿರಬಹುದಾಗಿದೆ. ಗಂಗೆ, ಗೌರಿ, ಗಣಪತಿ ಮುಂತಾದ ಯಾವದೇ ಪೂಜೆಯಲ್ಲಿ ಪುನರಾಗಮನದ ಪ್ರಾರ್ಥನೆ ಇರುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಜೀವನಕ್ಕೆ ಜನ್ಮಜನ್ಮದ ಸಂಬಂಧ. ಅಂತೆಯೇ ಹಿಂದೆ ಆದರ್ಶ ಸತಿ ತನ್ನ ಆದರ್ಶ ಪತಿ ಏಳೇಳು ಜನ್ಮಗಳಲ್ಲೂ ಪತಿಯಾಗಿ ಲಭಿಸಲಿ ಎಂದು ಪ್ರಾರ್ಥಿಸುತ್ತಿದ್ದಳು. ಇಂದಿನ ಜೀವನ ವೆಚ್ಚ, ಜೀವನ ಮಟ್ಟ ಹಾಗೂ ಜೀವನ ಮೌಲ್ಯಗಳ ಹಿನ್ನೆಲೆಯಲ್ಲಿ ಬಹು ಜನ ಹೆಂಡಂದಿರು ತಮ್ಮ ಗಂಡ ಇನ್ನು ಯಾವ ಜನ್ಮದಲ್ಲೂ ಗಂಟು ಬೀಳದಿರಲಿ ಎಂದು ಬೇಡಿಕೊಂಡರೆ ಅಚ್ಚರಿ ಪಡಬೇಕಿಲ್ಲ. ಹಾಗೆಯೇ ಗಂಡಸಿಗೂ ಅವಕಾಶವಿದೆ. ಇನ್ನು ಯಾವ ಜನ್ಮದಲ್ಲೂ ಈ ಹೆಂಡತಿ ಕೊರಳಿಗೆ ಬೀಳದಿರಲಿ ಎಂದು ಕೇಳಿಕೊಳ್ಳಲು. ಇರಲಿ ಆ ಮಾತು ಬೇರೆ.

"ಸರ್ವೇ ಜನಾಃ ಸುಖಿನೋಭವಂತು" ಎಂದು ಸಾರುವ ಈ ಸಂಸ್ಕೃತಿ ಜೀವನಕ್ಕೂ ಸುಖಾಂತವನ್ನೇ ಕೋರುತ್ತದೆ. ಅಂತೆಯೇ ಭರತ ತನ್ನ ನಾಟ್ಯಶಾಸ್ತ್ರದಲ್ಲಿ— ಅದು ಕಾವ್ಯ ಶಾಸ್ತ್ರವೇ ಆಗಿದೆ— ದುಃಖಾಂತ್ಯ ಸಾಹಿತ್ಯ ಕೃತಿ ನಿಷೇಧಿಸಿದ್ದಾನೆ. ಈ ಸಂಸ್ಕೃತಿಯ ಹಿನ್ನೆಲೆ ಹಾಗೂ ಈ ಕಾವ್ಯ ಶಾಸ್ತ್ರದ ಕಟ್ಟುಪಾಡಿನಲ್ಲಿ ಭಾರತೀಯ ಸಾಹಿತ್ಯ ದುಃಖಾಂತ ಕೃತಿಗಳನ್ನು ಕೇಳಲು ಬಹುಶಃ ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವ ಬೀಳುವವರೆಗೂ ಕಾಯಬೇಕಾಯಿತು. ಈ ಕಟ್ಟಳೆಗೆ ಒಳಪಟ್ಟಿರದಿದ್ದರೆ ಕಾಲಿದಾಸನ ಶಾಕುಂತಲ, ಭವಭೂತಿಯ ಉತ್ತರ ರಾಮಚರಿತ ಜಗತ್ತಿನ ಶ್ರೇಷ್ಠ ದುಃಖಾಂತ ನಾಟಕಗಳಲ್ಲಿ ಪರಿಗಣಿಸಲ್ಪಡುತ್ತಿದ್ದುವು ಎಂದು ಅನೇಕ ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಆ ಕಾರಣ ಮಾತ್ರದಿಂದ ಅವುಗಳ ಮೌಲ್ಯವೇನೂ ಕಡಿಮೆಯಾಗಿಲ್ಲ. ಪಾಶ್ಚಿಮಾತ್ಯ ಸಾಹಿತ್ಯದಲ್ಲಿ ದುರಂತ ಕೃತಿಗಳು ಬಹಳ ಪ್ರಾಚೀನ ಕಾಲದಲ್ಲೇ ಮೂಡಿ ಬಂದಿವೆ—ಗ್ರೀಕ್ ದುರಂತ ನಾಟಕಗಳು.

ಹಾಗೆ ನೋಡಿದರೆ ಭಾರತೀಯ ಜೀವನದ ತತ್ವ ವಿಚಾರದಲ್ಲಿ ಬಹುಶಃ ಬಹುಜನರು ತಮ್ಮ ಜೀವನದ ಅಂತ್ಯಯಾತ್ರೆಯಲ್ಲೂ "ಹೋಗಿ ಬರುವವರ" ಆದರ ಹಾಗೆ ಹೇಳುವ ದೇಹಸ್ಥಿತಿ ಮನಸ್ಥಿತಿ ಬಹಳ ಜನರಿಗೆ ಇರುವುದಿಲ್ಲ. ಪುನರ್ಜನ್ಮ ಒಪ್ಪದ ಜೀವನತತ್ವದಲ್ಲಿ ಇಂಥ ಪುನರ್ದರ್ಶನ ವಿಚಾರಕ್ಕೆ ಅವಕಾಶವೇ ಇಲ್ಲ.



## ಕೇಳು ಕೆಳದಿ....

ಬೀಡಸೆಳೆದಿಹ ನೆಲದಿ ಕೇಳು ಕೆಳದಿ  
ಸಿರಿಬಸಂತನು ಮೆಲ್ಲನಡಿಯಿಟ್ಟ ಹಾಗೆ;  
ಆ ರಾತ್ರಿಯುದ್ದಕ್ಕೂ ನಿನ್ನದೇ ನೆನಪು  
ಎಳೆಗಾಳಿ ಸುಳಿದಿರುಗಿ ಬಳಿಸುಳಿದ ಹಾಗೆ !

—ಪಂಚಾಕ್ಷರಿ ಹಿರೇಮಠ

# ಮಾತನಾಡುವ ಹರಳಿನ ದೃಷ್ಟಾರ ಮಧುಸೂಧನ ಪಟವರ್ಧನ



ಕಳೆದ ಒಂದು ದಶಕಗಳ ಕಾಲದಿಂದ ಹಗಲಿರಳೂ ಶ್ರಮಿಸಿ, ತಮ್ಮ ದುಡಿಮೆಯನ್ನೆಲ್ಲ ಈ ಹರಳಿನ ಸಂಶೋಧನೆಗಾಗಿ ಮುಡುಪಾಗಿಸಿಟ್ಟು ಜನಸಾಮಾನ್ಯನ ಸಂಕಟ ನಿವಾರಣೋಪಾಯದಲ್ಲಿ ಒಂದು ಅಪೂರ್ವ ಸಾಧನೆಗೈದ ಹೆಮ್ಮೆ, ಶ್ರೀ ಮಧುಸೂಧನ ಪಟವರ್ಧನರದು. ಶ್ರೀ ಮಧುಸೂಧನ ಅವರು ತಮ್ಮ ಸಾಧನೆಯ ಹಿನ್ನಲೆಯನ್ನು ನಿರೂಪಿಸುತ್ತ "೧೯೪೫ ರಿಂದಲೇ ಈ ಹರಳಿನ ಶೋಧನೆಯಲ್ಲಿ ತೊಡಗಿ; ಮಾನವನ ಜನ್ಮಕುಂಡಲಿ ಆಧಾರದ ಮೇಲೆ ಅವರವರ ದುರ್ಬಲ ಗ್ರಹಗಳಿಗೆ ಯೋಗ್ಯವಾದ ಬಲವನ್ನು ನೀಡುವ ರಾಶಿ ಹರಳನ್ನು ಉಚಿತವಾಗಿ ನನ್ನ ಸ್ನೇಹಿತರಲ್ಲಿ, ಬಂಧಗಳಲ್ಲಿ, ಜನಸಾಮಾನ್ಯರಲ್ಲಿ ಹಂಚಿದೆ. ಹಾಗೂ ಹರಳು ನೀಡಿದ ಮೇಲೆ ಅವರಲ್ಲಿ ಉಂಟಾಗುತ್ತಿದ್ದ ಪರಿವರ್ತನೆಗಳನ್ನು ನಾನು ಹಾಗೂ ನನ್ನ ಸಿಬ್ಬಂದಿಗಳಿಂದ ವರದಿಯನ್ನು ಟಿಪ್ಪಣಿಮಾಡುತ್ತ ಹೋದೆ. ಹೀಗೆ ಪ್ರಾಯೋಗಿಕ ರೀತಿಯಿಂದ ಕಂಡುಕೊಂಡ ಫಲಿತಾಂಶ ನೂರಕ್ಕೆ ತೊಂಭತ್ತರಷ್ಟು ಫಲಕಾರಿಯಾಗಿದ್ದು ಕಂಡುಬಂದಾಗ ನಾನು ಪಟ್ಟ ಶ್ರಮ ಸಾರ್ಥಕವೆಂದು ಭಾವಿಸಿದೆ."

ಶ್ರೀ ಮಧುಸೂಧನ ಅವರು ಹೇಳುವಂತೆ "ಭಾರತದಲ್ಲಿ ರಾಶಿ ಆಧಾರ ಮೇಲೆ ಹರಳು ನೀಡುವ ಕಾರ್ಯ ಪ್ರವರ್ತನೆಗೈದವರಲ್ಲಿ ಪ್ರಥಮರು. ಹರಳಿನ ಕಾರ್ಯವಿಧಾನ ವರ್ಣಿಸುತ್ತ ಗುಡುಗು ಮಳೆಯಿಂದ ಉದ್ಭವಿಸಿದ ಬಲಿಷ್ಠ ಮಿಂಚನ್ನು ಹೇಗೆ ಕಟ್ಟಡದ ಮೇಲೆ ಇರುವ ಒಂದು ಚುಂಬಕವು ನಿರರ್ಥಕಗೊಳಿಸಿ ನೆಲಕ್ಕೆ ಇಳಿಸುವುದೋ; ಅದೇ ರೀತಿ ದುಷ್ಟಗ್ರಹಗಳಿಂದ ಉಂಟಾಗುವ ದೋಷಗಳನ್ನು ನನ್ನ ಹರಳು ತನ್ನ ಪ್ರಭಾವಲಯದ ಕಿರಣಗಳಿಂದ ಶಮನಗೊಳಿಸುವುದು."

ನನ್ನ ಸಾಧನೆ ವೈಜ್ಞಾನಿಕ ಫಲ ಸ್ವರೂಪದ್ದಾಗಿದ್ದು: ಇದರಲ್ಲಿ ಯಾವ ಚಮತ್ಕಾರ, ಜಾದೂ ಇಲ್ಲವೆಂದು ಹೇಳುವ ಶ್ರೀ ಪಟವರ್ಧನ ಅವರು ಹೇಳುವಂತೆ– ಮಾನವ ಜನನ ಕಾಲಕ್ಕೆ ಇರುವ ರಾಶಿ ಚಕ್ರದಲ್ಲಿ ಇರುವ ದುಷ್ಟಗ್ರಹ ಪೀಡೆಗೆ ಪರಿಹಾರವಾಗಿ ನಾನು ಚಂದ್ರಮಾನ ರಾಶಿ ಪದ್ಧತಿಯಿಂದ ಹಾಗೂ ಭಾಸ್ಕರಾಚಾರ್ಯ ಗಣಿತ ಪದ್ಧತಿಯಿಂದ ಒಂದೊಂದು ಹರಳನ್ನು ಗೊತ್ತುಪಡಿಸುವೆ. ಹೀಗೆ ಗೊತ್ತುಪಡಿಸಿದ ಹರಳು ಅವರವರ ದುರ್ಬಲ ಗ್ರಹಗಳಿಂದ ಉಂಟಾಗುತ್ತಿದ್ದ ದೋಷ ನಿವಾರಣೆ ಮಾಡಿ ಅವರಿಗೆ ಅದರಿಂದ ಉಂಟಾಗಬಹುದಾದ ಪೀಡೆಯನ್ನು ದೂರಮಾಡುವವು" ಎಂದು ಹರಳಿನ ಕಾರ್ಯವಿಧಾನವರ್ಣಿಸುತ್ತಾರೆ.

ನನ್ನ ಹರಳು ಫಲ ನೀಡಿಲ್ಲವೆಂದರೆ ಹರಳಿನ ದೋಷವಲ್ಲ; ಅದು ಆ ವ್ಯಕ್ತಿಯು ನನಗೆ ನೀಡಿದ ಜನ್ಮ ಕುಂಡಲಿಯ ವೇಳೆಯ ದೋಷವಾಗಿರುತ್ತದೆ. ಇದರಿಂದ ಕೆಲವರಿಗೆ ಹರಳು ಫಲಕಾರಿಯಾಗುವದಿಲ್ಲ. ಇದಕ್ಕೆ ಕಾರಣಗಳು ಅನೇಕ. ಕಾರಣ ಒಂದು ಹರಳುಅವರಿಗೆ ಫಲಕಾರಿಯಾಗಿಲ್ಲವೆಂದರೆ ಬೇರೆ ಹರಳಿನಿಂದ ಪ್ರಯೋಗಿಸಿ ಫಲಕಾರಿ ಮಾಡಬಹುದು. ಇದರಿಂದಲೇ ನನ್ನ ಹರಳಿನ ಮಾರಾಟ ನಂತರವೂ ನಾನು ಮಾರಿದ ಹರಳು ಫಲಕಾರಿಯಾಗದಿದ್ದರೆ ಹರಳನ್ನು ಮರಳಿ ಪಡೆಯುವ ಲಿಖಿತ ಭರವಸೆ ನೀಡಿರುವೆ. ಇದರಿಂದ ಜನರಲ್ಲಿ ವಿಶ್ವಾಸ ಬರಲಿ ಎಂಬುದೇ ನನ್ನ ಉದ್ದೇಶ. ಇದು ಯಾವ ಪ್ರಚಾರದ ಒಂದು ವಿಷಯವಲ್ಲ-ವೆಂದು ಹೇಳುತ್ತಾರೆ ಶ್ರೀ ಪಟವರ್ಧನ.

ನನ್ನ ಹರಳು ಈಗ ಜಗತ್ತಿನಾದ್ಯಂತ ಪ್ರಚಾರಪಡೆದಿದ್ದು: ದೇಶ ವಿದೇಶಗಳಿಂದ ಬೇಡಿಕೆ ಬರುತ್ತಿದೆ. ಹಾಗೂ ನನ್ನಿಂದ ಹರಳು ಪಡೆದವರು ಬರೆದ ಪತ್ರಗಳು ನನ್ನ ಸಾಧನೆಯ ಸಫಲತೆಯ ದಾಖಲೆಯಾಗಿವೆ ಎಂದು ಹೇಳುವ ಪಟವರ್ಧನ ಪತ್ರಗಳ ರಾಶಿ ರಾಶಿಯ ಫೈಲು ಸಾಕ್ಷಾಧಾರವಾಗಿ ತೋರಿಸುತ್ತಾರೆ. ಮೊದಲು ವಜ್ರಗಳನ್ನು ದೋಷ ನಿವಾರಣೆಗೆ ಬಳಸುತ್ತಿದ್ದ ಕಾಲವೊಂದಿತ್ತು. ಆದರೆ ಇವು ಈಗಿನ ಕಾಲದಲ್ಲಿ ಜನಸಾಮಾನ್ಯರಿಗೆ ಎಟಕುವ ಬೆಲೆಗ ಲಭ್ಯವಾಗುವದಿಲ್ಲ. ಕಾರಣ ಜನ-ಸಾಮಾನ್ಯನ ಕೈಗೆಟುಕುವ ಬೆಲೆಗೆ ನನ್ನ ಹರಳನ್ನು ಕೇವಲ ಇಪ್ಪತ್ತು ರೂಪಾಯಿಗಳಿಗೆ ಮಾರುವೆ. ನಾನು ಹರಳಿಗೆ ಪಡೆಯುವ ಬೆಲೆ ನಿಜವಾಗಿಯೂ ಏನೂ ಅಲ್ಲ. ನಾನು ಸಂಶೋಧಿಸಿದ ಹರಳು ಭಾರತದ ಮೂಲೆ ಮೂಲೆಗೂ ಪಸರಿಸಿ, ಜನಸಾಮಾನ್ಯನ ಸುಖಕ್ಕೆ ನೆರವಾಗಲಿ ಎಂಬ ಅಭಿಲಾಷೆಯಿಂದ ಭಾರತದ ಯಾವುದೇ ಮೂಲೆಯಲ್ಲಿ ರಾಷ್ಟ್ರಮಟ್ಟದ ಪ್ರದರ್ಶನವಿದ್ದಲ್ಲಿ ಅಲ್ಲಿ ನಮ್ಮ ಸ್ಟಾಲ್ ಪಡೆದು ಈ ಹರಳುಗಳ ಪ್ರಚಾರ ಮಾಡುವೆ. ಇದರಿಂದ ಪ್ರತಿಯೊಬ್ಬರಿಗೂ ನನ್ನ ಹರಳುಮುಟ್ಟುವವು ಎಂಬ ಸಮಾಧಾನ. ನನಗೆ ಖರ್ಚುವೆಚ್ಚ ಬಹಳ ಬಂದರೂ ನನ್ನ ಸಾಧನೆ ಸಫಲತೆಯೂ ಮೆಚ್ಚಿ ಬಂದ ಪತ್ರರಾಶಿಗಳಿಂದ ನನ್ನ ಹೃದಯ ತುಂಬಿ ಬರುವುದು. ನನ್ನ ಹರಳನ್ನು ಹತ್ತುಸಹಸ್ರ ಜನರು ಪಡೆದು ಫಲಕಾರಿಯಾಗಿದ್ದಾರೆ ಎಂಬುದು ನನ್ನ ಒಂದು ಮಹಾನ್ ಸಾಧನೆ ಎಂದೇ ತಿಳಿದಿರುವೆ. ಜನರು ನನ್ನ ಹರಳಿನಿಂದ ಏನನ್ನಾದರೂ ಲಾಭಪಡೆದರೆ ಅದು ನನ್ನ ಜೀವನ ಸಾರ್ಥಕ್ಯದ ಫಲವೆಂದು ಕೊಳ್ಳುವೆ ಎನ್ನುತ್ತಾರೆ ಶ್ರೀ ಪಟವರ್ಧನ.

# ವರ್ಷ ಭವಿಷ್ಯ

ಜ್ಯೋತಿಷಿ: ಶ್ರೀ ಎನ್. ಕೆ. ಜೋಗಳೇಕರ
ಸಿ-72, ತೇಜಸ್ವಿನಗರ, ಧಾರವಾಡ. ಫೋ.೮೦೨೮೮

## ಮೇಷ

ಈ ರಾಶಿಯುವರಿಗೆ ಈ ವರುಷ ಮಿಶ್ರ ...ಲವಿದೆ. ಉದ್ಯೋಗ, ಆರೋಗ್ಯ ದೃಷ್ಟಿ ...ಯಿಂದ ಪ್ರತಿಕೂಲ ಆದರೆ, ಕೌಟುಂಬಿಕ, ...ರ್ಥಿಕ, ಶೈಕ್ಷಣಿಕ, ರಾಜಕೀಯ ದೃಷ್ಟಿ ...ಯಿಂದ ಪ್ರಗತಿದಾಯಕವಿದೆ. ವರುಷದ ಪ್ರಾರಂಭದ ಮೂರು ತಿಂಗಳುಗಳು ಹಾಗೂ ...ನೆಯ ಮೂರು ತಿಂಗಳುಗಳು ಪ್ರಗತಿ ...ದಾಯಕವಿದ್ದರೆ ಮಧ್ಯದ ಆರು ತಿಂಗಳು ...ಳು ಪ್ರತಿಕೂಲವಿರುತ್ತವೆ.

ಅಷ್ಟಮಶನಿಯು ಅನಿಷ್ಟತೆಯನ್ನು ಹಾಗು ...ನ್ನೆರಡನೆಯ ರಾಹುವಿನ ಅಶುಭ ಫಲವನ್ನು ...ನುಭವಿಸುತ್ತಿರುವ ನೀವು ೩-೨-೧೯೮೭ ರಿಂದ ...ರುವ ಹನ್ನೆರಡನೆಯ ಅಶುಭ ಫಲದಾಯಕ ...ರುವು ಹಾಗು ೧೬-೬-೧೯೮೭ ರಿಂದ ಬರುವ ...ನ್ನಷ್ಟ ಮಧ್ಯಮ ಫಲದಾಯಕ ಗುರುವಿ...ನಿಂದಾಗಿ ಇನ್ನಷ್ಟು ತೊಂದರೆಯನ್ನು ಎದುರಿಸ...ಬೇಕಾಗುತ್ತದೆ. ಹೀಗೆ ಅನೇಕ ಗ್ರಹಗಳ ...ವಕ್ರದೃಷ್ಟಿಗೆ ಪಾತ್ರರಾದ ನಿಮಗೆ ಈ ವರುಷ ...ಎಂದರೆ ನಿಮ್ಮ ಜೀವನದ ಸತ್ವಪರೀಕ್ಷೆಯೇ ...ಗಿದೆ. ಧೈರ್ಯಶಾಲಿಗಳಾದ ನೀವು ಇಂಥ ಕಠಿಣ ...ಪರಿಸ್ಥಿತಿಯಿಂದ ಪಾರಾಗುವಿರಿ. ಆದರೆ ...ಶಾಂತಿಸಿಂದಲೇ ಶತ್ರುಗಳನ್ನು ನಿರ್ಮೂ...ಲನ ಮಾಡಿಕೊಳ್ಳುವ ನಿಮ್ಮ ಸ್ವಭಾವದಲ್ಲಿ ...ಮಾರ್ಪಾಟು ಮಾಡಿಕೊಳ್ಳಿರಿ. ಅಲ್ಲದೇ ಈ ವಿಘ್ನ...ಸಂಕಟಗಳಿಂದ ಪಾರು ಮಾಡಲು ಆ ವಿಘ್ನೇಶ್ವರ...ನನ್ನು ಪ್ರಾರ್ಥಿಸಿರಿ, ಪೂಜಿಸಿರಿ.

ಈ ರಾಶಿಯವರ ಆರೋಗ್ಯ ವರುಷವಿಡೀ ಚೆನ್ನಾಗಿರದು. ಒಂದಿಲ್ಲೊಂದು ಕಿರುಕುಳ, ಪೀಡೆ, ಉಪದ್ರವ ಇದ್ದೇ ಇರುವುದಲ್ಲದೆ ನವೆಂಬರ್ ೧೫ ರಿಂದ ಡಿಸೆಂಬರ ೧೬ ರ ವರೆಗೆ ಮಾರ್ಚ ೧೫ ರಿಂದ ಮೇ ೧೫ ರವರೆಗೆ, ಜುಲೈ ೧೬ ರಿಂದ ಆಗಷ್ಟ ೧೬ರ ವರೆಗಿನ ಈ ನಾಲ್ಕು ತಿಂಗಳ ಕಾಲ ತೀರ ಪ್ರತಿಕೂಲವಿದ್ದು, ರೋಗ ಉಲ್ಬಣಸುವುದಲ್ಲದೇ, ಅಪಘಾತದ ಭೀತಿಯೂ ಉಂಟು, ಆದುದರಿಂದ ಈ ಅವಧಿಯಲ್ಲಿ ವಾಹನ ಚಾಲಕರು, ಬಾಹ್ಯ ಹಾಗು ತಾಂತ್ರಿಕ ಕೆಲಸಗಾರರು, ವರ್ಕಶಾಪ್, ಮಶೀನಶಾಪ್ ಕೆಲಸಗಾರರು ವಿಶೇಷ ಎಚ್ಚರಿಕೆಯಿಂದ ಇರುವುದು ಅವಶ್ಯ. ಆರ್ಥಿಕ ದೃಷ್ಟಿಯಿಂದ ನೋಡಿದರೆ ಈ ವರುಷ ತೀರ ತಾಪದಾಯಕವಾಗಿದೆ. ಡಾಕ್ಟರ, ವಕೀಲರ ಬಿಲ್ಲುಗಳಿಗಾಗಿಯೇ ಮುಕ್ಕಾಲು ಆದಾಯ ಖರ್ಚಾಗುತ್ತದೆ. ಆದಾಯ ಅಲ್ಪ, ವೆಚ್ಚ ಜಾಸ್ತಿ ಸಾಲಗಾರರ ಕಾಟ ಹೆಚ್ಚಾಗಿ, ಹಳೇ ಸಾಲ ತೀರಿಸಲು ಹೊಸ ಸಾಲದ ಪರದಾಟದಲ್ಲಿಯೇ ವರುಷ ಕಳೆಯಬೇಕಾಗುತ್ತದೆ. ಆದಾಗ್ಯೂ ಜನೇವರಿ ೧೪ ರಿಂದ ಮಾರ್ಚ ೧೫ ರ ವರೆಗಿನ ಕಾಲ ಮತ್ತು ಜೂನ್ ೧೬ ಕ್ಕೆ ಬರಲಿರುವ ಅತಿಚಾರಗತಿಯ ಅಲ್ಪಾವಧಿಯ ಜನ್ಮಸ್ಥ ಗುರುವಿನಿಂದಾಗಿ ಉತ್ತರಾರ್ಧವು ಇದ್ದುದರಲ್ಲಿಯೇ ಅನುಕೂಲವಿದ್ದು ಈ ಕಾಲದಲ್ಲಿ ನಿರೀಕ್ಷಿಸಿದ ಮೂಲದಿಂದ ದ್ರವ್ಯಾನುಕೂಲತೆಯಾಗುವುದರಿಂದ ಅವಮಾನದ ಪ್ರಸಂಗ ತಪ್ಪುವುದು. ಆದರೆ ಮಾರ್ಚ ೧೫ ರಿಂದ ಜೂನ್ ೧೫ ರ ವರೆಗಿನ ಈ ಮೂರು ತಿಂಗಳ ಕಾಲ ಆರ್ಥಿಕ ಅನಾನುಕೂಲತೆ ಪರಾಕಾಷ್ಠೆ ಮುಟ್ಟಿ ನಿಮ್ಮ ಸತ್ವ ಪರೀಕ್ಷೆಯಾಗುವುದಾದರೂ ಅದರಲ್ಲಿ ಯಶಸ್ಸು ಗಳಿಸುವಿರಿ.

ಕೋರ್ಟು ಕಚೇರಿಯ ಯಾವದೇ ಪ್ರಕಾರದ ವ್ಯಾಜ್ಯಗಳಿಗೆ ಈ ವರುಷ ಕೈ ಹಾಕದಿರುವುದೇ ಹಿತಕರವು. ಕೈ ಹಾಕಿದಲ್ಲಿ ಸುಟ್ಟುಕೊಳ್ಳುವಿರಿ. ದಾವೆ ದಾಖಲು ಮಾಡುವುದು ಅನಿವಾರ್ಯವಿದ್ದಲ್ಲಿ, ಫೌಜುದಾರಿ ಹಾಗು ರಾಜಕೀಯ ವ್ಯಾಜ್ಯಗಳಿಗೆ ಪೂರ್ವಾರ್ಧವು, ದಿವಾಣವ್ಯಾಜ್ಯಗಳಿಗೆ ಉತ್ತರಾರ್ಧವು ಕೆಲ ಮಟ್ಟಿಗೆ ಅನುಕೂಲವಿದ್ದರೂ ಮುದ್ದತ ತೆಗೆದುಕೊಂಡು ಮುಂದೂಡುವುದೇ ಹಿತಕರವು.

ಈ ರಾಶಿಯ ನೌಕರವರ್ಗದವರಿಗೆ ಈ ವರುಷ ಪ್ರತಿಕೂಲವಾಗಿದೆ. ಮೇಲಾಧಿಕಾರಿಗಳ ಉಪದ್ರವಕ್ಕೆ ಬೇಸತ್ತು ಇಲ್ಲವೇ ಹಿಂಬಡತಿಯ ಮೂಲಕ ರಾಜೀನಾಮೆ ಕೊಡುವ ಪ್ರಸಂಗ ಬರಬಹುದು. ಅಶುಭಸ್ಯ ಕಾಲಹರಣಂ ಎಂಬಂತೆ ನೀವು ತಾಳ್ಮೆಯಿಂದ ಇದ್ದರೆ ಎಲ್ಲವೂ ಸರಿಯಾಗುತ್ತದೆ. ಅದರಲ್ಲಿಯೂ ನವಂಬರ ೧೫ ರಿಂದ ಜನೇವರಿ ೧೩ ರ ವರೆಗೆ ಹಾಗೂ ಮಾರ್ಚ ೧೫ ರಿಂದ ಜೂನ ೧೫ ರ ವರಗೆ ಮತ್ತು ಜುಲೈ ೧೫ ರಿಂದ ಅಗಷ್ಟ ೧೫ ರ ವರೆಗೆ ಇರುವ ಕಾಲ ಪ್ರತಿಕೂಲವಾಗಿದ್ದು ಈ ಕಾಲದಲ್ಲಿ ಅನಪೇಕ್ಷಿತ ಸ್ಥಳಕ್ಕೆ ಬದಲಿ ಆಗುವುದಲ್ಲದೇ ವರಿಷ್ಠರಿಂದ ಅಸಹನೀಯ ಕಿರುಕಳ ಉಂಟಾಗಬಹುದಾಗಿದೆ. ಆದರೆ ಜನೇವರಿ ೧೪ ರಿಂದ ಮಾರ್ಚ ೧೪ರ ವರೆಗೆ ಹಾಗೂ ಜೂನ ೧೫ ರಿಂದ ಜುಲೈ ೧೫ ರ ವರಗೆ ಮತ್ತು ಅಗಷ್ಟ ೧೫ ರಿಂದ ವರುಷಾಂತ್ಯದ ವರಗಿನ ಕಾಲ ತುಸು ಅನುಕೂಲವಿದ್ದು ವರಿಷ್ಠರ ತಪ್ಪು ತಿಳವಳಿಕೆ ದೂರಾಗಿ ಸಹಕಾರ ಕುದುರುವುದರಲ್ಲಿ ಸಹಾಯವಾಗುವುದು. ನಿರುದ್ಯೋಗಿಗಳಿಗಂತೂ ಅತಿ ಅಸಹನೀಯ ವರುಷವಾದರೂ ಡಿಸೆಂಬರ ೧೫ ರಿಂದ ಮಾರ್ಚ ೧೫ ರ ವರಗೆ ಹಾಗು ಅಗಷ್ಟ ೧೫ ರಿಂದ ಅಕ್ಟೋಬರ ೧೮ ರ ವರೆಗಿನ ಕಾಲ ತುಸು ಆಸರೆ ಸಿಗುತ್ತದೆ. ಹಂಗಾಮಿ ನೌಕರ

---

ವಿಕ್ರಮ ಸಂವತ್ಸರದ ೨೦೪೩ ರ ಭವಿಷ್ಯ, ಅರ್ಥಾತ್ ಶ್ರೀಮನ್‌ನೃಪ ಶಾಲಿವಾಹನ ಶಕೆ ೧೯೦೮ ನೇ ಕ್ಷಯಸಂವತ್ಸರದ ಕಾರ್ತಿಕಶುದ್ಧ ಪ್ರತಿಪದೆಯಿಂದ ೧೯೦೯ ನೇ ಪ್ರಭವ ಸಂವತ್ಸರದ ಆಶ್ವೀನ ಬಹುಳ ಅಮಾವಾಸ್ಯೆಯ ವರೆಗೆ ಅಂದರೆ ಕ್ರಿಸ್ತ ಶಕೆ ೧೯೮೬ ನೇ ನವೆಂಬರ ೩ನೇ ತಾರೀಖಿನಿಂದ ೧೯೮೭ ನೇ ಅಕ್ಟೋಬರ ೨೨ ತಾರೀಖಿನ ವರೆಗೆ ಅರ್ಥಾತ್ ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗಿನ ವರ್ಷ ಭವಿಷ್ಯ :

---

ದಾರರು ಅಸ್ಥಿರತೆಯಲ್ಲಿಯೇ ಇದೊಂದು ವರುಷ ಕಳೆಯಬೇಕಾಗುತ್ತದೆ. ಈ ರಾಶಿಯ ಬಾಹ್ಯ ಹಾಗು ತಾಂತ್ರಿಕ ಕೆಲಸಗಾರರಿಗೂ ಗಿರಣಿ ಕಾರಖಾನೆಗಳ ಕಾರ್ಮಿಕರಿಗೂ ಶನಿ-ರಾಹುಗಳ ಪ್ರತಿಕೂಲತೆಯಿಂದಾಗಿ ನಿರುತ್ಸಾಹದ ವರುಷವಾಗಿದೆ. ಇದ್ದುದರಲ್ಲಿಯೇ ಡಿಸೆಂಬರ ೧೫ ರಿಂದ ಮಾರ್ಚ ೧೫ ರ ವರೆಗೆ ಹಾಗೂ ಜೂನ ೧೫ ರಿಂದ ಜುಲೈ ೧೫ ರ ವರಗಿನ ಕಾಲ ತುಸು ಅನುಕೂಲವಿರುವುದರಿಂದ ಅವರ ಕೆಲ ಬೇಡಿಕೆಗಳು ಕೆಲಮಟ್ಟಿಗೆ ಈಡೇರುತ್ತವೆ. ಈ ರಾಶಿಯ ಕೃಷಿಕ ವರ್ಗದವರಿಗೂ ಮಿಶ್ರಫಲವಿದೆ. ಪೂರ್ವಾರ್ಧವು ಪ್ರೋತ್ಸಾಹದಾಯಕವಿದ್ದು ಮುಂಗಾರಿ ಬೆಳೆ ಕೈ ಹಿಡಿದರೆ ಉತ್ತರಾರ್ಧವು ನಿರುತ್ಸಾಹದಾಯಕವಿದ್ದು ಕೈ ಕೊಡುವುದರಿಂದ ಸಾಲ ಮಾಡುವ ಇಲ್ಲವೇ ಹೊಲ ಮನೆಗಳನ್ನು ವತ್ತಿ ಹಾಕುವ ಪ್ರಸಂಗ ಬರುವುದು.

ಈ ರಾಶಿಯ ಸಾಹಿತಿ, ಲೇಖಕ, ಕಲಾವಿದ, ಪ್ರಕಾಶಕ, ಪತ್ರಿಕೋದ್ಯಮಿ, ಶಿಕ್ಷಕ ವಕೀಲ, ಡಾಕ್ಟರ್, ನ್ಯಾಯಾಧೀಶ ಮೊದಲಾದ ಬುದ್ಧಿಜೀವಿ ವರ್ಗದವರಿಗೆಲ್ಲ ಮಿಶ್ರಫಲದಾಯಕ ವರುಷವಾಗಿದೆ. ಡಿಸೆಂಬರ್ ೧೫ ರಿಂದ ಮಾರ್ಚ ೧೫ರ ವರೆಗೆ, ಜೂನ ೧೫ ರಿಂದ ಜಲೈ ೧೫ರ ವರೆಗೆ, ಮತ್ತು ಅಗಷ್ಟ ೧೫ ರಿಂದ ಅಕ್ಟೋಬರ್ ೧೬ರ ವರೆಗಿನ ಈ ಆರು ತಿಂಗಳ ಕಾಲ ಪ್ರೋತ್ಸಾಹದಾಯಕವಾಗಿದ್ದು, ಉದ್ಯೋಗದಲ್ಲಿ ಪ್ರಗತಿ ಸ್ಥಿರತೆ, ಮನ್ನಣೆ, ಪ್ರಶಸ್ತಿ ಲಭಿಸುವಿಕೆ, ಮೊದಲಾದ ಶುಭ ಫಲಗಳು ಸಿಕ್ಕುವುದಲ್ಲದೇ ಆರ್ಥಿಕ ಸ್ಥಿತಿಯು ಸುಧಾರಿಸುತ್ತದೆ. ಆದರೆ ಉಳಿದ ಆರು ತಿಂಗಳ ಕಾಲ ತೀರ ಪ್ರತಿಕೂಲವಿದ್ದು, ಮಿತ್ರರು ಶತ್ರುಗಳಾಗುವುದರಿಂದ ಮಿಥ್ಯಾಪವಾದವನ್ನು ಎದುರಿಸಬೇಕಾಗುವುದಲ್ಲದೆ, ಉದ್ಯೋಗದಲ್ಲಿ ಹಿನ್ನಡೆ, ಆರ್ಥಿಕ ತಾಪತ್ರತೆಯಿಂದಾಗಿ ಅವಮಾನಕಾರಕ ಪ್ರಸಂಗವನ್ನು ಎದುರಿಸಬೇಕಾಗಬಹುದು. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ, ಉದ್ದಿಮೆದಾರರಿಗೂ, ಪಂಚಿಕೆದಾರರಿಗೂ, ಕಮಿಶನ್ ಏಜಂಟರಿಗೂ, ಗಿರಣಿ ಕಾರ್ಖಾನೆ, ಚಾಳ, ಟಾಕೀಜಗಳ ಮಾಲಿಕ ವರ್ಗದವರಿಗೂ ಮಿಶ್ರ ಫಲವಿದೆ, ವರುಷದ ಪ್ರಾರಂಭಿಕ ಮೂರು ತಿಂಗಳು ಹಾಗು ಕೊನೆಯ ಮೂರು ತಿಂಗಳು ಉತ್ಸಾಹದಾಯಕವಾಗಿದ್ದು, ಉದ್ಯೋಗದಲ್ಲಿ ಪ್ರಗತಿ ಹಾಗು ಆರ್ಥಿಕ ಸ್ಥಿತಿ ಚೇತರಿಸಿಕೊಳ್ಳುತ್ತದೆ. ಆದರೆ ಮಧ್ಯದ ಆರು ತಿಂಗಳ ಕಾಲ ತೀರ ತಾಪದಾಯಕವಾಗಿದ್ದು ಉದ್ಯೋಗದಲ್ಲಿ ತೊಂದರೆಯನ್ನು ಆರ್ಥಿಕ ಮುಗ್ಗಟ್ಟನ್ನು ಎದುರಿಸಬೇಕಾಗುವದಲ್ಲದೆ ಮಶಿನರಿ ತೊಂದರೆ, ನೌಕರ ವರ್ಗದವರ ಸಮಸ್ಯೆಗಳೊಂದಿಗೆ ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ. ಹೊಸ ಉದ್ಯೋಗ ಹೊಸ ಉದ್ದಿಮೆ ಪ್ರಾರಂಭಿಸಬೇಕೆಂಬ ವಿಚಾರ ಈ ವರುಷ ಕೈ ಬಿಡುವುದೇ ಹಿತಕರ.

ಈ ರಾಶಿಯ ವಧೂ-ವರರಿಗೆ ಮಿಶ್ರ ಫಲ. ವರುಷ ಪ್ರಾರಂಭದಿಂದ ನಾಲ್ಕು ತಿಂಗಳ ಕಾಲ ಅಂದರೆ ನವೆಂಬರ್‌ದಿಂದ ಫೆಬ್ರುವರಿ ಕೊನೆಯ ವರೆಗಿನ ಕಾಲ ಕಂಕಣ ಬಲವಿದ್ದು ನಿರ್ವಿಘ್ನವಾಗಿ ವಿವಾಹ ಸಾಂಗವಾಗುವುದು. ಆದರೆ ಮಾರ್ಚದಿಂದ ವರುಷಾಂತ್ಯದ ವರೆಗಿನ ಕಾಲ ಪ್ರತಿಕೂಲವಿದ್ದು ಅನೇಕ ವಿಘ್ನಗಳಿಂದ ವಿವಾಹ ಸಾಂಗವಾಗುತ್ತದೆ. ಈ ರಾಶಿಯ ವಿವಾಹಿತ ಸ್ತ್ರೀಪುರುಷರಿಗೂ ಗೃಹಿಣಿಯರಿಗೂ ಅಶಾಂತಿಯ ವರುಷವಾಗಿದೆ. ಪ್ರತಿನಿತ್ಯದ ಗೃಹಕಲಹದಿಂದಾಗಿ, ನಿದ್ರಾರಹಿತವಾದ ಹಲವು ರಾತ್ರಿಗಳನ್ನು ಕಳೆಯಬೇಕಾಗುತ್ತದೆ. ವಿಶೇಷವಾಗಿ ಮಾರ್ಚ ೧೫ ರಿಂದ ಅಗಷ್ಟ ೧೬ರ ವರೆಗಿನ ಈ ಐದು ತಿಂಗಳ ಕಾಲವಂತೂ ತೀರ ಪ್ರತಿಕೂಲವಿದ್ದು ತಪ್ಪು ತಿಳುವಳಿಕೆಯಿಂದಲೂ ಚಾಡಿಯ ಪ್ರಭಾವದಿಂದಲೂ ಏಕತ್ರಕುಟುಂಬ ಒಡೆಯಬಹುದಾಗಿದೆ. ಈ ರಾಶಿಯ ಗರ್ಭವತಿಯರಿಗೆ ಮಿಶ್ರಫಲವಿದೆ. ಹೆರಿಗೆಯು ನವೆಂಬರ್ ೩ ರಿಂದ ಮಾರ್ಚ ೧೬ರ ವರೆಗೆ ಆದರೆ ಸುಖಪ್ರಸವವು, ಮಿಕ್ಕ ಅವಧಿಯಲ್ಲಿಯಾದರೆ ಕಷ್ಟ ಪ್ರಸವವು ಇದ್ದು, ಶಸ್ತ್ರಕ್ರಿಯೆ ಅನಿವಾರ್ಯವಾಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಮಿಶ್ರಫಲದಾಯಕ ವರುಷವಾಗಿದೆ. ನವಂಬರ ೩ ರಿಂದ ಮಾರ್ಚ ೧೫ ರ ವರಗಿನ ಕಾಲ ಪ್ರೋತ್ಸಾಹದಾಯಕವಾಗಿದ್ದು, ಈ ಕಾಲದಲ್ಲಿ ನಿರ್ವಿಘ್ನವಾಗಿ ಶಿಕ್ಷಣ ಕೋರ್ಸು ಮುಂದುವರೆಯುದಲ್ಲದೆ ಇದೇ ಅವಧಿಯಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗುತ್ತಾರೆ. ಆದರೆ ಮಾರ್ಚ ೧೫ ರಿಂವ ವರುಷಾಂತ್ಯದ ವರೆಗಿನ ಕಾಲ ಪ್ರತಿಕೂಲವಿದ್ದು ಶಿಕ್ಷಕರ ಅವ-ವರಣದಿಂದಾಗಲಿ, ಆರ್ಥಿಕ ಮುಗ್ಗಟ್ಟಿನಿಂದಾ ಶಿಕ್ಷಣ ಮುಂದುವರೆಸುವುದೇ ಕಠಿಣವಾಗುತ್ತ ಇದೇ ಅವಧಿಯಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾ ಗಳು ಸಾದಾ ತರಗತಿಯಲ್ಲಿ ತೇರ್ಗಡೆಯಾಗ ಸಹ ಹೆಣಗಾಡಬೇಕಾಗುತ್ತದೆ.



ಈ ಕಾಲದ ಹೇಪರಿನವರಿಗೆ ಸರಿಯಾಗಿ ಕಾಗುಣಿತ ಕೂಡ ಬರೋಲ್ಲ. ನಮ್ಮ ಅಂಗಡೀನ 'ಅನ್ಯಾಯಬೆಲೆ ಅಂಗಡಿ' ಅಂತ ಪ್ರಿಂಟು ಮಾಡಿದಾರೆ!

ಈ ರಾಶಿಯ ರಾಜಕೀಯ ನಾಯ ಕಾರ್ಯಕರ್ತರಿಗೆ ಮಿಶ್ರ ಫಲವಿದೆ. ನವೆಂಬ ರಿಂದ ಮಾರ್ಚ ೧೫ ರ ವರೆಗಿನ ಕಾಲ ಪ್ರೋ ಹದಾಯಕವಿದ್ದು, ಪ್ರತ್ಯಕ್ಷ ರಾಜಕೀಯ ಪ್ರವೇಶಿಸಿ ಸ್ಥಾನಮಾನ ಅಧಿಕಾರ ಪಡೆ ಬಹುದಾಗಿದೆ. ಇದೇ ಅವಧಿಯಲ್ಲಿ ಜರುಗಲಿರ ಚುನಾವಣೆಗೆ ಸ್ಪರ್ಧಿಸಿದಲ್ಲಿ ಜಯ ಖಂಡಿ ಆದರೆ ಮಾರ್ಚ ೧೫ ರಿಂದ ವರುಷಾಂತ ವರಗಿನಕಾಲ ಪ್ರತಿಕೂಲವಿದ್ದು, ಮಿತ್ರರೇ ಶ ಗಳಾಗುವುದರಿಂದ ಸ್ಥಾನಮಾನಕ್ಕೆ ಚ್ಯುತಿ ಇ ಹಾಗೂ ಇದೇ ಅವಧಿಯಲ್ಲಿ ಜರುಗಲಿರ ಚುನಾವಣೆ ಮೊದಲಾದ ಜಂಜಾಟದಿಂದ ದೂ ಇರುವುದೇ ಹಿತಕರವು.

ಒಟ್ಟಿನಲ್ಲಿ ಈ ರಾಶಿಯವರಿಗೆ ಏಳು ತಿಂಗ ಕಾಲ ಅಶುಭವಿದ್ದರೆ ಐದು ತಿಂಗಳು ಕಾ ಶುಭವಿದೆ. ಅಶ್ವಿನಿ ನಕ್ಷತ್ರದವರಿಗೆ ತೊಂ ಕಡಿಮೆ, ಆದರೆ ಭರಣಿ, ಕೃತ್ತಿಕಾದವರಿಗೆ ತೊಂ ಬಹಳ, ಮಾರ್ಚ ೧೫ ರಿಂದ ವರುಷಾಂತ ವರಗಿನ ಕಾಲ ತೀರ ತಾಪದಾಯಕವಿರುವುದರಿ ಈ ಕಾಲದಲ್ಲಿ ಶನಿ, ಗುರು ಜಪ ಮಾಡಿ ಇಲ್ಲವೇ ನವಗ್ರಹ ಶಾಂತಿ ಮಾಡಿಸಿದಲ್ಲಿ ಅಶು ಫಲಗಳು ಕಡಿಮೆ ಆಗುವುದರಲ್ಲಿ ಸಂದೇಹವಿಲ್ಲ



## ವೃಷಭ

ಈ ರಾಶಿಯ ಎಲ್ಲ ವರ್ಗದವರಿ ಎಲ್ಲ ದೃಷ್ಟಿಯಿಂದಲೂ ಪ್ರೋತ್ಸಾ ದಾಯಕ ವರುಷವಾಗಿದೆಯಾದರೂ ವರ ಷಾಂತ್ಯದ ೫ ತಿಂಗಳುಗಳು ತು ತೊಂದರೆದಾಯಕ.

ಈ ರಾಶಿಯವರ ಗ್ರಹಗತಿಯನ್ನು ಅ ಲೋಕಿಸಲಾಗಿ, ವರುಷಪತಿ ಶನಿಯು ಏಳ ಯವನಾಗಿರುವುದರಿಂದ ಶುಭಫಲವ ನೀಡಲಾರ, ಅದರಂತೆ ಅಶುಭಫಲವ ಕೊಡಲಾರ. ಆದರೆ ಕಳೆದ ಅಗಸ್ಟದಿ ಅತ್ಯಂತ ಶುಭಫಲವನ್ನು ಕೊಡುತ್ತಿ ಹನ್ನೊಂದನೆಯ ರಾಹುವಿನ ಶುಭ ಫಲವು ವರುಷವೂ ಕೂಡ ದೊರೆಯುತ್ತದೆ. ಇದಲ್ಲ ನಾಳಿನ ಫೆಬ್ರುವರಿ ೩ ರಿಂದ ಬರಲಿರ ಹನ್ನೊಂದನೇ ಶುಭಫಲದಾಯಕ ಗುರು ಕೃಪೆಯು ಕೂಡ ವರುಷದ ಬಹಳ ಅವಧಿ ವರೆಗೆ ದೊರೆಯುತ್ತದೆ. ಹೀಗೆ ಅನೇಕ ಗ

ವಿಲ ಎಡಿದ ನಿಮಗೆ ಈ ವರುಷವು
ಹಾಗೂ ಸ್ಮರಣೀಯವಾಗಿದ್ದು ಬಹು
ದ ಆಗದೇ ಇರುವ ನಿಮ್ಮೆಲ್ಲ ಆಶೆ
ಗಳು ಈ ವರುಷ ಈಡೇರುತ್ತವೆ.

ರೋಗ್ಯ ದೃಷ್ಟಿಯಿಂದ ನೋಡಿದರೆ ವರುಷ
ಕನ್ನಾಗಿದ್ದರೂ, ಡಿಶೆಂಬರ ೧೫ ರಿಂದ
೧೪ ರ ವರೆಗೆ, ಎಪ್ರಿಲ ೧೨ ರಿಂದ
೧೫ ರ ವರೆಗೆ, ಹಾಗು ಅಗಸ್ಟ ೧೫
ಸಪ್ಟೆಂಬರ ೧೬ ರ ವರೆಗೆ ಇರುವ ಈ
ತಿಂಗಳು ಕಾಲ ಮಾತ್ರ ತುಸು ಕೆಡ
ಗಿದೆ. ಆರ್ಥಿಕ ದೃಷ್ಟಿಯಿಂದ ನೋಡಿ
ಬೇಕಾಗಿದ್ದ ಹಣವು ನಿರೀಕ್ಷಿಸಿದ ಮೂಲ
ಬಂದೇ ಬರುತ್ತದೆ. ಅಲ್ಲದೇ ಜನೇವರಿ
ದ ಎಪ್ರಿಲ್ ೧೨ ಹಾಗು ಜೂನ ೧೫
ಅಗಸ್ಟ ೧೫ ರ ವರೆಗಿನ ಈ ಕಾಲದಲ್ಲಿ
ವಾರಸಾ, ಬಕ್ಷೀಸ, ಬಹುಮಾನ,
, ಲಾಟರಿ, ಮೊದಲಾದವುಗಳ ಧನ
ರೂಗುವದರಿಂದ ನಿಮ್ಮ ಆರ್ಥಿಕ ಸ್ಥಿತಿ
ರುಷ ತೃಪ್ತಿಕರವಿರುತ್ತದೆ. ಕೋರ್ಟು
ಮೊದಲಾದ ಯಾವದೆ ಬಗೆಯ ವ್ಯಾಜ್ಯ
ಯೂ ಖಂಡಿತ ಜಯ ದೊರೆಯುತ್ತದೆ.
ಯೂ ಫೌಜುದಾರಿವ್ಯಾಜ್ಯಗಳಿಗೆ ಪೂರ್ವಾ
ದಿವಾಣವ್ಯಾಜ್ಯಗಳಿಗೆ ಉತ್ತರಾ
ಯೂ, ರಾಜಕೀಯ ಹಾಗೂ
ಸಂಬಂಧಿಸಿದ ವ್ಯಾಜ್ಯಗಳಿಗೆ ಮಧ್ಯ
ಯಶಸ್ಸು ಲಭಿಸುತ್ತದೆ,

ರಾಶಿಯನೌಕರ ವರ್ಗದವರಿಗೆ ಈ
ಮಿಶ್ರಫಲವಿದೆ. ನವೆಂಬರ್ ೩ ರಿಂದ
೧೨ರ ವರೆಗಿನ ಕಾಲ ಪ್ರೋತ್ಸಾಹ
ವಿದ್ದು ನೌಕರಿಯಲ್ಲಿ ಬಡತಿ, ಇಚ್ಛಿತ
ಬದಲಿ, ವರಿಷ್ಠರ ಸಹಕಾರ ಲಭಿಸುವಿಕೆ
ದ ಶುಭಘಟನೆಗಳು ಜರುಗಿದರೆ,
೧೩ ರಿಂದ ಅಕ್ಟೋಬರ್ ೧೮ರ ವರೆಗಿನ
ಪ್ರತಿಕೂಲವಿದೆ. ಆದರಲ್ಲಿಯೂ ಜೂನ
ಕ್ಟೋಬರ್ ವರೆಗೆ ಇರುವ ಹನ್ನೆರಡನೇ
ಂದಾಗಿ (ಅಶುಭ ಫಲದಿಂದಾಗಿ)
ಸ್ಥಳಕ್ಕೆ ಬದಲಿ, ವರಿಷ್ಠರ ಅಸಹಕಾರ
ಅಶುಭ ಘಟನೆಗಳು ಜರುಗುವವು. ಈ
ಸಿರುದ್ಯೋಗಿಗಳಿಗೆ ಜನೇವರಿ ೧೪ ರಿಂದ
೫ ರ ವರಗಿನ ಕಾಲದಲ್ಲಿ ಉದ್ಯೋಗ
ದು, ಹಂಗಾಮಿ ನೌಕರ ವರ್ಗದವರಿಗೆ
ರಿಸ್ಥಿತಿ ಮುಂದುವರೆದರೂ ನೌಕರಿಗೆ
. ಈ ರಾಶಿಯ ಗಿರಣಿ, ಕಾರಖಾನೆ
ರ್ಕ ವರ್ಗದವರಿಗೂ, ಬಾಹ್ಯ ಹಾಗೂ
ಕೆಲಸಗಾರರಿಗೂ, ವರ್ಕಶಾಪ ಮಶಿನ
ಕೆಲಸಗಾರರಿಗೂ, ಶ್ರಮಜೀವಿಗಳಿಗೂ
ಹುಗಳು ವರುಷವಿಡೀ ಶುಭರಿರುವುದ
ಪ್ರೋತ್ಸಾಹದಾಯಕವಾಗಿದ್ದು ಅವರ
ಬೇಡಿಕೆಗಳು ಈ ವರ್ಷ ಈಡೇ
ಈ ರಾಶಿಯ ಸಾಹಿತಿ, ಕಲಾವಿದ,
ಪತ್ರಿಕೋದ್ಯಮಿ, ಡಾಕ್ಟರ, ವಕೀಲ, ಚಾರ್ಟರ್ಡ
ಆಕೌಂಟಂಟ, ಶಿಕ್ಷಕ, ಅಧ್ಯಾಪಕ, ನ್ಯಾಯಾಧೀಶ,
ಪ್ರಕಾಶಕ, ಮುದ್ರಕ, ಮೊದಲಾದ ಬುದ್ಧಿ
ಜೀವಿ ವರ್ಗದವರಿಗೆ ಮಿಶ್ರ ಫಲದಾಯಕ
ವರುಷವಾಗಿ ಪೂರ್ವಾರ್ಧವು ಪ್ರಗತಿದಾಯಕ
ವಾಗಿದ್ದರೆ ಉತ್ತರಾರ್ಧವು ಪ್ರತಿಕೂಲವಿದೆ.
ಅಂದರೆ ನವಂಬರದಿಂದ ಎಪ್ರಿಲ್‌ವರೆಗೆ ಇರುವ
ಕಾಲ ಪ್ರಗತಿದಾಯಕವಿದ್ದು ಉದ್ಯೋಗದಲ್ಲಿ
ಸ್ಥಿರತೆ, ಪ್ರಗತಿ ಮುನ್ನಣೆ, ದೊರೆಯುವು
ದಲ್ಲದೆ ಸಂಘಸಂಸ್ಥೆಗಳಿಂದಲೂ, ಸರಕಾರ
ದಿಂದಲೂ ಪ್ರಶಸ್ತಿ ಪದಕಗಳು ದೊರೆತು ಮಾನ
ಸನ್ಮಾನ ಹೊಂದಿ ದ್ರವ್ಯಾನುಕೂಲತೆಯುನ್ನು
ಪಡೆಯುವರು. ಆದರೆ ಮೇ ದಿಂದ ಅಕ್ಟೋಬರ
ವರೆಗಿನ ಕಾಲ ತಾಪದಾಯಕವಾಗಿದ್ದು ಉದ್ಯೋ
ಗದಲ್ಲಿ ಹಿನ್ನೆಡೆ, ಮಿಥ್ಯಾಪವಾದ, ಆರ್ಥಿಕ
ಮುಗ್ಗಟ್ಟನ್ನು ಎದುರಿಸಬೇಕಾಗುತ್ತದೆ. ಈ
ರಾಶಿಯ ಕೃಷಿಕ ವರ್ಗದವರಿಗೂ ಕೂಡ ಶನಿ
ರಾಹುಗಳು ಶುಭರಿರುವುದರಿಂದ ಪ್ರೋತ್ಸಾಹ
ದಾಯಕ ವರುಷವಾಗಿದೆ. ನಿರೀಕ್ಷೆಗಿಂತಲೂ ಅಧಿಕ
ಬೆಳೆ ಬಂದು ಹಿಂದಿನ ಸಾಲಗಳೆಲ್ಲವೂ ತೀರುವು
ದಲ್ಲದೇ ಹೊಸ ಜಾಗೆ, ಹೊಲ ಮನೆಗಳನ್ನು
ಬೇಸಾಯದ ಉಪಕರಣಗಳನ್ನು ದನ ಕರುಗಳು,
ಟ್ರಕ್, ಟ್ರ್ಯಾಕ್ಟರ, ಪಂಪ್‌ಸೆಟ್ಟುಗಳನ್ನು
ಮೊದಲಾದವುಗಳನ್ನು ಕೊಳ್ಳುವ ಇಲ್ಲವೆ ನವೀ
ಕರಿಸುವ ಸಾಮರ್ಥ್ಯ ಬರುತ್ತದೆ.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗ
ಸ್ಥರಿಗೂ ಉದ್ದಿಮೆದಾರರಿಗೂ, ಗಿರಣಿ, ಕಾರ
ಖಾನೆ, ಹೋಟೆಲ, ಟಾಕೀಜ ಮಾಲಿಕ, ಚಾಳ
ಮಾಲಿಕ ವರ್ಗದವರಿಗೂ, ಹಂಚಿಕೆದಾರರಿಗೂ,
ಈ ವರುಷ ಮಿಶ್ರಫಲವಿದೆ. ಫೆಬ್ರುವರಿಯಿಂದ
ಜುಲೈ ವರೆಗಿನ ಈ ಆರು ತಿಂಗಳ ಕಾಲ
ಪ್ರೋತ್ಸಾಹದಾಯಕವಾಗಿದ್ದು ಈ ಅವಧಿಯಲ್ಲಿ
ಉದ್ಯೋಗದಲ್ಲಿ ಲಾಭವಾಗಿ ಹೇರಳ ಹಣ
ಸಂಪಾದಿಸುವರಲ್ಲದೇ ಹೊಸ ಉದ್ಯೋಗ ಕೈ-
ಕೊಳ್ಳುವ ಇಲ್ಲವೇ ಇದ್ದ ಉದ್ಯೋಗದಲ್ಲಿ ಹೊಸ
ಶಾಖೆಗಳನ್ನು ತೆರೆಯುವ ಮತ್ತು ಉದ್ಯೋಗಕ್ಕೆ
ಬೇಕಾಗಬಹುದಾದ ಹೊಸ ಉಪಕರಣಗಳನ್ನಾಗಲಿ
ಹೊಸ ಮಶಿನರಿಗಳನ್ನಾಗಲಿ ಖರೀದಿಸುವ ಇಲ್ಲವೇ
ನವೀಕರಿಸುವ ಪ್ರಗತಿದಾಯಕ ಸಂಗತಿಗಳು
ನಡೆಯುವವು. ನವೆಂಬರ್‌ದಿಂದ ಜನೇವರಿ.
ಆಗಷ್ಟದಿಂದ ಅಕ್ಟೋಬರ್ ಈ ಆರು ತಿಂಗಳು
ಕಾಲ ತೀರ ಪ್ರತಿಕೂಲವಿದ್ದು ಉದ್ಯೋಗದಲ್ಲಿ
ತೊಂದರೆ ಉದ್ಭವಿಸುವುದಲ್ಲದೇ ಮಶಿನರಿ ಕಿರು
ಕುಳ ಸಾಲಗಾರರ ಕಾಟ, ನೌಕರರ ಸಮಸ್ಯೆ
ಗಳೊಡನೆ ಸರಕಾರದ ನಿರ್ಬಂಧನೆಗಳನ್ನು ಎದು
ರಿಸಬೇಕಾಗುತ್ತದೆ.

ಕಳೆದ ಅನೇಕ ವರುಷಗಳಿಂದ ಗೃಹಸ್ಥಾ
ಶ್ರಮಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ
ವಧೂ-ವರರಿಗೆ ಈ ವರುಷ ಅವರ ಮನೋರಥ
ಈಡೇರುವುದರಲ್ಲಿ ಸಂದೇಹವಿಲ್ಲ, ಅದರಲ್ಲಿಯೂ




ನವೆಂಬರ್ ೩ ರಿಂದ ಜೂನ ೧೫ರ ಒಳಗೆ ನಿರ್ವಿ-
ಘ್ನವಾಗಿ ವಿವಾಹ ಜರುಗಿ, ಗೃಹಸ್ಥಾಶ್ರಮ
ವನ್ನು ಪ್ರವೇಶಿಸುವರು. ಆದರೆ ಈ ರಾಶಿಯ
ವಿವಾಹಿತ ಸ್ತ್ರೀ ಪುರುಷರಿಗೆ, ಗೃಹಿಣಿಯರಿಗೆ
ಮಾತ್ರ ಮಿಶ್ರಫಲದಾಯಕ ವರುಷವಾಗಿದೆ.
ಫೆಬ್ರುವರಿಯಿಂದ ಜುಲೈದ ವರೆಗಿನ ಆರು ತಿಂಗಳ
ಕಾಲ ಪ್ರೋತ್ಸಾಹದಾಯಕವಾಗಿದ್ದು, ಈ ಕಾಲ
ದಲ್ಲಿ ಹೊಲ, ಮನೆ, ಆಸ್ತಿ ವಸ್ತು ಒಡವೆ,
ವಾಹನ ಮೊದಲಾದ ಸ್ಥಾವರ ಹಾಗು ಜಂಗಮ
ಆಸ್ತಿಗಳನ್ನು ಖರೀದಿಸುವರಲ್ಲದೇ ಮನೆಯಲ್ಲಿ
ಮಂಗಲಕಾರ್ಯ ಜರುಗುವಿಕೆ, ತೀರ್ಥಯಾತ್ರಾ
ಸಂದರ್ಶನ, ಪರದೇಶ ಪರ್ಯಟನ, ಮೊದಲಾದ
ಶುಭ ಘಟನೆಗಳು ಜರುಗುವವು. ಆದರೆ ನವೆಂ-
ಬರ್‌ದಿಂದ ಜನೇವರಿ ಹಾಗು ಅಗಷ್ಟದಿಂದ
ಅಕ್ಟೋಬರ್ ವರೆಗಿನ ಆರುತಿಂಗಳ ಕಾಲ ತೀರ
ಪ್ರತಿಕೂಲವಿದ್ದು, ಪ್ರತಿನಿತ್ಯದ ಗೃಹಕಲಹ
ದಿಂದಲೂ, ಮಿಥ್ಯಾಪವಾದದಿಂದಲೂ, ಬಾಡಿಯ
ಪ್ರಭಾವದಿಂದಲೂ ಮನಸ್ಸಿಗೆ ನೆಮ್ಮದಿ ಇರುವು
ದಿಲ್ಲ, ಏಕತ್ರ ಕುಟುಂಬ ಒಡೆಯಬಹುದಾಗಿದೆ,
ಈ ರಾಶಿಯ ಗರ್ಭಿಣಿಯರಿಗೆ ನವೆಂಬರ್‌ದಿಂದ
ಜೂನ ವರೆಗಿನ ಎಂಟು ತಿಂಗಳ ಕಾಲ ಶುಭವಿದ್ದು
ಈ ಕಾಲದಲ್ಲಿ ಹೆರಿಗೆಯಾದರೆ ಸುಖ ಪ್ರಸವವು.
ಇಚ್ಛಿತ ಸಂತತಿಯು ಆಗುತ್ತದೆ, ಆದರೆ ಜುಲೈ
ದಿಂದ ಅಕ್ಟೋಬರ್ ವರೆಗಿನ ನಾಲ್ಕು ತಿಂಗಳಲ್ಲಿ
ಹೆರಿಗೆಯಾದರೆ ಕಷ್ಟ ಪ್ರಸವವು ಆಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಮಿಶ್ರಫಲ
ವಿದೆ, ಫೆಬ್ರುವರಿಯಿಂದ ಜೂನದವರೆಗಿನ ಕಾಲ
ಪ್ರೋತ್ಸಾಹದಾಯಕವಾಗಿದ್ದು ಈ ಕಾಲದಲ್ಲಿ
ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ಶ್ರೇಣಿದರ್ಜೆ
ಯಲ್ಲಿ ತೇರ್ಗಡೆ ಆಗುವರಲ್ಲದೇ ಪ್ರಶಸ್ತಿ, ಪದಕ

., ವಿದ್ಯಾರ್ಥಿವೇತನ, ಶಿಷ್ಯವೃತ್ತಿಯನ್ನು
ಸುವರಲ್ಲದೇ ಹೆಚ್ಚಿನ ಶಿಕ್ಷಣಕ್ಕಾಗಿ ಪರದೇಶ
ಟನ ಕೈಕೊಳ್ಳಬಹುದಾದ ಶುಭಯೋಗ
. ಆದರೆ ನವೆಂಬರದಿಂದ ಜನೇವರಿ
ಜುಲೈದಿಂದ ಅಕ್ಟೋಬರವರೆಗಿನ ಈ
ಂಗಳಕಾಲ ತೀರ ಪ್ರತಿಕೂಲವಿದ್ದು,
ನುಲ್ಲಿಯ ವಿಷಮ ವಾತಾವರಣದಿಂದಾಗಲಿ,
ಅವಕೃಪೆಯಿಂದಾಗಲಿ, ಆರ್ಥಿಕ ಮುಗ್ಗ-
ದಾಗಲಿ ಶಿಕ್ಷಣ ಮುಂದುವರೆಸುವುದೇ
ಾಗುತ್ತದೆ. ಇದೇ ಅವಧಿಯಲ್ಲಿ ಪರೀಕ್ಷೆಗೆ
ವಿದ್ಯಾರ್ಥಿಗಳು ಸಾದಾ ತರಗತಿಯಲ್ಲಿ
ತೇರ್ಗಡೆಯಾಗಲು ಬಹಳ ಪರಿಶ್ರಮ
ಕಾಗುತ್ತದೆ.

ರಾಶಿಯ ರಾಜಕೀಯ ಸಾಮಾಜಿಕ
ರ್ಕರ್ತರಿಗೂ ಮಿಶ್ರಫಲವಿದೆ. ಫೆಬ್ರುವರಿ
ಜೂನದವರೆಗಿನ ಕಾಲ ಬಹಳೇ
ತ್ಸಾಹದಾಯಕವಾಗಿದ್ದು ಪ್ರತ್ಯಕ್ಷ ರಾಜ-
ದಲ್ಲಿ ಪ್ರವೇಶಿಸಿ ವಿವಿಧ ಮಂಡಳ, ನಿಗಮ,
ಸಂಸ್ಥೆಗಳ ಗೌರವಾನ್ವಿತ ಸ್ಥಾನಗಳನ್ನು
ುವರಲ್ಲದೇ, ಜಿಲ್ಲಾ, ರಾಜ್ಯ ಮಟ್ಟದ
ರಾಗುವರು ಹಾಗೂ ಇದೇ ಅವಧಿ
ಚುನಾವಣೆ ಜರುಗಿದಲ್ಲಿ ಅವಿರೋಧ ಆಯ್ಕೆ
ಪ್ರಚಂಡ ಬಹುಮತದಿಂದ ಆಯ್ಕೆ ಆಗ
ಾಗಿದೆ. ಆದರೆ ನವೆಂಬರದಿಂದ ಜನೇವರಿ
ಜರುಗಲಿರುವ ಚುನಾವಣೆಗೆ ಸ್ಪರ್ಧಿಸಿದಲ್ಲಿ
ಖಂಡಿತ, ಆದರೆ ಸ್ಪರ್ಧೆ ತುರಿಸಿನದು
ಅತ್ಯಲ್ಪಮತದಿಂದ ಆಯ್ಕೆ, ಆದರೆ
ದಿಂದ ಅಕ್ಟೋಬರದ ಕಾಲ ತೀರ ಪ್ರತಿ
ವಿದ್ದು. ಈ ಕಾಲದಲ್ಲಿ ಮಿತ್ರರೇ ಶತ್ರು
ುವುದರಿಂದ ಸ್ಥಾನಮಾನ ಅಧಿಕಾರಕ್ಕೆ
ಇದೆ. ಇದೇ ಅವಧಿಯಲ್ಲಿ ಚುನಾವಣೆ
ದಲ್ಲಿ ಸ್ಪರ್ಧಿಸದಿರುವುದೇ ಹಿತಕರ,
ದಲ್ಲಿ ಇಡಗಂಟು ಸಹ ಉಳಿಯಲಾರದು.

ನಲ್ಲಿ ಈ ರಾಶಿಯವರಿಗೆ ಈ ವರುಷ
ಲವು. ಕೃತ್ತಿಕಾ ಹಾಗೂ ರೋಹಿಣಿಯ
ರೆರಡು ಚರಣದವರಿಗೆ ಪೂರ್ವಾರ್ಧ
ಾಯಕವಿದ್ದು, ಉತ್ತರಾರ್ಧವು ಪ್ರತಿ
ದ್ದರೆ, ರೋಹಿಣಿಯ ಕೊನೆಯ ಎರಡು
ವರಿಗೆ ಮೃಗಶಿರಾದ ಮೊದಲೆರಡು
, ವೃಷಭ ರಾಶಿಯವರಿಗೆ ಪೂರ್ವಾರ್ಧವು
ಲವಿದ್ದರೆ, ಉತ್ತರಾರ್ಧವು ಉತ್ತೇಜಕ

## ಮಿಥುನ

ರಾಶಿಯವರಿಗೆ ಈ ವರುಷವೆಂದರೆ
ಜೀವನದಲ್ಲಿಯೇ ಸುವರ್ಣ ಕಾಲ
ಜೀವನದ ಎಲ್ಲ ದೃಷ್ಟಿಯಿಂದಲೂ




ಅತ್ಯಂತ ಯಶೋದಾಯಕವೂ, ಸುಖ ಪ್ರದವೂ ಆಗಿದೆ.

ಈ ರಾಶಿಯವರ ಗ್ರಹಗತಿಯನ್ನು ಅವಲೋಕಿಸಲಾಗಿ, ಮೊದಲೆ ಶುಭ ಫಲದಾಯಕ ಆರನೇ ಶನಿಯೊಂದಿಗೆ ಅಗಷ್ಟದಿಂದ ಬಂದ ಹತ್ತನೇ ರಾಹುವಿನ ಶುಭ ಫಲವು ವರುಷಾಂತ್ಯದ ವರೆಗೂ ಇರುತ್ತದೆ. ಇದಲ್ಲದೇ ವರುಷ ಪ್ರಾರಂಭದಿಂದ ಫೆಬ್ರುವರಿ ೨ರ ವರೆಗೆ ಒಂಬತ್ತನೆಯ ಹಾಗು ಜೂನ ೧೬ರಿಂದ ವರುಷಾಂತ್ಯದ ವರೆಗೆ ಹನ್ನೊಂದನೆಯ ಅತ್ಯಂತ ಶುಭಫಲದಾಯಕ ಗುರುವಿನ ಕೃಪಾ ಕಟಾಕ್ಷವು ಈ ವರುಷ ಲಭಿಸುತ್ತದೆ. ಹೀಗೆ ಬಲಾಢ್ಯ ತ್ರಿಗ್ರಹಗಳು ಶುಭರಿರುವುದರಿಂದ ಈ ವರುಷವೆಂದರೆ ನಿಮ್ಮ ಜೀವನದಲ್ಲಿಯೇ ಸುವರ್ಣ ಕಾಲವಿದ್ದು ನಿಮ್ಮೆಲ್ಲ ಆಶೆಆಕಾಂಕ್ಷೆಗಳು ಈಡೇರುವುದರಲ್ಲಿ ಸಂದೇಹವಿಲ್ಲ. ಇಂಥ ಸುಸಂಧಿ ಮೇಲಿಂದ ಮೇಲೆ ಬರುವದಿಲ್ಲ. ಗಾಳಿ ಬಿಟ್ಟಾಗ ತೂರಿಕೋ ಎಂಬ ಹಾಗೆ ನೀವು ಕಾರ್ಯ ತತ್ಪರರಾಗಿರಿ ಎಂಬುದೇ ಈ ವರುಷದ ಗ್ರಹಗಳ ಸಂದೇಶ. ನಿಮ್ಮ ಆರೋಗ್ಯ ವರುಷದ ಮುಕ್ಕಾಲು ಅವಧಿಯ ವರೆಗೆ ಚೆನ್ನಾಗಿರುತ್ತದೆಯಾದರೂ ಜನೆವರಿ ೧೪ ರಿಂದ ಫೆಬ್ರುವರಿ ೧೨ರ ವರೆಗೆ, ಮೇ ೧೫ರಿಂದ ಜೂನ ೧೫ರ ವರೆಗೆ, ಹಾಗು ಸಪ್ಟೆಂಬರ ೧೬ ರಿಂದ ಅಕ್ಟೋಬರ ೧೭ರವರೆಗಿನ ಈ ಮೂರು ತಿಂಗಳ ಕಾಲ ಮಾತ್ರ ತುಸು ಕಿರುಕುಳ ಪೀಡೆ ಇರುತ್ತದೆ. ಆರ್ಥಿಕದೃಷ್ಟಿಯಿಂದ ನೋಡಿದರೆ ಬರಬೇಕಾಗಿದ್ದ ಹಣವು ನಿರೀಕ್ಷಿಸಿದ ಮೂಲದಿಂದ ಸಾಕಷ್ಟು ಬರುವುದಲ್ಲದೇ ನವೆಂಬರ ೩ರಿಂದ ಡಿಶೆಂಬರ ೧೬ರ ವರೆಗೆ, ಮಾರ್ಚ ೧೫ ರಿಂದ ಮೇ ೧೫ರ ವರೆಗೆ ಜುಲೈ ೧೫ರಿಂದ ಸಪ್ಟೆಂಬರ ೧೫ರ ವರೆಗಿನ ಈ ಕಾಲದಲ್ಲಿ ದತ್ತಕ, ವಾರಸಾ, ಭಕ್ಷೀಸ, ಬಹುಮಾನ, ಲಾಟರಿ. ಕಮೀಶನ, ಮೊದಲಾದ ಮೂಲದಿಂದ ಆಕಸ್ಮಿಕ ಧನಲಾಭದ ಪ್ರಾಪ್ತಿ ಇರುವುದರಿಂದ ಆರ್ಥಿಕ ಸ್ಥಿತಿ ಈ ವರುಷ ತೃಪ್ತಿಕರವಿರುತ್ತದೆ. ವಾದ, ಸ್ಪರ್ಧೆ, ಕೋರ್ಟು, ಕಚೇರಿ ಯಾವುದೇ ಬಗೆಯ ವ್ಯಾಜ್ಯದಲ್ಲಿ ಖಂಡಿತವಾಗಿಯೂ ಜಯಮಾಲೆ ನಿಮ್ಮ ಕೊರಳಿಗೆ.

ಈ ರಾಶಿಯ ನೌಕರವರ್ಗದವರಿಗೆ ಪ್ರೋತ್ಸಾಹದಾಯಕ ವರುಷವಾಗಿದ್ದು ಅದರಲ್ಲಿಯೂ ನವೆಂಬರ ೧೫ರಿಂದ ಜನೇವರಿ ೧೪ರ ವರೆಗೆ ಫೆಬ್ರುವರಿ ೧೨ರಿಂದ ಮೇ ೧೫ರ ವರೆಗೆ. ಜುಲೈ ೧೫ರಿಂದ ಸಪ್ಟೆಂಬರ ೧೬ರ ವರೆಗಿನಕಾಲ ಬಹಳೇ ಅನುಕೂಲವಿದ್ದು, ನೌಕರಿಯಲ್ಲಿ ಬಡತಿ ಇಚ್ಛಿತಸ್ಥಳಕ್ಕೆ ಬದಲಿ, ಇಮ್ಮಡಿ ಬಡತಿ, ಡಬಲ್ ಇನ್‌ಕ್ರಿಮೆಂಟ, ದೊರೆಯುವಿಕೆ, ಇಲ್ಲವೇ ಎರಡುಹುದ್ದೆಗಳ ಕಾರ್ಯ ನಿರ್ವಹಿಸುವ ಸುಯೋಗ ಲಭಿಸುವಿಕೆ, ವರಿಷ್ಠರ ಸ್ನೇಹ ಸಹಕಾರ ವೃದ್ಧಿ, ಹಂಗಾಮಿ ನೌಕರರಿಗೆ ನೌಕರಿಯಲ್ಲಿ ಕಾಯಂ ಆಗುವಿಕೆ, ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ ಇವೇ ಮೊದಲಾದ ಸ್ಮರಣೀಯ ಘಟನೆಗಳು ಜರಗುವವು. ಶನಿ ರಾಹುಗಳು ಈ ವರುಷ ಶುಭರಿರುವದರಿಂದ ಈ ರಾಶಿಯ ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರರಿಗೂ, ಗಿರಣಿ, ಕಾರಖಾನೆ, ವರ್ಕಶಾಪ, ಮಶಿನ್‌ಶಾಪಗಳಲ್ಲಿ ಕೆಲಸ ಮಾಡುವ ಮಶಿನರಿ ಕೆಲಸಗಾರರಿಗೂ ಪ್ರೋತ್ಸಾಹದಾಯಕ ವರುಷವಾಗಿದ್ದು ಬಹಳವರುಷದಿಂದ ನೆನೆಗುದಿಗೆ ಬಿದ್ದಿದ್ದ ಅವರೆಲ್ಲ ಬೇಡಿಕೆಗಳು ಈಡೇರುವುದರಲ್ಲಿ ಸಂದೇಹವಿಲ್ಲ. ಈ ರಾಶಿಯ ಸಾಹಿತಿ ಕಲಾವಿದ. ಶಿಕ್ಷಕ, ಪ್ರಾಧ್ಯಾಪಕ, ಡಾಕ್ಟರ, ವಕೀಲ, ಚಾರ್ಟರ್ಡ ಅಕೌಂಟಂಟ, ಪ್ರಕಾಶಕ. ಪತ್ರಿಕೋದ್ಯಮಿ, ನ್ಯಾಯಾಧೀಶ ಮೊದಲಾದ ಬುದ್ಧಿಜೀವಿ ವರ್ಗದವರಿಗೂ ಪ್ರೋತ್ಸಾಹದಾಯಕ ವರುಷವಾಗಿದೆ. ಅದರಲ್ಲಿಯೂ ನವೆಂಬರ ೧೫ರಿಂದ ಜನೇವರಿ ೧೪ರ ವರೆಗೆ ಮಾರ್ಚ ೧೫ರಿಂದ ಮೇ ೧೫ರ ವರೆಗೆ ಜುಲೈ ೧೫ರಿಂದ ಸಪ್ಟೆಂಬರ ೧೬ರ ವರೆಗಿನ ಕಾಲ ಅತ್ಯಂತ ಶುಭದಾಯಕವಿದ್ದು ಈ ಕಾಲದಲ್ಲಿ ಸರಕಾರ, ಸಂಘಸಂಸ್ಥೆಗಳಿಂದ ಪ್ರಶಸ್ತಿಪದಕ, ಮನ್ನಣೆ, ಪುರಸ್ಕಾರ ಲಭಿಸುವಿಕೆ, ಉದ್ಯೋಗದಲ್ಲಿ ಪ್ರಗತಿ, ದ್ರವ್ಯಾನುಕೂಲತೆಯಾಗುವಿಕೆ, ಪರದೇಶ ಪರ್ಯಟನ, ವಾಹನಸುಖ, ಮೊದಲಾದ ಸ್ಮರಣೀಯ ಘಟನೆಗಳು ಜರಗುವವು. ಈ ರಾಶಿಯ ಕೃಷಿ ವರ್ಗದವರಿಗೂ ಕೂಡ ಪ್ರೋತ್ಸಾಹದಾಯಕ ವರುಷವಾಗಿದ್ದು, ನಿರೀಕ್ಷೆಗಿಂತಲೂ ಅಧಿಕ ಫಸಲು ಬಂದು, ಹಿಂದಿನ ಸಾಲಗಳನ್ನು ತೀರಿಸುವುದಲ್ಲದೇ ಹೊಸ ಜಾಗೆ, ಹೊಲ, ಮನೆ,


ಮಿಸ್ಟರ್? ಯಾಕಿಷ್ಟು ನಡುಗ್ತೀರಿ...
ಬ್ಯಾಂಡೇಜ್ ಹಾಕಿಧಕ್ರೆ,
ಕಾಲು ಬಹಳ ನೋಯುತ್ತಾ ?!!


ನೀವು ಭಸ್ಮ, ವಾಚು ಮಾತ್ರವಲ್ಲ
ಹಶೀಶ್, ಗಾಂಜಾವನ್ನೂ ಸೃಷ್ಟಿಸಬಲ್ಲಿರ
ಈಗ ತಿಳಿಯಿತು.....ಸ್ವಾಮೀಜಿ...!!

# ಕಸ್ಟಮ್ಸ್

ಶ್ರೀಧರ್


ಕಸ್ಟಮ್ಸ
ಚಿನ್ನಪ್ಪ
FRANCE
ಶ್ಶ್.... ಮೆಲ್ಲಗೆ..ಮೆಲ್ಲಗೆ..
ಸ್ವಲ್ಪ ಮೆಲ್ಲಗೆ ಕರೆ..ಕಸ್ಟಮ್ಸ್‌ನವ
ನನ್ನನ್ನೇ ಇಡಿಯಾಗಿ ಜಪ್ತಿಮಾಡಿ
ಹಲೋ.... ಮಿ.ಚಿನ್ನಾ......
ಹೌಡು ಯೂಡು......?!!

ತೋಟ ಗದ್ದೆಗಳನ್ನು, ಬೇಸಾಯದ ಉಪಕರಣ ಟ್ರಕ್, ಟ್ರಾಕ್ಟರ, ಪಂಪಸೆಟ್ಟು ಉಪಕರಣಗಳನ್ನು, ದನಕರುಗಳನ್ನು ಖರೀದಿಸುವ ಸಾಮರ್ಥ್ಯ ಬರುತ್ತದೆ.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ, ಉದ್ಯಮದಾರರಿಗೂ ಗಿರಣಿ, ಕಾರಖಾನೆ, ಚಾಳ, ಟಾಕೀಜ, ಹೋಟೇಲಗಳ ಮಾಲಿಕ ವರ್ಗದವರಿಗೂ ಕಮೀಶನ ಏಜೆಂಟರಿಗೂ ಹಂಚಿಕೆ ದಾರರಿಗೂ ಪ್ರೋತ್ಸಾಹದಾಯಕ ವರುಷವಾಗಿದೆ. ನೌಕರ ಮಾಲಿಕರ ನಡುವಿನ ಸಮಸ್ಯೆಗಳು ಪರಸ್ಪರ ಸಮ್ಮತಿಯಿಂದ ಬಗೆಹರಿಸಲ್ಪಡುತ್ತವೆ. ಅಲ್ಲದೇ ನವೆಂಬರ ೧೫ ರಿಂದ ಜನೇವರಿ ೧೪ ರ ವರೆಗೆ, ಫೆಬ್ರುವರಿ ೧೨ ರಿಂದ ಮೇ ೧೫ ರ ವರೆಗೆ, ಜುಲೈ ೧೫ ರಿಂದ ಸೆಪ್ಟೆಂಬರ ೧೬ ರ ವರೆಗಿನ, ಕಾಲದಲ್ಲಿ ಹೊಸ ಉದ್ಯೋಗ ಕೈಕೊಳ್ಳುವಿಕೆ ಇಲ್ಲವೇ ಇದ್ದ ಉದ್ಯೋಗದ ಹೊಸಶಾಖೆ ತೆರೆಯುವಿಕೆ, ದೊಡ್ಡ ದೊಡ್ಡ ಯಂತ್ರೋಪಕರಣಗಳನ್ನು, ಮಶಿನರಿಗಳನ್ನು ವಾಹನಗಳನ್ನು ಖರೀದಿಸುವಿಕೆ ಮೊದಲಾದ ಪ್ರಗತಿದಾಯಕ ಸಂಗತಿಗಳು ಜರಗುವವು.

ಕಳೆದ ಅನೇಕ ವರುಷಗಳಿಂದ ಗೃಹಸ್ಥಾಶ್ರಮಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ ವಧುವರರಿಗೆ ಈ ವರುಷ ಅವರ ಮನೋರಥ ಈಡೇರುವುದರಲ್ಲಿ ಸಂದೇಹವಿಲ್ಲ. ಅದರಲ್ಲಿಯೂ ನವೆಂಬರ ೩ ರಿಂದ ಜನೇವರಿ ೧೪ ರ ವರೆಗೆ. ಫೆಬ್ರುವರಿ ೧೩ ರಿಂದ ಮೇ ೧೫ ರ ವರೆಗೆ, ಜೂನ ೧೫ ರಿಂದ ಸೆಪ್ಟೆಂಬರ ೧೬ ರ ವರೆಗಿನ ಈ ಕಾಲದಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗಿ ಗೃಹಸ್ಥಾಶ್ರಮ ಪ್ರವೇಶಿಸುವರು. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೂ ಗೃಹಿಣಿಯರಿಗೂ ಪ್ರೋತ್ಸಾಹದಾಯಕ ವರುಷವಾಗಿದೆ. ಚಾಡಿಯ ಪ್ರಭಾವದಿಂದಲೂ, ತಪ್ಪುತಿಳುವಳಿಕೆಯಿಂದಲೂ ಒಡೆದು ಹೋಗಿದ್ದ ಪರಿವಾರ ಕುಟುಂಬ ಮತ್ತೆ ಈ ವರುಷ ಒಂದುಗೂಡುವದು. ಅಲ್ಲದೆ ನವೆಂಬರ ೧೫ ರಿಂದ ಜನೇವರಿ ೧೪ ರ ವರೆಗೆ, ಫೆಬ್ರುವರಿ ೧೨ ರಿಂದ ಮೇ ೧೫ ರ ವರೆಗೆ ಹಾಗೂ ಜುಲೈ ೧೫ ರಿಂದ ಸೆಪ್ಟೆಂಬರ ೧೬ ರ ವರೆಗಿನ ಈ ಕಾಲದಲ್ಲಿ ಬೆಲೆಯುಳ್ಳ ವಸ್ತು ಒಡವೆಗಳನ್ನು, ವಾಹನ, ಮನೆಯನ್ನು ಕೊಳ್ಳಬಹುದಾಗಿದೆ, ಅಲ್ಲದೇ ಇದೇ ಅವಧಿಯಲ್ಲಿ ತೀರ್ಥಯಾತ್ರಾ ಇಲ್ಲವೇ ವಿದೇಶ ಯಾತ್ರೆಯನ್ನು ಕೈಕೊಳ್ಳಬಹುದಾಗಿದೆ, ಅಲ್ಲದೆ ಮನೆಯಲ್ಲಿ ಮಂಗಲಕಾರ್ಯವನ್ನು ಈ ವರುಷ ಕೈಕೊಳ್ಳ ಬಹುದಾಗಿದೆ. ಈ ರಾಶಿಯ ಗರ್ಭಿಣಿಯರಿಗೆ ಈ ವರುಷ ಶುಭದಾಯಕವಿದ್ದು ಸುಖ ಪ್ರಸವವು, ಗಂಡುಸಂತಾನ ಪ್ರಾಪ್ತಿಯ ಯೋಗವು ಉಂಟು.

ವರ್ಷದ ಪ್ರಾರಂಭದಲ್ಲಿ ನವಮ ವರುಷಾಂತ್ಯದಲ್ಲಿ ಹನ್ನೊಂದನೇ ಅತ್ಯಂತ ಶುಭ ಫಲದಾಯಕ ಗುರು ಇರುವದರಿಂದ ಈ ರಾಶಿಯ ವಿದ್ಯಾರ್ಥಿಗಳಿಗೆ ಪ್ರೋತ್ಸಾಹದಾಯಕ ವರುಷವಾಗಿದೆ. ವಿಶ್ವವಿದ್ಯಾಲಯದ ಪರೀಕ್ಷೆಯೇ ಇರಲಿ ಸ್ಪರ್ಧಾತ್ಮಕ ಪರೀಕ್ಷೆಯೇ ಇರಲಿ, ಖಾತೆಗಳ ಪರೀಕ್ಷೆಯೇ ಇರಲಿ ಈ ವರ್ಷದಲ್ಲಿ ಯಾವದೇ ಪರೀಕ್ಷೆಯಲ್ಲಿ ಯಶಸ್ಸು ಖಂಡಿತ, ಅಷ್ಟೇ ಏಕೆ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ ಪ್ರಶಸ್ತಿ ಪದಕಗಳನ್ನು ಪಡೆಯುವರಲ್ಲದೇ ವಿದ್ಯಾರ್ಥಿವೇತನ, ಶಿಷ್ಯವೃತ್ತಿಯನ್ನು ಪಡೆಯುವರು. ಅಲ್ಲದೇ ಹೆಚ್ಚಿನ ಶಿಕ್ಷಣಕ್ಕಾಗಿ, ಸಂಶೋಧನೆಗಾಗಿ ವಿದೇಶ ಯಾತ್ರೆಯನ್ನು ಕೈಕೊಳ್ಳುವ ಸುಯೋಗವು ಉಂಟು.

ಅನೇಕ ಗ್ರಹಗಳ ಬೆಂಬಲ ಪಡೆದ ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷವೆಂದರೆ ಅವರ ಜೀವನದಲ್ಲಿಯೇ ಸ್ಮರಣೀಯ ವರುಷವಾಗಿದ್ದು. ಪ್ರತ್ಯೇಕ ರಾಜಕೀಯದಲ್ಲಿ ಭಾಗವಹಿಸಿ, ಅನೇಕ ಸಂಘ ಸಂಸ್ಥೆಗಳ ಪದಾಧಿಕಾರಿಗಳಾಗಿ ಗೌರವಾನ್ವಿತ ಸ್ಥಾನ ಪಡೆಯುವುರಲ್ಲದೇ, ವಿವಿಧ ಮಂಡಲ, ನಿಗಮಗಳ ಅಧಿಕಾರ ಸ್ಥಾನವನ್ನು ಪಡೆಯುವರಲ್ಲದೆ ಜಿಲ್ಲಾ, ರಾಜ್ಯ, ರಾಷ್ಟ್ರದ ಗಣ್ಯವ್ಯಕ್ತಿಗಳಾಗುವದರಲ್ಲಿ ಸಂದೇಹವಿಲ್ಲ. ಶತ್ರುಗಳೇ ಮಿತ್ರರಾಗವುದರಿಂದ ಈ ವರುಷದಲ್ಲಿ ಜರುಗುಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದಲ್ಲಿ ಅವಿರೋಧ ಆಯ್ಕೆ ಇಲ್ಲವೇ ಪ್ರಚಂಡ ಬಹುಮತದಿಂದ ಆಯ್ಕೆ ಆಗಬಹುದಾಗಿದೆ.



## ಕರ್ಕ

**ಈ ರಾಶಿಯವರಿಗೆ ಈ ವರುಷ ಮಿಶ್ರ ಫಲವಿದೆಯಾದರೂ ಕಳೆದ ವರುಷದಂತೆ ತಾಪದಾಯಕವಿರುವದಿಲ್ಲ.**

ಈ ರಾಶಿಯವರ ಈ ವರುಷದ ಗ್ರಹಗತಿ ಪರಿಶೀಲಿಸಲಾಗಿ, ಕಳೆದ ವರುಷದಿಂದ ಪ್ರಾರಂಭವಾದ ಪಂಚಮಶನಿಯ ಅನಿಷ್ಟತೆಯು ಈ ವರುಷದಲ್ಲಿ ಇದ್ದಾಗ್ಯೂ ಉಗ್ರತೆಯ ಪ್ರಮಾಣ ಕಡಿಮೆ. ಪುನರ್ವಸು ಹಾಗು ಪುಷ್ಯನಕ್ಷತ್ರದವರಿಗೆ ಶುಭ ಫಲವನ್ನೇ ಕೊಡುತ್ತಾನೆ. ಇದರಂತೆ ಕಳೆದ ಅಗಸ್ಟದಿಂದ ಬಂದಿರುವ ಒಂಭತ್ತನೇ ರಾಹು ಕೂಡ ವರುಷಾಂತ್ಯದ ವರೆಗೆ ಇದ್ದರೂ ಅತ ಶುಭಫಲವನ್ನು ಕೊಡದಿದ್ದರೂ ಅಶುಭ ಫಲ ಕೊಡಲಾರ. ಆದರೆ ಕಳೆದ ವರುಷದಿರಿದ ಅಶುಭಫಲದಾಯಕನಾಗಿದ್ದ ಅಷ್ಟಮ ಗುರುವು ನಾಳಿನ ಫೆಬ್ರುವರಿ ೩ ರಿಂದ ನಿರ್ಗಮಿಸಿ ಬರಲಿರುವ ಅತ್ಯಂತ ಶುಭಫಲದಾಯಕ ಒಂಭತ್ತನೇ ಗುರುವಿನ ಶುಭಫಲವು ಜೂನ ೧೬ರ ವರೆಗೆ ಇದ್ದು ಆ ಬಳಿಕ ಬರುವ ಮಧ್ಯಮ ಫಲದಾಯಕ ಹತ್ತನೇ ಗುರುವಿನ ಫಲವು ವರುಷಾಂತ್ಯದ ವರೆಗೆ ಇದ್ದರೂ ಆಶ್ಲೇಷದವರೆಗೆ ಒಂಬತ್ತನೇ ಗುರುವಿನ ಫಲವು ಸಿಗುತ್ತದೆ. ಹೀಗಾಗಿ ಈ ವರುಷ ಹೇಳಿಕೊಳ್ಳುವಷ್ಟು ಪ್ರಗತಿಇಲ್ಲವಾದರೂ ಕಳೆದ ವರುಷದಷ್ಟು ಪ್ರತಿಕೂಲ ಸನ್ನಿವೇಶ ಇರಲಾರದು.




ಆರೋಗ್ಯ ದೃಷ್ಟಿಯಿಂದ ನೋಡಿದರೆ ಕಳೆದ ವರುಷದಂತೆ ತೊಂದರೆ ಇರದಿದ್ದರೂ ಫೆಬ್ರುವರಿ ೧೨ ರಿಂದ ಮಾರ್ಚ ೧೫ರ ವರೆಗೆ ಹಾಗು ಜೂನ ೧೫ ರಿಂದ ಅಗಸ್ಟ ೧೫ರ ವರೆಗಿನ ಈ ಮೂರು ತಿಂಗಳ ಕಾಲ ಮಾತ್ರ ಆರೋಗ್ಯ ಕೆಡಬಹುದಾಗಿದೆಯಲ್ಲದೇ ಅಪಘಾತದ ಭಯವೂ ಉಂಟು. ಆದರೆ ಉಳಿದ ಒಂಭತ್ತು ತಿಂಗಳ ಕಾಲ ಉತ್ತಮವಿರುತ್ತದೆ. ಆರ್ಥಿಕ ದೃಷ್ಟಿಯಿಂದ ನೋಡಿದರೆ ಈ ವರುಷ ಹೇಳಿಕೊಳ್ಳುವಷ್ಟು ಉತ್ತಮವಿರದಿದ್ದರೂ ಕಳೆದ ವರುಷದಂತೆ ಸಾಲಗಾರರ ಕಾಟ, ಅಪಮಾನಕಾರಕ ಪ್ರಸಂಗ ಮೊದಲಾದ ಅಹಿತಕಾರಕ ಘಟನೆಗಳು ಜರುಗುವುದಿಲ್ಲ. ಇಷ್ಟೇ ಅಲ್ಲ ಮಾರ್ಚ ೧೫ ರಿಂದ ಜೂನ ೧೫ರ ವರೆಗೆ ಹಾಗು ಅಗಸ್ಟ ೧೫ ರಿಂದ ಅಕ್ಟೋಬರ್ ೧೮ರ ವರೆಗಿನ ಈ ಐದು ತಿಂಗಳ ಕಾಲ ಅತ್ಯಂತ ಪ್ರೋತ್ಸಾಹದಾಯಕವಿದ್ದು ಈ ಕಾಲದಲ್ಲಿ ಬರತಕ್ಕ ಹಣವು ಬರುವುದಲ್ಲದೇ, ದತ್ತಕ, ಸಟ್ಟಾ ಲಾಟರಿ, ಭಕ್ಷಿಸ್, ಬಹುಮಾನ ಕಮಿಷನ್, ವಾರಸಾ ಮೊದಲಾದ ಆಕಸ್ಮಿಕ ಧನಪ್ರಾಪ್ತಿಯ ಯೋಗವು ಉಂಟು, ಆದರೆ ನವೆಂಬರ್ ೩ ರಿಂದ ಡಿಶೆಂಬರ್ ೧೪ರ ವರೆಗೆ, ಹಾಗು ಜನೇವರಿ ೧೪ ರಿಂದ ಮಾರ್ಚ ೧೫ರ ವರೆಗಿನ ಕಾಲ ತೀರ ಪ್ರತಿಕೂಲವಿದ್ದು ಆದಾಯ ಅಲ್ಪ, ವೆಚ್ಚ ವಿಪರೀತ, ಹಳೇ ಸಾಲ ತೀರಿಸಲು ಹೊಸ ಸಾಲಕ್ಕೆ ಪರದಾಟ. ಹೀಗೆ ನಿಮ್ಮ ಆರ್ಥಿಕ ಸ್ಥಿತಿ ಗಂಭೀರ ಸ್ವರೂಪ ತಾಳಿ ನಿಮ್ಮ ಸತ್ವಪರೀಕ್ಷೆ

ಟವಾಗುತ್ತದೆ. ಖಂಡಿತವಾಗಿಯೂ ಇದರಿಂದ ಪಾರಾಗುತ್ತೀರಿ.

ಕೋರ್ಟುಕಚೇರಿ ಮೊದಲಾದ ಯಾವದೇ ಬಗೆಯ ವ್ಯಾಜ್ಯಗಳಿಗೆ ಈ ವರುಷ ಮಿಶ್ರ ಫಲವಿದೆ. ಪೂರ್ವಾರ್ಧವು ಪ್ರತಿಕೂಲವಿದ್ದರೆ ಉತ್ತರಾರ್ಧವು ಉತ್ತೇಜಕವಿದೆ. ಅದರಲ್ಲಿಯೂ ಮಾರ್ಚ ೧೫ ರಿಂದ ಜೂನ ೧೫ರ ವರೆಗೆ, ಹಾಗೂ ಜುಲೈ ೧೫ ರಿಂದ ಅಕ್ಟೋಬರ ೧೫ರ ವರೆಗಿನ ಯಾವದೇ ಪ್ರಕಾರದ ವ್ಯಾಜ್ಯದಲ್ಲಿ ಜಯ ಖಂಡಿತ, ಆದರೆ ನವೆಂಬರ ೩ ರಿಂದ ಮಾರ್ಚ ೧೪ರ ಒಳಗೆ ಮೊಕದ್ದಮೆ ತೀರ್ಮಾನವಾದರೆ ಅಪಜಯ ಕಟ್ಟಿಟ್ಟದ್ದು.

ಈ ರಾಶಿಯ ನೌಕರ ವರ್ಗದವರಿಗೆ ಫೆಬ್ರುವರಿಯಿಂದ ಬರುವ ಒಂಭತ್ತನೇ ಗುರುವಿನಿಂದ ಅನುಕೂಲ ಕಾಲ ಬರುತ್ತದೆ. ಕಳೆದ ವರುಷ ಉಂಟಾಗಿದ್ದ ವರಿಷ್ಠರ ಅವಕೃಪೆ ದೂರವಾಗುತ್ತದೆ. ಅದರಲ್ಲಿಯೂ ಮಾರ್ಚ ೧೫ ರಿಂದ ಜೂನ ೧೫ರ ವರೆಗೆ ಹಾಗು ಜುಲೈ ೧೫ ರಿಂದ ಅಕ್ಟೋಬರ ೧೫ ರ ವರೆಗಿನ ಈ ಆರು ತಿಂಗಳ ಕಾಲ ಪ್ರೋತ್ಸಾಹದಾಯಕವಾಗಿದ್ದು ನೌಕರಿಯಲ್ಲಿ ಬಡತಿ, ಅನುಕೂಲ ಜಾಗೆಗೆ ಬದಲಿ ವರಿಷ್ಠರ ಸಹಕಾರ ವೃದ್ಧಿ, ಹಂಗಾಮಿ ನೌಕರರಿಗೆ ನೌಕರಿಯ ಸ್ಥಿರತೆ, ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ, ಮೊದಲಾದ ಶುಭ ಘಟನೆಗಳು ಮೇಲೆ ಕಂಡ ಅವಧಿಯಲ್ಲಿ ಜರುಗುವವು. ಈ ರಾಶಿಯ ಗಿರಣಿ ಕಾರಖಾನೆ, ವರ್ಕಶಾಪ, ಮಶೀನ ಶಾಪಗಳಲ್ಲಿ ಕೆಲಸ ಮಾಡುತ್ತಿರುವ ಕೆಲಸಗಾರರಿಗೂ ಮಿಶ್ರಫಲವಿದೆ. ಪೂರ್ವಾರ್ಧವು ಪ್ರತಿಕೂಲವಿದ್ದರೆ, ಉತ್ತರಾರ್ಧವು ಉತ್ತೇಜಕವಿದೆ. ಅದರಲ್ಲಿಯೂ ಮಾರ್ಚ ೧೫ ರಿಂದ ಜೂನ ೧೫ರ ವರೆಗಿನ ಕಾಲದಲ್ಲಿ ಅವರ ಕೆಲ ಬೇಡಿಕೆಗಳು ಈಡೇರುವವು. ಈ ರಾಶಿಯ ಕೃಷಿಕರಿಗೆ ಮಿಶ್ರಫಲದಾಯಕ ವರುಷವಿದ್ದು, ಪೂರ್ವಾರ್ಧವು ಪ್ರತಿಕೂಲವಿದ್ದು ನಿರೀಕ್ಷಿಸಿದಷ್ಟು ಫಸಲು ಬರುವದಿಲ್ಲ, ಅರ್ಥಾತ್ ಮುಂಗಾರಿ ಬೆಳೆ ಕೈ ಕೊಡುತ್ತದೆ. ಆದರೆ ಉತ್ತರಾರ್ಧವು ಉತ್ತೇಜಕವಿದ್ದು ಹಿಂಗಾರಿ ಬೆಳೆ ಕೈಹಿಡಿಯುವುದರಿಂದ ಪೂರ್ವಾರ್ಧದಲ್ಲಿ ಮಾಡಿದ ಸಾಲಗಳೆಲ್ಲವು ತೀರಿ ಕೃಷಿಗೆ ಬೇಕಾದ ದನುಕರಗಳನ್ನು ಕೊಳ್ಳುವ ಹಾಗು ಬೇಸಾಯದ ಉಪಕರಣಗಳನ್ನು ಕೊಳ್ಳುವ ಇಲ್ಲವೇ ನವೀಕರಿಸುವ ಶಕ್ತಿ ಬರುತ್ತದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ ಹಂಚಿಕೆದಾರರು, ಕಮಿಶನ್ ಏಜೆಂಟರಿಗೂ, ಹೊಟೇಲ, ಚಾಳ, ಟಾಕೀಜ, ಗಿರಣಿ ಕಾರಖಾನೆಗಳ ಮೂಲಕ ವರ್ಗದವರಿಗೆಲ್ಲ ಮಿಶ್ರಫಲದಾಯಕ ವರುಷವಿದು. ನವೆಂಬರ ೩ರ ರಿಂದ ಮಾರ್ಚ ೧೫ರ ವರೆಗಿನಕಾಲ ಪ್ರತಿಕೂಲವಿದ್ದು, ಮಶೀನರಿ ತೊಂದರೆ, ಪಾಲುದಾರರ ಕಿರುಕುಳ, ನೌಕರರ ಸಮಸ್ಯೆ, ಸರಕಾರದ ನಿರ್ಬಂಧನೆಗಳಿಂದಾಗಿ ಉದ್ಯೋಗ ಕುಂಠಿತವಾಗುತ್ತದೆ. ಆದರೆ ಮಾರ್ಚ ೧೬ ರಿಂದ ವರುಷಾಂತ್ಯದ ವರೆಗೂ ಪ್ರೋತ್ಸಾಹದಾಯಕವಿದ್ದು ಮೇಲೆ ಬರೆದ ಎಲ್ಲ ತೊಂದರೆಗಳಿಂದ ಮುಕ್ತರಾಗಿ ಉದ್ಯೋಗದಲ್ಲಿ ಪ್ರಗತಿಯಾಗಿ, ಅಗಣಿತ ದ್ರವ್ಯ ಸಂಪಾದಿಸಿ, ಹೊಸ ಉದ್ಯೋಗ ಇಲ್ಲವೇ ಇದ್ದ ಉದ್ಯೋಗದ ಹೊಸ ಶಾಖೆಗಳನ್ನು ತೆರೆಯುವುದಲ್ಲದೇ ಜಾಗೆ ಮಶಿನರಿಗಳನ್ನು ಕೊಳ್ಳುವ ಸಾಮರ್ಥ್ಯ ಬರುತ್ತದೆ. ಈ ರಾಶಿಯ ಲೇಖಕ, ಸಾಹಿತಿ, ಕಲಾವಿದ, ಶಿಕ್ಷಕ, ಅಧ್ಯಾಪಕ, ಪತ್ರಿಕೋದ್ಯಮಿ, ಪ್ರಕಾಶಕ, ಡಾಕ್ಟರ, ವಕೀಲ, ಚಾರ್ಟರ್ಡ ಅಕೌಂಟಂಟ, ನ್ಯಾಯಾಧೀಶ, ಮೊದಲಾದ ಬುದ್ಧಿಜೀವಿಗಳಿಗೆ ಫೆಬ್ರುವರಿಯಿಂದ ಬರುವ ಒಂಭತ್ತನೇ ಗುರುವಿನ ಮೂಲಕ ಪ್ರೋತ್ಸಾಹದಾಯಕ ವರುಷವಿದೆ. ಅದರಲ್ಲಿಯೂ ಮಾರ್ಚ ೧೫ ರಿಂದ ಜೂನ ೧೫ರ ವರೆಗೆ ಹಾಗು ಜುಲೈ ೧೫ ರಿಂದ ಅಕ್ಟೋಬರ ೧೫ರ ವರೆಗಿನ ಈ ಆರು ತಿಂಗಳ ಕಾಲ ಅತ್ಯಂತ ಶುಭಫಲವಿದ್ದು ಈ ಕಾಲದಲ್ಲಿ ಉದ್ಯೋಗದಲ್ಲಿ ಪ್ರಗತಿ, ಸರಕಾರದಿಂದಲೂ ಸಂಘಸಂಸ್ಥೆಗಳಿಂದಲೂ, ಪ್ರಶಸ್ತಿ ಪದಕ ಮಾನಸನ್ಮಾನ ಲಭಿಸುತ್ತದೆ. ಅಲ್ಲದೇ ಸಾಕಷ್ಟು ದ್ರವ್ಯಪ್ರಾಪ್ತಿಯಾಗಿ ವಾಹನ ಮನೆ, ವಸ್ತು ಒಡವೆಗಳನ್ನು ಕೊಳ್ಳುವರಲ್ಲದೇ ಪರದೇಶ ಪರ್ಯಟನದ ಯೋಗವು ಈ ಅವಧಿಯಲ್ಲಿ ಜರುಗಬಹುದಾಗಿದೆ, ಆದರೆ ನವೆಂಬರ ೩ ರಿಂದ ಮಾರ್ಚ ೧೫ರ ವರೆಗಿನಕಾಲ ಪ್ರತಿಕೂಲವಿದ್ದು, ಉದ್ಯೋಗದಲ್ಲಿ ಕುಂಠಿತವಾಗಿ, ಆರ್ಥಿಕ ತಾಪತ್ರಯದಿಂದಾಗಿ ಅನೇಕ ಅವಮಾನಕರ ಪ್ರಸಂಗಗಳನ್ನು ಎದುರಿಸಬೇಕಾಗುವದಲ್ಲದೇ ಮಿತ್ರರೇ ಶತ್ರುಗಳಾಗಿರುವದರಿಂದ ಮಾನಸಿಕ ನೆಮ್ಮದಿ ದೊರೆಯುವುದಿಲ್ಲ.




ಕಳೆದ ಅನೇಕ ವರುಷಗಳಿಂದ ಪ್ರಯತ್ನಿಸುತ್ತಿರುವ ಈ ರಾಶಿಯ ವಧೂವರರಿಗೆ ಈ ವರುಷ ಬಾಸಿಂಗ ಬಲ ಕೂಡಿಬಂದಿರುತ್ತದೆ. ಅದರಲ್ಲಿಯೂ ಮಾರ್ಚ ೧೫ ರಿಂದ ಜೂನ ೧೫ರ ವರೆಗೆ ಹಾಗೂ ಜುಲೈ ೧೫ ರಿಂದ ಅಕ್ಟೋಬರ ೧೫ರ ಒಳಗೆ ನಿರ್ವಿಘ್ನವಾಗಿ ವಿವಾಹ ಸಾಂಗವಾಗುವುದು. ಆದರೆ ನವೆಂಬರ ೩ ರಿಂದ ಮಾರ್ಚ ೧೪ರ ವರೆಗಿನ ಕಾಲ ಪ್ರತಿಕೂಲವಿದ್ದು ಈ ಕಾಲದಲ್ಲಿ ವಿವಾಹ ಗೊತ್ತುಮಾಡಿದ ಮದುವೆ ಆಗುವದು ಕಠಿಣ ಇಲ್ಲವೇ ಮುಂದೂಡಬಹುದಾಗಿದೆ. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೂ ಗೃಹಿಣಿಯರಿಗೂ ಮುಂಬರುವ ಒಂಭತ್ತನೇ ಗುರುವಿನಿಂದಾಗಿ ಪ್ರೋತ್ಸಾಹದಾಯಕ ವರುಷವಾಗಿದೆ. ಅಷ್ಟಮಗುರುವಿನಿಂದಾಗಿ ಕಳೆದ ವರುಷ ಒಡೆದು ಹೋಗಿದ್ದ ಏಕತ್ರ ಕುಟುಂಬ ಮತ್ತೆ ಈ ವರುಷ ಒಂದುಗೂಡಬಹುದಾಗಿದೆ. ಅದರಲ್ಲಿಯೂ ಮಾರ್ಚ ೧೫ ರಿಂದ ಜೂನ ೧೫ರ ವರೆಗೆ ಹಾಗೂ ಅಗಷ್ಟ ೧೫ ರಿಂದ ಅಕ್ಟೋಬರ ೨೨ರ ವರೆಗಿನ ಕಾಲ ಪ್ರೋತ್ಸಾಹದಾಯಕವಾಗಿದ್ದು, ಈ ಕಾಲದಲ್ಲಿ ಬೆಲೆಯುಳ್ಳ ವಸ್ತು ಒಡವೆಗಳನ್ನು ಖರೀದಿಸುವಿಕೆ, ಮನೆ ವಾಹನ ಆಸ್ತಿ ಸಂಪಾದನೆ, ತೀರ್ಥಯಾತ್ರಾ ಸಂದರ್ಶನ, ಮನೆಯಲ್ಲಿ ಮಂಗಲಕಾರ್ಯ ಜರುಗುವಿಕೆ, ಮೊದಲಾದ ಶುಭಘಟನೆಗಳು ಜರುಗುವವು. ಆದರೆ ನವೆಂಬರ ೩ ರಿಂದ ಮಾರ್ಚ ೧೪ರ ವರೆಗಿನ ಕಾಲ ತೀರ ಪ್ರತಿಕೂಲವಿದ್ದು, ಪ್ರತಿನಿತ್ಯದ ಗೃಹಕಲಹದಿಂದಾಗಿ ನಿದ್ರಾರಹಿತವಾದ ಹಲವು ರಾತ್ರಿಗಳನ್ನು ಕಳೆಯಬೇಕಾಗುತ್ತದೆ. ಅಲ್ಲದೆ ತಮ್ಮ ತಿಳುವಳಿಕೆಯಿಂದಲೂ, ಚಾಡಿಯ ಪ್ರಭಾವದಿಂದಲೂ ಏಕತ್ರ ಕುಟುಂಬ ಕೆಲ ಅವಧಿಯವರೆಗೆ ಒಡೆಯಬಹುದಾಗಿದೆ. ತಾಳ್ಮೆ, ಸಹನಶೀಲತೆಯಿಂದ ಇದ್ದರೆ ಎಲ್ಲವೂ ಸರಿಯಾಗುತ್ತದೆ. ಈ ರಾಶಿಯ ಗರ್ಭಿಣಿಯರಿಗೆ ಮಿಶ್ರಫಲದಾಯಕ ವರುಷವು. ಹೆರಿಗೆಯು ನವೆಂಬರ ೩ ರಿಂದ ಮಾರ್ಚ ೧೪ರ ವರೆಗೆ ಹಾಗೂ ಜೂನ ೧೫ ರಿಂದ ಅಗಷ್ಟ ೧೫ರ ವರೆಗೆ ಆದರೆ ಕಷ್ಟ ಪ್ರಸವವು. ಆದರೆ ಮಾರ್ಚ ೧೫ ರಿಂದ ಜೂನ ೧೫ರ ವರೆಗೆ ಮತ್ತು ಅಗಷ್ಟ ೧೫ ರಿಂದ ಅಕ್ಟೋಬರ ೨೨ರ ವರೆಗೆ ಆದರೆ ಸುಖ ಪ್ರಸವವು ಹಾಗೂ ಗಂಡು ಸಂತಾನದ ಯೋಗವು ಉಂಟು.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಮಿಶ್ರಫಲದಾಯಕ ವರುಷವು. ಪೂರ್ವಾರ್ಧವು ಪ್ರತಿಕೂಲವಿದ್ದರೆ ಉತ್ತರಾರ್ಧವು ಉತ್ತೇಜಕವಿದೆ. ಅದರಲ್ಲಿಯೂ ಮಾರ್ಚ ೧೫ ರಿಂದ ಜೂನ ೧೫ರ ವರೆಗೆ ಹಾಗೂ ಅಗಷ್ಟ ೧೫ ರಿಂದ ಅಕ್ಟೋಬರ ೧೫ರ ವರೆಗಿನ ಕಾಲ ಅತ್ಯಂತ ಶುಭಫಲದಾಯಕವಿದ್ದು, ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸಿ, ಅನೇಕ ಸಂಘ ಸಂಸ್ಥೆಗಳ ಪದಾಧಿಕಾರಿಗಳಾಗಿ ಗೌರವಾನ್ವಿತ ಸ್ಥಾನಮಾನ ಅಧಿಕಾರ ಪಡೆಯುವರಲ್ಲದೇ ಜಿಲ್ಲೆ

ರಾಜ್ಯ. ರಾಷ್ಟ್ರಮಟ್ಟದ ಧುರೀಣರಾಗಬಹು-ದಾಗಿದೆ. ಇದೇ ಅವಧಿಯಲ್ಲಿ ಚುನಾವಣೆ ಜರುಗಿದಲ್ಲಿ ಅವಿರೋಧ ಆಯ್ಕೆ, ಇಲ್ಲವೆ ಪ್ರಚಂಡ ಬಹುಮತದಿಂದ ಜಯಗಳಿಸಬಹುದಾಗಿದೆ. ಆದರೆ ನವೆಂಬರ ೩ ರಿಂದ ಮಾರ್ಚ ೧೪ರ ವರೆಗೆ ಹಾಗೂ ಜೂನ ೧೫ ರಿಂದ ಅಗಷ್ಟ ೧೪ರ ವರೆಗಿನ ಕಾಲ ತೀರ ಪ್ರತಿಕೂಲವಿದ್ದು ಮಿತ್ರರೇ ಶತ್ರುಗಳಾಗುವುದರಿಂದ ಸ್ಥಾನಮಾನ ಅಧಿಕಾರ ಕಳೆದುಕೊಳ್ಳಬಹುದಾಗಿದೆ. ಇದೇ ಅವಧಿಯಲ್ಲಿ ಚುನಾವಣೆ ಜರುಗಿದಲ್ಲಿ ಸ್ಪರ್ಧಿಸದಿರುವುದೇ ಹಿತಕರ. ಸ್ಪರ್ಧಿಸುವುದು ಅನಿವಾರ್ಯವಿದ್ದಲ್ಲಿ ನೇರ ತುರುಶಿನ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಕೂಡ ಈ ವರುಷ ಮಿಶ್ರಫಲವಿದೆ. ನವೆಂಬರ ೩ ರಿಂದ ಮಾರ್ಚ ೧೪ರ ವರೆಗಿನ ಕಾಲಪ್ರತಿಕೂಲವಿದ್ದು ಮನೆಯಲ್ಲಿಯ ವಿಷಮ ವಾತಾವರಣದಿಂದಲೂ ಶಿಕ್ಷಕರ ಅವಕೃಪೆಯಿಂದಲೂ ಆರ್ಥಿಕ ಮುಗ್ಗಟ್ಟಿನಿಂದಲೂ ಶಿಕ್ಷಣ ಮುಂದುವರೆಸುವುದೇ ಕಠಿಣವಾಗುತ್ತದೆ. ಈ ಅವಧಿಯಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳ ಫಲಿತಾಂಶ ಸಂಶಯಾಸ್ಪದವು. ಆದರೆ ಮಾರ್ಚ ೧೫ ರಿಂದ ಅಕ್ಟೋಬರ ೨೨ರ ವರೆಗಿನ ಕಾಲ ಪ್ರೋತ್ಸಾಹದಾಯಕವಿದ್ದು, ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರಿಯುತ್ತದೆ. ಹಾಗೂ ಈ ಅವಧಿಯಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ಉತ್ತಮದರ್ಜೆಯಲ್ಲಿ ತೇರ್ಗಡೆಯಾಗಿ, ವಿದ್ಯಾರ್ಥಿವೇತನ, ಶಿಷ್ಯವೃತ್ತಿ ಪಡೆಯುವರಲ್ಲದೇ ಹೆಚ್ಚಿನ ಶಿಕ್ಷಣಕ್ಕಾಗಿ ಪರದೇಶ ಪರ್ಯಟನ ಕೈಕೊಳ್ಳಬಹುದಾಗಿದೆ.

## ಸಿಂಹ

**ಈ ರಾಶಿಯವರಿಗೆ ಮಿಶ್ರಫಲದಾಯಕ ವರುಷವಿದು. ಪೂರ್ವಾರ್ಧವು ಪ್ರತಿಕೂಲವಿದ್ದರೆ ಉತ್ತರಾರ್ಧವು ಉತ್ತೇಜಕವಿದೆ.**

ಈ ವರುಷದ ಈ ರಾಶಿಯವರ ಗ್ರಹಗತಿಯನ್ನು ಪರಾಮರ್ಶಿಸಲಾಗಿ ಕಳೆದ ಒಂದೂವರೆ ವರುಷದಿಂದ ಅಶುಭಫಲದಾಯಕ ಚತುರ್ಥ ಶನಿಯು ಈ ವರುಷದಲ್ಲಿಯೂ ಮುಂದುವರೆಯುತ್ತಾನೆ. ಇದರ ಸಂಗಡ ಕಳೆದ ಅಗಷ್ಟದಿಂದ ಬಂದ ಅಷ್ಟಮ ರಾಹುವಿನ ಅನಿಷ್ಟ ಫಲವು ಕೂಡ ವರುಷಾಂತ್ಯದವರೆಗೂ ಇರುತ್ತದೆ. ಆದರೆ ವರುಷ ಪ್ರಾರಂಭದಿಂದ ಮೂರು ತಿಂಗಳ ವರೆಗೆ ಏಳನೇಯವನಾಗಿಯೂ ಹಾಗು ವರುಷ ಕೊನೆಯ ನಾಲ್ಕು ತಿಂಗಳು ಒಂಭತ್ತನೇಯವನಾಗಿಯೂ ಅತ್ಯಂತ ಶುಭ ಫಲ ಕೊಡುತ್ತಿರುವ ಗುರುಮಹಾರಾಜನು ಮಧ್ಯದ ಐದು ತಿಂಗಳು ಮಾತ್ರ ಅಷ್ಟಮನಾಗಿ ಅಶುಭ ಫಲ ಕೊಡುತ್ತಾನೆ. ಹೀಗೆ ನಿಮ್ಮ ಗೃಹಸ್ಥಿತಿಯಿರುವದರಿಂದ ಸತ್ವಪರೀಕ್ಷೆಯ ಕಾಲವಾಗಿದೆ. ಧೈರ್ಯಶಾಲಿಗಳಾದ ನೀವು ಇಂಥ ಕಠಿಣ ಪರಿಸ್ಥಿತಿಯಿಂದ ಪಾರಾಗುವಿರಿಯೆನೋ ನಿಜ. ಆದರೆ ನಿಮ್ಮ ನೇರ ನಿಷ್ಠುರ ಮಾತಿನಿಂದ ಶತ್ರುಗಳನ್ನು ನಿರ್ಮಾಣ ಮಾಡಿಕೊಳ್ಳುವ ನಿಮ್ಮ ಸ್ವಭಾವವನ್ನು ತಿದ್ದಿಕೊಳ್ಳುವದು ಹಿತಕರವು. ಹಾಗು, ನಿತ್ಯ ಶನಿಜಪ, ಪವಮಾನ ಹೋಮ, ಮಾರುತಿ ದರ್ಶನದಿಂದ ಶನಿಯ ಉಗ್ರತೆ ಕಡಿಮೆಯಾಗುವದು.

ಈ ರಾಶಿಯವರ ಆರೋಗ್ಯ ವರುಷವಿಡೀ ಚೆನ್ನಾಗಿರದು. ಒಂದಿಲ್ಲೊಂದು ಕಿರುಕಳ ಪೀಡೆ, ಉಪದ್ರವ ಇದ್ದೇ ಇರುತ್ತದೆ. ಅದರಲ್ಲಿಯೂ ನವೆಂಬರ ೧೪ರಿಂದ ಜನೇವರಿ ೧೭ರ ವರೆಗೆ ಮಾರ್ಚ ೧೫ರಿಂದ ಮೇ ೧೪ ರ ವರೆಗೆ, ಜುಲೈ ೧೫ ರಿಂದ ಅಕ್ಟೋಬರ ೧೮ ವರೆಗಿನ ಕಾಲ ತೀರ ಪ್ರತಿಕೂಲವಿದ್ದು, ಈ ಕಾಲದಲ್ಲಿ ರೋಗ ಉಲ್ಬಣಿಸುವುದಲ್ಲದೇ ಶತ್ರುಪೀಡೆ ಅಪಘಾತ ಭಯವು ಉಂಟು. ಆದ್ದರಿಂದ ಈ ಅವಧಿಯಲ್ಲಿ ವಾಹನ ಚಾಲಕರು, ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರರು, ವರ್ಕಶಾಪ್, ಮಶಿನಶಾಪಗಳಲ್ಲಿ ಕೆಲಸ ಮಾಡುವ ಮಶಿನರಿ ಕೆಲಸಗಾರರು ವಿಶೇಷ ಎಚ್ಚರಿಕೆಯಲ್ಲಿ ಇರುವದು ಅವಶ್ಯ. ಆರ್ಥಿಕ ದೃಷ್ಟಿಯಿಂದ ನೋಡಿದರೆ ಮಿಶ್ರಫಲವಿದೆ. ನವೆಂಬರದಿಂದ ಎಪ್ರಿಲ್‌ವರೆಗೆ ಪ್ರತಿಕೂಲವಿದ್ದು ಡಾಕ್ಟರ, ವಕೀಲರ ಬಿಲ್ಲುಗಳಿಗಾಗಿಯೇ ಮುಕ್ಕಾಲು ಆದಾಯ ಖರ್ಚಾಗುವದು. ಆದಾಯ ಅಲ್ಪ, ವೆಚ್ಚ ವಿಪರೀತ, ಹಳೆ ಸಾಲ ತೀರಿಸಲು ಹೊಸ ಸಾಲಕ್ಕೆ ಪರದಾಡುವದರಲ್ಲಿಯೇ ಪೂರ್ವಾರ್ಧ ಕಳೆಯುತ್ತದೆ. ಆದರೆ ಮೇದಿಂದ ಅಕ್ಟೋಬರ ವರೆಗಿನ ಕಾಲ ಪ್ರೋತ್ಸಾಹದಾಯಕವಿದ್ದು ನಿರೀಕ್ಷಿಸಿದ ಮೂಲದಿಂದ ಬರತಕ್ಕ ಹಣವು ಸಮಯಕ್ಕೆ ಲಭಿಸುವದರಿಂದ ಪೂರ್ವಾರ್ಧದಲ್ಲಿ ಮಾಡಿದ ಸಾಲ ಉತ್ತರಾರ್ಧದಲ್ಲಿ ತೀರಿಸುವ ಶಕ್ತಿ ಬರುತ್ತದೆ. ಕೋರ್ಟು ಕಚೇರಿ ಮೊದಲಾದ ಯಾವುದೇ ಪ್ರಕಾರದ ವ್ಯಾಜ್ಯಗಳಿಗೆ ಮಿಶ್ರಫಲವಿದೆ. ಫೌಜುದಾರಿ ಹಾಗು ಅಪಘಾತ ಸಂಭವಿಸಿದ ವ್ಯಾಜ್ಯಗಳಿಗೂ, ಕಾರ್ಮಿಕರಿಗೆ ಸಂಬಂಧಿಸಿದ ವ್ಯಾಜ್ಯಗಳಿಗೆ ಅಪಜಯವಿದ್ದರೆ ದಿವಾಣಿ ಹಾಗು ರಾಜಕೀಯ ಶೈಕ್ಷಣಿಕ ಸಂಬಂಧಿಸಿದ ವ್ಯಾಜ್ಯಗಳಿಗೆ ಉತ್ತರಾರ್ಧದಲ್ಲಿ ಯಶಸ್ಸು ಲಭಿಸುತ್ತದೆ.

ಈ ರಾಶಿಯ ನೌಕರವರ್ಗದವರಿಗೆ ಮಿಶ್ರಫಲವಿದೆ. ಪೂರ್ವಾರ್ಧವು ಪ್ರತಿಕೂಲವಿದ್ದರೆ ಉತ್ತರಾರ್ಧವು ಉತ್ತೇಜಕವಿದೆ. ಅಂದರೆ ನವೆಂಬರದಿಂದ ಎಪ್ರಿಲ್‌ವರೆಗಿನ ಕಾಲ ಪ್ರತಿಕೂಲವಿದ್ದು ಈ ಕಾಲದಲ್ಲಿ ಮೇಲಾಧಿಕಾರಿಗಳ ಉಪಟಳಕ್ಕೆ ಬೇಸತ್ತು ಇಲ್ಲವೇ ಹಿಂಬಡತಿಯ ಮೂಲಕ ರಾಜೀನಾಮೆ ಕೊಡುವ ಪ್ರಸಂಗ ಬರಬಹುದು. ಅಶುಭಸ್ಯ ಕಾಲಹರಣಂ ವೆಂಬಂತೆ ತಾಳ್ಮೆಯಿಂದ ಇದ್ದರೆ ಎಲ್ಲವೂ ಸರಿಯಾಗುತ್ತದೆ.




ಮೇದಿಂದ ಅಕ್ಟೋಬರದ ವರೆಗೆ ಉತ್ತರಾರ್ಧ ಉತ್ತೇಜಕವಿದ್ದು ಈ ಕಾಲದಲ್ಲಿ ವರಿಷ್ಠ ತಪ್ಪು ತಿಳುವಳಿಕೆ ದೂರವಾಗಿ ಸಹಕಾರ ವಿಶ್ವಾಸ ಕುದುರುವುದು. ಅಲ್ಲದೇ ನೌಕರಿಯಲ್ಲಿ ಬಡ ಅನುಕೂಲ ಜಾಗೆಗೆ ಬದಲಿ ಮೊದಲಾದ ಶು ಘಟನೆಗಳು ಜರಗುವವು. ಈ ರಾಶಿಯ ಹಂಗಾಮಿ ನೌಕರರಿಗೆ ಅಸ್ಥಿರತೆಯು ಉತ್ತರಾಧ ದಲ್ಲಿ ದೂರಾಗುತ್ತದೆ. ಕಳೆದ ಅನೇಕ ವರು ಗಳಿಂದ ಉದ್ಯೋಗಕ್ಕಾಗಿ ಪ್ರಯತ್ನಿಸುತ್ತಿರು ಈ ರಾಶಿಯ ನಿರುದ್ಯೋಗಿಗಳಿಗೆ ಮೇದಿಂದ ಅಕ್ಟೋಬರ ಒಳಗೆ ಉದ್ಯೋಗಕ್ಕೆ ಹಚ್ಚುತ್ತಾರೆ. ಈ ರಾಶಿಯ ಬಾಹ್ಯ ಹಾಗು ತಾಂತ್ರಿಕ ಕೆಲಸಗಾರರಿಗೆ, ಗಿರಣಿ ಕಾರಖಾನೆಯ ಕಾರ್ಮಿಕರಿಗೂ, ವರ್ಕಶಾಪ್, ಮಶಿನಶಾಪ ಗಳಲ್ಲಿ ಕೆಲಸ ಮಾಡುವ ಮಶಿನ ಕೆಲಸಗಾರರಿಗೂ ಶನಿರಾಹುಗಳು ಅಶುಭರಿರುವದರಿಂದ ಈ ವರುಷ ಪ್ರತಿಕೂಲವಿದೆ. ಇದ್ದುದರಲ್ಲಿಯೇ ಮೇ, ಜೂನ, ಜುಲೈ, ಸಪ್ಟೆಂಬರ, ಅಕ್ಟೋಬರ ಈ ಐದು ತಿಂಗಳು ಅನುಕೂಲವಿದ್ದು ಈ ತಿಂಗಳುಗಳಲ್ಲಿ ಕೆಲ ಬೇಡಿಕೆಗಳು ಕೆಲಮಟ್ಟಿಗೆ ಈಡೇರಬಹುದಾಗಿದೆ. ಈ ರಾಶಿಯ ಕೃಷಿ ವರ್ಗದವರಿಗೂ ಕೂಡ ಶನಿರಾಹುಗಳು ಪ್ರತಿಕೂಲವಿರುವುದರಿಂದ ನಿರೀಕ್ಷಿಸಿದಂತೆ ಬೆಳೆ ಬಾರದಿರುವದರಿಂದ ಇಲ್ಲವೆ ಕಳವು ತುಡುಗು ಗಳಿಂದಲೂ ಅಥವಾ ದನಕರುಗಳ ಹಾನಿಯಿಂದಲೂ ಬೇಸಾಯ ಮುಂದುವರಿಸುವುದೇ ಕಠಿಣವಾದರೂ ಉತ್ತರಾರ್ಧದಲ್ಲಿ ಆಸರ ಸಿಗುತ್ತದೆ. ಈ ರಾಶಿಯ ಸಾಹಿತಿ, ಲೇಖಕ

ಕಲಾವಿದ, ಶಿಕ್ಷಕ, ಅಧ್ಯಾಪಕ ಪತ್ರಿಕೋದ್ಯಮಿ ಪ್ರಕಾಶಕ, ಡಾಕ್ಟರ, ವಕೀಲ, ಚಾರ್ಟೆರ್ಡ್ ಅಕೌಂಟಂಟ, ನ್ಯಾಯಾಧೀಶ, ಮೊದಲಾದ ಬುದ್ಧಿಜೀವಿಗಳಿಗೆಲ್ಲ ವರುಷದ ಪ್ರಾರಂಭದ ಮೂರುತಿಂಗಳು ಏಳನೇಗುರು ಹಾಗು ವರುಷದ ಕೊನೆಯ ನಾಲ್ಕುತಿಂಗಳು ಒಂಭತ್ತನೆಯ ಅತ್ಯಂತ ಶುಭ ಫಲದಾಯಕ ಗುರುವು ಇರುವುದರಿಂದ ಪ್ರೋತ್ಸಾಹದಾಯಕ ವರುಷವಾಗಿದೆ. ಅದರಲ್ಲಿಯೂ ಡಿಸೆಂಬರ ೧೬ರಿಂದ ಫೆಬ್ರುವರಿ ೨೨ರ ವರೆಗೆ, ಹಾಗು ಮೇ ೧೫ರಿಂದ ಅಕ್ಟೋಬರ ೧೮ರ ವರೆಗಿನ ಕಾಲ ಪ್ರೋತ್ಸಾಹದಾಯಕವಾಗಿದ್ದು, ಈ ಕಾಲದಲ್ಲಿ ಸರಕಾರ ಹಾಗು ಸಂಘಸಂಸ್ಥೆಗಳಿಂದ ಮನ್ನಣೆ, ಪುರಸ್ಕಾರ ಪ್ರಶಸ್ತಿ, ಪದಕಗಳನ್ನು ಪಡೆಯುವುರಲ್ಲದೆ ದ್ರವ್ಯ ಸಂಚಯವಾಗಿ ಮನೆ, ವಾಹನ ಕೊಳ್ಳುವ ಶಕ್ತಿ ಬರುವುದಲ್ಲದೇ ಪರದೇಶ ಪರ್ಯಟನದ ಯೋಗವು ಕೂಡ ಈ ಅವಧಿಯಲ್ಲಿ ದೊರೆಯುತ್ತದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ, ಹಂಚಿಕೆದಾರರಿಗೂ ಕಮೀಶನ್ ಏಜಂಟರಿಗೂ, ಹೊಟೆಲ, ಟಾಕೀಜ, ಚಾಳ, ಗಿರಣಿ ಕಾರಖಾನೆಗಳ ಮಾಲಿಕ ವರ್ಗ ವರ್ಗದವರಿಗೆಲ್ಲ ಮಿಶ್ರಫಲದಾಯಕ ವರುಷವಿದು. ಪೂರ್ವಾರ್ಧವು ಪ್ರತಿಕೂಲವಿದ್ದು ನೌಕರ ಸಮಸ್ಯೆ, ಮಶಿನರಿ ತೊಂದರ ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ. ಉತ್ತರಾರ್ಧವು ಉತ್ತೇಜಕವಿದ್ದು, ಕುಂಠಿತವಾದ ಉದ್ಯೋಗ ಮತ್ತೆ ಚೇತರಿಸಿಕೊಳ್ಳುವುದಲ್ಲದೇ ನೌಕರಿಸಮಸ್ಯೆಗೂ, ಸರಕಾರದ ನಿರ್ಬಂಧನೆಗಳಿಗೂ ಪರಿಹಾರ ಲಭಿಸುವುದಲ್ಲದೇ ಹೊಸ ಮಶಿನರಿಗಳನ್ನು, ಉದ್ಯೋಗಕ್ಕೆ ಬೇಕಾಗುವ ಉಪಕರಣಗಳನ್ನು ಕೊಳ್ಳುವ ಶಕ್ತಿ ಬರುವುದಲ್ಲದೇ ಪೂರ್ವಾರ್ಧದಲ್ಲಿ ಮಾಡಿದ ಸಾಲವನ್ನು ಉತ್ತರಾರ್ಧದಲ್ಲಿ ತೀರಿಸುವ ಶಕ್ತಿ ಬರುತ್ತದೆ.

ಸಪ್ತಮ ಹಾಗು ನವಮ ಗುರುವಿನ ಬೆಂಬಲವಿರುವ ಈ ರಾಶಿಯ ವಧೂ-ವರರಿಗೆ ಈ ವರುಷ ಕಂಕಣಬಲ ಕೂಡಿಬಂದಿದೆ. ಅದರಲ್ಲಿಯೂ ನವೆಂಬರ್ ೩ ರಿಂದ ಫೆಬ್ರುವರಿ ೧೨ರ ವರೆಗೆ ಹಾಗು ಮೇ ದಿಂದ ಜುಲೈದ ವರೆಗಿನ ಕಾಲದಲ್ಲಿ ನಿರ್ವಿಘ್ನವಾಗಿ ವಿವಾಹ ಜರುಗುವದು ಖಂಡಿತವು. ಈ ರಾಶಿಯ ವಿವಾಹಿತ ಸ್ತ್ರೀಪುರುಷರಿಗೂ ಗೃಹಿಣಿಯರಿಗೂ ಮಿಶ್ರಫಲದಾಯಕ ವರುಷವಿದು. ಪೂರ್ವಾರ್ಧವು ಪ್ರತಿಕೂಲವಿದ್ದು, ನಿತ್ಯದ ಗೃಹಕಲಹದಿಂದಾಗಿ ಹಲವು ನಿದ್ರಾರಹಿತ ರಾತ್ರಿಯನ್ನು ಕಳೆಯಬೇಕಾಗುತ್ತದೆ. ಆದರೆ ಮೇ ದಿಂದ ಅಕ್ಟೋಬರ್‌ದ ವರೆಗಿನ ಕಾಲವು ಉತ್ತೇಜಕವಿದ್ದು ತಪ್ಪು ತಿಳುವಳಿಕೆಯಿಂದ ಒಡೆದು ಹೋಗಿದ್ದ ಏಕತ್ರ ಕುಟುಂಬ ಮತ್ತೇ ಒಂದುಗೂಡುತ್ತದೆ. ಅಲ್ಲದೇ ಈ ಕಾಲದಲ್ಲಿ ಬೆಲೆಯುಳ ವಸ್ತು-ಒಡವೆಗಳನ್ನು ಖರೀದಿಸುವಿಕೆ, ಮನೆ, ವಾಹನ ಕೊಳ್ಳುವಿಕೆ, ತೀರ್ಥಯಾತ್ರಾ, ಸಂದರ್ಶನ, ಮನೆಯಲ್ಲಿ ಮಂಗಲಕಾರ್ಯ ಜರುಗುವಿಕೆ ಮೊದಲಾದ ಶುಭಘಟನೆಗಳು ಜರುಗುವವು. ಈ ರಾಶಿಯ ಗರ್ಭಿಣಿಯರಿಗೆ ಮಿಶ್ರಫಲ. ಹೆರಿಗೆಯು ಪೂರ್ವಾರ್ಧದಲ್ಲಿ ಆದರೆ ಕಷ್ಟ ಪ್ರಸವವು. ಉತ್ತರಾರ್ಧದಲ್ಲಿ ಆದರೆ ಸುಖ ಪ್ರಸವವು, ಗಂಡುಸಂತಾನದ ಯೋಗವುಂಟು.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಮಿಶ್ರಫಲವಿದೆ. ಪೂರ್ವಾರ್ಧವು ಪ್ರತಿಕೂಲವಿದ್ದು, ಸ್ಥಾನಮಾನಕ್ಕೆ ಚ್ಯುತಿ ಇದೆ. ಇದೇ ಸಮಯದಲ್ಲಿ ಚುನಾವಣೆ ಜರುಗಿದಲ್ಲಿ ಸ್ಪರ್ಧಿಸದಿರುವುದೇ ಹಿತಕರವು. ಸ್ಪರ್ಧಿಸಿದಲ್ಲಿ ನೇರ, ನಿಖರ, ಸ್ಪರ್ಧೆ ಎದುರಿಸಬೇಕಾಗುತ್ತದೆ. ಆದರೆ ಉತ್ತರಾರ್ಧವು ಉತ್ತೇಜಕವಿದ್ದು, ಪೂರ್ವಾರ್ಧದಲ್ಲಿ ಕಳೆದುಕೊಂಡ ಸ್ಥಾನಮಾನ ಅಧಿಕಾರ ಮತ್ತೆ ಲಭಿಸುವುದಲ್ಲದೇ, ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸಿ, ವಿವಿಧ ಸಂಘ ಸಂಸ್ಥೆಗಳ ಗೌರವಾನ್ವಿತ ಸ್ಥಾನಮಾನ ಅಧಿಕಾರ ಪಡೆಯುವರಲ್ಲದೇ ಜಿಲ್ಲೆ, ರಾಜ್ಯ, ಮಟ್ಟದ ಧುರೀಣರಾಗುವರಲ್ಲಿ ಸಂದೇಹವಿಲ್ಲ.

ಈ ರಾಶಿಯ ವಿದ್ಯಾರ್ಥಿಗಳಿಗೆ ಮಿಶ್ರಫಲದಾಯಕ ವರುಷವಿದು. ಪೂರ್ವಾರ್ಧವು ಪ್ರತಿಕೂಲವಿದ್ದು, ಮನೆಯಲ್ಲಿಯ ಕಲುಷಿತ ವಾತಾವರಣದಿಂದಲೂ, ಶಿಕ್ಷಕರ ಅವಕೃಪೆಯಿಂದಲೂ, ಆರ್ಥಿಕ ಮುಗ್ಗಟ್ಟಿನಿಂದಲೂ ಶಿಕ್ಷಣ ಮುಂದುವರೆಸುವುದೇ ಕಷ್ಟವಾಗುತ್ತದೆ. ಅಲ್ಲದೇ ಪೂರ್ವಾರ್ಧದಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳ ಫಲಿತಾಂಶವು ಸಂಶಯಾಸ್ಪದ. ಆದರೆ ಉತ್ತರಾರ್ಧವು ಉತ್ತೇಜಕವಿದ್ದು, ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರೆಯುತ್ತದೆ. ಕಳೆದುಕೊಂಡ ಶಿಷ್ಯ ವೃತ್ತಿ, ವಿದ್ಯಾರ್ಥಿವೇತನ ಮತ್ತೆ ದೊರೆಯಬಹುದಾಗಿದೆ. ಉತ್ತರಾರ್ಧದಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ಶ್ರೇಣಿ ದರ್ಜೆಯಲ್ಲಿ ತೇರ್ಗಡೆಯಾಗುವರು.







ಈ ರಾಶಿಯವರಿಗೆ ಈ ವರುಷ ಉದ್ಯೋಗ ಹಾಗೂ ಆರ್ಥಿಕ ದೃಷ್ಟಿಯಿಂದ ಉತ್ಸಾಹದಾಯಕವಾದರೆ ಕೌಟುಂಬಿಕ ಹಾಗೂ ಶೈಕ್ಷಣಿಕ ದೃಷ್ಟಿಯಿಂದ ನಿರುತ್ಸಾಹದಾಯಕವಾಗಿದೆ.

ಈ ರಾಶಿಯವರ ಈ ವರುಷದ ಗ್ರಹಗತಿಯನ್ನು ಪರಿಶೀಲಿಸಲಾಗಿ ಕಳೆದ ಒಂದೂವರೆ ವರುಷದಿಂದ ಶುಭಫಲವನ್ನು ಕೊಡುತ್ತಿರುವ ಮೂರನೇ ಶನಿಯು ಈ ವರುಷದಲ್ಲಿಯೂ ಕೊಡುತ್ತಾನೆ. ಕಳೆದ ಅಗಷ್ಟದಿಂದ ಬಂದ ಸಪ್ತಮ ರಾಹು ಕೂಡ ಶುಭಫಲದಾಯಕನೇ, ಆದರೆ ವರುಷದ ಪ್ರಾರಂಭದಿಂದ ಮೂರು ತಿಂಗಳು ಆರನೇ ಗುರುವಿನ ಅಶುಭ ಫಲ ವರುಷದ ಕೊನೆಯ ಆರುತಿಂಗಳು ಅಷ್ಟಮ ಗುರುವಿನ ಅನಿಷ್ಟ ಫಲವನ್ನು ಹೊಂದುವಿರಿ. ಹೀಗೆ ನಿಮ್ಮ ಗೃಹಸ್ಥಿತಿ ಇರುವುದರಿಂದ ಮಿಶ್ರಫಲದಾಯಕ ವರುಷವಿದು.

ಆರೋಗ್ಯ ದೃಷ್ಟಿಯಿಂದ ನೋಡಿದರೆ ದೈಹಿಕವಾಗಿ ಚೆನ್ನಾಗಿರುತ್ತದೆ. ಆದರೆ ಮಾನಸಿಕ ನೆಮ್ಮದಿ ಇಡೀ ವರುಷ ದೊರೆಯುವದಿಲ್ಲ. ಹೀಗಾಗಿ ದೈಹಿಕವಾಗಿ ತುಸು ಕಿರುಕುಳವಿರುತ್ತದೆ. ಅದರಲ್ಲಿಯೂ ಡಿಶೆಂಬರ ೧೫ ರಿಂದ ಜನೇವರಿ ೧೪ ರ ವರೆಗಿನ ಕಾಲ, ಎಪ್ರಿಲ ೧೨ ರಿಂದ ಮೇ ೧೫ ರ ವರೆಗೆ, ಅಗಷ್ಟ ೧೫ ರಿಂದ ಅಕ್ಟೋಬರ ೧೮ ರ ವರೆಗಿನ ಈ ನಾಲ್ಕು ತಿಂಗಳಿನ ಕಾಲ ಮಾತ್ರ ತುಸು ಕೆಡಬಹುದಾಗಿದೆ. ಆರ್ಥಿಕ ದೃಷ್ಟಿಯಿಂದ ನೋಡಿದರೆ ಬರತಕ್ಕ ಹಣವು ಲಭಿಸುವದಲ್ಲದೇ, ನಿರೀಕ್ಷಿಸಿದ ಮೂಲದಿಂದ ಹಣಬರುವುದು. ಅಲ್ಲದೇ ನವೆಂಬರ ೩ ರಿಂದ ಡಿಶೆಂಬರ ೧೫ ರ ವರೆಗೆ, ಫೆಬ್ರುವರಿ ೧೨ ರಿಂದ ಮಾರ್ಚ ೧೫ ರ ವರೆಗೆ ಹಾಗೂ ಮೇ ೧೫ ರಿಂದ ಅಗಷ್ಟ ೧೫ ರ ವರೆಗಿನ ಈ ಕಾಲದಲ್ಲಿ ದತ್ತಕ, ವಾರಸಾ, ಭಕ್ಷೀಸ್, ಲಾಟರಿ, ಕಮೀಷನ್ ಮೊದಲಾದ ರೀತಿಯಿಂದ ಆಕಸ್ಮಿಕ ಧನ ಪ್ರಾಪ್ತಿಯಾಗಿ ಆರ್ಥಿಕ ಸ್ಥಿತಿ ಈ ವರುಷ ತೃಪ್ತಿಕರವಿರುತ್ತದೆ. ವಾದಸ್ಪರ್ಧೆ, ಕೋರ್ಟು, ಕಚೇರಿಯ ವ್ಯಾಜ್ಯಗಳಲ್ಲಿ ಮಿಶ್ರಫಲವಿದೆ. ಫೌಜುದಾರಿ, ಹಾಗೂ ಕಾರ್ಮಿಕ ತಂಟೆಗಳಲ್ಲಿಯೂ ವಾಹನಗಳ ತಂಟೆಯಲ್ಲಿಯೂ ಜಯಖಂಡಿತ,

ಆದರೆ ದಿವಾಣಿ, ಶೈಕ್ಷಣಿಕ, ರಾಜಕೀಯ ವ್ಯವಹಾರದಲ್ಲಿ, ಫೆಬ್ರುವರಿ ೩ ರಿಂದ ಜೂನ್ ೧೬ ರ ವರೆಗೆ ತೀರ್ಮಾನವಾದರೆ ಮಾತ್ರ ಯಶಸ್ಸು ಇದೆ, ಉಳಿದ ಕಾಲದಲ್ಲಿ ಆದರೆ ಅಪಯಶಸ್ಸು ಕಟ್ಟಿಟ್ಟಿದ್ದು.

ಈ ರಾಶಿಯ ನೌಕರವರ್ಗದವರಿಗೆ ಆರ್ಥಿಕ ದೃಷ್ಟಿಯಿಂದ ಈ ವರುಷ ಪ್ರೋತ್ಸಾಹದಾಯಕವಾದರೆ ಸ್ಥಾನಮಾನ, ಅಧಿಕಾರ ದೃಷ್ಟಿಯಿಂದ ನಿರುತ್ಸಾಹದಾಯಕವಾಗಿದೆ. ನವೆಂಬರ ೩ ರಿಂದ ಡಿಶೆಂಬರ ೧೫ ರ ವರೆಗೆ, ಫೆಬ್ರುವರಿ ೧೨ ರಿಂದ ಎಪ್ರಿಲ್ ೧೨ ರ ವರೆಗೆ, ಮೇ ೧೫ ರಿಂದ ಅಗಷ್ಟ ೧೫ ರ ವರೆಗಿನ ಕಾಲ ಪ್ರೋತ್ಸಾಹದಾಯಕವಾವಾಗಿದ್ದು, ಈ ಕಾಲದಲ್ಲಿ ನೌಕರಿಯಲ್ಲಿ ಬಡತಿ, ಅನುಕೂಲ ಜಾಗೆಗೆ ಬದಲಿ, ಹಂಗಾಮಿ ನೌಕರರಿಗೆ ನೌಕರಿಯಲ್ಲಿ ಸ್ಥಿರತೆ ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ ಮೊದಲಾದ ಶುಭ ಫಲಗಳು ದೊರೆಯುವವು. ಆದರೆ ಡಿಶೆಂಬರ ೧೫ ರಿಂದ ಜನೇವರಿ ೧೪ ರ ವರೆಗೆ, ಎಪ್ರಿಲ್ ೧೨ ರಿಂದ ಮೇ ೧೫ ರ ವರೆಗೆ, ಅಗಷ್ಟ ೧೬ ರಿಂದ ಅಕ್ಟೋಬರ ೧೮ ರ ವರೆಗಿನ ಈ ನಾಲ್ಕು ತಿಂಗಳ ಕಾಲ ಪ್ರತಿಕೂಲವಿದ್ದು, ಈ ಕಾಲದಲ್ಲಿ ಅನಪೇಕ್ಷಿತ ಸ್ಥಳಕ್ಕೆ ಬದಲಿ, ವರಿಷ್ಠರ ಕಿರುಕುಳ, ಅಧಿಕಾರಸ್ಥಾನಕ್ಕೆ ಚ್ಯುತಿ ಮೊದಲಾದ ಅಶುಭ ಫಲಗಳು ದೊರೆಯುವವು. ಈ ರಾಶಿಯ ಗಿರಣಿ-ಕಾರಖಾನೆಯ ಕಾರ್ಮಿಕರಿಗೂ, ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರರಿಗೂ, ವರ್ಕಶಾಪ್, ಮಶಿನಶಾಪಗಳಲ್ಲಿ ಕೆಲಸ ಮಾಡುತ್ತಿರುವ ಮಶಿನರಿ ಕೆಲಸಗಾರರಿಗೂ ಶನಿ ರಾಹುಗಳು ಶುಭರಿರುವದರಿಂದ ಬಹಳಷ್ಟು ಬೇಡಿಕೆಗಳು ಈ ವರುಷ ಈಡೇರುತ್ತವೆ. ಈ ರಾಶಿಯ ಕೃಷಿವರ್ಗದವರಿಗೆ ಮಿಶ್ರಫಲವಿದೆ. ಬೆಳೆಯ ದೃಷ್ಟಿಯಿಂದ ಶುಭವಿದ್ದು ನಿರೀಕ್ಷೆಗಿಂತಲೂ ಅಧಿಕ ಫಸಲು ಬಂದು ಹಿಂದಿನ ಸಾಲಗಳೆಲ್ಲ ತೀರಿಸಿ ಹೊಸದಾಗಿ ಹೊಲ, ಜಾಗೆ, ಮನೆ, ಟ್ರಕ್, ಟ್ರ್ಯಾಕ್ಟರ, ಪಂಪಸೆಟ್‌ಗಳನ್ನು ದನಕರುಗಳನ್ನು ಖರೀದಿಸುವ ಶಕ್ತಿ ಬರುತ್ತದೆ. ಆದರೆ ನೆರೆಹೊರೆಯವರ ತಗಾದೆಯಿಂದಾಗಿ ಕೋರ್ಟಿನ ಕಟ್ಟೆ ಹತ್ತುವ ಪ್ರಸಂಗ ಬರುತ್ತದೆ. ವರುಷದ ಪ್ರಾರಂಭದ ಮೂರು ತಿಂಗಳು ಆರನೇ ಹಾಗು ಕೊನೆಯ ನಾಲ್ಕು ತಿಂಗಳು ಅಷ್ಟಮ ಗುರುವಿನ ಅಶುಭಫಲದಿಂದಾಗಿ ಸಾಹಿತಿ, ಲೇಖಕ, ಕಲಾವಿದ, ಪ್ರಕಾಶಕ, ಪತ್ರಿಕೋದ್ಯಮಿ, ಶಿಕ್ಷಕ, ಅಧ್ಯಾಪಕ, ಡಾಕ್ಟರ, ವಕೀಲ, ಚಾರ್ಟರ್ಡ ಅಕೌಂಟಂಟ್, ನ್ಯಾಯಾಧೀಶ ಮೊದಲಾದ ಬುದ್ಧಿಜೀವಿಗಳಿಗೆಲ್ಲ ಈ ವರುಷ ಪ್ರತಿಕೂಲವಾಗಿದೆ. ಆರ್ಥಿಕ ದೃಷ್ಟಿಯಿಂದ ಉತ್ತಮವಿದ್ದರೂ, ಸ್ಥಾನಮಾನ ಅಧಿಕಾರಕ್ಕೆ ಎರವಾಗಬೇಕಾಗುತ್ತದೆ. ಅದರಲ್ಲಿಯೂ ಡಿಶೆಂಬರ ೧೫ ರಿಂದ ಫೆಬ್ರುವರಿ ೨ ರ ವರೆಗೆ ಎಪ್ರಿಲ್ ೧೫ ರಿಂದ ಜೂನ್ ೧೫ ರ ವರೆಗೆ, ಅಗಷ್ಟ ೧೫ ರಿಂದ ಅಕ್ಟೋಬರ ೧೮ ರ ವರೆಗಿನ ಈ ಕಾಲದಲ್ಲಿ ಅವಮಾನಕರ ಪ್ರಸಂಗಗಳನ್ನು ಎದುರಿರಬೇಕಾಗುತ್ತದೆ.

ಈ ರಾಶಿಯ ಸ್ವತಂತ್ರ ವ್ಯಾಪಾರಸ್ಥ ಉದ್ಯೋಗಸ್ಥರಿಗೂ ಕಮೀಶನ್ ಏಜೆಂಟರಿಗೂ, ಹಂಚಿಕೆದಾರರಿಗೂ, ಚಾಳ, ಟಾಕೀಜ, ಹೋಟೇಲ, ಗಿರಣಿ, ಕಾರಖಾನೆಗಳಮಾಲಕ ವರ್ಗದವರಿಗೆ ಉದ್ಯೋಗ, ಆರ್ಥಿಕದೃಷ್ಟಿಯಿಂದ ಈ ವರುಷ ಪ್ರಗತಿದಾಯಕವಿರುವದಾದರೂ ನೌಕರರ ಸಮಸ್ಯೆ ಹಾಗೂ ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾದ ಪ್ರಸಂಗ ಬರಬಹುದಾಗಿದೆ.

ಈ ರಾಶಿಯ ವಧೂವರರಿಗೆ ಫೆಬ್ರುವರಿ ೨ ರಿಂದ ಜೂನ ೧೫ರ ವರೆಗಿನ ಏಳನೇ ಗುರುವಿನ ಅವಧಿಯು ಮಾತ್ರ ಶುಭವಿದ್ದು ಈ ಕಾಲದಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗುವುದು. ಉಳಿದ ಅವಧಿಯಲ್ಲಿ ವಿವಾಹ ಗೊತ್ತು ಮಾಡಿದರೂ ತೊಂದರೆಯಾಗಬಹುದು ಇಲ್ಲವೆ, ಮುಂದೂಡಬಹುದಾಗಿದೆ. ವರುಷದ ಪ್ರಾರಂಭದ ಮೂರು ತಿಂಗಳು ಅಷ್ಟಮ ಗುರುವಿನ ಅನಿಷ್ಟತೆಯಿಂದಾಗಿ ಈ ರಾಶಿಯ ವಿವಾಹಿತ ಸ್ತ್ರೀಪುರುಷರಿಗೂ ಗೃಹಿಣಿಯರಿಗೂ ಅಶಾಂತಿದಾಯಕವಾಗಿದೆ. ನಿತ್ಯದ ಗೃಹ ಕಲಹದಿಂದಲೂ ಆಪ್ತೇಷ್ಟರಲ್ಲಿ ತಪ್ಪು ತಿಳುವಳಿಕೆಯಿಂದಲೂ ನಿದ್ರಾರಹಿತವಾದ ಹಲವು ರಾತ್ರಿಗಳನ್ನು ಕಳೆಯಬೇಕಾಗುತ್ತದೆ. ಆದರಲ್ಲಿಯೂ ಡಿಶೆಂಬರ ೧೫ ರಿಂದ ಫೆಬ್ರುವರಿ ೨ರ ವರೆಗೆ, ಎಪ್ರಿಲ ೧೨ ರಿಂದ ಜೂನ ೧೫ರ ವರೆಗೆ, ಅಗಸ್ಟ ೧೫ ರಿಂದ ಅಕ್ಟೋಬರ ೧೮ರ ವರೆಗೆ ಇರುವ ಕಾಲ ಗೃಹಕಲಹ ಪರಕಾಷ್ಠೆ ಮುಟ್ಟಿ ಏಕತ್ರ ಕುಟುಂಬ ಒಡೆಯುವುದರೊಂದಿಗೆ ಇಲ್ಲವೆ ಕೋರ್ಟಿನ ಬಾಗಿಲು ಬಡಿಯುವುದರೊಂದಿಗೆ ಪರಿಸಮಾಪ್ತಿಯಾಗುತ್ತದೆ. ಈ ರಾಶಿಯ ಗರ್ಭಿಣಿಯರಿಗೆ ತೊಂದರೆ ಕಷ್ಟ ಪ್ರಸವವಾಗುವುದಲ್ಲದೆ, ಶಸ್ತ್ರಕ್ರಿಯೆಯು ಅನಿವಾರ್ಯವಾಗುತ್ತದೆ. ಹೆರಿಗೆಯನ್ನು ದವಾಖಾನೆಯಲ್ಲಿ ಮಾಡಿಸಿಕೊಳ್ಳುವುದು ಹಿತಕರವು.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆಲ್ಲ, ಮಿಶ್ರಫಲದಾಯಕ ವರುಷವಿದು. ನವೆಂಬರ ೩ ರಿಂದ ಡಿಶೆಂಬರ ೧೬ರ ವರೆಗೆ ಹಾಗೂ ಫೆಬ್ರುವರಿ ೨ ರಿಂದ ಜೂನ ೧೫ರ ವರೆಗಿನ ಕಾಲ ಮಾತ್ರ ಪ್ರೋತ್ಸಾಹದಾಯಕ. ಈ ಕಾಲದಲ್ಲಿ ಚುನಾವಣೆ ಜರುಗಿದಲ್ಲಿ ಮಾತ್ರ ಸ್ಪರ್ಧಿಸಬಹುದು. ನೇರ ತುರುಸಿನ ಸ್ಪರ್ಧೆಯಾಗಿ ಅತ್ಯಲ್ಪ ಬಹುಮತದಿಂದ ಆಯ್ಕೆ ಆಗಬಹುದಾಗಿದೆ, ಆದರೆ ಉಳಿದ ಅವಧಿಯಲ್ಲಿ ಚುನಾವಣೆ ಜರುಗಿದಲ್ಲಿ ಸ್ಪರ್ಧಿಸದಿರುವುದೇ ಹಿತಕರವು. ಮಿತ್ರರೇ ಶತ್ರುಗಳಾಗಿರುವದರಿಂದ ಸ್ಥಾನಮಾನಕ್ಕೆ ಚ್ಯುತಿ ಇದೆ.

ಅಶುಭ ಫಲದಾಯಕ ಗುರುವು ಬಹಳ ಅವಧಿಯವರೆಗೆ ಇರುವುದರಿಂದ ಈ ರಾಶಿಯ ವಿದ್ಯಾರ್ಥಿಗಳಿಗೆ ಪ್ರತಿಕೂಲ ವರುಷವಿದು. ಶಿಕ್ಷಕರ ಅವಕೃಪೆಯಿದಲೂ, ಮನೆಯಲ್ಲಿಯ ವಿಷಮ ವಾತಾವರಣದಿಂದಲೂ ಶಿಕ್ಷಣ ಮುಂದುವರೆಸುವದೇ ಕಠಿಣವಾಗುತ್ತದೆ. ಯಾವ ವಿದ್ಯಾರ್ಥಿಯ ಪರೀಕ್ಷೆಯು ಫೆಬ್ರುವರಿ ೨ ರಿಂದ ಜೂನ ೧೫ರ ಒಳಗೆ ಜರಗುವದೋ ಅಂಥ ವಿದ್ಯಾಥಿಗಳು ಹೇಗೊ ಎಂತೋ ತೇರ್ಗಡೆಯಾಗುವರು. ಶ್ರೇಣಿ, ದರ್ಜೆ ಸಿಗುವುದು ಕಠಿಣ. ಉಳಿದ ಅವಧಿಯಲ್ಲಿ ಪರೀಕ್ಷೆ ಕಟ್ಟಿದ ವಿದ್ಯಾರ್ಥಿಗಳ ಫಲಿತಾಂಶ ಸಂಶಯಾಸ್ಪದ.

ಒಟ್ಟಿನಲ್ಲಿ ಈ ರಾಶಿಯವರಿಗೆ ಅಶುಭ ಫಲದಾಯಕ ಗುರುವಿನಿಂದಾಗಿ ಮಿಶ್ರಫಲದಾಯಕ ವರುಷವಾಗಿದ್ದು, ಗುರುವಿನ ಅಶುಭ ಫಲ ಕಡಿಮೆ ಮಾಡಿಕೊಳ್ಳಲು ಗುರುವಿನ ಶಾಂತಿ, ಬೃಹಸ್ಪತಿಸ್ತೋತ್ರ, ಶ್ರೀ ರಾಘವೇಂದ್ರ ಇಲ್ಲವೇ, ಶ್ರೀ ಗುರುದತ್ತ ನಾಮಸ್ಮರಣೆಯಿಂದ ಅನಿಷ್ಟ ನಿವಾರಣೆಯಾಗುತ್ತದೆ.

### ಪ್ರೇಮ

ಓ ! ಪ್ರೇಮವೇ ನಿನ್ನನು;<br>
ಶಬ್ದ ಅರ್ಥದಲಿ ಹಿಡಿದಿಡಲಾಗದು !<br>
ಏಕೆಂದರೆ ನೀನು ತುಂಬ ಸೂಕ್ಷ್ಮ;<br>
ಅಂತೇ ನಿನ್ನನು ತಿಳಿಸಿಕೊಡಲಾಗಿದೆ !

—ಪಂಚಾಕ್ಷರಿ ಹಿರೇಮಠ

## ತುಲಾ

ಈ ರಾಶಿಯವರಿಗೆ ಎಲ್ಲ ವಿಷಯಗಳಲ್ಲಿಯೂ ಪ್ರಗತಿದಾಯಕ ವರುಷವು. ಪೂರ್ವಾರ್ಧಕ್ಕಿಂತ ಉತ್ತರಾರ್ಧವು ಹೆಚ್ಚು ಪ್ರೋತ್ಸಾಹದಾಯಕದ್ದು.

ಈ ವರುಷ ನಿಮ್ಮ ಗ್ರಹಗತಿಯನ್ನು ಪರಿಶೀಲಿಸಲಾಗಿ, ಸಾಡೇಸಾತಿಯ ಮುಕ್ಕಾಲು ಭಾಗ ಕಳೆದಿದೆ. ಅದರಲ್ಲಿಯೂ ಚಿತ್ತಾ, ಸ್ವಾತಿ ನಕ್ಷತ್ರಗಳ ತುಲಾರಾಶಿಯವರು ಸಾಡೇಸಾತಿಯ ಅನಿಷ್ಟತೆಯಿಂದ ಮುಕ್ತರಾಗಿರುವರೆಂದು ತಿಳಿಸಲು ಸಂತೋಷವೆನಿಸುತ್ತದೆ. ಕಳೆದ ಅಗಷ್ಟದಿಂದ ಬಂದ ಶುಭ ಫಲದಾಯಕ ಆರನೇ ರಾಹು ವರುಷಾಂತ್ಯದ ವರೆಗೂ ಮುಂದುವರೆಯುತ್ತಾನೆ. ಕಳೆದ ವರುಷದಿಂದ ಬಂದ ಐದನೇ ಗುರುವು ಫೆಬ್ರುವರಿ ೨ ರ ವರೆಗೆ ಶುಭ ಫಲವನ್ನು ಕೊಡುತ್ತಾನೆ. ಫೆಬ್ರುವರಿ ೩ರಿಂದ ಬರುವ ಅಶುಭ

ಫಲದಾಯಕ ಆರನೇ ಗುರುವು ಜೂನ ೧೫ ರ ವರೆಗೆ ಮಾತ್ರ ಇದ್ದು ಅಲ್ಲಿಂದ ವರುಷಾಂತ್ಯದ ವರೆಗೂ ಏಳನೇ ಗರುವಿನ ಶಭ ಫಲದೊರೆಯುತ್ತದೆ. ಹೀಗೆ ನಿಮ್ಮ ಗ್ರಹಗತಿ ಇರುವುದರಿಂದ ಪ್ರೋತ್ಸಾಹದಾಯಕ ವರುಷವಾಗಿದೆ.

ಆರೋಗ್ಯದೃಷ್ಟಿಯಿಂದ ಪರಿಶೀಲಿಸಿದರೆ ವರುಷ ಮುಕ್ಕಾಲು ಭಾಗ ಚೆನ್ನಾಗಿರುತ್ತದೆ. ಆದರೂ ಜನೇವರಿ ೧೪ ರಿಂದ ಫೆಬ್ರುವರಿ ೧೨ ರ ವರೆಗೆ ಮೇ ೧೫ ರಿಂದ ಜೂನ ೧೫ರವಗೆ ಹಾಗೂ ಸಪ್ಟಂಬರ ೧೬ ರಿಂದ ಅಕ್ಟೋಬರ ೧೬ ರ ವರೆಗಿನ ಈ ಮೂರು ತಿಂಗಳ ಕಾಲ ಮಾತ್ರ ತುಸು ಕೆಡಬಹುದಾಗಿದೆ. ಆರ್ಥಿಕದೃಷ್ಟಿಯಿಂದ ನೋಡಿದರೆ ಬರಬೇಕಾಗಿದ್ದ ಹಣವು ನಿರೀಕ್ಷಿಸಿದ ಮೂಲದಿಂದ ಬಂದೇಬರುತ್ತದೆ. ಅಲ್ಲದೇ ನವಂಬರ ೪ರಿಂದ ಜನೇವರಿ ೧೭ ರ ವರೆಗೆ, ಮಾರ್ಚ ೧೫ ರಿಂದ ಎಪ್ರಿಲ ೧೨ರವರೆಗೆ, ಜೂನ ೧೬ ರಿಂದ ಸಪ್ಟೆಂಬರ ೧೬ ವರೆಗಿನ ಕಾಲದಲ್ಲಿ ದತ್ತಕ, ವಾರಸಾ, ಭಕ್ಷೀಸ, ಕಮಿಷನ್, ಲಾಟರಿ, ಮೊದಲಾದವುಗಳಿಂದಲೂ ಆಕಸ್ಮಿಕಧನ ಪ್ರಾಪ್ತಿಯು ಮೇಲೆ ಬರೆದ ಅವಧಿಯಲ್ಲಿ ದೊರೆತು, ನಿಮ್ಮ ಆರ್ಥಿಕಸ್ಥಿತಿ ತೃಪ್ತಿಕರವಿರುತ್ತದೆ. ಕೋರ್ಟು ಕಚೇರಿ, ಮೊದಲಾದ ಯಾವುದೇ ಪ್ರಕಾರದ ವ್ಯಾಜ್ಯಗಳಲ್ಲಿ ಜಯ ಖಂಡಿತ ದೊರೆಯುತ್ತದೆ. ಆದರೆ ದಿವಾಣಿ· ರಾಜಕೀಯ, ನೌಕರಿಗೆ ಸಂಬಂಧಿಸಿದ ವ್ಯಾಜ್ಯಗಳಿಗೆ ವರುಷ ಪ್ರಾರಂಭದ ಮೂರು ತಿಂಗಳು ಹಾಗೂ ಕೊನೆಯ ಮೂರು ತಿಂಗಳಲ್ಲಿ ಜಯ ದೊರೆಯುತ್ತದೆ. ಫೌಜದಾರಿ ಹಾಗೂ ಮೋಟಾರ ಅಪಘಾತದ ವ್ಯಾಜ್ಯಗಳಿಗೆ ಮಧ್ಯದಲ್ಲಿ ಜಯ ದೊರೆಯುತ್ತದೆ.

ಈ ರಾಶಿಯ ನೌಕರವರ್ಗದವರಿಗೆ ಪ್ರಗತಿದಾಯಕ ವರುಷವಾಗಿದೆ. ಆದರಲ್ಲಿಯೂ ನವೆಂಬರ ೧೪ ರಿಂದ ಜನೇವರಿ ೧೪ರ ವರೆಗೆ, ಮಾರ್ಚ ೧೫ ರಿಂದ ಎಪ್ರಿಲ್ ೧೨ರ ವರೆಗೆ ಹಾಗೂ ಜೂನ ೧೬ ರಿಂದ ಸಪ್ಟಂಬರ ೧೬ರ ವರೆಗಿನ ಈ ಆರು ತಿಂಗಳ ಕಾಲವಂತೂ ಬಹಳೇ ಪ್ರೋತ್ಸಾಹದಾಯಕವಾಗಿದ್ದು ಈ ಕಾಲದಲ್ಲಿ ಪರಸ್ಪರ ಸಹಕಾರ ವೃದ್ಧಿ, ನೌಕರಿಯಲ್ಲಿ ಬಡತಿ, ಇಚ್ಛಿತ ಸ್ಥಳಕ್ಕೆ ಬದಲಿ, ಎರಡು ಹುದ್ದೆಗಳ ಕಾರ್ಯ ನಿರ್ವಹಿಸುವ ಸುಯೋಗ ಪ್ರಾಪ್ತಿಯಾಗುವಿಕೆ, ಹಂಗಾಮಿ ನೌಕರರಿಗೆ ನೌಕರಿಯಲ್ಲಿ ಖಾಯಂ ಆಗುವಿಕೆ, ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ, ಮೊದಲಾದ ಶುಭ ಘಟನೆಗಳು ಮೇಲೆ ಬರೆದ ಅವಧಿಯಲ್ಲಿ ಜರುಗುವವು. ಈ ರಾಶಿಯ ಗಿರಣಿ, ಕಾರಖಾನೆಯ ಕಾರ್ಮಿಕ ವರ್ಗದವರಿಗೂ, ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರರಿಗೂ, ವರ್ಕಶಾಪ್ ಹಾಗೂ ಮಶೀನ ಶಾಪಗಳಲ್ಲಿರುವ ಮಶಿನರಿ ಕೆಲಸಗಾರರಿಗೆಲ್ಲ ಮಿಶ್ರಫಲವಿದೆ. ಪೂರ್ವಾರ್ಧವು ಪ್ರತಿಕೂಲವಿದ್ದರೆ, ಉತ್ತರಾರ್ಧವು ಉತ್ತೇಜಕವಿದೆ. ಅವರ ಬಹಳಷ್ಟು ಬೇಡಿಕೆಗಳು ಉತ್ತರಾರ್ಧದಲ್ಲಿ ಈಡೇರುವವು. ಈ ರಾಶಿಯ ಕೃಷಿ ವರ್ಗದವರಿಗೆ ಪ್ರೋತ್ಸಾಹದಾಯಕ ವರುಷವಾಗಿದೆ. ನಿರೀಕ್ಷೆಗಿಂತಲೂ ಅಧಿಕ ಫಸಲು ಬಂದು ಹಿಂದಿನ ಸಾಲಗಳೆಲ್ಲವನ್ನು ತೀರಿಸುವಿರಲ್ಲದೆ ಹೊಸ ಜಾಗೆ, ಹೊಲಮನೆ, ದನಕರುಗಳನ್ನು ಬೇಸಾಯ ಉಪಕರಣಗಳನ್ನು ಟ್ರಕ್, ಟ್ರ್ಯಾಕ್ಟರ, ಪಂಪಸೆಟ್ ಮೊದಲಾದವುಗಳನ್ನು ಖರೀದಿಸುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಪಡೆಯುವರು. ವರುಷ ಪ್ರಾರಂಭದ ಮೂರು ತಿಂಗಳು ಐದನೆಯ ಹಾಗೂ ಕೊನೆಯ ನಾಲ್ಕು ತಿಂಗಳು ಏಳನೆಯ ಶುಭ ಫಲದಾಯಕ ಗುರುವಿನಿಂದಾಗಿ ಈ ರಾಶಿಯ ಸಾಹಿತಿ, ಕಲಾವಿದ, ಲೇಖಕ, ಪ್ರಕಾಶಕ, ಪತ್ರಿಕೋದ್ಯಮಿ, ಶಿಕ್ಷಕ, ಅಧ್ಯಾಪಕ, ಡಾಕ್ಟರ, ವಕೀಲ, ನ್ಯಾಯಾಧೀಶ ಮೊದಲಾದ ಬುದ್ಧಿಜೀವಿ ವರ್ಗದವರಿಗೆಲ್ಲ ಪ್ರೋತ್ಸಾಹದಾಯಕ ವರುಷವಾಗಿದ್ದು, ಉದ್ಯೋಗದಲ್ಲಿಪ್ರಗತಿ, ಸ್ಥಿರತೆ ಮನ್ನಣೆ, ದೊರೆಯುತ್ತದೆ. ಅಲ್ಲದೆ ಸಂಘಸಂಸ್ಥೆಗಳಿಂದಲೂ ಸರಕಾರದಿಂದಲೂ ಪ್ರಶಸ್ತಿ, ಪದಕ, ಬಿರುದು, ಪುರಸ್ಕಾರ ದೊರೆಯುವುದಲ್ಲದೆ ಗೌರವಧನ ಪಡೆಯಬಹುದಾಗಿದೆ. ಅಲ್ಲದೇ ತೀರ್ಥಯಾತ್ರಾ ಸಂದರ್ಶನ, ಪರದೇಶ ಪರ್ಯಟನ ಮೊದಲಾದ ಸ್ಮರಣೀಯ ಘಟನೆಗಳು ಈ ವರುಷ ಜರುಗುತ್ತವೆ.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗ

# ರಾಜಕೀಧಣೇರಿಗೆ !

— ಇಟಗಿ ರಾಘವೇಂದ್ರ

ಜನಾ ಅಂದ್ರ ದನಾ ಅಂತ ತಿಳೀಬ್ಯಾಡ್ರಿ ರಾಜಕೀಧಣೇರ !
ದನಾ ಬಡಧಾಂಗ ಬಡದು ಹಾಕ್ತಾರ್ರಿ ಜರ್ ಚುನಾವಣ
ಬಂತಂದ್ರ

ಓಟು ಕೊಡ್ರಿ ಅಂತ ಈಟು ಕೈಮುಗಿದ್ರಾತು ಒಂದೀಟು
ಗಿಲೀಟು
ಮಾಟಾ ಮಾಡಿಧಾಂಗ ನಾಟ್ಕಾ ಮಾಡಿದ್ರ ನಮಗs
ಎಲ್ಲಾ ಪೋಟು

ಅಂತ ಹ್ಯಾಹ್ಯಾ ಮಾಡಬ್ಯಾಡ್ರಿ ಕಿಸಿ ಕಿಸಿ ಖುಷಿ
ಪಡಬ್ಯಾಡ್ರಿ ಮತ್ತs
ಕಾಲ ಬದಲಿ ಆಗ್ಯಾವ ನಮ್ಗೂ ಖ್ಯಾತಿ ಅದ ನಿಂ ಕರಾಮತ್ತು

ಭಾಸಣ ಆಗೋ ಹಾಂಗ ಭಾಷಣ ಬಿಗ್ದು ರಂಗಾ ರಂಗು
ಘೋಷಣಾ ಕೂಗಿ ಪದಾ ಹಾಡಿ ಹೆಜ್ಜೀಕುಣಿತ ಭಾಂಗು

ಸ್ವರ್ಗಕ್ಕೊಂದsಗೇಣು ರಸ್ತೆ — ಬಸ್ಸು ಪಂಪಸೆಟ್ಟು ಲೈಟು
ಮಳಿ ತರಿಸ್ತೀವಿ ಬೆಳಿ ಬರಸ್ತೀವಿ ಅಗ್ಗದ ಬೆಲೆ ಕಾಳು ಸೈಟು

ಅದನ್ನ ಮಾಡಿಸ್ತೀವಿ ಇದನ್ನ ಮಾಡಿಸ್ತೀವಿ ಕೇಳಿದ್ದೆಲ್ಲ
ಕೊಡಿಸ್ತೀವಿ
ಆಣಿ ಮಾಡಿ ಹೇಳ್ತೀವಿ-ಸಾಲ ಹೊಲ ಶಾಲಾ
ನೌಕರಿ ಕೊಡಿಸ್ತೀವಿ

ನಿಂ ಸೇವಾ ಮಾಡ್ತೀವಿ ಹಗಲು ರಾತ್ರಿ ಸೇವು ಚುನಮುರಿ ತಿಂದು
ಆರಿಸ್ತಂದು ಅವಕಾಶ ಕೊಡ್ರಿ ಅಂತ ಕೈ ಮುಗೀತಾ ಬಂದು

ಆರಿಸಿದ ಮ್ಯಾಗ ಹಗ್ಗಾ ತಿನ್ನಾಕ ಹಚ್ತೀರಿ ನಮ್ಗ ಗೊತ್ತು
ಗಣಪ್ನ ಹೊಕ್ಯಾಗ ಬಳ್ಪ ಇಡಿಸಿ ಕಿಸಿ ಕಿಸಿ ನಗೋಗತ್ತು

ಇನ್ನ ಡಿಯಾಕಿಲ್ರಿ ಈ ನಿಂ ಬಾಜಾ ಪಾರ್ಟಿ ಶಾಣೇತನ
ನಿಂ ಸೀಟಿಗೆ ನಂ ವೋಟು ಬೇಕಾದ್ರ ಸಾಬೀತಾಗ್ಲಿ ಸಾಚಾತನ

ಸ್ಥರಿಗೂ ಕಮೀಶನ್ ಏಜಂಟರಿಗೂ, ಹಂಚಿಕೆದಾರರಿಗೂ, ಚಾಳ, ಟಾಕೀಜ, ಹೋಟೇಲ, ಗಿರಣಿ, ಕಾರಖಾನೆಗಳ ಮಾಲಕ ವರ್ಗದವರಿಗೆಲ್ಲ ಮಿಶ್ರಫಲವಿದೆ. ಉದ್ಯೋಗ, ಆರ್ಥಿಕ ದೃಷ್ಟಿಯಿಂದ ಪ್ರೋತ್ಸಾಹದಾಯಕ ವರುಷವಾಗಿದೆ. ಆದರೆ ಫೆಬ್ರುವರಿ ೨ ರಿಂದ ಜೂನ ೧೬ರ ವರೆಗಿನ ಕಾಲದಲ್ಲಿ ನೌಕರರ ಸಮಸ್ಯೆ ಹಾಗೂ ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ.

ಕಳೆದ ಅನೇಕ ವರುಷಗಳಿಂದ ಗೃಹಸ್ಥಾಶ್ರಮಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ ವಧೂವರರಿಗೆ ಈ ವರುಷ ಕಂಕಣ ಬಲ ಕೂಡಿಬಂದಿದೆ. ಅದರಲ್ಲಿಯೂ ನವೆಂಬರ್ ೩ ರಿಂದ ಫೆಬ್ರುವರಿ ೨ರ ವರೆಗೆ ಹಾಗೂ ಜೂನ ೧೬ ರಿಂದ ಅಕ್ಟೋಬರ್ ೨೨ರ ವರೆಗಿನ ಕಾಲ ಪ್ರೋತ್ಸಾಹದಾಯಕವಿದ್ದು, ನಿರ್ವಿಘ್ನವಾಗಿ ವಿವಾಹ ಸಾಂಗವಾಗುವುದು. ಆದರೆ ಫೆಬ್ರುವರಿ ೩ ರಿಂದ ಜೂನ ೧೫ರ ವರೆಗೆ ಮದುವೆ ಗೊತ್ತು ಮಾಡಿದಲ್ಲಿ ಅನೇಕ ಅಡಚಣೆಗಳಿಂದ ವಿವಾಹ ಸಾಂಗವಾಗುತ್ತದೆ. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೂ ಗೃಹಿಣಿಯರಿಗೂ ಮಿಶ್ರಫಲದಾಯಕ ವರುಷವಿದು. ವರುಷದ ಪ್ರಾರಂಭದ ಮೂರು ತಿಂಗಳು ಹಾಗು ಕೊನೆಯ ನಾಲ್ಕು ತಿಂಗಳು ಶುಭವಿದ್ದು, ಈ ಕಾಲದಲ್ಲಿ ಬೆಲೆಯುಳ್ಳ ವಸ್ತು ಒಡವೆಗಳ ಸಂಪಾದನೆ, ಮನೆ ವಾಹನ ಖರೀದಿ, ತೀರ್ಥಯಾತ್ರಾ ಸಂದರ್ಶನ, ಮೊದಲಾದ ಶುಭ ಘಟನೆಗಳು ಜರುಗಿದರೆ ಫೆಬ್ರುವರಿ ೩ ರಿಂದ ಜೂನ ೧೬ರ ವರೆಗೆ ಮಧ್ಯದ ಕಾಲ ತಾಪದಾಯಕವಾಗಿದ್ದು ಮನೆಯಲ್ಲಿಯ ವಿಷಮ ವಾತಾವರಣದಿಂದಲೂ, ನಿತ್ಯದ ಗೃಹಕಲಹದಿಂದಲೂ, ತಪ್ಪು ತಿಳುವಳಿಕೆಯಿಂದಲೂ ಏಕತ್ರ ಕುಟುಂಬ ಒಡೆಯುಬಹುದಾಗಿದೆ. ಇಲ್ಲವೇ ಕೋರ್ಟಿನ ಕಟ್ಟೆ ಹತ್ತಬಹುದಾಗಿದೆ. ಈ ರಾಶಿಯ ಗರ್ಭಿಣಿಯರಿಗೆ ಮಿಶ್ರಫಲದಾಯಕ ವರುಷವಿದು. ನವೆಂಬರ ೩ ರಿಂದ ಫೆಬ್ರುವರಿ ೨ ರ ವರೆಗೆ ಹಾಗೂ ಜೂನ ೧೬ ರಿಂದ ಅಕ್ಟೋಬರ ೨೨ ರ ವರೆಗೆ ಹೆರಿಗೆ ಆದರೆ ಸುಖ ಪ್ರಸವವು, ಫೆಬ್ರುವರಿ ೩ ರಿಂದ ಜೂನ ೧೫ ರ ವರೆಗೆ ಹೆರಿಗೆ ಆದರೆ ಕಷ್ಟ ಪ್ರಸವವು ಆಗುತ್ತದೆ.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಮಿಶ್ರಫಲದಾಯಕ ವರುಷವಿದು. ನವೆಂಬರ ೩ ರಿಂದ ಫೆಬ್ರುವರಿ ೨ ರ ವರೆಗೆ ಹಾಗೂ ಜೂನ್ ೧೬ ರಿಂದ ಅಕ್ಟೋಬರ ೨೨ ರ ವರೆಗಿನ ಕಾಲ ಪ್ರೋತ್ಸಾಹದಾಯಕವಾಗಿದ್ದು ಈ ಕಾಲದಲ್ಲಿ ಪ್ರತ್ಯಕ್ಷ ರಾಜಕೀಯದಲ್ಲಿ ಪ್ರವೇಶಿಸಿ, ವಿವಿಧ ಸಂಘ ಸಂಸ್ಥೆಗಳು, ನಿಗಮ, ಮಂಡಳಗಳ ಗೌರವಾನ್ವಿತ ಸ್ಥಾನ ಮಾನ ಅಧಿಕಾರ ಪಡೆಯುವುವರಲ್ಲದೆ ಜಿಲ್ಲೆ ಹಾಗೂ ರಾಜ್ಯ ಮಟ್ಟದ ಧುರೀಣರಾಗಬಹುದಾಗಿದೆ. ಇದೇ ಅವಧಿಯಲ್ಲಿ ಚುನಾವಣೆ ಜರುಗಿದಲ್ಲಿ ಅವಿರೋಧ ಆಯ್ಕೆ ಇಲ್ಲವೇ ಪ್ರಚಂಡ ಬಹುಮತದಿಂದ ಆಯ್ಕೆ ಆಗುವರು. ಆದರೆ ಫೆಬ್ರುವರಿ ೩ ರಿಂದ ಜೂನ್ ೧೬ ರ ವರೆಗಿನ ಕಾಲ ಪ್ರತಿಕೂಲವಿದ್ದು ಮಿತ್ರರೆ ಶತ್ರುಗಳಾಗುವುದರಿಂದ ಸ್ಥಾನ ಮಾನ ಅಧಿಕಾರ ಕಳೆದುಕೊಳ್ಳಬಹುದಾಗಿದೆ. ಇದೇ ಅವಧಿಯಲ್ಲಿ ಚುನಾವಣೆ ಜರುಗಿದಲ್ಲಿ ಸ್ಪರ್ಧಿಸದಿರುವುದೇ ಹಿತಕರ.

ಈ ರಾಶಿಯ ವಿದ್ಯಾರ್ಥಿಗಳಿಗೆ ಮಿಶ್ರಫಲದಾಯಕ ವರುಷವಿದು. ನವೆಂಬರ ೩ ರಿಂದ ಫೆಬ್ರುವರಿ ೨ ರ ವರೆಗೆ ಹಾಗು ಜೂನ ೧೬ ರಿಂದ ಅಕ್ಟೋಬರ ೨೨ ರ ವರೆಗಿನ ಕಾಲ ಪ್ರೋತ್ಸಾಹದಾಯಕವಾಗಿದ್ದು ಈ ಕಾಲದಲ್ಲಿ ಶಿಕ್ಷಣದಲ್ಲಿ ಪ್ರಗತಿ ಸಾಧಿಸುವರು ಹಾಗೂ ಇದೇ ಅವಧಿಯಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ಉನ್ನತ ದರ್ಜೆಯಲ್ಲಿ ತೇರ್ಗಡೆ ಆಗುವರಲ್ಲದೇ ಹೆಚ್ಚಿನ ಶಿಕ್ಷಣಕ್ಕಾಗಿ ಪರದೇಶ ಪರ್ಯಟನ ಸಹ ಕೈಕೊಳ್ಳಬಹುದಾಗಿದೆ. ಆದರೆ ಫೆಬ್ರುವರಿ ೩ ರಿಂದ ಜೂನ ೧೬ ರ ವರೆಗೆ ಇರುವ ಕಾಲ ತೀರ ಪ್ರತಿಕೂಲವಿದ್ದು, ಮನೆಯಲ್ಲಿನ ವಿಷಮ ವಾತಾವರಣದಿಂದಲೂ, ಶಿಕ್ಷಕರ ಅವಕೃಪೆಯಿಂದಲೂ, ಶಾರೀರಕ ಪೀಡೆಯಿಂದಲೂ ಶಿಕ್ಷಣ ಮುಂದುವರೆಸುವುದೇ ದುಸ್ಸಾಧ್ಯ. ಇದೇ ಅವಧಿಯಲ್ಲಿ ಪರೀಕ್ಷೆಗೆ ಶಿಷ್ಯವೃತ್ತಿಗೆ ಎರವಾಗಬೇಕಾಗುತ್ತದೆ.




ಈ ರಾಶಿಯವರಿಗೆ ಈ ವರುಷ ಮಿಶ್ರಫಲವಿರುವುದಾದರೂ ಕಳೆದ ವರುಷದ ತೊಂದರೆಯ ಪ್ರಮಾಣ ಕಡಿಮೆಯಾಗುವುದು.

ವೋಟಂದ್ರ ಕತ್ರಿಗೀಟ ಹಾಕಿ ಹೆಬ್ಬೊಟ್ಟೊತ್ತೊದಲ್ರಿ
ಪಾಠಾ ಕಲ್ತೀವಿ ನಾವೂ-ನೀವು ಸುಮ್ಕ ವೋಟು ಕೇಳೋದಲ್ರಿ

ಅಂಗ್ಯೆಯಾಗ ಅರಮನಿ ತೋರ್ಸಿ ಬಿಸಿಲ್ ಗುದರಿ ಹತ್ತಸಬ್ಯಾಡ್ರಿ
ಮುಂಗೈ ಜೋರು ನಡಿಯಾಕಿಲ್ರಿ ಅವಲಕ್ಷಣ ಹೇಳಿಸ ಬ್ಯಾಡ್ರಿ

ಜಾತಿ ಮುಂದ ಮಾಡಿ ಮತಾ ಪಡೆಯೊ ಮಸಲತ್ತಿನ್ನ
ಮಾಡಬ್ಯಾಡ್ರಿ
ಖ್ಯಾತಿ ಅಂತ ಕಸರತ್ ಮಾಡಿ ಹಿಕಮತ್ನಿಂದ ಮೆರೀಬ್ಯಾಡ್ರಿ

ಚರಿಷ್ಮಾ ಕರಿಷ್ಮಾ ಇನ್ನ್ಯಾವ ಸಿನೀಮಾನು ನಡಿಯೂದಿಲ್ರಿ
ಸೈ ಗಾಳಿ-ದೆವ್‌ಗಾಳಿ-ಭೂಗಾಳಿ-ಬಂದ್ರೂ ಹೆದರೂದಿಲ್ರಿ……

ಧಣೇರ, ಭಾಳ ಹೇಳೋದೇನು ನಂ ಎದೀ ತೆರದು ಇಟ್ಟೀವಿ
ನಿಯತ್‌ಗೇಡಿ ಆಗಬ್ಯಾಡ್ರಿ ಮತಾ ಭ್ರಷ್ಟ ಮಾಡಬ್ಯಾಡ್ರಿ
ಅಂತೀವಿ



ಜರ್ ತಪ್ಪಿ ನಡೆದ್ರ ತಲೀದಂಡ ತೆತ್ತು ಮುಂದಕ
ಸುಮ್ಕ ಇರ್ತೀರಾ ?
ಮಾತ ಕೊಟ್ರ ಮತಾ ಕೊಡ್ತೀವಿ ಕೊಟ್ಟ ಮಾತ ನಡಿಸ್ತೀರಾ ?

ಸಾಡೇಸಾತಿ ಹಾಗೂ ಚತುರ್ಥ ಗುರುವಿನ ಅನಿಷ್ಟತೆಯಿಂದ ಕಳೆದ ವರ್ಷ ನಿಮ್ಮ ಜೀವನದ ಮೇಲೆ ಮುಸುಕಿದ್ದ ಕಾರ್ಮೋಡಗಳು ಈ ವರುಷ ಫೆಬ್ರುವರಿಯಿಂದ ಬರುವ ಅಲ್ಪಾವಧಿಯ ಪಂಚಮ ಗುರುವಿನಿಂದಾಗಿ ಚದುರುವದಲ್ಲದೇ ನಿದ್ರಾರಹಿತವಾದ ಅನೇಕ ರಾತ್ರಿಗಳನ್ನು ಕಳೆದಂಥ ನೀವು ಈ ವರುಷದ ಮಧ್ಯದಿಂದ ಸುಖಶಾಂತಿಯನ್ನು ಹೊಂದುವಿರಿ. ಆರೋಗ್ಯ ದೃಷ್ಟಿಯಿಂದ ನೋಡಿದರೆ ಈ ವರುಷದ ಮುಕ್ಕಾಲು ಅವಧಿ ಚೆನ್ನಾಗಿದ್ದರೂ ನವೆಂಬರ ೩ ರಿಂದ ಡಿಶೆಂಬರ ೧೫ ರ ವರೆಗೆ ಫೆಬ್ರುವರಿ ೧೨ ರಿಂದ ಮಾರ್ಚ ೧೫ ರ ವರೆಗೆ ಜೂನ ೧೫ ರಿಂದ ಜುಲೈ ೧೫ ರ ವರೆಗಿನ ಕಾಲದಲ್ಲಿ ಮಾತ್ರ ಕೆಡಬಹುದಾಗಿದೆ. ಅಲ್ಲದೇ ಇದೇ ಅವಧಿಯಲ್ಲಿ ಶತ್ರುಪೀಡೆ, ಅಪಘಾತದ ಭಯವೂ ಉಂಟು. ಆದ್ದರಿಂದ ವಾಹನ ಚಾಲಕರು, ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರರು ಮಶಿನರಿ ಕೆಲಸಗಾರರು ಮೇಲೆ ಬರೆದ ಅವಧಿಯಲ್ಲಿ ವಿಶೇಷ ಎಚ್ಚರಿಕೆಯಿಂದ ಇರುವದು ಅವಶ್ಯವು. ನಿಮ್ಮ ಆರ್ಥಿಕ ಸ್ಥಿತಿಯು ಈ ವರುಷ ಸುಧಾರಿಸುತ್ತದೆ. ಡಿಶೆಂ-ಬರ ೧೫ ರಿಂದ ಫೆಬ್ರುವರಿ ೧೨ ರ ವರೆಗೆ ಹಾಗೂ ಮಾರ್ಚ ೧೫ ರಿಂದ ಮೇ ೧೫ ರ ವರೆಗೆ ಹಾಗೂ ಅಗಷ್ಟ ೧೫ ರಿಂದ ಅಕ್ಟೋಬರ ೧೮ ರ ವರೆಗಿನ ಕಾಲ ಪ್ರೋತ್ಸಾಹದಾಯಕವಾಗಿದ್ದು ಈ ಕಾಲದಲ್ಲಿ ನಿರೀಕ್ಷಿಸಿದ ಮೂಲದಿಂದ ಹಣ ಸಂದಾಯವಾಗುವುದರಿಂದ ಸಾಲಗಾರರ ಕಾಟದಿಂದ ಮುಕ್ತರಾಗುವಿರಿ. ಆದರೆ ನವೆಂಬರ ೩ರಿಂದ ಡಿಶೆಂಬರ ೧೫ರ ವರೆಗೆ ಹಾಗೂ ಮೇ ೧೫ರಿಂದ ಅಗಷ್ಟ ೧೫ರ ವರೆಗಿನ ಕಾಲ ತುಸು ಪ್ರತಿಕೂಲವಿದು ಆದಾಯಕ್ಕಿಂತ ಖರ್ಚಿನ ಮುಖ ವಿಪರೀತ ಬೆಳೆದಿರುವುದರಿಂದ ಜಮಾ ಖರ್ಚು ಬಾಯಿಗೂಡಿಸಲು ಸರ್ಕಸ್ ಮಾಡಬೇಕಾಗುತ್ತದೆಯಾದರೂ ಕಳೆದ ವರುಷಕ್ಕಿಂತ ನಿಮ್ಮ ಆರ್ಥಿಕ ಸ್ಥಿತಿ ಸಮಾಧಾನಕರವೆನ್ನಬಹುದು. ಕೋರ್ಟು, ಕಚೇರಿ ಮೊದಲಾದ ಯಾವುದೇ ಪ್ರಕಾರ ವ್ಯಾಜ್ಯಗಳಿಗೆ ಈ ವರುಷ ಕೂಡ ಅಷ್ಟೊಂದು ಪೂರಕವಿಲ್ಲದಿದ್ದರೂ ಫೆಬ್ರುವರಿ ೩ರಿಂದ ಜೂನ ೧೫ರ ವರೆಗಿನ ಐದನೇ ಗುರುವಿನ ಕಾಲದಲ್ಲಿ ಯಶಸ್ಸು ದೊರೆಯುತ್ತದೆ. ಆದಾಗ್ಯೂ ರಾಜೀ ಸಂಧಾನ ಮನೋಭಾವನೆಯಿಂದ ವರ್ತಿಸುವುದೇ ಹಿತಕರವು.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷದ ಮಧ್ಯದಿಂದ ಬರುವ ಅಲ್ಪಾವಧಿಯ ಪಂಚಮ ಗುರುವಿನ ಮೂಲಕ ತುಸು ಅನುಕೂಲ ಕಾಲ ಬರುತ್ತದೆ. ಕಳೆದ ವರುಷ ಉಂಟಾಗಿದ್ದ ವರಿಷ್ಠರ ಅವಕೃಪೆ ದೂರಾಗುತ್ತದೆ. ಅಲ್ಲದೇ ಡಿಸೆಂಬರ ೧೫ರಿಂದ ಫೆಬ್ರುವರಿ ೧೨ರ ವರೆಗೆ, ಮಾರ್ಚ ೧೫ರಿಂದ ಮೇ ೧೫ರ ವರೆಗೆ, ಅಗಷ್ಟ ೧೫ರಿಂದ ಅಕ್ಟೋಬರ ೧೮ರ ವರೆಗಿನ ಕಾಲ ತುಸು ಅನುಕೂಲವಿದ್ದು ಈ ಕಾಲದಲ್ಲಿ ವರಿಷ್ಠರ ಸಹಕಾರ ವೃದ್ಧಿಸುತ್ತದೆ. ನೌಕರಿಯಲ್ಲಿ ಬಡತಿ, ಇಚ್ಛಿತ ಸ್ಥಳಕ್ಕೆ ಬದಲಿ, ನಿರುದ್ಯೋಗಿಗಳಿಗೆ ಕೆಲಅವಧಿಯವರೆಗೆ ನೌಕರಿ ಲಭಿಸುವಿಕೆ, ಹಂಗಾಮಿ ನೌಕರರ ಅಸ್ಥಿರತೆ ದೂರಾಗುವಿಕೆ, ಮೊದಲಾದ ಶುಭಘಟನೆಗಳು ಜರುಗುವವು. ಆದರೆ ನವೆಂಬರ್ ೩ ರಿಂದ ಡಿಶೆಂಬರ ೧೬ರ ವರೆಗೆ, ಫೆಬ್ರುವರಿ ೧೨ರಿಂದ ಮಾರ್ಚ ೧೫ರ ವರೆಗೆ ಹಾಗೂ ಮೇ ೧೫ರಿಂದ ಅಗಷ್ಟ ೧೫ರ ವರೆಗಿನ ಕಾಲ ಪ್ರತಿಕೂಲವಿದ್ದು ಈ ಕಾಲದಲ್ಲಿ ವರಿಷ್ಠರ ಕಿರುಕುಳ, ಅನಪೇಕ್ಷಿತ ಸ್ಥಳಕ್ಕೆ ಬದಲಿ, ಮೊದಲಾದ ಅಹಿತಕರ ಘಟನೆಗಳು ಜರುಗುವವು. ಗಿರಣಿ ಕಾರಖಾನೆಗಳ ಕಾರ್ಮಿಕ ವರ್ಗದವರಿಗೆ ವರ್ಕಶಾಪ್, ಮಶಿನಶಾಪ್‌ಗಳಲ್ಲಿ ಕೆಲಸ ಮಾಡುವ ಮಶಿನರಿ ಕೆಲಸಗಾರರಿಗೂ, ಬಾಹ್ಯ ಹಾಗು ತಾಂತ್ರಿಕ ಕೆಲಸಗಾರರಿಗೂ ಈ ವರುಷ ಹೇಳಿಕೊಳ್ಳುವಷ್ಟು ಪ್ರೋತ್ಸಾಹದಾಯಕವಾಗಿಲ್ಲವಾದರೂ ಕಳೆದ ವರುಷದಷ್ಟು ಪ್ರತಿಕೂಲವು ತಾಪದಾಯಕವೂ ಆಗಿರಲಾರದು. ಇಷ್ಟೇ ಅಲ್ಲ ಡಿಸೆಂಬರ ೧೫ರಿಂದ ಫೆಬ್ರುವರಿ ೧೨ರ ವರೆಗೆ, ಮಾರ್ಚ ೧೫ರಿಂದ ಮೇ ೧೫ರ ವರೆಗೆ ಹಾಗೂ ಅಗಷ್ಟ ೧೫ರಿಂದ ಅಕ್ಟೋಬರ ೧೮ರ ವರೆಗೆ ಇರುವ ಕಾಲದಲ್ಲಿ ಈ ರಾಶಿಯುವರ ಈ ವರ್ಗದವರ ಕೆಲ ಬೇಡಿಕೆಗಳು ಈಡೇರುವದರಲ್ಲಿ ಸಂದೇಹವಿಲ್ಲ. ಈ ರಾಶಿಯ ಕೃಷಿ ವರ್ಗದವರಿಗೆ ಪೂರ್ವಾರ್ಧವು ಪ್ರತಿಕೂಲವಿದ್ದರೆ, ಉತ್ತರಾರ್ಧವು ಉತ್ತೇಜಕವಿದೆ. ಮುಂಗಾರಿ ಬೆಳೆ ಕೈ ಕೊಟ್ಟರೆ ಹಿಂಗಾರಿ ಬೆಳೆ ಕೈ ಹಿಡಿಯುವುದು. ಕಳೆದ ವರುಷ ಕುಂಠಿತವಾಗಿದ್ದ ಬೇಸಾಯವು ಮತ್ತೆ ಪ್ರಾರಂಭವಾಗುವುದು. ಅಲ್ಲದೇ ಮಾರ್ಚ ೧೫ ರಿಂದ ಮೇ ೧೫ರ ವರೆಗೆ ಹಾಗೂ ಅಗಷ್ಟ ೧೫ ರಿಂದ ಅಕ್ಟೋಬರ್ ೧೮ರ ವರೆಗಿನ ಕಾಲದಲ್ಲಿ ಹೊಸದಾಗಿ ದನ-ಕರುಗಳನ್ನು ಬೇಸಾಯದ ಉಪಕರಣಗಳನ್ನು ಕೊಳ್ಳುವ ಇಲ್ಲವೇ ನವೀಕರಿಸುವ, ಸಾಮರ್ಥ್ಯ ಬರುತ್ತದೆ. ಫೆಬ್ರುವರಿ ೩ ರಿಂದ ಬರುವ ಅಲ್ಪಾವಧಿಯ ಐದನೇ ಶುಭಫಲದಾಯಕ ಗುರುವಿನಿಂದಾಗಿ ಈ ರಾಶಿಯ ಶಿಕ್ಷಕ, ಅಧ್ಯಾಪಕ, ಲೇಖಕ, ಕಲಾವಿದ, ಪ್ರಕಾಶಕ, ಪತ್ರಿಕೋದ್ಯಮಿ, ಚಾರ್ಟರ್ಡ ಅಕೌಂಟಂಟ್, ಡಾಕ್ಟರ್, ವಕೀಲ, ನ್ಯಾಯಾಧೀಶ, ಮೊದಲಾದ ಬುದ್ಧಿಜೀವಿ ವರ್ಗದವರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಉದ್ಯೋಗದಲ್ಲಿ ಉತ್ಕರ್ಷ ಹೊಂದಿ ಕಳೆದ ವರುಷ ಆಗದೇ ಇದ್ದ ಕಾರ್ಯಗಳೆಲ್ಲ ಈ ವರುಷ ಪೂರ್ತಿಯಾಗುವವು. ಅಲ್ಲದೆ ಡಿಶೆಂಬರ್ ೧೫ ರಿಂದ ಫೆಬ್ರುವರಿ ೧೨ರ ವರೆಗೆ, ಮಾರ್ಚ ೧೫ ರಿಂದ ಮೇ ೧೫ರ ವರೆಗೆ, ಅಗಷ್ಟ ೧೫ ರಿಂದ ಅಕ್ಟೋಬರ್ ೧೮ರ ವರೆಗಿನ ಈ ಆರು ತಿಂಗಳ ಕಾಲದಲ್ಲಿ ಶುಭವಿದ್ದು, ಈ ಕಾಲದಲ್ಲಿ ಸಂಘ ಸಂಸ್ಥೆಗಳಿಂದಲೂ, ಸರಕಾರದಿಂದಲೂ, ಪ್ರಶಸ್ತಿ ಪದಕ, ಮನ್ನಣೆ ಪುರಸ್ಕಾರ ಪಡೆಯುವರು.

> **ಕೆಳದಿ !**
>
> ಕೆಳದಿ ! ಮನಕ್ಕೆ ಸಮಾಧಾನವಿಲ್ಲ
> ಚಿತ್ತಕ್ಕೆ ಸ್ವಾಸ್ಥ್ಯವಿಲ್ಲ…
> ಬುದ್ಧಿಯೋ ಎಲ್ಲೋ ಕಳೆದಂತಿದೆ
> ಬಹುಶಃ ಇದೆಲ್ಲ ನಿನ್ನ ವಿರಹದ
> ಪರಿಣಾಮವಿರಬೇಕು.
>
> — ಪಂಚಾಕ್ಷರಿಹಿರೇಮಠ

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ, ಕಮಿಶನ್ ಏಜೆಂಟರಿಗೂ, ಹಂಚಿಕೆದಾರರಿಗೂ, ಹೋಟೆಲ ಚಾಳ, ಟಾಕೀಜ, ಗಿರಣಿ, ಕಾರಖಾನೆಗಳ ಮಾಲಕ ವರ್ಗದವರಿಗೂ ಮಿಶ್ರಫಲವಿದೆ. ನೌಕರರ ಸಮಸ್ಯೆಗಳಿಂದಲೂ ಸರಕಾರದ, ನಿರ್ಬಂಧನೆಗಳಿಂದಲೂ ಕಳೆದ ವರುಷ ಕುಂಠಿತವಾಗಿದ್ದ ಉದ್ಯೋಗ ಮತ್ತೆ ಈ ವರುಷ ಚೇತರಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಆದಾಗ್ಯೂ ಉತ್ಪನ್ನಕ್ಕಿಂತ ಖರ್ಚಿನ ಮುಖ ವಿಪರೀತ, ಕಳೆದ ವರುಷದ ಸಾಲ ತೀರಿಸುವುದರಲ್ಲಿಯೇ ವರುಷವಿಡೀ ಹೆಣಗಾಡಬೇಕಾಗುತ್ತದೆ.

ಕಳೆದ, ಅನೇಕ ವರುಷಗಳಿಂದ ಪ್ರಯತ್ನಿಸುತ್ತಿರುವ ಈ ರಾಶಿಯ ವಧೂ-ವರರಿಗೆ ಫೆಬ್ರುವರಿ ೩ ರಿಂದ ಜೂನ ೧೬ರ ವರೆಗೆ ಇರುವ ಪಂಚಮ ಗುರುವಿನಿಂದಾಗಿ ಈ ಕಾಲದಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗುತ್ತದೆ. ಉಳಿದ ಅವಧಿಯಲ್ಲಿ ವಿವಾಹ ತುಂಬ ಕಠಿಣ. ವರುಷದ ಪ್ರಾರಂಭದ ಮೂರು ತಿಂಗಳು ನಾಲ್ಕನೇ (ಚತುರ್ಥ) ಹಾಗು ಕೊನೆಯ ನಾಲ್ಕು ತಿಂಗಳು ಆರನೇ ಗುರುವಿನ ಅನಿಷ್ಟತೆಯಿಂದಾಗಿ ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೂ ಗೃಹಿಣಿಯರಿಗೂ ಏಳು ತಿಂಗಳ ಕಾಲ ತಾಪದಾಯಕವಾಗಿದ್ದು ಪ್ರತಿ ನಿತ್ಯದ ಗೃಹಕಲಹದಿಂದ ಮನಸ್ಸಿಗೆ ನೆಮ್ಮದಿ ಇರುವುದಿಲ್ಲ. ಆದರೆ ಫೆಬ್ರುವರಿ ೩ ರಿಂದ ಜೂನ ೧೫ ರ ವರೆಗಿನ ಪಂಚಮ ಗುರುವಿನ ಅವಧಿಯಲ್ಲಿ ತುಸು ನೆಟ್ಟಗಿದ್ದು ಈ ಕಾಲದಲ್ಲಿ ಕದಡಿದ್ದ ಗೃಹ ಶಾಂತಿ ತಿಳಿಯಾಗುತ್ತದೆ. ಈ ರಾಶಿಯ ಗರ್ಭಿಣಿಯರಿಗೆ ಮಿಶ್ರಫಲದಾಯಕ ವರುಷವಿದು. ಫೆಬ್ರುವರಿ ೩ ರಿಂದ ಜೂನ ೧೫ರ ವರೆಗೆ ಹೆರಿಗೆ ಆದರೆ ಸುಖಪ್ರಸವವು. ಉಳಿದ ಅವಧಿಯಲ್ಲಿ ಹೆರಿಗೆ ಆದರೆ ಕಷ್ಟ ಪ್ರಸವವು ಇದ್ದು ಶಸ್ತ್ರಕ್ರಿಯೆ ಅನಿವಾರ್ಯವಾಗುತ್ತದೆ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಮಿಶ್ರಫಲದಾಯಕ ವರುಷದದು. ಡಿಶೆಂಬರ ೧೫ ರಿಂದ ಫೆಬ್ರುವರಿ ೧೨ರ ವರೆಗೆ, ಮಾರ್ಚ ೧೫ ರಿಂದ ಮೇ ೧೫ರ ವರೆಗೆ, ಅಗಸ್ಟ ೧೫ ರಿಂದ ಅಕ್ಟೋಬರ ೧೮ರ ವರೆಗಿನ ಈ ಆರು ತಿಂಗಳ ಕಾಲ ಪ್ರೋತ್ಸಾಹದಾಯಕ

೩೬ ವರ್ಷಗಳಿಂದಲೂ ಅಖಂಡವಾಗಿ ಜನತಾ ಜನಾರ್ದನನ ಸೇವೆಯಲ್ಲಿ :

ಕರ್ನಾಟಕ, ಆಂಧ್ರ, ಮಹಾರಾಷ್ಟ್ರ
ಹಾಗೂ ಗೋವೆ ಎಲ್ಲೆಲ್ಲಿಯೂ ನಿಮ್ಮನ್ನು
ತಣಿಸಿ ತೃಪ್ತಿಪಡಿಸಿ ಸಮಾಧಾನಗೊಳಿಸಲು
ಉತ್ತಮ ಹೊಟೆಲ್ಲುಗಳ ಒಂದು ಸಮೂಹ!



ನಿಮ್ಮ ಅಭಿರುಚಿ ಅರಿತು ತಣಿಸುವ ಶುಚಿರುಚಿ
ತಿಂಡಿ ತಿನಿಸು ಪೇಯಗಳು !
ಅಚ್ಚುಕಟ್ಟುತನದೊಂದಿಗೆ ನಮ್ರ ಸೇವೆ !

## ಉತ್ತರ ಭಾರತದ ಸಿಹಿ ತಿಂಡಿಗಳ ವಿಶೇಷತೆ,
## ಇನ್ನೊಂದು ವೈಶಿಷ್ಟ್ಯ!

ಮೆ॥ ಆರ್. ಓ. ಕಾಮತ್

# ಕಾಮತ್ ರೆಸ್ಟೋರೆಂಟ್

ಹೆಡ್ ಆಫೀಸ್ ಬ್ರಾಡ್‌ವೇ, ಹುಬ್ಬಳ್ಳಿ.

ದೂರವಾಣಿ : ೬೩೨೪೯ ಹೆಡ್ ಆಫೀಸ್ : ೬೪೯೮೧

ಕಾಮತ್ ಹೊಟೆಲ್ಲುಗಳ ಸಮೂಹ ಶಾಖೆಗಳು : ಬೆಂಗಳೂರು, ಧಾರವಾಡ, ಗುಲಬರ್ಗಾ, ದಾವಣಗೇರಿ ಹಾವೇರಿ, ತಿಪಟೂರು, ಗದಗ, ಹೊನ್ನಾವರ, ಹೈದರಾಬಾದ, ಸಿಕಂದರಾಬಾದ್, ಮುಂಬಯಿ, ಸೊಲ್ಲಾಪೂರ, ಪಣಜಿ, ಮಡಗಾಂವ್

ವಿದ್ದು ಈ ಕಾಲದಲ್ಲಿ ಸ್ಥಾನಮಾನ ಅಧಿಕಾರ ಪಡೆಯಬಹುದಾಗಿದೆ. ಆದರೆ ನವೆಂಬರ ೩ ರಿಂದ ಡಿಶೆಂಬರ ೧೪ರ ವರೆಗೆ ಫೆಬ್ರುವರಿ ೧೨ ರಿಂದ ಮಾರ್ಚ ೧೪ರ ವರೆಗೆ, ಮೇ ೧೫ ರಿಂದ ಅಗಸ್ಟ ೧೪ರ ವರೆಗಿನ ಕಾಲ ತೀರ ಪ್ರತಿಕೂಲವಿದ್ದು ಮಿತ್ರರೇ ಶತ್ರುಗಳಾಗುವುದರಿಂದ ಸ್ಥಾನ ಮಾನ ಅಧಿಕಾರಕ್ಕೆ ಚ್ಯುತಿ ಇದೆ. ಇದೇ ಅವಧಿಯಲ್ಲಿ ಚುನಾವಣೆ ಜರುಗಿದಲ್ಲಿ ಸ್ಪರ್ಧಿಸದಿರುವುದೇ ಹಿತಕರ.

ವರುಷ ಪ್ರಾರಂಭದ ಮೂರು ತಿಂಗಳು ನಾಲ್ಕನೆಯ ಹಾಗೂ ಕೊನೆಯ ನಾಲ್ಕು ತಿಂಗಳು ಆರನೆಯ ಗುರುವಿನ ಅನಿಷ್ಟತೆಯಿಂದಾಗಿ ಈ ರಾಶಿಯ ವಿದ್ಯಾರ್ಥಿಗಳಿಗೆ ತಾಪದಾಯಕ ವರುಷವಾಗಿದೆ. ಮನೆಯಲ್ಲಿಯ ವಿಷಮ ವಾತಾವರಣದಿಂದಲೂ, ಶಿಕ್ಷಕರ ಅವಕೃಪೆಯಿಂದಲೂ ಶಿಕ್ಷಣ ಮುಂದುವರೆಸುವದೇ ಕಠಿಣವಾಗುತ್ತದೆ. ಫೆಬ್ರುವರಿ ೨ ರಿಂದ ಜೂನ ೧೫ರ ವರೆಗಿನ ಕಾಲದಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ಹೇಗೋ ತೇರ್ಗಡೆಯಾಗುತ್ತಾರೆ. ಆದರೆ ಉತ್ತಮ ದರ್ಜೆ ದೊರೆಯುವುದು ಕಠಿಣ, ಉಳಿದ ಕಾಲದಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳ ಫಲಿತಾಂಶವು ಸಂಶಯಾಸ್ಪದವು.




**ಈ ರಾಶಿಯ ಎಲ್ಲ ವರ್ಗದವರಿಗೂ ಎಲ್ಲ ದೃಷ್ಟಿಯಿಂದಲೂ ಅಶುಭ ಹಾಗೂ ತಾಪದಾಯಕ ವರುಷವಿರುತ್ತದೆ.**

ಮೊದಲೇ ಸಾಡೇಸಾತಿ ಹಾಗು ಫೆಬ್ರುವರಿ ೩ ರಿಂದ ಬರುವ ಅಶುಭ ಫಲದಾಯಕ ಚತುರ್ಥ ಗುರುವು ಅಲ್ಲದೆ ಕಳೆದ ಅಗಸ್ಟದಿಂದ ಬಂದ ಚತುರ್ಥರಾಹುವಿನ ಅಶುಭ ಫಲವು ವರುಷಾಂತ್ಯದ ವರೆಗೂ ಇರುತ್ತದೆ. ಅಂದಬಳಿಕ ಕೇಳಬೇಕೇ ನಿಮ್ಮ ಪರಿಸ್ಥಿತಿ. ಪ್ರಾಮಾಣಿಕ, ಬುದ್ಧಿವಂತ, ಪ್ರತಿಷ್ಠಿತರೆಂದು ಕೀರ್ತಿ ಪಡೆದ ನಿಮ್ಮನ್ನು ಜನ ಈಗ ತೀರ ತಿರಸ್ಕಾರದಿಂದ ಕಾಣತೊಡಗುವರು. ಈ ಪರಿಸ್ಥಿತಿಯನ್ನು ಧೈರ್ಯದಿಂದ ಎದುರಿಸಬೇಕಲ್ಲದೆ ಹತಾಶರಾಗಬೇಡಿರಿ. ಈ ಎಲ್ಲ ಸಂಕಟಗಳಿಂದ ಪಾರುಮಾಡಲು ಆ ವಿಘ್ನೇಶ್ವರನನ್ನು ನಿತ್ಯ ಪ್ರಾರ್ಥಿಸಿರಿ. ಜೂನ ೧೬ ರಿಂದ ಬರುವ ಪಂಚಮ ಗುರುವಿನಿಂದಾಗಿ ಎಲ್ಲವೂ ಸರಿಯಾಗುತ್ತದೆ. ಈ ರಾಶಿಯವರ ಆರೋಗ್ಯ ವರುಷವಿಡೀ ಚೆನ್ನಾಗಿರುವದಿಲ್ಲ. ಒಂದಿಲ್ಲೊಂದು ಕಿರುಕುಳ ಪೀಡೆ. ಉಪದ್ರವ ಇದ್ದೇ ಇರುತ್ತದೆ. ಅದರಲ್ಲಿಯೂ ನವೆಂಬರ ೩ ರಿಂದ ಜನೇವರಿ ೧೩ರ ವರೆಗೆ ಮಾರ್ಚ ೧೫ ರಿಂದ ಮೇ ೧೪ರ ವರೆಗೆ ಜೂನ ೧೫ ರಿಂದ ಅಗಸ್ಟ ೧೫ರ ವರೆಗಿನ ಕಾಲ ತೀರ ಪ್ರತಿಕೂಲವಿದ್ದು ಈ ಕಾಲದಲ್ಲಿ ರೋಗ ಉಲ್ಬಣವಾಗುವುದಲ್ಲದೆ ಶತ್ರುಪೀಡೆ, ಅಪಘಾತದ ಭಯ ಉಂಟು. ಆದ್ದರಿಂದ ವಾಹನ ಚಾಲಕರು, ಮಶಿನರಿ ಕೆಲಸಗಾರರು ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರರು ಮೇಲೆ ಬರೆದ ಅವಧಿಯಲ್ಲಿ ವಿಶೇಷ ಎಚ್ಚರಿಕೆಯಿಂದ ಇರುವುದು ಅವಶ್ಯವು. ನಿಮ್ಮ ಆರ್ಥಿಕಸ್ಥಿತಿಯು ಈ ವರುಷ ಗಂಭೀರಸ್ವರೂಪ ತಾಳುವದು. ಡಾಕ್ಟರ, ವಕೀಲರ ಬಿಲ್ಲುಗಳು ಹಾಗೂ ಅತಿಥಿ ಸತ್ಕಾರದಲ್ಲಿಯೇ ನಿಮ್ಮ ಹಣ ಬಹಳಷ್ಟು ಖರ್ಚಾಗುತ್ತದೆ. ಆದಾಯ ಅಲ್ಪ; ವೆಚ್ಚ ವಿಪರೀತ, ಸಾಲಗಾರರ ಕಾಟದಿಂದಾಗಿ ಹೊಸ ಸಾಲಕ್ಕೆ ಪರದಾಟದಲ್ಲಿಯೇ ವರುಷವಿಡೀ ಕಳೆಯಬೇಕಾಗುತ್ತಿದ್ದರೂ, ಜೂನ ೧೬ ರಿಂದ ಅಕ್ಟೋಬರ ೨೨ ರ ವರೆಗಿನ ಕಾಲ, ಅಲ್ಪಾವಧಿಯ ಪಂಚಮ ಗುರುವಿನ ಶುಭಫಲದಿಂದ ನಿರೀಕ್ಷಿಸಿದ ಮೂಲದಿಂದ ಹಣಕಾಸಿನ ಸಹಾಯ ಲಭಿಸುವದರಿಂದ ಅವಮಾನದ ಪ್ರಸಂಗ ತಪ್ಪುವದು. ಆದರೆ ನವೆಂಬರ ೩ ರಿಂದ ಜೂನ ೧೫ರ ವರೆಗಿನ ಕಾಲ ತಾಪದಾಯಕವಾಗಿದ್ದು ಈ ಕಾಲದಲ್ಲಿ ನಿಮ್ಮ ಸತ್ವಪರೀಕ್ಷೆ ಆಗುವುದಾದರೂ, ಅದರಿಂದ ಪಾರಾಗುವಿರಿ. ಕೋರ್ಟು-ಕಚೇರಿ ಯಾವುದೇ ಪ್ರಕಾರ ವ್ಯಾಜ್ಯಗಳಿಗೆ ಕೈ ಹಾಕದಿರುವುದೇ ಹಿತಕರವು. ದಾವೇ ದಾಖಲು ಮಾಡುವುದು ಅನಿವಾರ್ಯವಿದ್ದಲ್ಲಿ, ಜೂನ ೧೫ರ ಮೇಲೆ ದಾಖಲು ಮಾಡುವುದು ಉತ್ತಮವು.

ಈ ರಾಶಿಯ ನೌಕರವರ್ಗದವರಿಗೆ ಪ್ರತಿಕೂಲ ವರುಷವಿದು. ಅದರಲ್ಲಿಯೂ ನವೆಂಬರ ೩ ರಿಂದ ಜೂನ ೧೫ರ ವರೆಗಿನ ಕಾಲ ತೀರ ಪ್ರತಿಕೂಲವಿದ್ದು ಈ ಅವಧಿಯಲ್ಲಿ ಅನಪೇಕ್ಷಿತ ಸ್ಥಳಕ್ಕೆ ಬದಲಿ, ವರಿಷ್ಠರಿಂದ ಅಸಹನೀಯ ಕಿರುಕುಳ, ಹಿಂಬಡತಿ, ಮೊದಲಾದ ಅಹಿತಕರ ಘಟನೆಗಳಿಂದಾಗಿ ರಾಜೀನಾಮೆಕೊಡುವ ಪ್ರಸಂಗ ಬರಬಹುದು. ಜೀವನವೆಂದರೆ ಸುಖ ದುಃಖಗಳ ಸಮ್ಮಿಶ್ರಣವು. ದುಃಖದ ನಂತರ ಸುಖ ಬಂದೇ ಬರುತ್ತದೆ. ಅಶುಭಸ್ಯ ಕಾಲಹರಣಂ ಎಂಬಂತೆ ತಾಳ್ಮೆಯಿಂದ ಇದ್ದರೆ ಎಲ್ಲವೂ ಸರಿಯಾಗುತ್ತದೆ. ದುಡುಕಿನಿಂದ ಯಾವ ನಿರ್ಣಯ ಕೈಕೊಳ್ಳಬೇಡಿರಿ. ಜೂನ ೧೬ ರಿಂದ ಅಕ್ಟೋಬರ ೨೨ರ ವರೆಗಿನ ಕಾಲ ತುಸು ಪ್ರಗತಿದಾಯಕವಿದ್ದು ನಿರುದ್ಯೋಗಿಗಳಿಗೆ ಆಸರೆ ಲಭಿಸುವಿಕೆ, ಹಂಗಾಮಿ ನೌಕರರಿಗೆ ನೌಕರಿಯಲ್ಲಿ ಸ್ಥಿರತೆ, ನೌಕರಿಯಲ್ಲಿ ಬಡತಿ, ಇಚ್ಛಿತ ಸ್ಥಳಕ್ಕೆ ಬದಲಿ, ವರಿಷ್ಠರ ತಪ್ಪು ತಿಳುವಳಿಕೆ ದೂರವಾಗುವಿಕೆ, ಮೊದಲಾದ ಶುಭ ಫಲಗಳು ಸಿಗುಗುವವು. ಈ ರಾಶಿಯ ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರರಿಗೆ, ಗಿರಣಿ ಕಾರ-ಖಾನೆಗಳ ಕಾರ್ಮಿಕರಿಗೂ, ವರ್ಕಶಾಪ, ಮಶಿನ್ ಶಾಪ್‌ಗಳಲ್ಲಿ ಕೆಲಸ ಮಾಡುವ ಮಶಿನರಿ ಕೆಲಸಗಾರರಿಗೂ ಶನಿ ರಾಹುಗಳು ಅಶುಭರಿರುವುದರಿಂದ ತಾಪದಾಯಕ ವರುಷವಿದು. ಇದ್ದುದರಲ್ಲಿಯೇ ಜೂನ ೧೬ ರಿಂದ ಅಕ್ಟೋಬರ ೨೨ರ ವರೆಗಿನ ಕಾಲ ತುಸು ಅನುಕೂಲ. ಈ ಕಾಲದಲ್ಲಿ ಅವರ ಕೆಲ ಬೇಡಿಕೆಗಳು ಕೆಲ ಮಟ್ಟಿಗೆ ಈಡೇರಬಹುದಾಗಿದೆ. ರಾಹು ಶನಿಯರು ಇಡೀ ವರುಷ ಅಶುಭರಿರುವುದರಿಂದ ಈ ರಾಶಿಯ ಕೃಷಿವರ್ಗದವರಿಗೂ ತಾಪದಾಯಕ ವರುಷವಾಗಿದೆ. ನಿರೀಕ್ಷಿಸಿದ ಮಟ್ಟಿಗೆ ಬೆಳೆಬಾರದಿರುವುದರಿಂದಲೂ ಕಳುವು, ತುಡುಗುಗಳಿಂದಲೂ ಸಾಲ ಮಾಡುವ ಇಲ್ಲವೆ ಹೊಲ ಮನೆಗಳನ್ನು ವತ್ತಿ ಹಾಕಬಹುದಾದ ಸಂದರ್ಭ ಒದಗಿ ಮುಂದಿನ ಬೇಸಾಯ ಸಾಗಿಸುವುದೇ ದುಸ್ಸಾಧ್ಯವಾಗುತ್ತದೆ. ಈ ರಾಶಿಯ ಸಾಹಿತಿ, ಲೇಖಕ, ಕಲಾವಿದ, ಶಿಕ್ಷಕ, ಅಧ್ಯಾಪಕ, ಚಾರ್ಟರ್ಡ್ ಅಕೌಂಟಂಟ್, ಪ್ರಕಾಶಕ, ಪತ್ರಿಕೋದ್ಯಮಿ, ಡಾಕ್ಟರ, ವಕೀಲ, ನ್ಯಾಯಾಧೀಶ ಮೊದಲಾದ ಬುದ್ಧಿಜೀವಿ ವರ್ಗದವರಿಗೆಲ್ಲ ಮಿಶ್ರಫಲದಾಯಕ ವರುಷವಿದು. ನವೆಂಬರ ೩ ರಿಂದ ಜೂನ ೧೫ರ ವರೆಗಿನ ಕಾಲ ನಿರುತ್ಸಾಹದಾಯಕವಾಗಿದ್ದು ಉದ್ಯೋಗದಲ್ಲಿ ಚಟುವಟಿಕೆ ಕಂಡುಬರುವದಿಲ್ಲ, ಮಿತ್ರರೇ ಶತ್ರುಗಳಾಗುವುದರಿಂದ ಮಿಥ್ಯಾಪವಾದವನ್ನು ಎದುರಿಸಬೇಕಾಗುತ್ತದೆ. ಆದರೆ ಜೂನ ೧೬ ರಿಂದ ಅಕ್ಟೋಬರ ೨೨ರ ವರೆಗಿನ ಕಾಲ ತುಸು ಉತ್ಸಾಹದಾಯಕವಾಗಿದ್ದು ಈ ಕಾಲದಲ್ಲಿ ಸಂಘ ಸಂಸ್ಥೆಗಳಿಂದಲೂ ಸರಕಾರದಿಂದಲೂ ಸಹಾಯ ಸಹಕಾರ ಲಭಿಸುವುದಲ್ಲದೇ ಬಿರುದು ಪ್ರಶಸ್ತಿ, ಮನ್ನಣೆ, ಪುರಸ್ಕಾರ ಲಭಿಸಿ ದ್ರವ್ಯಾರ್ಜನೆ ಆಗುವುದು. ಪರದೇಶ ಪರ್ಯಟನ ಯೋಗವೂ ಉಂಟು.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ ಕಮಿಶನ್ ಏಜಂಟರಿಗೂ ಹಂಚಿಕೆದಾರರಿಗೂ ಚಾಳ ಹೋಟೆಲ ಟಾಕೀಜ ಗಿರಣಿ ಕಾರಖಾನೆಗಳ ಮಾಲಿಕ ವರ್ಗದವರಿಗೆ ಮಿಶ್ರಫಲದಾಯಕ ವರುಷವಿದು. ಪೂರ್ವಾರ್ಧವು ಪ್ರತಿಕೂಲವಿದ್ದು• ನೌಕರ ಸಮಸ್ಯೆ, ಮಶಿನರಿ ತೊಂದರೆ, ಸರಕಾರದ ನಿರ್ಬಂಧನೆಗಳಿಂದಾಗಿ ಉದ್ಯೋಗ ಕುಂಠಿತವಾಗುತ್ತದೆ. ತನ್ಮೂಲಕ ಸಾಲ ಮಾಡಬೇಕಾದ ಪ್ರಸಂಗ ಬರುತ್ತದೆ. ಆದರೆ ಉತ್ತರಾರ್ಧವು ಉತ್ಸಾಹದಾಯಕವಿದ್ದು ಎಲ್ಲ ಸಮಸ್ಯೆಗಳಿಗೂ ಪರಿಹಾರ ಲಭಿಸಿ, ಕುಂಠಿತವಾಗಿದ್ದ ಉದ್ಯೋಗ ಮತ್ತೆ ಪ್ರಾರಂಭವಾಗುವುದಲ್ಲದೇ ಪೂರ್ವಾರ್ಧದಲ್ಲಿ ಮಾಡಿದ್ದ ಸಾಲಗಳಲ್ಲವನ್ನು ತೀರಿಸುವ ಶಕ್ತಿ ಬರುತ್ತದೆ.

ಈ ರಾಶಿಯ ವಧೂವರರಿಗೆ ಮಿಶ್ರಫಲದಾಯಕ ವರುಷವಿದು. ನವಂಬರ ೩ ರಿಂದ ಜೂನ ೧೫ ರ ವರೆಗಿನ ಕಾಲ ಪ್ರತಿಕೂಲವಿದ್ದು ಈ ಅವಧಿಯಲ್ಲಿ ವಿವಾಹ ಗೊತ್ತುಮಾಡಿದರೂ ನೆರವೇರುವದು ಕಠಿಣ. ಇಲ್ಲವೇ ಮುಂದೂಡಬಹುದಾಗಿದೆ. ಆದರೆ ಜೂನ ೧೫ ರಿಂದ ಅಕ್ಟೋಬರ ೨೨ ರ ವರೆಗಿನ ಕಾಲ ಪ್ರೋತ್ಸಾಹದಾಯಕವಾಗಿದ್ದು ಈ ಕಾಲದಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗುತ್ತದೆ.

ಈ ರಾಶಿಯ ವಿವಾಹಿತರಿಗೂ ಕೂಡ ಮಿಶ್ರ ಫಲವಿದೆ. ಪೂರ್ವಾರ್ಧವು ಪ್ರತಿಕೂಲವಿದ್ದು ಮನೆಯಲ್ಲಿಯ ವಿಷಮ ವಾತಾವರಣದಿಂದಲೂ ನಿತ್ಯದ ಗೃಹಕಲಹದಿಂದಲೂ ನಿದ್ರಾರಹಿತವಾದ ಹಲವು ರಾತ್ರಿಗಳನ್ನು ಕಳೆಯಬೇಕಾಗುತ್ತದೆ. ಅಲ್ಲದೆ ಏಕತ್ರ ಕುಟುಂಬ ಒಡೆಯುವದರೊಂದಿಗೆ ಪರಿಸಮಾಪ್ತಿಯಾಗುತ್ತದೆ. ಆದರೆ ಉತ್ತರಾರ್ಧವು ಉತ್ಸಾಹದಾಯಕವಾಗಿದ್ದು ತಪ್ಪು ತಿಳವಳಿಕೆಯಿಂದ ಒಡೆದು ಹೋಗಿದ್ದ ಏಕತ್ರ ಕುಟುಂಬಗಳು ಮತ್ತೆ ಒಂದಾಗುತ್ತವೆ. ಅಲ್ಲದೆ ಇದೇ ಅವಧಿಯಲ್ಲಿ ಬೆಲೆಯುಳ್ಳ ವಸ್ತು ಒಡವೆಗಳ ಖರೀದಿ ವಾಹನ, ಮನೆ, ಆಸ್ತಿ, ಸಂಪಾದನೆ, ತೀರ್ಥಯಾತ್ರಾ ಸಂದರ್ಶನ ಮೊದಲಾದ ಶುಭ ಫಲಗಳು ಸಿಕ್ಕುವವು. ಈ ರಾಶಿಯ ಗರ್ಭಿಣಿಯರಿಗೆ ಮಿಶ್ರಫಲದಾಯಕ ವರುಷವಾಗಿದೆ. ನವೆಂಬರ ೩ ರಿಂದ ಜೂನ ೧೫ ರ ವರೆಗೆ ಹೆರಿಗೆ ಆದರೆ ಕಷ್ಟ ಪ್ರಸವವು. ಜೂನ ೧೬ ರಿಂದ ಅಕ್ಟೋಬರ ೨೨ ರ ವರೆಗೆ ಆದರೆ ಸುಖ ಪ್ರಸವವು ಆಗುತ್ತದೆ.

ಈ ರಾಶಿಯ ಸಾಮಾಜಿಕ ರಾಜಕೀಯ ಕಾರ್ಯಕರ್ತರಿಗೆಲ್ಲ ಪೂರ್ವಾರ್ಧವು ಪ್ರತಿಕೂಲವಿದ್ದು ಮಿತ್ರರೇ ಶತ್ರುಗಳಾಗುವುದರಿಂದ ಸ್ಥಾನಮಾನಕ್ಕೆ ಚ್ಯುತಿ ಇದೆ. ಇದೇ ಅವಧಿಯಲ್ಲಿ ಚುನಾವಣೆ ಜರುಗಿದಲ್ಲಿ ಸ್ಪರ್ಧಿಸದಿರುವುದೇ ಹಿತಕರವು. ಆದರೆ ಉತ್ತರಾರ್ಧದಲ್ಲಿ ಉತ್ಸಾಹದಾಯಕವಾಗಿದ್ದು ಪೂರ್ವಾರ್ಧದಲ್ಲಿ ಕಳೆದುಕೊಂಡ ಸ್ಥಾನಮಾನ ಅಧಿಕಾರ ಮತ್ತೆ ಪಡೆಯುವರಲ್ಲದೇ ಪ್ರತ್ಯಕ್ಷ ರಾಜಕೀಯದಲ್ಲಿ ಪ್ರವೇಶಿಸಿ ಜಿಲ್ಲೆ ರಾಜ್ಯಗಳ ಗಣ್ಯವ್ಯಕ್ತಿಗಳಾಗುವುದರಲ್ಲಿ ಸಂದೇಹವಿಲ್ಲ. ಇದೇ ಅವಧಿಯಲ್ಲಿ ಚುನಾವಣೆ ಜರುಗಿದಲ್ಲಿ ಸ್ಪರ್ಧಿಸಬಹುದು, ಅವಿರೋಧ ಆಯ್ಕೆ ಇಲ್ಲವಷ್ಟೇ ಅತ್ಯಧಿಕ ಬಹುಮತದಿಂದ ಯಶಸ್ಸು ಪಡೆಯುವರು.

ಈ ರಾಶಿಯ ವಿದ್ಯಾರ್ಥಿಗಳಿಗೆ ಸಮ್ಮಿಶ್ರ ವರುಷವಾಗಿದೆ. ನವಂಬರ್ ೩ ರಿಂದ ಜೂನ್ ೧೫ ರ ವರೆಗಿನ ಕಾಲ ಪ್ರತಿಕೂಲವಿದ್ದು, ಮನೆಯಲ್ಲಿಯ ವಿಷಮವಾತಾವರಣದಿಂದಲೂ, ಶಿಕ್ಷಕರ ಅವಕೃಪೆಯಿಂದಲೂ, ಆರ್ಥಿಕ ಮುಗ್ಗಟ್ಟಿನಿಂದಲೂ ಶಿಕ್ಷಣ ಮುಂದುವರೆಸುವುದೇ ಕಠಿಣವಾಗುತ್ತದೆ. ಇದೇ ಅವಧಿಯಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ತೇರ್ಗಡೆಯಾಗಲು ಬಹಳ ಪರಿಶ್ರಮ ಪಡಬೇಕಾಗುತ್ತದೆ. ಆದರೆ ಉತ್ತಮಶ್ರೇಣಿ ದೊರೆಯದು. ಜೂನ್ ೧೬ ರಿಂದ ಅಕ್ಟೋಬರ್ ೨೨ ರ ವರೆಗಿನ ಕಾಲ ಪ್ರೋತ್ಸಾಹದಾಯಕವಾಗಿದ್ದು ಪೂರ್ವಾರ್ಧದಲ್ಲಿಯ ಸಮಸ್ಯೆಗಳಿಗೆ ಪರಿಹಾರ ದೊರೆತು ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರೆಯುತ್ತದೆ. ಹಾಗೂ ಇದೇ ಅವಧಿಯಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗುವರು. ಅಲ್ಲದೆ ವಿದ್ಯಾರ್ಥಿ ವೇತನ, ಶಿಷ್ಯ ವೃತ್ತಿ ಮತ್ತೆ ಸಂಪಾದಿಸುವರು.



## ಮಕರ

**ಈ ರಾಶಿಯವರಿಗೆ ಈ ವರುಷ ಉದ್ಯೋಗ, ಆರ್ಥಿಕ ದೃಷ್ಟಿಯಿಂದ ಪ್ರಗತಿದಾಯಕವಿದ್ದರೆ ಆರೋಗ್ಯ ಕೌಟುಂಬಿಕ ಶೈಕ್ಷಣಿಕ ರಾಜಕೀಯ ದೃಷ್ಟಿಯಿಂದ ಪ್ರತಿಕೂಲವಿದೆ.**

ಈ ರಾಶಿಯವರ ಈ ವರುಷದ ಗ್ರಹಗತಿಯನ್ನು ಪರಾಮರ್ಶಿಸಿದಾಗ, ಕಳೆದ ಒಂದೂವರೆ ವರುಷದಿಂದ ಅತ್ಯಂತ ಶುಭಫಲವನ್ನು ಕೊಡುತ್ತಿರುವ ಹನ್ನೊಂದನೆಯ ಶನಿಯು ವರುಷದ ಕೊನೆಯ ವರೆಗೂ ಶುಭ ಫಲವನ್ನೇ ಕೊಡುತ್ತಾನೆ. ಇದರಂತೆ ಕಳೆದ ಆಗಷ್ಟದಿಂದ ಬಂದ ಮೂರನೇ ರಾಹುವಿನ ಶುಭಫಲವು ಕೂಡ ವರುಷಾಂತ್ಯದ ವರೆಗೂ ಇರುತ್ತದೆ. ಆದರೆ ಕಳೆದ ವರುಷದಿಂದ ಶುಭಫಲವನ್ನು ಕೊಡುತ್ತಿದ್ದ ಎರಡನೇ ಗುರುವು ಫೆಬ್ರುವರಿ ೩ ರಿಂದ ನಿರ್ಗಮಿಸಿ ಬರಲಿರುವ ಮೂರನೇ ಗುರುವು ಜೂನ ೧೬ರ ವರೆಗೆ ಹಾಗೂ ಜನ್ಮಸ್ಥರಿಗೆ ವರುಷಾಂತ್ಯದ ವರೆಗೆ ಇರುವ ನಾಲ್ಕನೇ ಗುರುವು ಅಶುಭ ಫಲದಾಯಕರು. ಹೀಗೆ ನಿಮ್ಮ ಗ್ರಹಸ್ಥಿತಿ ಇರುವುದರಿಂದ ಮಿಶ್ರಫಲದಾಯಕ ವರುಷವಿದು. ಆರೋಗ್ಯ ದೃಷ್ಟಿಯಿಂದ ನೋಡಿದರೆ ಒಂದಿಲ್ಲೊಂದು ಕಿರುಕುಳ, ಪೀಡೆ ಉಪದ್ರವ ವರುಷಾಂತ್ಯದ ವರೆಗೂ ಇದ್ದೆ ಇರುತ್ತದೆ. ಅಲ್ಲದೆ ಡಿಶೆಂಬರ್ ೧೫ ರಿಂದ ಫೆಬ್ರುವರಿ ೧೨ರ ವರೆಗೆ, ಎಪ್ರಿಲ ೧೨ ರಿಂದ ಜೂನ ೧೫ರ ವರೆಗೆ ಹಾಗೂ ಅಗಷ್ಟ ೧೫ ರಿಂದ ಸೆಪ್ಟೆಂಬರ್ ೧೬ರ ವರೆಗಿನ ಈ ಐದು ತಿಂಗಳ ಕಾಲ ತೀರ ಪ್ರತಿಕೂಲವಿದ್ದು, ಈ ಕಾಲದಲ್ಲಿ ರೋಗ ಉಲ್ಬಣವಾಗಬಹುದಲ್ಲದೆ ಶತ್ರುಪೀಡೆ, ಅಪಘಾತದ ಭಯವು ಉಂಟು. ಆದ್ದರಿಂದ , ವಾಹನಚಾಲಕರು, ಮಶಿನರಿ ಕೆಲಸಗಾರರು, ಬಾಹ್ಯ ಹಾಗು ತಾಂತ್ರಿಕ ಕೆಲಸಗಾರರು, ವಿಶೇಷ ಎಚ್ಚರಿಕೆಯಲ್ಲಿ ಇರುವುದು ಅವಶ್ಯವು. ಆರ್ಥಿಕ ದೃಷ್ಟಿಯಿಂದ ನೋಡಿದರೆ ಬರಬೇಕಾಗಿದ್ದ ಹಣವು ನಿರೀಕ್ಷಿಸದ ಮೂಲದಿಂದಲೂ ಸಾಕಷ್ಟು ಬರುತ್ತದೆ. ಅಲ್ಲದೆ ನವೆಂಬರ ೩ ರಿಂದ ಡಿಸೆಂಬರ ೧೬ರ ವರೆಗೆ, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨ರ ವರೆಗೆ ಹಾಗೂ ಸಪ್ಟೆಂಬರ ೧೬ರಿಂದ ಅಕ್ಟೋಬರ ೨೨ರ ವರೆಗಿನ ಈ ಕಾಲದಲ್ಲಿ ದತ್ತಕ, ವಾರಸಾ, ಭಕ್ಷೀಸ್, ಲಾಟರಿ ಮೊದಲಾದ ರೀತಿಯಿಂದ ಆಕಸ್ಮಿಕ ಧನಪ್ರಾಪ್ತಿಯಾಗುವದರಿಂದ ಆರ್ಥಿಕಸ್ಥಿತಿ ತೃಪ್ತಿಕರವಿರುತ್ತದೆ. ವಾದ, ಸ್ಪರ್ಧೆ, ಕೋರ್ಟಿನ ವ್ಯವಹಾರದಲ್ಲಿ ಮಿಶ್ರಫಲವಿದೆ. ಪೂರ್ವಾರ್ಧವು ಪ್ರಗತಿದಾಯಕವಿದ್ದರೆ ಉತ್ತರಾರ್ಧವು ಪ್ರತಿಕೂಲವಿರುತ್ತದೆ. ಫೌಜುದಾರಿ ಹಾಗೂ ಕಾರ್ಮಿಕ ತಂಟೆ ವಾಹನ ದಾವೆಗಳಲ್ಲಿ ಯಶಸ್ಸು ದೊರೆತರೆ, ನೌಕರಿಗೆ ಸಂಬಂಧಿಸಿದ ಹಾಗು ರಾಜಕೀಯಕ್ಕೆ ಸಂಬಂಧಿಸಿದ ವ್ಯಾಜ್ಯಗಳಲ್ಲಿ ಅಪಜಯವಿದೆ.

ಈ ರಾಶಿಯ ನೌಕರ ವರ್ಗದವರಿಗೆ ಮಿಶ್ರ ಫಲವಿದೆ. ಆರ್ಥಿಕ ದೃಷ್ಟಿಯಿಂದ ಪ್ರೋತ್ಸಾಹದಾಯಕವಾಗಿದ್ದು, ಸ್ಥಾನಮಾನ, ಅಧಿಕಾರ ದೃಷ್ಟಿಯಿಂದ ನಿರುತ್ಸಾಹದಾಯಕವಾಗಿದೆ. ನವೆಂಬರದಿಂದ ಎಪ್ರಿಲ್ ವರೆಗಿನ ಪೂರ್ವಾರ್ಧವು ಪ್ರಗತಿದಾಯಕವಿದ್ದು ಈ ಕಾಲದಲ್ಲಿ ನೌಕರಿಯಲ್ಲಿ ಬಡತಿ, ಅನುಕೂಲ ಜಾಗೆಗೆ ಬದಲಿ, ವರಿಷ್ಠರ ಸಹಕಾರ ವೃದ್ಧಿ, ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ, ಹಂಗಾಮಿ ನೌಕರರಿಗೆ, ಉದ್ಯೋಗದಲ್ಲಿ ಸ್ಥಿರತೆ, ಮೊದಲಾದ ಶುಭ ಘಟನೆಗಳು ಜರುಗಿದರೆ, ಮೇ ದಿಂದ ಅಕ್ಟೋಬರ ವರೆಗಿನ ಉತ್ತರಾರ್ಧವು ಪ್ರತಿಕೂಲವಿದ್ದು, ನೌಕರಿಯಲ್ಲಿ ಹಿಂಬಡತಿ. ಅಧಿಕಾರ ಸ್ಥಾನಕ್ಕೆ ಚ್ಯುತಿ, ಅನಪೇಕ್ಷಿತ ಸ್ಥಳಕ್ಕೆ ಬದಲಿ, ವರಿಷ್ಠರೊಂದಿಗೆ ಭಿನ್ನಾಭಿಪ್ರಾಯ ಮೊದಲಾದ ಅಹಿತಕರ ಘಟನೆಗಳು ಜರುಗುವವು. ಈ ರಾಶಿಯ ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರರಿಗೂ. ಗಿರಣಿ, ಕಾರಖಾನೆಗಳ ಕಾರ್ಮಿಕರಿಗೂ, ವರ್ಕ ಶಾಪ್, ಮಶೀನ್‌ಶಾಪ್‌ಗಳಲ್ಲಿ ಕೆಲಸ ಮಾಡುವ ಮಶಿನರಿ ಕೆಲಸಗಾರರಿಗೂ, ಶನಿ ರಾಹುಗಳು ಶುಭರಿರುವುವದರಿಂದ ಪ್ರೋತ್ಸಾಹದಾಯಕ ವರುಷವಾಗಿದ್ದು, ಅವರ ಅನೇಕ ಬೇಡಿಕೆಗಳು ಈ ವರುಷ ಈಡೇರುತ್ತವೆ. ಈ ರಾಶಿಯ ಕೃಷಿವರ್ಗ

### ಗೊತ್ತು !

ಯಾವುದಾದರೂ ಒಂದು ವಸ್ತು ಯಾತನೆ ಪಡುತ್ತಿದ್ದರೆ
ಅದು ನನ್ನದೇ ಇರಬೇಕೆಂದು ಭಾವಿಸುತ್ತೇನೆ !
ಅದನ್ನು ಎತ್ತಿಕೊಂಡು ಎದೆಗೊತ್ತಿಕೊಳ್ಳುತ್ತೇನೆ.
ಏಕೆಂದರೆ ನನಗೆ ಪ್ರೇಮಿಸುವುದೊಂದೆ ಗೊತ್ತು !

— ಪಂಚಾಕ್ಷರಿ ಹಿರೇಮಠ

ಚುನಾವಣೆ ಜರುಗಿದಲ್ಲಿ ಅತ್ಯವಶ್ಯವಾಗಿ ಸ್ಪರ್ಧಿಸಿರಿ, ಅವಿರೋಧ ಆಯ್ಕೆ ಇಲ್ಲವೇ ಅತ್ಯಧಿಕ ಮತದಿಂದ ಆಯ್ಕೆ ಆಗಬಹುದಾಗಿದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಫೆಬ್ರುವರಿಯಿಂದ ಬರುವ ತೃತೀಯ ಹಾಗು ಜೂನ ೧೬ ರಿಂದ ಬರುವ ಚತುರ್ಥಗುರುವಿನ ಅಶುಭ ಫಲದಿಂದಾಗಿ ಪ್ರತಿಕೂಲ ವರುಷವಿದು. ಮನೆಯಲ್ಲಿಯ ವಿಷಮ ವಾತಾವರಣದಿಂದಾಗಿ, ಶಿಕ್ಷಕರ ಅವಕೃಪೆಯಿಂದಾಗಿ, ಶಾರೀರಿಕ ಪೀಡೆಯಿಂದಾಗಿ ಶಿಕ್ಷಣ ಮುಂದುವರೆಸುವುದೇ ದುಸ್ಸಾಧ್ಯವಾಗುತ್ತದೆ. ಇದ್ದುದರಲ್ಲಿ ನವೆಂಬರದಿಂದ ಫೆಬ್ರುವರಿ ಒಳಗೆ ಜರುಗಬಹುದಾದ ಯಾವದೇ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗುವರು. ಆದರೆ ಮಾರ್ಚದಿಂದ ಅಕ್ಟೋಬರ ವರೆಗೆ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ಸಾದಾ ತರಗತಿಯಲ್ಲಿ ತೇರ್ಗಡೆಯಾಗಲು ಸಹ ಬಹಳ ಪರಿಶ್ರಮ ಪಡಬೇಕಾಗುತ್ತದೆ.

ಒಟ್ಟಿನಲ್ಲಿ ಈ ರಾಶಿಯವರಿಗೆ ಉದ್ಯೋಗ, ಆರ್ಥಿಕ ದೃಷ್ಟಿಯಿಂದ ಉತ್ಕರ್ಷವಾದರೆ, ಆರೋಗ್ಯ ಕೌಟುಂಬಿಕ, ಶೈಕ್ಷಣಿಕ, ರಾಜಕೀಯ ದೃಷ್ಟಿಯಿಂದ ಪ್ರತಿಕೂಲವು. ಪೂರ್ವಾರ್ಧವು ಪ್ರಗತಿದಾಯಕವಿದ್ದರೆ ಉತ್ತರಾರ್ಧವು ತಾಪದಾಯಕವು. ಉತ್ತರಾಷಾಢ, ಹಾಗೂ ಶ್ರವಣಾದ ಮೊದಲೆರಡು ಚರಣದವರಿಗೆ ತೊಂದರೆ ಹೆಚ್ಚಾದರೆ, ಶ್ರವಣಾದ ಕೊನೆಯ ಎರಡು ಚರಣ ಹಾಗು ಧನಿಷ್ಠಾದ ಮಕರರಾಶಿಯವರಿಗೆ ಅನುಕೂಲ ಹೆಚ್ಚು.




**ಈ ರಾಶಿಯ ಎಲ್ಲ ವರ್ಗದವರಿಗೆ ಎಲ್ಲ ದೃಷ್ಟಿಯಿಂದಲೂ ಶುಭದಾಯಕ ವರುಷವಾಗಿದ್ದು ಜೀವನದಲ್ಲಿಯೇ ಸುವರ್ಣ ಕಾಲವಾಗಿದೆ.**

ಈ ರಾಶಿಯವರ ಈ ವರುಷದಗ್ರಹಗತಿಯನ್ನು ಅವಲೋಕಿಸಲಾಗಿ, ಮೊದಲೇ ಅತ್ಯಂತ ಶುಭ ಫಲದಾಯಕ ಹತ್ತನೇ ಶನಿಯೊಂದಿಗೆ ನಾಳಿನ ಫೆಬ್ರುವರಿ ೩ ರಿಂದ ಬರಲಿರುವ ಶುಭಫಲದಾಯಕ ದ್ವಿತೀಯ ಗುರು, ಜೂನ್ ೧೬ ರಿಂದ ಬರುವ ತೃತೀಯ ಗುರು ಶುಭಫಲ ಕೊಡದಿದ್ದರೂ, ಅಶುಭಫಲವನ್ನು ಕೊಡಲಾರ. ಇದರಂತೆ ಕಳೆದ ವರುಷದಿಂದ ಬಂದ ಮಧ್ಯಮ ಫಲದಾಯಕ ದ್ವಿತೀಯ ರಾಹು. ಹೀಗೆ ನಿಮ್ಮ ಗ್ರಹಸ್ಥಿತಿ ಇರುವುದರಿಂದ ಈ ವರುಷವೆಂದರೆ ನಿಮ್ಮ ಜೀವನದಲ್ಲಿಯೇ ಸುವರ್ಣ ಕಾಲವಾಗಿದ್ದು ನಿಮ್ಮೆಲ್ಲ ಆಶೆ ಆಕಾಂಕ್ಷೆಗಳು ಈ ವರುಷ ಈಡೇರುವುದರಲ್ಲಿ ಸಂದೇಹವಿಲ್ಲ. ಆರೋಗ್ಯ ದೃಷ್ಟಿಯಿಂದ ನೋಡಿದರೆ ವರುಷ ಮುಕ್ಕಾಲು ಅವಧಿಯವರೆಗೆ ಚೆನ್ನಾಗಿರುತ್ತದೆಯಾದರೂ, ಜನೇವರಿ ೧೪ ರಿಂದ ಫೆಬ್ರುವರಿ ೧೨ ರ ವರೆಗೆ, ಮೇ ೧೫ ರಿಂದ ಜೂನ್ ೧೫ ರ ವರೆಗೆ, ಸಪ್ಟೆಂಬರ ೧೬ ರಿಂದ ಅಕ್ಟೋಬರ್ ೧೮ರ ವರೆಗಿನ ಮೂರು ತಿಂಗಳ ಕಾಲಮಾತ್ರ ತುಸು ಕಿರುಕುಳ ಪೀಡೆ ಇರುತ್ತದೆ. ಆರ್ಥಿಕ ದೃಷ್ಟಿಯಿಂದ ನೋಡಿದರೆ ಬರಬೇಕಾಗಿದ್ದ ಹಣವು ನಿರೀಕ್ಷಿಸಿದ ಮೂಲದಿಂದ ಸಾಕಷ್ಟು ಹಣವು ಬರುವುದಲ್ಲದೆ ನವಂಬರ್ ೩ ರಿಂದ ಜನೆವರಿ ೧೪ ರ ವರೆಗೆ, ಮಾರ್ಚ್ ೧೫ ರಿಂದ ಮೇ ೧೪ ರ ವರೆಗೆ, ಜುಲೈ ೧೫ ರಿಂದ ಅಗಷ್ಟ ೧೫ ರ ವರೆಗಿನ ಈ ಕಾಲದಲ್ಲಿ ದತ್ತಕ, ವಾರಸಾ, ಭಕ್ಷೀಸು, ಬಹುಮಾನ, ಕಮಿಶನ್, ಲಾಟರಿ, ಮೊದಲಾದ ಮೂಲದಿಂದ ಆಕಸ್ಮಿಕ ಧನಪ್ರಾಪ್ತಿಯಾಗುವುದರಿಂದ ಆರ್ಥಿಕ ಸ್ಥಿತಿ ತೃಪ್ತಿಕರವಿರುತ್ತದೆ. ವಾದ, ಸ್ಪರ್ಧೆ, ಕೋರ್ಟು ಕಚೇರಿ ಮೊದಲಾದ ಯಾವುದೇ ಪ್ರಕಾರ ವ್ಯಾಜ್ಯಗಳಿಗೆ ಈ ವರುಷ ವಿಜಯಶ್ರೀ ನಿಮ್ಮ ಕೊರಳಿಗೆ ಮಾಲೆ ಹಾಕುವಳು.

ಈ ರಾಶಿಯ ನೌಕರ ವರ್ಗದವರಿಗೆ ಪ್ರೋತ್ಸಾಹದಾಯಕ ವರುಷವಾಗಿದ್ದು, ಅದರಲ್ಲಿಯೂ ನವೆಂಬರ ೩ ರಿಂದ ಜನೇವರಿ ೧೪ರ ವರೆಗೆ, ಫೆಬ್ರುವರಿ ೧೨ ರಿಂದ ಮೇ ೨೫ರ ವರೆಗೆ ವರೆಗೆ, ಜುಲೈ ೧೫ ರಿಂದ ಅಗಷ್ಟ ೧೫ರ ವರೆಗಿನ ಕಾಲ ನೌಕರಿಯಲ್ಲಿ ಬಡತಿ, ಅನುಕೂಲ ಜಾಗೆಗೆ ವರ್ಗ ಡಬಲ್ ಇನಕ್ರಿಮೆಂಟ ದೊರೆಯುವಿಕೆ, ಇಲ್ಲವೇ ಎರಡು ಹುದ್ದೆಗಳ ಕಾರ್ಯ ನಿರ್ವಹಿಸುವ ಸುಯೋಗ ಲಭಿಸುವಿಕೆ ವರಿಷ್ಠರ ಸ್ನೇಹ ಸಹಕಾರ ವೃದ್ಧಿಸುವಿಕೆ, ಹಂಗಾಮಿ ನೌಕರರಿಗೆ ನೌಕರಿಯಲ್ಲಿ ಕಾಯಂ ಆಗುವಿಕೆ, ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ, ಇವೇ ಮೊದಲಾದ ಸ್ಮರಣೀಯ ಘಟನೆಗಳು ಜರುಗುವವು. ಶನಿ ರಾಹುಗಳು ಶುಭರಿರುವುದರಿಂದ ಈ ರಾಶಿಯ ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರರಿಗೂ, ಗಿರಣಿ ಕಾರಖಾನೆಗಳ ಕಾರ್ಮಿಕರಿಗೂ, ವರ್ಕಶಾಪ್, ಮಶಿನಶಾಪ್ ಗಳಲ್ಲಿ ಕೆಲಸ ಮಾಡುವ ಮಶಿನರಿ ಕೆಲಸಗಾರರಿಗೂ ಪ್ರೋತ್ಸಾಹದಾಯಕ ವರುಷವಾಗಿದ್ದು, ಬಹಳ ವರುಷಗಳಿಂದ ನೆನಗುದಿಗೆ ಬಿದ್ದಿದ್ದ ಅವರ ಎಲ್ಲ ಬೇಡಿಕೆಗಳು ಈ ವರುಷ ಈಡೇರುವದರಲ್ಲಿ ಸಂದೇಹವಿಲ್ಲ. ಈ ರಾಶಿಯ ಸಾಹಿತಿ, ಲೇಖಕ, ಕಲಾವಿದ, ಶಿಕ್ಷಕ,, ಅಧ್ಯಾಪಕ, ಪ್ರಕಾಶಕ, ಪತ್ರಿಕೋದ್ಯಮಿ, ಚಾರ್ಟರ್ಡ ಅಕೌಂಟಂಟ, ಡಾಕ್ಟರ, ವಕೀಲ, ನ್ಯಾಯಾಧೀಶ, ಮೊದಲಾದ ಬುದ್ಧಿಜೀವಿಗಳಿಗೆಲ್ಲ ಪ್ರೋತ್ಸಾಹದಾಯಕ ವರುಷವಾಗಿದೆ, ಅದರಲ್ಲಿಯೂ, ನವೆಂಬರ ೩ರಿಂದ ಜನೇವರಿ ೧೪ರ ವರೆಗೆ, ಫೆಬ್ರುವರಿ ೧೨ರಿಂದ ಮೇ ೧೫ರ ವರೆಗೆ, ಜುಲೈ ೧೫ರಿಂದ, ಅಗಷ್ಟ ೧೬ರ ವರೆಗೆ ಇರುವ ಕಾಲದಲ್ಲಿ ಸಂಘ ಸಂಸ್ಥೆಗಳಿಂದಲೂ, ಸರಕಾರದಿಂದಲೂ, ಪ್ರಶಸ್ತಿ ಪದಕ, ಪುರಸ್ಕಾರ ಮನ್ನಣೆ, ಗೌರವ ಧನ ಲಭಿಸುವಿಕೆ, ಇವಲ್ಲದೆ ಉದ್ಯೋಗದಲ್ಲಿ ಪ್ರಗತಿ, ದ್ರವ್ಯಾನುಕೂಲತೆ ವಾಹನ, ಮನೆ ಸಂಪಾದನೆ, ಪರದೇಶ ಪರ್ಯಟನ, ಮೊದಲಾದ ಸ್ಮರಣೀಯ ಘಟನೆಗಳು ಜರುಗುವವು.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ, ಉದ್ಯಮದಾರರಿಗೂ, ಕಮಿಶನ್ ಏಜೆಂಟರಿಗೂ ಹಂಚಿಕೆದಾರರಿಗೂ ಚಾಳ, ಟಾಕೀಜ, ಹೊಟೇಲ, ಗಿರಣಿ, ಕಾರಖಾನೆಗಳ ಮಾಲಕ ವರ್ಗದವರಿಗೆಲ್ಲ ಪ್ರೋತ್ಸಾಹದಾಯಕ, ವರುಷವಾಗಿದೆ. ನೌಕರ, ಮಾಲಕರ ಸಮಸ್ಯೆಗಳು ಪರಸ್ಪರ ಸಮ್ಮತಿಯಿಂದ ಬಗೆಹರಿಯುವುದರಿಂದ ಉದ್ಯೋಗದಲ್ಲಿ ಉತ್ಕರ್ಷವಾಗುತ್ತದೆ. ಅಲ್ಲದೆ ನವೆಂಬರ ೩ರಿಂದ ಜನೇವರಿ ೧೪ರ ವರೆಗೆ, ಹಾಗೂ ಜುಲೈ ೧೬ರಿಂದ ಸಪ್ಟೆಂಬರ ೧೬ರ ವರೆಗೆ ಇರುವ ಕಾಲವಂತೂ ಬಹಳೇ ಅನುಕೂಲವಿದ್ದು, ಈ ಕಾಲದಲ್ಲಿ ಉದ್ಯೋಗದಲ್ಲಿ ಪ್ರಗತಿ, ಹೊಸ ಉದ್ಯೋಗ ಕೈಕೊಳ್ಳುವಿಕೆ ಇಲ್ಲವೇ ಇದ್ದ ಉದ್ಯೋಗದಲ್ಲಿ ಹೊಸ ಶಾಖೆ ತೆರೆಯುವಿಕೆ, ಹೊಸದಾಗಿ ಜಾಗೆ, ಅಂಗಡಿ ಮನೆ, ಮಶಿನರಿ ಮೊದಲಾದ ಉದ್ಯೋಗಕ್ಕೆ ಬೇಕಾಗಬಹುದಾದ ಉಪಕರಣಗಳನ್ನು ಕೊಳ್ಳುವಿಕೆ, ಇಲ್ಲವೆ ನವೀಕರಿಸುವ ಸಾಮರ್ಥ್ಯ ಹೊಂದುವಿಕೆ ಮೊದಲಾದ ಪ್ರಗತಿದಾಯಕ ಸಂಗತಿಗಳು ಜರುಗುವವು,

ಕಳೆದ ಅನೇಕ ವರುಷಗಳಿಂದ ಗೃಹಸ್ಥಾಶ್ರಮಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ ವಧೂವರರಿಗೆ ಈ ವರುಷ ಅವರ ಮನೋರಥ ಈಡೇರುವುದರಲ್ಲಿ ಸಂದೇಹವಿಲ್ಲ. ಅದರಲ್ಲಿಯೂ ನವಂಬರ ೩ ರಿಂದ ಜನೇವರಿ ೧೪ರ ವರೆಗೆ ಹಾಗು ಫೆಬ್ರುವರಿ ೧೨ ರಿಂದ ಮೇ ೧೫ ರ ವರೆಗಿನ ಈ ಕಾಲದಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗಿ ಗೃಹಸ್ಥಾಶ್ರಮದ ಆನಂದ ಜೀವನವನ್ನು ಅನುಭವಿಸುವರು. ಈ ರಾಶಿಯ ವಿವಾಹಿತ ಸ್ತ್ರೀಪುರುಷರಿಗೂ ಗೃಹಿಣಿಯರಿಗಂತೂ, ಈ ವರುಷ ಪ್ರೋತ್ಸಾಹದಾಯಕ ವಾಗಿದ್ದು, ಅದರಲ್ಲಿಯೂ, ನವೆಂಬರ ೩ರಿಂದ ಮೇ ೧೫ರ ವರೆಗೆ ಇರುವ ಕಾಲದಲ್ಲಿ ಬೆಲೆಯುಳ್ಳ ವಸ್ತು ಒಡವೆಗಳನ್ನು ಖರೀದಿಸುವಿಕೆ, ವಾಹನ ಮನೆ ಸಂಪಾದನೆ, ತೀರ್ಥ ಯಾತ್ರಾ ಸಂದರ್ಶನ, ವಿದೇಶ ಯಾತ್ರೆ ಕೈಕೊಳ್ಳುವಿಕೆ, ಮನೆಯಲ್ಲಿ ಮಂಗಲ ಕಾರ್ಯ ಜರುಗುವಿಕೆ, ಮೊದಲಾದ ಸ್ಮರಣೀಯ ಘಟನೆಗಳು ಜರುಗುವವು. ಈ ರಾಶಿಯ ಗರ್ಭಿಣಿಯರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿದ್ದು, ಸುಖ ಪ್ರಸವವು, ಗಂಡು ಸಂತಾನದ ಯೋಗವೂ ಉಂಟು.

ಈ ರಾಶಿಯ ವಿದ್ಯಾರ್ಥಿಗಳಿಗೆ ಪ್ರೋತ್ಸಾಹದಾಯಕ ವರುಷವಾಗಿದೆ. ಕುಂಠಿತವಾಗಿದ್ದ ಶಿಕ್ಷಣ ಮುಂದುವರೆಯುವದಲ್ಲದೆ, ಈ ವರುಷ ಜರುಗಬಹುದಾದ, ಯಾವದೇ ಪ್ರಕಾರದ ಪರೀಕ್ಷೆಗಳಲ್ಲಿ ಅಂದರೆ ಸ್ಪರ್ಧಾತ್ಮಕ, ಪರೀಕ್ಷೆ

ಯುವರಿಗೆ ಶನಿ ರಾಹುಗಳು ಶುಭರಿರುವುದರಿಂದ ಪ್ರೋತ್ಸಾಹದಾಯಕ ವರುಷವಾಗಿದೆ. ನಿರೀಕ್ಷೆಗಿಂತಲೂ ಅಧಿಕ ಬೆಳೆ ಬಂದು ಹಿಂದಿನ ಸಾಲಗಳೆಲ್ಲವನ್ನು ತೀರಿಸಿ ಹೊಸದಾಗಿ, ಹೊಲ ಮನೆ ಜಾಗೆ, ತೋಟ ಗದ್ದೆ, ದನಕರು, ಟ್ರಕ್ ಟ್ರ್ಯಾಕ್ಟರ ಪಂಪಸೆಟ್ಟು ಮೊದಲಾದ ಬೇಸಾಯದ ಉಪಕರಣಗಳನ್ನು ಖರೀದಿಸುವ ಇಲ್ಲವೇ ನವೀಕರಿಸುವ ಶಕ್ತಿ ಬರುತ್ತದೆ. ಆದರೆ ಉತ್ತರಾರ್ಧವು ತುಸು ಪ್ರತಿಕೂಲವಿದ್ದು ಕಳವು, ತುಡುಗು, ಶತ್ರುಪೀಡೆ ಅಪಘಾತಗಳಿಂದ ಹಾನಿ ಆಗಬಹುದಾಗಿದೆ. ಈ ರಾಶಿಯ ಲೇಖಕ, ಕಲಾವಿದ, ಡಾಕ್ಟರ, ಪ್ರಕಾಶಕ, ಪತ್ರಿಕೋದ್ಯಮಿ, ವಕೀಲ, ಶಿಕ್ಷಕ, ಅಧ್ಯಾಪಕ, ನ್ಯಾಯಾಧೀಶ ಮೊದಲಾದ ಬುದ್ಧಿಜೀವಿಗಳಿಗೆ ಫೆಬ್ರುವರಿ ೩ ರಿಂದ ಬರುವ ತೃತೀಯ ಗುರು ಹಾಗೂ ಜೂನ ೧೬ ರಿಂದ ಬರುವ ಚತುರ್ಥ ಗುರುವಿನ ಅಶುಭಫಲದಿಂದಾಗಿ ಪ್ರತಿಕೂಲ ವರುಷವಿದ್ದು ಆರ್ಥಿಕ ದೃಷ್ಟಿಯಿಂದೇನೋ ಅನುಕೂಲವಿದೆ, ಆದರೆ ಸ್ಥಾನಮಾನ ಅಧಿಕಾರಕ್ಕೆ ಚ್ಯುತಿ ಇದೆ. ನವ್ಹಂಬರ ೩ ರಿಂದ ಫೆಬ್ರುವರಿ ೨೮ ವರೆಗೆ ದ್ವಿತೀಯ ಗುರು ಇರುವ ಕಾಲ ಮಾತ್ರ ಪ್ರೋತ್ಸಾಹದಾಯಕವಿದೆ.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ, ಉದ್ದಿಮೆದಾರರಿಗೂ, ಕಮೀಶನ್ ಏಜಂಟರಿಗೂ ಹಂಚಿಕೆದಾರರಿಗೂ, ಚಾಳ, ಟಾಕೀಜ, ಹೋಟೆಲ, ಗಿರಣಿ ಕಾರಖಾನೆಗಳ ಮೂಲಕ ವರ್ಗದ ಜನರಿಗೆಲ್ಲ ಮಿಶ್ರ ಫಲದಾಯಕ ವರುಷವಿದು. ಉದ್ಯೋಗದ ಆರ್ಥಿಕ ದೃಷ್ಟಿಯಿಂದ ಪ್ರಗತಿದಾಯಕವೇನೋ ಇದೆ, ಆದರೆ ನೌಕರರ ಸಮಸ್ಯೆ, ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ. ಅದರಲ್ಲಿಯೂ ನವೆಂಬರ್‌ದಿಂದ ಏಪ್ರಿಲ್ ವರೆಗೆ, ಪ್ರಗತಿದಾಯಕವಿದ್ದರೆ, ಮೇ ದಿಂದ ಅಕ್ಟೋಬರ್ ವರೆಗೆ ಪ್ರತಿಕೂಲವಿದೆ.

ಈ ರಾಶಿಯ ವಧೂವರರಿಗೆ ಮಿಶ್ರಫಲದಾಯಕ ವರುಷವಿದು. ನವೆಂಬರದಿಂದ ಏಪ್ರಿಲ ವರೆಗಿನ ಕಾಲ ಶುಭವಿದ್ದು, ಈ ಕಾಲದಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗುವುದು. ಆದರೆ ಮೇ ದಿಂದ ಅಕ್ಟೋಬರ ವರೆಗಿನ ಕಾಲ ತೀರ ಪ್ರತಿಕೂಲವಿದ್ದು, ಗೊತ್ತು ಮಾಡಿದ ಮದುವೆ ವಿಲಂಬವಾಗಬಹುದು ಇಲ್ಲವೇ ಮುಂದೂಡಲ್ಪಡಬಹುದಾಗಿದೆ. ವಿವಾಹಿತ ಸ್ತ್ರೀ ಪುರುಷರು ಹಾಗೂ ಗೃಹಿಣಿಯರಿಗಂತೂ ಫೆಬ್ರುವರಿ ೩ ರಿಂದ ಬರುವ ತೃತೀಯ ಗುರು ಹಾಗೂ ಜೂನ ೧೬ ರಿಂದಬರುವ ಚತುರ್ಥ ಗುರುವಿನಿಂದಾಗಿ ತಾಪದಾಯಕ ಕಾಲವಾಗಿದೆ. ಆಪ್ತೇಷ್ಟರಲ್ಲಿ ವಿರಸ, ನಿತ್ಯದ ಗೃಹಕಲಹದಿಂದಾಗಿ ಈ ವರುಷ ಮಾನಸಿಕ ನೆಮ್ಮದಿ ಇರುವದಿಲ್ಲ. ಅದರಲ್ಲಿಯೂ ಏಪ್ರಿಲ್ ೧೪ರಿಂದ ಜೂನ ೧೪ರ ವರೆಗೆ ಹಾಗೂ ಅಗಷ್ಟ ೧೫ರಿಂದ ಸಪ್ಟೆಂಬರ ೧೬ರ ವರೆಗೆ ಈ ಮೂರು ತಿಂಗಳ ಕಾಲ ತೀರ ಪ್ರತಿಕೂಲವಿದ್ದು, ಗೃಹಕಲಹ, ಮಿಥ್ಯಾಪವಾದದಿಂದ ಮನೆಯ ಪರಿಸ್ಥಿತಿ ಹದಗೆಟ್ಟು ಏಕತ್ರ ಕುಟುಂಬ ಒಡೆಯುವುದರೊಂದಿಗೆ ಪರಿಸಮಾಪ್ತಿಯಾಗುತ್ತದೆ. ಆದರೆ ಇದ್ದುದರಲ್ಲಿಯೇ ನವೆಂಬರ ೩ ರಿಂದ ಫೆಬ್ರುವರಿ ೩ರ ವರೆಗಿನ ಕಾಲದಲ್ಲಿ ಮಾತ್ರ ತುಸು ನೆಮ್ಮದಿ ಸಿಗುತ್ತದೆ. ಈ ರಾಶಿಯ ಗರ್ಭಿಣಿಯರಿಗೆ ಪ್ರತಿಕೂಲ ವರುಷವಿದು. ನವೆಂಬರ ೩ ರಿಂದ ಫೆಬ್ರುವರಿ ೨೮ ವರೆಗೆ ಹೆರಿಗೆ ಆದರೆ ಸುಖಪ್ರಸವವು, ಫೆಬ್ರುವರಿ ೩ ರಿಂದ ಅಕ್ಟೋಬರ ೨೨ರ ವರೆಗೆ ಆದರೆ ಕಷ್ಟ ಪ್ರಸವವು ಆಗುತ್ತದೆ.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ, ಫೆಬ್ರುವರಿ ೩ ರಿಂದ ಬರುವ ತೃತೀಯ ಗುರು ಹಾಗೂ ಜೂನ ೧೬ ರಿಂದ ಬರುವ ಚತುರ್ಥ ಗುರುವಿನ ಅಶುಭ ಫಲದಿಂದಾಗಿ ನಿರಾಶಾದಾಯಕ ವರುಷವಿದ್ದು, ಮಿತ್ರರೆ ಶತ್ರುಗಳಾಗುವದರಿಂದ ಮಿಥ್ಯಾ-ಪವಾದಕ್ಕೆ ಗುರಿಯಾಗಿ, ಸ್ಥಾನ ಮಾನ ಅಧಿ-ಕಾರ ಕಳೆದುಕೊಳ್ಳಬಹುದಾಗಿದೆ, ಇದೇ ಅವಧಿಯಲ್ಲಿ ಚುನಾವಣೆ ಜರುಗಿದಲ್ಲಿ ಸ್ಪರ್ಧಿಸದಿರುವುದೇ ಹಿತಕರವು. ಆದರೆ ನವೆಂಬರ ೩ ರಿಂದ ಫೆಬ್ರುವರಿ ೨೮ ವರೆಗಿನ ಕಾಲ ಪ್ರೋತ್ಸಾಹದಾಯಕವಿದ್ದು, ಈ ಕಾಲದಲ್ಲಿ ಸ್ಥಾನ ಮಾನ ಅಧಿಕಾರ ಲಭಿಸುತ್ತದೆ. ಇದೇ ಅವಧಿಯಲ್ಲಿ

*With best Compliments from :*

# HAPPY SERVICE CENTRE



AUTOMOTIVE WHOLESALERS &
RETAILERS—TATA & LEYLAND SPECIALISTS

Traffic Island, HUBLI-580 029

Phones : 64647 - 62403 - 65314

## H. P. RETAIL OUTLET

Karwar Road HUBLI-580 024

Open Day & Night

Phones : 67270 & 63447

## SARDAR PARTAP SINGH TRANSPORT COMPANY

Traffic Island, HUBLI - 580029

LORRY OWNERS & TRANSPORT CONTRACTORS

Phones : 62683 & 63514

ಇರಲಿ, ಬೋರ್ಡ್, ವಿಶ್ವವಿದ್ಯಾಲಯದ ಪರೀಕ್ಷೆಯೇ ಇರಲಿ ಯಾವುದೇ ಪ್ರಕಾರದ ಪರೀಕ್ಷೆಗೆ ಕಟ್ಟಿದರೂ, ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ, ವೃತ್ತಿ/ ವಿದ್ಯಾರ್ಥಿ ವೇತನ ಪಡೆಯುವರಲ್ಲದೇ ಹೆಚ್ಚಿನ ಶಿಕ್ಷಣಕ್ಕಾಗಿ ಇಲ್ಲವೇ ಸಂಶೋಧನೆಗಾಗಿ ವಿದೇಶಯಾತ್ರೆಯನ್ನು ಕೈಕೊಳ್ಳಬಹುದಾದ ಸುಯೋಗ ಉಂಟು.

ಈ ರಾಶಿಯ ಸಾಮಾಜಿಕ, ರಾಜಕೀಯ ಕಾರ್ಯಕರ್ತರಿಗೆ, ಅವರ ಜೀವನದಲ್ಲಿಯೇ ಸ್ಮರಣೀಯ ವರುಷವಾಗಿದ್ದು, ಪ್ರತ್ಯಕ್ಷ ರಾಜಕೀಯದಲ್ಲಿ ಪ್ರವೇಶಿಸಿ, ಅನೇಕ ಸಂಘ, ಸಂಸ್ಥೆಗಳ ವಿವಿಧ ಮಂಡಳಿ, ನಿಗಮಗಳ ಗೌರವಾಸ್ಪತ್ರ ಸ್ಥಾನಮಾನ, ಅಧಿಕಾರ ಪಡೆಯುರವಲ್ಲದೇ ಜಿಲ್ಲೆ, ರಾಜ್ಯ, ರಾಷ್ಟ್ರ ಮಟ್ಟದ ಗಣ್ಯ ವ್ಯಕ್ತಿಗಳಾಗುವುದರಲ್ಲಿ ಸಂದೇಹವಿಲ್ಲ, ಶತ್ರುಗಳೇ ಮಿತ್ರರಾಗುವ ಕಾರಣ ಈ ವರುಷದಲ್ಲಿ ಜರುಗಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೂ ಅವಿರೋಧ ಆಯ್ಕೆ, ಇಲ್ಲವೇ ಅತ್ಯಧಿಕ ಮತದಿಂದ ಆಯ್ಕೆ ಆಗುವರು.

**ಕಂಪನ....**

ನೀನಲಿದು ಗಿಲಿಗಿಲಿಸಿ
ಗೆಜ್ಜೆ ಕಟ್ಟಿ ನಲಿದಾಡಿದಾಗ
ಓ ! ಏನೆಂಬೆ, ಬುವಿಯು ತುಂಬ
ಸುಳಿಸುಳಿದಾಡಿತು ಕಂಪನ !

— ಪಂಚಾಕ್ಷರಿ ಹಿರೇಮಠ



## ಮೀನ

**ಈ ರಾಶಿಯವರಿಗೆ ಮಿಶ್ರಫಲದಾಯಕ ವರುಷವು. ಪೂರ್ವಾರ್ಧವು ಪ್ರತಿಕೂಲವಿದ್ದರೆ ಉತ್ತರಾರ್ಧವು ಉತ್ತೇಜಕವಿದೆ.**

ಈ ವರುಷ ನಿಮ್ಮ ಗ್ರಹಗತಿಯನ್ನು ನೋಡಲಾಗಿ, ಕಳೆದ ಒಂದೂವರೆ ವರುಷದಿಂದ ಮಧ್ಯಮ ಫಲದಾಯಕ ಒಂಭತ್ತನೇ ಶನಿಯು ಈ ವರುಷಾಂತ್ಯದ ವರೆಗೂ ಮುಂದುವರೆಯುತ್ತಾನೆ. ಇದರಂತೆ ಕಳೆದ ಅಗಷ್ಟದಿಂದ ಬಂದ ಜನ್ಮಸ್ಥ ರಾಹುವಿನ ಅಶುಭ ಫಲವು ವರುಷಾಂತ್ಯದ ವರೆಗೂ ಇರುತ್ತದೆ. ಆದರೆ ಕಳೆದ ವರುಷದಿಂದ ಅಶುಭ ಫಲದಾಯಕ ಹನ್ನೆರಡನೇ ಗುರುವು ಫೆಬ್ರುವರಿಯಿಂದ ನಿರ್ಗಮಿಸಿ, ಬರಲಿರುವ ಮಧ್ಯಮ ಫಲದಾಯಕ ಜನ್ಮಸ್ಥ ಗುರುವು ಹಾಗೂ ಜೂನದಿಂದ ಬರುವ ಎರಡನೇ ಗುರುವಿನ ಶುಭಫಲವು ವರುಷಾಂತ್ಯದ ವರೆಗೆ ಇರುತ್ತದೆ. ಹೀಗೆ ನಿಮ್ಮ ಗ್ರಹಸ್ಥಿತಿ ಇರುವುದರಿಂದ ಮಿಶ್ರ ಫಲದಾಯಕ ವರುಷವಿದು. ಆರೋಗ್ಯ ದೃಷ್ಟಿಯಿಂದ ನೋಡಿದರೆ ನವೆಂಬರ್‌ದಿಂದ ಎಪ್ರಿಲ್ ವರೆಗಿನ ಪೂರ್ವಾರ್ಧವು ಪ್ರತಿಕೂಲವಿದ್ದು ಒಂದಿಲ್ಲೊಂದು ಕಿರುಕುಳ, ಪೀಡೆ, ಉಪದ್ರವ ಇದ್ದೇ ಇರುತ್ತದೆ. ಆದರೆ ಮೇದಿಂದ ಅಕ್ಟೋಬರ್ ವರೆಗಿನ ಅವಧಿ ಉತ್ತಮವಿರುತ್ತದೆ. ಆರ್ಥಿಕ ದೃಷ್ಟಿಯಿಂದ ನೋಡಿದರೆ ಈ ವರುಷ ಹೇಳಿಕೊಳ್ಳುವಷ್ಟು ಉತ್ತಮವಿರದಿದ್ದರೂ, ಕಳೆದ ವರುಷದಂತೆ ಸಾಲಗಾರರ ಕಾಟ, ಅಪಮಾನ ಪ್ರಸಂಗ ಮೊದಲಾದ ಅಹಿತಕರ ಘಟನೆಗಳು ಜರುಗುವುದಿಲ್ಲ. ಆಕಸ್ಮಿಕ ಧನಲಾಭದಂಥ ಶುಭ ಘಟನೆಗಳು ಜರುಗುವುದಿಲ್ಲ. ನವೆಂಬರ್ ೩ ರಿಂದ ಡಿಶೆಂಬರ್ ೧೫ರ ವರೆಗೆ, ಫೆಬ್ರುವರಿ ೧೨ ರಿಂದ ಎಪ್ರಿಲ್ ೧೨ರ ವರೆಗೆ, ಜೂನ ೧೫ ರಿಂದ ಜುಲೈ ೧೫ರ ವರೆಗೆ ಇರುವ ಕಾಲ ತುಸು ಪ್ರತಿಕೂಲವಿದ್ದು ಆದಾಯಕ್ಕಿಂತ ವೆಚ್ಚ ವಿಪರೀತವಿರುವುದರಿಂದ ನಿಮ್ಮ ಆರ್ಥಿಕ ಸ್ಥಿತಿ ಗಂಭೀರವಿರುತ್ತದೆ. ಆದರೆ ಡಿಶೆಂಬರ್ ೧೬ ರಿಂದ ಫೆಬ್ರುವರಿ ೧೨ರ ವರೆಗೆ, ಎಪ್ರಿಲ್ ೧೨ ರಿಂದ ಜೂನ ೧೫ರ ವರೆಗೆ ಹಾಗು ಜುಲೈ ೧೫ ರಿಂದ ಅಕ್ಟೋಬರ್ ೧೮ರ ವರೆಗಿನ ಕಾಲ ತುಸು ಅನುಕೂಲವಿದ್ದು, ಈ ಕಾಲದಲ್ಲಿ ಬರತಕ್ಕ ಹಣವು ನಿರೀಕ್ಷಿಸಿದ ಮೂಲದಿಂದ ಬರುವುದರಿಂದ ನಿಮ್ಮ ಆರ್ಥಿಕ ಸ್ಥಿತಿ ತೃಪ್ತಿಕರವಿಲ್ಲದಿದ್ದರೂ, ಹಿಡಿತದಲ್ಲಿ ಇರುತ್ತದೆ. ವಾದ, ಸ್ಪರ್ಧೆ, ಕೋರ್ಟಿನ ವ್ಯವಹಾರದಲ್ಲಿ ಮಿಶ್ರಫಲವಿದೆ. ಪೂರ್ವಾರ್ಧವು ಪ್ರತಿಕೂಲವಿದ್ದರೆ, ಉತ್ತರಾರ್ಧವು ಉತ್ತೇಜಕವಿದೆ. ಫೌಜುದಾರಿ ವ್ಯಾಜ್ಯಗಳಿಗೆ ಪ್ರತಿಕೂಲವಿದ್ದರೆ, ದಿವಾಣಿ ವ್ಯಾಜ್ಯಗಳಿಗೆ ಅನುಕೂಲವಿದೆ.

ಈ ರಾಶಿಯ ನೌಕರವರ್ಗದವರಿಗೆ ಮಿಶ್ರ ಫಲದಾಯಕ ವರುಷವಿದ್ದು. ನವೆಂಬರ ೩ ರಿಂದ ಡಿಶೆಂಬರ ೧೫ರ ವರೆಗೆ, ಫೆಬ್ರುವರಿ ೧೨ ರಿಂದ ಮಾರ್ಚ ೧೫ರ ವರೆಗೆ, ಜೂನ ೧೫ ರಿಂದ ಜುಲೈ ೧೫ರ ವರೆಗಿನ ಕಾಲ ಪ್ರತಿಕೂಲವಿದ್ದು, ವರಿಷ್ಠರ ಕಿರುಕುಳ, ನೌಕರಿಯಲ್ಲಿ ಅಸ್ಥಿರತೆ, ಹಿಂಬಡತಿ, ಮೊದಲಾದ ಅಶುಭಘಟನೆಗಳು ಜರುಗಿದರೆ. ಡಿಶೆಂಬರ ೧೫ ರಿಂದ ಫೆಬ್ರುವರಿ ೧೨ರ ವರೆಗೆ, ಹಾಗು ಮಾರ್ಚ ೧೫ ರಿಂದ ಜೂನ ೧೫ರ ವರೆಗೆ, ಜುಲೈ ೧೫ ರಿಂದ ಅಕ್ಟೋಬರ ೧೮ವರೆಗಿನ ಕಾಲ ಪ್ರೋತ್ಸಾಹದಾಯಕವಾಗಿದ್ದು ನೌಕರಿಯಲ್ಲಿ ಬಡತಿ, ಅನುಕೂಲ ಜಾಗೆಗೆ ಬದಲಿ ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ, ಹಂಗಾಮಿ ನೌಕರರಿಗೆ ನೌಕರಿಯಲ್ಲಿ ಸ್ಥಿರತೆ, ಮೊದಲಾದ ಶುಭಘಟನೆಗಳು ಜರಗುವವು. ಇನ್ನೊಂದು ಮಹತ್ವದ ಸಂಗತಿಯೆಂದರೆ, ಫೆಬ್ರುವರಿ ೩ ರಿಂದ ಜೂನ ೧೫ರ ವರೆಗಿನ ಜನ್ಮಸ್ಥ ಗುರುವಿನಿಂದಾಗಿ ನೌಕರಿಯಲ್ಲಿ ಸ್ಥಿರತೆ ಇರದು. ಖಾತೆ, ಕಚೇರಿ, ಸಂಸ್ಥೆ ಹುದ್ದೆ ದಫ್ತರಗಳ ಬದಲಾವಣೆಯಾಗುತ್ತವೆ. ಸಾಮಾನ್ಯವಾಗಿ ನೌಕರವರ್ಗದವರಿಗೆ ಮೂರು ವರುಷಕ್ಕೊಮ್ಮೆ ಬದಲಿ ಆಗುತ್ತದೆ. ಆದರೆ ಫೆಬ್ರುವರಿಯಿಂದ ಜೂನದ ವರೆಗಿನ ಜನ್ಮಸ್ಥ ಗುರುವಿನಿಂದಾಗಿ ಮೂರು ಸಾರೆ ಬದಲಿ ಆಗುತ್ತದೆ. ಈ ರಾಶಿಯ ಬಾಹ್ಯ ಹಾಗು ತಾಂತ್ರಿಕ ಕೆಲಸಗಾರರಿಗೂ, ಗಿರಣಿ ಕಾರಖಾನೆಗಳ ಕಾರ್ಮಿಕರಿಗೂ, ವರ್ಕಶಾಪ, ಮಶಿನ ಶಾಪಗಳಲ್ಲಿ ಕೆಲಸ ಮಾಡುವ ಮಶಿನರಿ ಕೆಲಸಗಾರರಿಗೂ, ಮಿಶ್ರಫಲದಾಯಕ ವರುಷವಿದು. ನವೆಂಬರ ೧೫ ರಿಂದ ಫೆಬ್ರುವರಿ ೧೨ರ ವರೆಗೆ, ಹಾಗು ಎಪ್ರೀಲ್ ೧೨ ರಿಂದ ಜೂನ ೧೨ರ ವರೆಗಿನ ಕಾಲ ಮಾತ್ರ ಪ್ರೋತ್ಸಾಹದಾಯಕವಾಗಿದ್ದು. ಈ ಅವಧಿಯಲ್ಲಿ ಅವರ ಕೆಲ ಬೇಡಿಕೆಗಳು ಈಡೇರುವವು. ಉಳಿದ ಅವಧಿ ತೀರ ಪ್ರತಿಕೂಲವಿದ್ದು, ವರಿಷ್ಠರ ಕಿರುಕುಳವನ್ನು ಎದುರಿಸಬೇಕಾಗುತ್ತದೆ. ಈ ರಾಶಿಯ ಕೃಷಿ ವರ್ಗದವರಿಗೆ ಮಿಶ್ರಫಲದಾಯಕವಿದೆ. ಪೂರ್ವಾರ್ಧವು ಪ್ರತಿಕೂಲವಿದ್ದು ಮುಂಗಾರಿ ಬೆಳೆ ಕೈ ಕೊಟ್ಟರೆ, ಉತ್ತರಾರ್ಧವು ಉತ್ಸಾಹದಾಯಕವಾಗಿದ್ದು, ಹಿಂಗಾರಿ ಬೆಳೆ ಕೈ ಹಿಡಿಯುವುದರಿಂದ ಪೂರ್ವಾರ್ಧದಲ್ಲಿ ಮಾಡಿದ ಸಾಲಗಳೆಲ್ಲ ತೀರಿಸುವುರಲ್ಲದೆ ಹೊಸದಾಗಿ ದನಕರುಗಳನ್ನು, ಬೇಸಾಯದ ಉಪಕರಣಗಳನ್ನು ಕೊಳ್ಳುವ ಶಕ್ತಿ ಬರುತ್ತದೆ. ಈ ರಾಶಿಯ ಸಾಹಿತಿ, ಕಲಾವಿದ, ಲೇಖಕ, ಶಿಕ್ಷಕ, ಅಧ್ಯಾಪಕ, ಪತ್ರಿಕೋದ್ಯಮಿ, ಪ್ರಕಾಶಕ, ಚಾರ್ಟರ್ಡ ಅಕೌಂಟಂಟ, ಡಾಕ್ಟರ, ವಕೀಲ ನ್ಯಾಯಾಧೀಶ ಮೊದಲಾದ ಬುದ್ಧಿಜೀವಿ ವರ್ಗದವರಿಗೆಲ್ಲ ಜನ್ಮಸ್ಥ ಗುರು ಹಾಗು ದ್ವಿತೀಯ ಗುರುವಿನಿಂದಾಗಿ ಪ್ರೋತ್ಸಾಹದಾಯಕ ವರುಷವಾಗಿದೆ. ಅದರಲ್ಲಿಯೂ ಮಾರ್ಚ ೧೫ ರಿಂದ ಅಕ್ಟೋಬರ್ ೧೮ರ ವರಗಿನ ಕಾಲ ಪ್ರೋತ್ಸಾಹದಾಯಕವಿದ್ದು ಈ ಕಾಲದಲ್ಲಿ ಸರಕಾರದಿಂದಲೂ ಸಂಘಸಂಸ್ಥೆಗಳಿಂದಲೂ, ಮನ್ನಣೆ, ಪುರಸ್ಕಾರ, ಪ್ರಶಸ್ತಿ, ಪದಕಗಳು, ಗೌರವ ಧನ ಲಭಿಸುವುದಲ್ಲದೆ ವಾಹನ ಮನೆ ಸಂಪಾದನೆ, ಪರದೇಶ ಪರ್ಯಟನ, ಮೊದಲಾದ ಶುಭಘಟನೆಗಳು ಜರಗುವವು.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ, ಉದ್ದಿಮೆದಾರರಿಗೂ, ಚಾಳ, ಹೋಟೆಲ, ಟಾಕೀಜ, ಗಿರಣಿ, ಕಾರಖಾನೆಗಳ ಮಾಲಕವರ್ಗದವರಿಗೂ ಪ್ರೋತ್ಸಾಹದಾಯಕ ವರುಷವಿದು. ಕಳೆದವರ್ಷ ಉಂಟಾಗಿದ್ದ ನೌಕರ ಸಮಸ್ಯೆ ಸರಕಾರದ ನಿರ್ಬಂಧನೆಗಳೆಲ್ಲವು ದೂರಾಗುವುವಲ್ಲದೆ. ನವೆಂಬರ ೧೫ ರಿಂದ ಫೆಬ್ರುವರಿ ೧೨ ರ ವರೆಗೆ ಹಾಗೂ ಮಾರ್ಚ ೧೫ ರಿಂದ ಜೂನ ೧೫ ರ ವರೆಗೆ ಮತ್ತು ಜುಲೈ ೧೫ ರಿಂದ ಅಕ್ಟೋಬರ ೧೮ ರ ವರೆಗಿನ ಕಾಲವಂತೂ ಬಹಳೇ ಉತ್ತಮವಿದ್ದು, ಈ ಕಾಲದಲ್ಲಿ ಉದ್ಯೋಗದಲ್ಲಿ ಪ್ರಗತಿ, ಹೊಸ ಉದ್ಯೋಗ ಕೈಕೊಳ್ಳುವಿಕೆ, ಇಲ್ಲವೇ ಇದ್ದ ಉದ್ಯೋಗದ ಹೊಸ ಶಾಖೆಗಳನ್ನು ತೆರೆಯುವಿಕೆ ಹೊಸದಾಗಿ


ದೀಪಾವಳಿಯ ಹಾರ್ದಿಕ ಶುಭಾಶಯಗಳು :

# ಕಲ್ಪನ ಹೋಟೆಲ್

**KALPANA HOTEL**

ಹಿರಿಯೂರು – Hiriyur

ಪ್ರಧಾನ ರಸ್ತೆ, ಚಿತ್ರದುರ್ಗ ಜಿಲ್ಲೆ

ದೀಪಾವಳಿಯ ಹಾರ್ದಿಕ ಶುಭಾಶಯಗಳು :


# ಶ್ರೀ ನಾಗಲಕ್ಷ್ಮಿ ಟೆಕ್ಸ್‌ಟೈಲ್ಸ್

**SRI NAGALAKSHMI TEXTILES**

ಗಾಂಧಿ ಸರ್ಕಲ್, ಹಿರಿಯೂರು-Hiriyur

ಚಿತ್ರದುರ್ಗ ಜಿಲ್ಲೆ

*WITH BEST COMPLIMENTS FROM :*



# SILVER PLATE

**Delicious Chinese Food**



**Behind "DEVATHA PLAZA"**

(Opp. Bishop Cotton Boy's School)

*2, Residency Road,*

*BANGALORE – 560 025.*

ಯಂತ್ರೋಪಕರಣಗಳನ್ನು, ಮಶಿನರಿ ಮೊದಲಾದ ಉದ್ಯೋಗಕ್ಕೆ ಸಂಬಂಧಿಸಿದ ಉಪಕರಣಗಳನ್ನು ಕೊಳ್ಳುವಿಕೆ ಇಲ್ಲವೇ ನವೀಕರಣ ಶಕ್ತಿ ಜರುಗುತ್ತದೆ.

ಮುಂಬರುವ ಜನ್ಮಸ್ಥ ಹಾಗೂ ದ್ವಿತೀಯ ಗುರುವಿನಿಂದಾಗಿ ಈ ರಾಶಿಯ ವಧೂವರರಿಗೆ ಈ ವರುಷ ಕಂಕಣಬಲ ಕೂಡಿಬಂದಿದೆ. ಆದರಲ್ಲಿಯೂ ಫೆಬ್ರುವರಿ ೨ ರಿಂದ ಅಕ್ಟೋಬರ ೧೮ ರ ವರೆಗಿನ ಕಾಲದಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗುವದು. ವಿವಾಹಿತ ಸ್ತ್ರೀ ಪುರುಷರಿಗೂ, ಗೃಹಿಣಿಯರಿಗೆಲ್ಲ ಮಿಶ್ರಫಲದಾಯಕ ವರುಷವಾಗಿದೆ. ಹನ್ನೆರಡನೇ ಗುರುವಿನಿಂದಾಗಿ ಕಳೆದ ವರುಷ ಒಡೆದು ಹೋಗಿದ್ದ ಏಕತ್ರ ಕುಟುಂಬ ಮತ್ತೆ ಒಂದುಗೂಡಬಹುದಾಗಿದೆ. ಆಪ್ತೇಷ್ಟರಲ್ಲಿದ್ದ ತಪ್ಪುತಿಳವಳಿಕೆ, ಮತಭೇದ ದೂರಾಗುತ್ತವೆ. ನವೆಂಬರ ೧೫ ರಿಂದ ಫೆಬ್ರುವರಿ ೧೨ ರ ವರೆಗಿನ ಕಾಲ ಎಪ್ರಿಲ್ ೧೨ರಿಂದ ಜೂನ ೧೫ ರ ವರೆಗೆ ಹಾಗೂ ಜುಲೈ ೧೫ ರಿಂದ ಅಕ್ಟೋಬರ ೧೮ರ ವರೆಗಿನ ಕಾಲವಂತೂ ಅತ್ಯಂತ ಶುಭದಾಯಕವಿದ್ದು, ಈ ಕಾಲದಲ್ಲಿ ಬೆಲೆಯುಳ್ಳ ವಸ್ತು-ವಡವೆಗಳ ಖರೀದಿಸುವಿಕೆ, ವಾಹನ ಮನೆ ಆಸ್ತಿ ಸಂಪಾದನೆ, ತೀರ್ಥ ಯಾತ್ರಾ ಸಂದರ್ಶನ, ಪರದೇಶಪರ್ಯಟನ ಮೊದಲಾದ ಶುಭ ಘಟನೆಗಳು ಜರುಗುವವು. ಈ ರಾಶಿಯ ಗರ್ಭಿಣಿಯರಿಗೆ ಮಿಶ್ರಫಲದಾಯಕ ವರುಷವಿದ್ದು ಹೆರಿಗೆಯು ಪೂರ್ವಾರ್ಧದಲ್ಲಿ ಆದರೆ ಕಷ್ಟ ಪ್ರಸವವು. ಉತ್ತರಾರ್ಧದಲ್ಲಿ ಆದರೆ ಸುಖ ಪ್ರಸವವು. ಆದರಲ್ಲಿಯೂ ಜೂನ ೧೬ ರಿಂದ ಅಕ್ಟೋಬರ ೧೮ರ ಒಳಗೆ ಆದರೆ ಗಂಡು ಸಂತಾನಯೋಗವು ಉಂಟು.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆಲ್ಲ, ಜನ್ಮಸ್ಥ ಹಾಗೂ ದ್ವಿತೀಯ ಗುರುವಿನಿಂದಾಗಿ ಪ್ರೋತ್ಸಾಹದಾಯಕ ವರುಷವಿದ್ದು ಪ್ರತ್ಯಕ್ಷ ರಾಜಕೀಯದಲ್ಲಿ ಪ್ರವೇಶಿಸಿ ವಿವಿಧ, ಸಂಘ-ಸಂಸ್ಥೆಗಳ, ನಿಗಮ, ಮಂಡಲಗಳ, ಗೌರವಾನ್ವಿತ ಸ್ಥಾನ ಮಾನ ಅಧಿಕಾರ ಪಡೆಯುವ ಸುಯೋಗವು ಇರುವುದಲ್ಲದೇ ಜಿಲ್ಲೆ, ರಾಜ್ಯ ಮಟ್ಟದ ಧುರೀಣರಾಗುವುದರಲ್ಲಿ ಸಂದೇಹವಿಲ್ಲ, ಆದರಲ್ಲಿಯೂ ನವಂಬರ ೧೫ ರಿಂದ ಜನೇವರಿ ೧೪ರ ವರೆಗೆ ಹಾಗೂ ಮಾರ್ಚ ೧೫ ರಿಂದ ಜೂನ ೧೫ ರ ವರೆಗೆ ಮತ್ತು ಜುಲೈ ೧೫ ರಿಂದ ಅಕ್ಟೋಬರ ೧೮ ರ ವರೆಗಿನ ಕಾಲ ಪ್ರೋತ್ಸಾಹ ದಾಯಕವಿದೆ. ಇದೇ ಅವಧಿಯಲ್ಲಿ ಜರುಗುವ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಅವಿರೋಧ ಆಯ್ಕೆ ಇಲ್ಲವೇ ಅತ್ಯಧಿಕ ಮತದಿಂದ ಆಯ್ಕೆ ಆಗಬಹುದಾಗಿದೆ. ಇಲ್ಲಿ ಒಂದು ಮಹತ್ವದ ಸಂಗತಿ ಎಂದರೆ ಫೆಬ್ರುವರಿ ೨ ರಿಂದ ಜೂನ ೧೬ ರ ವರೆಗಿನ ಜನ್ಮಸ್ಥ ಗುರುವಿನ ಕಾಲದಲ್ಲಿ ಚುನಾವಣೆ ಜರುಗಿದರೆ ಮತಕ್ಷೇತ್ರದಲ್ಲಿ ಬದಲಾವಣೆಯಾಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಪ್ರಗತಿದಾಯಕ ವರುಷವಾಗಿದೆ. ಕಳೆದ ವರುಷ ಅರ್ಧಕ್ಕೆ ನಿಂತ ಇಲ್ಲವೇ ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರಿಯುವುದು. ನವೆಂಬರ ೩ ರಿಂದ ಮಾರ್ಚ ೧೫ರ ವರೆಗೆ ಪರೀಕ್ಷೆಗೆ ಕಟ್ಟಿದ ವಿದಾರ್ಥಿಗಳು ಸಾದಾ ತರಗತಿಯಲ್ಲಿ ತೇರ್ಗಡೆಯಾಗುತ್ತಾರೆ. ಮಾರ್ಚ ೧೬ ರಿಂದ ಅಕ್ಟೋಬರ ೨೨ರ ವರೆಗೆ ಪರೀಕ್ಷೆಗೆಕಟ್ಟಿದ ವಿದ್ಯಾರ್ಥಿಗಳು ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗಿ, ಪ್ರಶಸ್ತಿ ಪದಕಪಡೆಯುವುರಲ್ಲದೇ ಶಿಷ್ಯವೃತ್ತಿ, ವಿದ್ಯಾರ್ಥಿ ವೇತನ ಪಡೆಯುವರು. ಹೆಚ್ಚಿನ ಶಿಕ್ಷಣಕ್ಕೆ ಪರದೇಶ ಸಂಚಾರ ಕೈಕೊಳ್ಳಬಹುದಾಗಿದೆ. ಈ ರಾಶಿಯ ವಿದ್ಯಾರ್ಥಿಗಳ ಈ ವರುಷದ ವೈಶಿಷ್ಟ್ಯವೆಂದರೆ ಶಾಲೆ ಕಾಲೇಜ, ಅಥವಾ ಕೋರ್ಸ್ ವಿಷಯಗಳನ್ನು ಈ ವರುಷ ಅನಿವಾರ್ಯವಾಗಿ ಬದಲಿಸ ಬೇಕಾಗಬಹುದಾದ ಸನ್ನಿವೇಶ ಎದುರಾಗುವುದು.

" ಸರ್ವೇ ಜನಾಃ ಸುಖಿನೋ ಭವಂತು "

# ಕಾವ್ಯಕನ್ಯೆ

— ಶಂ. ಗು. ಬಿರಾದಾರ

ಓ ಕಾವ್ಯ ಕನ್ಯೆ
ಕಾಲಕ್ಕೆ ತಕ್ಕಂತೆ ಪಾತ್ರಹಾಕಿ
ವೇಷ ಬದಲಿಸಿ
ಕುಣಿವ ಛಲ ನಿನ್ನದು
ನೀನೊಮ್ಮೆ ರಂಭೆ
ಮತ್ತೊಮ್ಮೆ ಹಿಡಿಂಬೆ
ಆದರೂ ಕವಿಯ ಸೂತ್ರದ ಗೊಂಬೆ
ಹಿಂದೆ ಧರ್ಮ ದೀಕ್ಷೆಯ ತೊಟ್ಟು
ಪುರಾಣ ಕಥೆಗಳಿಗೆ ಮೈ ತೆರದಿಟ್ಟು
ಧೀರ ಗಂಭೀರ ನವರಸ ಭಾವಗಳಿಗೆಡೆಗೊಟ್ಟು
ಕುಣಿದ ಫಲವೇ ಮಹಾಕಾವ್ಯಗಳ ಹುಟ್ಟು
ಶರಣರನುಭಾವದುಸಿರಾಗಿ
ಹರಿದಾಸರ ಹಾಡಿಗೆ ಹಸಿರಾಗಿ
ಕುಣಿದ ನೆನಪೂ ಮಾಸಿಲ್ಲ
ನವೋದಯದ ರಮಣೀಯ ದೃಶ್ಯಕೆ ಸೋತೆ
ಮೂಡಿ ಬಂತು ನವಯುಗದ ಭಾವಗೀತೆ
ಶ್ರೀ ಬೇಂದ್ರೆ ಕುವೆಂಪು ಪುಂಗಿಯೂದಿದರು
ನಾನಾ ಭಂಗಿಯಲಿ ನೀ ಕುಣಿದೆ
ಕುಣಿದು ಕುಣಿದು ದಣಿದಾಗ
ಹೆಜ್ಜೆ ತಪ್ಪಿ ತಾಳಮೇಳವಿಲ್ಲದಂತಾಗಿ
ಮೂಡಿ ಬಂತು ನವ್ಯಗೀತೆ
ನವ್ಯ ಡೊಂಬರಾಟದ ಕಸರತ್ತು ಸಾಕಾಗಿ
ದೀನ ದಲಿತರ ಕೂಗಿನೆಡೆಸಾಗಿ
ಬಡಕುಟೀರ ಹೊಕ್ಕು
ಕೊಳಚೆ ಕಸ ಕಂಡು
ತುಳಿತಕ್ಕೊಳಗಾದವರ ನೋವನುಂಡು
ಹಾರಿಸಿದೆ ಸಿಡಿಗುಂಡು
ಇದನ್ನನುಸರಿಸಿಯೇ ಬಂತು ಬಂಡಾಯ
ಸಂಪ್ರದಾಯ ಶೋಷಣೆಗಳ ಮೇಲೆಗದೆಯೆತ್ತಿ
ರಮ್ಯ ಕವಿಗಳನು ಜರೆದು ಮೂಲೆಗೊತ್ತಿ
ನಿನ್ನನ್ನು ಚಂಡಿಚಾಮುಂಡಿಯನ್ನಾಗಿ ಮಾಡಿ
ಆಗಾಗ ಬಟ್ಟೆಬರೆ ಕಳಚಿ ಬೀದಿಗಿಳಿಸಿದರು
ಒಮ್ಮೊಮ್ಮೆ ಮಾತಿನ ಮುಸೆದಾಟದಲಿ
ತಾವು ತಾವೇ ಕರಾಟೆಯಾಡಿದರು
ಈ ಪುಂಡರ ಮೇಳದಲಿ
ಗಂಡುಬೀರೆಯಾಗಿ ಕುಣಿದ ನಿನಗೆ
ಮತ್ತೆ ರಮಣೀಯ ಸೊಬಗಿನ
ಲಜ್ಜಾನ್ವಿತ ಕನ್ಯೆಯಾಗಲು ಸಾಧ್ಯವೆ?



# ನನ್ನ ಹಾಡು

ಇವರಿಗಾಗಿ
ಅಂಧಃಕಾರವನ್ನೆತ್ತಿ
ಗಟಗಟ ಕುಡಿದು
ಬೆಳಕು ಸಿರಿಗೆಯು
ಚಿಮ್ಮಿ, ನಡೆಯಬೇಕು.

ಇವರಿಗಾಗಿ ನನ್ನ
ರಾತ್ರಿಗಳ ಕೊಟ್ಟು
ಕನಸುಗಳ ಕೊಟ್ಟು
ಕಣ್ಣನ್ನೆ ಕೊಟ್ಟು
ಅಂಧಳಾಗಬೇಕು.

ಇವರಿಗಾಗಿ ನನ್ನ
ಮನದ ತಂಪನ್ನೇ ನೀಡಿ
ರಕ್ತದ ಕೆಂಪನ್ನೇ ನೀಡಿ
ಇವರ ಕೋಪ–ತಾಪದ
ಕುಂಕುಮ ಹಚ್ಚಬೇಕು.

ಇವರಿಗಾಗಿ ನನ್ನ
ವಸಂತಗಳ ತೇಯ್ದು
ಗಾಯಗಳ ತೀಡಿ
ರೆಕ್ಕೆಗಳನ್ನೇ ಕಿತ್ತು ಗಾಳಿ
ಬೀಸುತ್ತ ಒಳಗೊಳಗೆ
ಕೊರಗುತ್ತ ಸೊರಗಿದರೂ
ಬನದ ಕೋಗಿಲೆಯಾಗಿ
ಹಾಡಬೇಕು.

ಇವರಿಗಾಗಿ ನನ್ನ
ಎಲ್ಲ ಸಮರ್ಪಣೆ ಮಾಡಿ
ಸುಟ್ಟುಕೊಳ್ಳುತ್ತ ಇಲ್ಲವಾಗಿ
ಸತ್ತು, ಸಾಯಲು ಮತ್ತೆ
ಹುಟ್ಟಬೇಕು, ಸೀತಾ ಸಾವಿತ್ರಿ
ಪಟ್ಟ ಪಡೆಯಬೇಕು.

ಇರಬೇಕು ನಾನೀಗ ನನ್ನ
ಕನಸು ಕಲ್ಪನೆಗಾಗಿ
ಬುದ್ಧಿ ಭಾವಕ್ಕಾಗಿ
ಆತ್ಮ ಗೌರವಕ್ಕಾಗಿ
ನನಗಾಗಿ ನಾನಾಗಿ
ಇರಲೇಬೇಕು.
ದೋಚಿದವರನ್ನೂ
ಪಕ್ಕಕ್ಕೆ ಸರಿಸರಿಸಿ
ನನ್ನದಾರಿಯ ನಾ
ಕಾಣಬೇಕು.

**ಮಾಲತಿ ಪಟ್ಟಣಶೆಟ್ಟಿ**



# ಮಹಾಕವಿ ಕಾಳಿದಾಸನ
# ವಿಕ್ರಮೋರ್ವಶೀಯಮ್

ನಿರೂಪಣೆ. ಪ್ರಲ್ಹಾದ ಪಂಢರಿ . ಚಿತ್ರ. ಕೆ.ಬಿ.ಕುಲಕರ್ಣಿ

ಊರ್ವಶೀ ಮತ್ತು ಪುರೂರವರ ಕಥೆ ತುಂಬ ಪ್ರಾಚೀನ. ವೈದಿಕ ಸೂಕ್ತಗಳಲ್ಲಿ ಪುರೂರವ ಊರ್ವಶಿಯರ ಸಂವಾದ ಸೂಕ್ತ ಪ್ರಧಾನವಾದುದು. ಈ ಸೂಕ್ತದಲ್ಲಿ ೧೮ ಮಂತ್ರಗಳಿವೆ. ಪುರೂರವ ಮಾನವ, ಊರ್ವಶೀ ಅಪ್ಸರೆ. ಭಾಗವತ, ಪದ್ಮಪುರಾಣ, ಮತ್ಸ್ಯಪುರಾಣ ಮತ್ತು ಕಥಾಸರಿತ್ಸಾಗರಗಳಲ್ಲಿ ಪುರೂರವ ಊರ್ವಶಿಯರ ಕಥೆಗಳು ಬರುತ್ತವೆ. ಕಾಳಿದಾಸನು ಬರೆದ ವಿಕ್ರಮೋರ್ವಶೀಯಕ್ಕೆ ಇವೆಲ್ಲ ಆಕರಗಳು. ಆದರೆ ಹೆಚ್ಚಾಗಿ ನಾಟಕವು ಮತ್ಸ್ಯ ಪುರಾಣದ ಕಥೆಯನ್ನು ಹೋಲುತ್ತಿದೆಯೆಂದು ವಿದ್ವಾಂಸರ ಅಭಿಪ್ರಾಯ.

ಮಹಾಕವಿ ಕಾಳಿದಾಸನು ಬರೆದ ಮೂರು ನಾಟಕಗಳಲ್ಲಿ ಒಂದಾದ ವಿಕ್ರಮೋರ್ವಶೀಯಮ್ ಒಂದು ತ್ರೋಟಕ. "ಸಪ್ತಾಷ್ಟ ನವಪಂಚಾಂಕಂ ದಿವ್ಯಮಾನುಷ ಸಂಶ್ರಯಂ। ತ್ರೋಟಕಂನಾಮ ತತ್‌ಪ್ರಾಹುಃ ಪ್ರತ್ಯಂಕಂ ಸವಿದೂಷಕಂ" ಎಂದು ಅದರ ಲಕ್ಷಣ. ವೈದಿಕ ಕಥೆಯಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿರುವ ಕಾಳಿದಾಸನು ಮೊದಲನೆಯ ಅಂಕದಲ್ಲಿ ಊರ್ವಶೀ ರಕ್ಷಣೆಯನ್ನು ನಡುವಿನ ಮೂರು ಅಂಕಗಳಲ್ಲಿ ವಿರಹಕಾತರತೆ ಶೃಂಗಾರಗಳನ್ನು ಚಿತ್ರಿಸಿ ಕೊನೆಯ ಅಂಕದಲ್ಲಿ ಪುರೂರವನಿಗೆ ಪುತ್ರಲಾಭವಾದುದನ್ನು ನಿರೂಪಿಸಿದ್ದಾನೆ.

ಪುರೂರವನು ಚಂದ್ರನ ಮೊಮ್ಮಗ. ಚಂದ್ರರಥ, ಚಂದ್ರಧ್ವಜ ಆತನೊಮ್ಮೆ ಸೂರ್ಯೋಪಸ್ಥಾನ ಮಾಡಿಕೊಂಡು ಬರುತ್ತಿರುವಾಗ "ರಕ್ಷಿಸಿರಿ, ದೇವತಾ ಪಕ್ಷಪಾತಿಗಳಾದ ಹಾಗು ಗಗನದಲ್ಲಿ ಸಂಚರಿಸುವವರು ರಕ್ಷಿಸಿರಿ" ಎಂಬ ಆರ್ತಧ್ವನಿ ಕೇಳಿಸುತ್ತದೆ. "ಕುಬೇರನ ಅರಮನೆಯಿಂದ ಹಿಂತಿರುಗಿ ಬರುವಾಗ ಕೇಶಿಯೆಂಬ ದಾನವನು ಊರ್ವಶಿಯನ್ನು ಹಾಗೂ ಅವಳ ಗೆಳತಿ ಚಿತ್ರಲೇಖೆಯನ್ನು ಹಿಡಿದುಕೊಂಡು ಹೋದ" ಎಂದು ರಂಭೆ ಮೊದಲಾದ ಅಪ್ಸರೆಯರು ತಮ್ಮ ಸಮೀಪ ಬಂದ ಪುರೂರವನಿಗೆ ಹೇಳುತ್ತಾರೆ.

"ನಿಮ್ಮ ಗೆಳತಿಯನ್ನು ಇಷ್ಟರಲ್ಲೇ ಕರೆದುಕೊಂಡು ಬರುವೆ" ಎಂದು ಪುರೂರವನು ಅವರಿಗೆ ಸಮಾಧಾನ ಹೇಳಿ ತನ್ನ "ರಥವನ್ನು ಈಶಾನ್ಯ ದಿಕ್ಕಿನೆಡೆ ಕರೆದೊಯ್ಯು" ಎಂದು ಸಾರಥಿಗೆ ಹೇಳುವನು.

ಪುರೂರವನು ಕೇಶಿಯನ್ನು ವಾಯುವ್ಯಾಸ್ತ್ರದಿಂದ ಹೊಡೆದೋಡಿಸಿ ತನ್ನ ರಥದಲ್ಲಿ ಊರ್ವಶಿ ಹಾಗೂ ಅವಳ ಗೆಳತಿ ಚಿತ್ರಲೇಖೆಯನ್ನು ಕರೆದುಕೊಂಡು ಬರುತ್ತಿರುತ್ತಾನೆ. ನಾರಾಯಣನ ತೊಡೆಯಿಂದ ಹುಟ್ಟಿದ ಊರ್ವಶಿಯನ್ನು ನೋಡಿ ಪುರೂರವನಲ್ಲಿ ಅನುರಾಗ ಮೂಡುತ್ತದೆ. "ಇವಳನ್ನು ಚಂದ್ರನು, ಇಲ್ಲವೆ ಮದನ ಅಥವಾ ವಸಂತನು ಹುಟ್ಟಿಸಿರಬೇಕು. ವಿಷಯಗಳಿಂದ ದೂರನಾದ, ವೇದಾಭ್ಯಾಸ ಜಡನಾದ ವಿಧಿಯು ಹುಟ್ಟಿಸಿರಲಾರ" ಎನ್ನುತ್ತಾನೆ ಆತ. ರಥದ ಕುಲುಕಾಟದಲ್ಲಿ ಅವಳ ದೇಹ ಇವನ ಮೈಗೆ ತಾಗಿದಾಗ ಇವನಿಗೆ ಆನಂದದ ಪುಳಕ. ಹೇಮಕೂಟ ಪರ್ವತದಲ್ಲಿ ಅಪ್ಸರೆಯರು ಇವರಿಗಾಗಿ ಕಾದಿರುತ್ತಾರೆ. ಊರ್ವಶಿ ತನ್ನ ರಕ್ಷಕನನ್ನು ನೋಡಿ ಚಂಚಲಮನಸ್ಕಳಾಗುತ್ತಾಳೆ. ಅಷ್ಟರಲ್ಲಿ ಚಿತ್ರರಥನೆಂಬ ಗಂಧರ್ವರಾಜನು ದೇವೇಂದ್ರನ ಹೇಳಿಕೆಯಂತೆ ಅಲ್ಲಿಗೆ ಬರುತ್ತಾನೆ. "ಅವಳನ್ನು ಸೃಷ್ಟಿಸಿ ನಾರಾಯಣನು ಇಂದ್ರನಿಗೆ ಕೊಟ್ಟ. ದೈತ್ಯನ ಕೈಯಿಂದ ಪಾರು ಮಾಡಿ ಆಕೆಯನ್ನು ನೀನೀಗ ಸ್ನೇಹಿತನಿಗೆ ಒಪ್ಪಿಸಿದೆ" ಎಂದು ಅವನು ಪುರೂರವನನ್ನು ಪ್ರಶಂಸಿಸುತ್ತಾನೆ. ಊರ್ವಶಿ ತನಗೆ ಉಪಕಾರ ಮಾಡಿದ ರಾಜರ್ಷಿಗೆ ತಾನು "ಹೋಗಿ ಬರುವದಾಗಿ" ಹೇಳಲು ಚಿತ್ರಲೇಖೆಗೆ ಕೇಳಿಕೊಳ್ಳುತ್ತಾಳೆ. ಅನಂತರ ಚಿತ್ರರಥನೊಂದಿಗೆ ಅವರೆಲ್ಲ ದೇವಲೋಕಕ್ಕೆ ಹೋಗುವರು.

ಸುರಲೋಕಸುಂದರಿಯ ದರ್ಶನದಿಂದ ಕಾಮನಬಾಣಕ್ಕೆ ಸಿಕ್ಕ ರಾಜನು ವಿದೂಷಕನೊಂದಿಗೆ ಉದ್ಯಾನದಲ್ಲಿ ಅಲೆದಾಡತೊಡಗಿದ. ಅವನಂತೆಯೇ ವಿರಹಪೀಡಿತಳಾದ ಊರ್ವಶಿಯು ಗೆಳತಿ ಚಿತ್ರಲೇಖೆಯೊಂದಿಗೆ ಅಲ್ಲಿಗೆ ಬರುವಳು "ನಾನು ಹೃದಯವನ್ನು ಮುಂದೆ ಕಳಿಸಿರುವೆ. ಮದನನು ನನ್ನನ್ನು ಕರೆದೊಯ್ಯುತ್ತಿರುವ. ನಾನೇನು ವಿಚಾರಿಸಲಿ" ಎಂದಾಕೆ ಚಿತ್ರಲೇಖೆಗೆ ಹೇಳುತ್ತಾಳೆ. ಅವರಿಬ್ಬರೂ ಅದೃಶ್ಯರಾಗಿ ಬಂದಾಗ ರಾಜನು "ಅವಳಿಗೆ ನನ್ನ ಮನೋವೇದನೆ ತಿಳಿದಿಲ್ಲ. ತನ್ನ ಸಾಮರ್ಥ್ಯದಿಂದ ತಿಳಿದಿದ್ದರೂ ನನ್ನನ್ನೂ ತಿರಸ್ಕರಿಸಿರುವಳೇ" ಎಂದು ತನ್ನ ವಿರಹಕಾತರತೆಯನ್ನು ತೋಡಿಕೊಳ್ಳುತ್ತಿರುತ್ತಾನೆ. ಊರ್ವಶಿ ಅದನ್ನು ಕೇಳಿ ತನ್ನ ಮನೋಗತವನ್ನು ಭೂರ್ಜಪತ್ರದ ಮೇಲೆ ಬರೆದು ರಾಜನಿಗೆ ಅದು ಸಿಕ್ಕುವಂತೆ ಮಾಡುತ್ತಾಳೆ. "ನಿನ್ನಲ್ಲಿ ಅನುರಕ್ತಳಾದ ನನಗೆ ಪಾರಿಜಾತದ ಹೂಗಳ ಮೇಲೆ ಮಲಗಿದಾಗಲೂ ನಂದನವನದ ಗಾಳಿಯು ಬಿಸಿಯೆನ್ನಿಸುತ್ತದೆ" ಎಂದು ಆಕೆಯ ಪತ್ರದಲ್ಲಿರುತ್ತದೆ. ಆ ಪತ್ರವನ್ನು ಓದಿ ರಾಜನು ವಿದೂಷಕನ ಕೈಯಲ್ಲಿ ಕೊಡುತ್ತಾನೆ. ಚಿತ್ರಲೇಖೆ ಹಾಗು ಊರ್ವಶಿಯರು ಪ್ರಕಟವಾಗಿ "ಜಯತು ಜಯತು ಮಹಾರಾಜ" ಎನ್ನುತ್ತಾರೆ. "ನಿನ್ನ ಜಯ





*Wish you all Happy,*
*Prosperous & Colourful*
*Deepavali*



UPER
**Foto**
**VISION**
COLOUR LAB.

ಫೋಟೊ ವಿಜನ್
ವಿಶೇಷ ಕೊಡುಗೆ
ವರ್ಣರಂಜಿತ ಕಲರ್
ಫೋಟೋಗಳು
ಕೇವಲ ರೂ. 2.25 ಮಾತ್ರ!

**SAME DAY SERVICE COLOUR PHOTOS**

*Rs.* **2.25** *ONLY*
*POST CARD SIZE*

FREE
ONE PHOTO ALBUM *FREE*
WITH EVERY ROLL!
ON D/P ORDER ONLY

- Postal service: send your exposed rolls & get prints by V.P.P.
- we also deal in Photographic material: colour films & Photos Albums

Aditya Arts

**UPER FOTO VISION COLOUR LAB.**
T.B.Road, Moti Complex,
Celler Floor, Jayadeva Circal,
**DAVANGERE-570002.**

ABOVE RATES ARE ONLY FOR DEVELOPING
& PRINTING ORDERS

(M. K Publicity)

WISH YOU HAPPY DIPAVALI
AND PROSPEROUS NEW YEAR

# LUXURY FOAM MATTRESS



## Foam Beds, Pillows & Cushions etc.

**B. MAHENDRA & BROS**
Durgad Bail, Fort, HUBLI-580020 • Phone 65651

## you are entitled to a somewhat greater choice



**CURTAINS, FURNISHINGS FOAM MATTRESSES, PILLOWS CUSHIONS, JUTE CARPETS & REXINE ETC.**

M.K.P.





ಶಬ್ದದಿಂದ ನನಗೆ ನಿಜಕ್ಕೂ ಜಯವಾಗಿದೆ" ಎಂದು ರಾಜನು ಉತ್ತರಿಸಿ, ಅವಳ ಕೈ ಹಿಡಿದು ತನ್ನ ಆಸನದ ಬಳಿ ಕೂಡಿಸಿಕೊಳ್ಳುತ್ತಾನೆ. ಅಷ್ಟರಲ್ಲಿ ದೇವದೂತನೊಬ್ಬನು ಬಂದು ಚಿತ್ರಲೇಖೆ ಹಾಗು ಉರ್ವಶಿಯರಿಗೆ "ನಾಟ್ಯ ಪ್ರಯೋಗಕ್ಕೆ ಬರಬೇಕು" ಎಂಬ ದೇವೇಂದ್ರನ ಅಪ್ಪಣೆಯನ್ನು ತಿಳಿಸುತ್ತಾನೆ. "ದೇವರಾಜನ ಆಜ್ಞೆಗೆ ನಾನು ಅಡ್ಡ ಬರುವದಿಲ್ಲ. ಆದರೆ ನನ್ನನ್ನು ಮರೆಯದಿರಿ" ಎಂದು ಹೇಳಿ ಪುರೂರವನು ಅವರನ್ನು ಕಳಿಸುತ್ತಾನೆ. ಉರ್ವಶಿಯು ವಿಯೋಗ ದುಃಖಪೀಡಿತಳಾಗಿ ಗೆಳತಿಯೊಂದಿಗೆ ಹೋಗುತ್ತಾಳೆ. ಉರ್ವಶಿಯನ್ನು ರಾಜನು ಪ್ರೀತಿಸುತ್ತಿರುವ ವಿಷಯವು ಆಗಲೇ ರಾಣಿಗೆ ತಿಳಿದಿರುತ್ತದೆ. ರಾಣಿಯು, ದಾಸಿ ನಿಪುಣಿಕೆಯೊಂದಿಗೆ ಉದ್ಯಾನಕ್ಕೆ ಬರುವಾಗ ಭೂರ್ಜಪತ್ರವು ಆಕೆಗೆ ಸಿಕ್ಕು ಸಂದೇಹವು ಹೆಚ್ಚುತ್ತದೆ. ಅದನ್ನು ರಾಜನು ಹುಡುಕುತ್ತಿರುವಾಗ ರಾಣಿಯು ಅಲ್ಲಿಗೆ ಬಂದು "ಆರ್ಯಪುತ್ರ ಚಿಂತಿಸಬೇಡ, ಇದೋ ಇಲ್ಲಿದೆ ಭೂರ್ಜಪತ್ರ" ಎನ್ನುತ್ತಾಳೆ. ಗೊಂದಲದಲ್ಲಿ ಬಿದ್ದ ರಾಜನು ರಾಣಿಯನ್ನು ಸ್ವಾಗತಿಸುತ್ತಾನೆ. "ಕಳ್ಳನು ಮಾಲಿನೊಂದಿಗೆ ಸಿಕ್ಕಿಬಿದ್ದಾಗ ಏನು ಉತ್ತರಕೊಡಬಲ್ಲ" ಎಂದಾಗ ವಿದೂಷಕ ನೆನ್ನುತ್ತಾನೆ. ರಾಜನು "ನಾನು ಇದನ್ನು ಹುಡುಕುತ್ತಿರಲಿಲ್ಲ, ಬೇರೊಂದನ್ನು ಹುಡುಕುತ್ತಿದ್ದೆ" ಎಂದು ರಾಣಿಗೆ ಹೇಳುತ್ತಾನೆ.

"ಇದು ನಿಮ್ಮ ತಪ್ಪಲ್ಲ, ನಾನು ಬೇಡವಾದಾಗಲೂ ನಿಮ್ಮೆದುರು ಬಂದಿರುವದು ನನ್ನ ತಪ್ಪು" ಎನ್ನುತ್ತ ರಾಣಿಯು ಸಿಟ್ಟಿನಿಂದ ಹೋಗತೊಡಗುತ್ತಾಳೆ. ರಾಜನು ಅವಳಿಗೆ ನಮಸ್ಕರಿಸಿದರೂ ಆಕೆ ನಿಲ್ಲುವದಿಲ್ಲ.

ಇತ್ತ ದೇವಸಭೆಯಲ್ಲಿ ಸರಸ್ವತಿಯು ರಚಿಸಿದ ಲಕ್ಷ್ಮೀಸ್ವಯಂವರ ನಾಟಕದ ಅಭಿನಯವು ನಡೆದಾಗ ಲಕ್ಷ್ಮಿಯ ಪಾತ್ರ ವಹಿಸಿದ ಉರ್ವಶಿಗೆ ವಾರುಣಿ ಕೇಳುತ್ತಾಳೆ. "ನೀನು ಯಾರನ್ನು ವರಿಸುತ್ತೀಯೆ"? ಉರ್ವಶಿಯು "ಪುರುಷೋತ್ತಮನನ್ನು" ಎನ್ನುವ ಬದಲು "ಪುರೂರವ"ನನ್ನು ಎನ್ನುತ್ತಾಳೆ. ಭರತಮುನಿಯು ದೇವಲೋಕ ಬಿಟ್ಟುಹೋಗುವಂತೆ ಆಕೆಗೆ ಶಾಪ ಕೊಡುತ್ತಾನೆ. ನಾಟಕಾಂತ್ಯದಲ್ಲಿ ಅನುಕಂಪದಿಂದ ಇಂದ್ರನು "ರಾಜರ್ಷಿ ಪುರೂರವನ ಸಂತಾನ ದರ್ಶವಾಗುವವರೆಗೆ ಅಲ್ಲಿದ್ದು ಪುನಃ ದೇವಲೋಕಕ್ಕೆ ಬಾ" ಎಂದು ಹೇಳುವನು.

ಕಾಶೀರಾಜನ ಪುತ್ರಿಯಾದ ಪುರೂರವನ ರಾಣಿಯು 'ಮಣಿಹರ್ಮ್ಯ'ದ ಮೇಲೆ ರೋಹಿಣಿಚಂದ್ರ ಸಮಾಗಮೋತ್ಸವ ಮಾಡಲು ನಿರ್ಧರಿಸಿ ಅದಕ್ಕೆ ಬರಲು ತನ್ನ ಪತಿಗೆ ಹೇಳಿ ಕಳಿಸುತ್ತಾಳೆ. ವಿದೂಷಕನೊಂದಿಗೆ ಪುರೂರವನು ಅಲ್ಲಿಗೆ ಆಗಮಿಸುತ್ತಾನೆ. "ನೀನು ನಮಸ್ಕರಿಸಿದರೂ ಸಿಟ್ಟಿನಿಂದ ಹೋದ ರಾಣಿಯು ಪಶ್ಚಾತ್ತಾಪದಿಂದ ಈ ವ್ರತಕ್ಕಾಗಿ ನಿನ್ನನ್ನು ಇಲ್ಲಿಗೆ ಕರೆಯಿಸಿದ್ದಾಳೆ" ಎನ್ನುತ್ತಾನೆ ವಿದೂಷಕ. "ಸಮಾಗಮ ಸುಖಕೆ ವಿಘ್ನಗಳು ಬಂದಷ್ಟೂ ಆಶೆ ಪ್ರಬಲಿಸುತ್ತದೆ" ಎಂದು ಪುರೂರವನು ಹೆಚ್ಚು ಕಾತರ ವ್ಯಕ್ತಪಡಿಸುತ್ತಾನೆ,

"ನಿನ್ನ ಪ್ರಿಯೆಯೊಂದಿಗೆ ಸಮಾಗಮವಾಗುವ ಸಮಯ ದೂರವಿಲ್ಲ" ಬ್ರಾಹ್ಮಣನ ವಚನವು ಸುಳ್ಳಾಗುವದಿಲ್ಲ" ಎಂದು ವಿದೂಷಕನು ರಾಜನಿಗೆ ಸಮಾಧಾನ ನೀಡುತ್ತಾನೆ.

ಅಭಿಸಾರಿಕೆಯಂತೆ ಉಡುಪು ಧರಿಸಿದ ಉರ್ವಶಿಯು ಚಿತ್ರಲೇಖೆಯೊಂದಿಗೆ ಅಲ್ಲಿಗೆ ಬರುತ್ತಾಳೆ. "ರಾತ್ರಿ ಹೆಚ್ಚಿದಂತೆ ಮದನ ಬಾಧೆ ಹೆಚ್ಚುತ್ತದೆ" ಎಂದು ರಾಜನು ತನ್ನ ದುಃಖವನ್ನು ವಿದೂಷಕನಿಗೆ ನಿವೇದಿಸುತ್ತಾನೆ. ಅವನ ಪ್ರೇಮಾಲಾಪಗಳನ್ನು ಕೇಳಿದ ಉರ್ವಶಿಯು ಸಂತೋಷಹೊಂದಿ ಇನ್ನೇನು 'ತಿರಸ್ಕರಣಿ'ಯನ್ನು ತ್ಯಜಿಸಿ ಪ್ರಕಟವಾಗಬೇಕೆನ್ನುವಷ್ಟರಲ್ಲಿ ರಾಣಿಯು ಪೂಜಾದ್ರವ್ಯಗಳೊಂದಿಗೆ ಅಲ್ಲಿಗೆ ಆಗಮಿಸುತ್ತಾಳೆ. "ಆರ್ಯಪುತ್ರನಿಗೆ ಜಯವಾಗಲಿ."

"ದೇವಿಗೆ ಸ್ವಾಗತವು" ರಾಜನೆನ್ನುತ್ತಾನೆ. ತಮ್ಮಿಬ್ಬರಲ್ಲಿಯ ಮನಸ್ತಾಪವನ್ನು ದೂರ ಮಾಡಲೆಂದೇ ರಾಣಿಯು ಈ "ಪ್ರಿಯ ಪ್ರಸಾದನ" ವ್ರತ ಕೈಕೊಂಡಿರುತ್ತಾಳೆ. ಹೂವು ಗಂಧಗಳಿಂದ ರಾಣಿಯು ಚಂದ್ರನನ್ನು ಪೂಜಿಸಿ ವಿದೂಷಕ ಮಾಣವಕನಿಗೆ ಸಿಹಿಯನ್ನು ಕೊಡುವಳು "ನಿನಗೆ ಮಂಗಲ





ವಾಗಲಿ. ನಿನ್ನ ವ್ರತವು ಫಲಪ್ರದವಾಯಿತು" ಎಂದಾತನು ರಾಣಿಯನ್ನು ಆಶೀರ್ವದಿಸುವನು. ರಾಜನಿಗೆ "ಆರ್ಯಪುತ್ರನು ಪ್ರೀತಿಸಿದ ಅಥವಾ ಅವನನ್ನು ಪ್ರೀತಿಸುವವಳ ಸಮಾಗಮವಾಗಲಿ" ಎಂದು ಹೇಳಿ ರಾಣಿಯು ಅಲ್ಲಿಂದ ಹೋಗುವಳು.

"ಅದೃಶ್ಯಳಾಗಿರುವ ಉರ್ವಶಿಯ ನೂಪುರ ಶಬ್ದಗಳು ನನಗೆ ಕೇಳಿಸಲಿ, ಅವಳ ಕೈಗಳು ನನ್ನ ಕಣ್ಣು ಮುಚ್ಚಲಿ" ಎಂದು ರಾಜನು ಇಚ್ಛಿಸುತ್ತಿರುವಾಗ ಉರ್ವಶಿಯು ಅವನ ಇಚ್ಛೆ ಈಡೇರಲಿ" ಎಂದು ರಾಜನ ಕಣ್ಣು ಮುಚ್ಚುತ್ತಾಳೆ. ಕೂಡಲೇ ಅವನೆದುರು ನಿಲ್ಲುತ್ತಾಳೆ. "ಮಹಾರಾಜನಿಗೆ ಜಯವಾಗಲಿ." ಅವಳನ್ನು ಸ್ವಾಗತಿಸಿ ರಾಜನು ತನ್ನ ಬಳಿಯಲ್ಲಿ ಕೂಡಿಸಿಕೊಳ್ಳುತ್ತಾನೆ.

"ರಾಣಿಯು ಔದಾರ್ಯದಿಂದ ನಿಮ್ಮನ್ನು ನನಗೆ ಕೊಟ್ಟಿರುವಳು" ಎಂದು ಉರ್ವಶಿ ನುಡಿಯುವಳು.

"ಹಾಗಾದರೆ ನನ್ನ ಹೃದಯವನ್ನು ಕದಿಯಲು ನಿನಗೆ ಮೊದಲು ಯಾರು ಅನುಮತಿ ನೀಡಿದ್ದರು" ಎನ್ನುತ್ತಾನೆ ರಾಜ

"ನಿನ್ನನ್ನು ಸೇರಿದ ನನ್ನ ಸಖಿಯು ಸ್ವರ್ಗವನ್ನೂ ಬಯಸಲಾರಳು" ಎಂದು ನುಡಿದ ಚಿತ್ರಲೇಖೆ, ಅಲ್ಲಿಂದ ಹೊರಡುತ್ತಾಳೆ.

"ಏಕಛತ್ರಾಧಿಪತಿಯಾದ ನನಗೆ ನಿನ್ನ ದಾಸನಾಗಿರುವದರಲ್ಲೇ ಕೃತಾರ್ಥನೆನಿಸುತ್ತದೆ" ಎಂದು ರಾಜನು ಹೇಳಿದಾಗ ಉರ್ವಶಿಯು "ಇದಕ್ಕಿಂತ ಪ್ರಿಯತರವಾದುದನ್ನು ಹೇಳಲು ನನ್ನಲ್ಲಿ ಶಬ್ದಗಳಿಲ್ಲ"ವೆಂದು ಉತ್ತರಿಸುತ್ತಾಳೆ.

"ನಾನು ವಿಲಂಬಮಾಡಿ ಆರ್ಯಪುತ್ರನಿಗೆ ಅಪರಾಧವನ್ನು ಮಾಡಿದೆ" ಉರ್ವಶಿ ನುಡಿಯುತ್ತಾಳೆ.

"ದುಃಖದ ನಂತರ ಬರುವ ಸುಖವು ರಸವತ್ತರವಾಗಿರುತ್ತದೆ" ಎನ್ನುತ್ತಾನೆ ರಾಜ. ಅನಂತರ ರಾಜನು ರಾಜ್ಯವನ್ನು ಮಂತ್ರಿಗಳಿಗೊಪ್ಪಿಸಿ ಉರ್ವಶಿಯೊಂದಿಗೆ ಗಂಧಮಾದನ ಪರ್ವತಕ್ಕೆ ಹೋಗುತ್ತಾನೆ.

ಮಂದಾಕಿನಿ ನದಿತೀರದಲ್ಲಿ ಉಸುಕಿನಲ್ಲಿ ವಿಹರಿಸುತ್ತಿದ್ದ ವಿದ್ಯಾಧರ ಸುಂದರಿ ಉದಯವತಿಯನ್ನು ರಾಜನು ಆಶೆಯಿಂದ ನೋಡಿದನೆಂದು ಉರ್ವಶಿಯು ಸಿಟ್ಟಿಗೆದ್ದು ಕುಮಾರವನವನ್ನು ಪ್ರವೇಶಿಸಿದಳು. ಕೂಡಲೇ ಒಂದು ಲತೆಯಾಗಿ ಬಿಟ್ಟಳು. ಕುಮಾರವನಕ್ಕೆ ಬಂದ ಸ್ತ್ರೀಯರು ಲತೆಯಾಗಲೆಂಬ ಶಾಪವೇ ಅದಕ್ಕೆ ಕಾರಣ. ರಾಜನು ಇದನ್ನು ತಿಳಿಯದೆ ವ್ಯಾಕುಲಗೊಂಡು ಗುಡ್ಡ, ಬೆಟ್ಟ, ಕೊಳ್ಳಗಳಲ್ಲಿ ಉರ್ವಶಿಯನ್ನು ಹುಡುಕತೊಡಗಿದ. ಪ್ರೇಮೋನ್ಮಾದದಿಂದ ಹುಚ್ಚನಂತಾದ ಪುರೂರವ. "ಕಾಮಾರ್ತಾಹಿ ಪ್ರಕೃತಿ ಕೃಪಣಾಶ್ಚೇತನಾಚೇತನೇಷು" ಎಂಬಂತಾಯಿತು ಅವನಸ್ಥಿತಿ.

ನವಜಲಧರವನ್ನು ನೋಡಿ ಇದು ನನ್ನ ಉರ್ವಶಿಯಲ್ಲ ಎಂದು ಚಿಂತಿಸುತ್ತ ಪುರೂರವನು ಅಡವಿಯಲ್ಲಿ ಆಕೆಯನ್ನು ಹುಡುಕಹೊರಟ. ದಾರಿಯಲ್ಲಿ ನವಿಲು ಕಾಣಿಸಿತು. "ಎಲೈ ನೀಲಕಂಠ ನೀನು ನನ್ನ ಪ್ರೇಯಸಿಯನ್ನು ನೋಡಿರುವಿಯಾ?" ಎಂದು ರಾಜನು ನವಿಲನ್ನು ಪ್ರಶ್ನಿಸಿ ಉತ್ತರ ಪಡೆಯದೆ ಮುನ್ನಡೆಯುವ. "ಎರಡನೆಯವರ ದುಃಖದಿಂದ ಆನಂದ ಪಡೆಯುವವರನ್ನು ಕೇಳಿ ಏನು ಪ್ರಯೋಜನ?"

"ಓ, ಇಲ್ಲಿ ಕೋಗಿಲೆಯಿದೆ. ಜಾಣಪಕ್ಷಿ– ನೀನು ಮದನನ ದೂತಿ, ಮಧುರಕಂಠದ ನೀನು ನನ್ನನ್ನು ಪ್ರೇಯಸಿಯಲ್ಲಿಗೆ ಕರೆದೊಯ್ಯು" ಎಂದು ರಾಜನು ಆರ್ತನಾಗಿ ಕೋಗಿಲೆಯನ್ನು ಕೇಳುವ "ಓ ಅದು ತನ್ನ ಕಾರ್ಯದಲ್ಲಿ ನಿರತವಾಗಿದೆ." ಎರಡನೆಯವರ ದುಃಖವು ಎಷ್ಟೇ ದೊಡ್ಡದಾಗಿದ್ದರೂ ಅಪರಿಚಿತರಿಗೆ ಅದೇನೂ ತಿಳಿಯದು" ಎನ್ನುತ್ತ ಆತನು ಮುಂದುವರಿಯುವ. ನೂಪುರಗಳ ಧ್ವನಿಯಂತಹ ಧ್ವನಿ ಕೇಳಿ ರಾಜಹಂಸಗಳತ್ತ ಲಕ್ಷ್ಯಹರಿಸಿದ ಪುರೂರವನು "ಓ ಹಂಸಗಳೇ, ನನ್ನ ಕಾಂತೆಯನ್ನು ನನಗೆ ಕೊಡಿ, ನೀವು ಅವಳ ಗತಿಯನ್ನು ಅಪಹರಿಸಿರುವಿರಿ" ಎಂದು ಅಂಗಲಾಚುವನು. ಅನಂತರ ಚಕ್ರವಾಕ ಪಕ್ಷಿಗಳನ್ನು, ಭ್ರಮರಗಳನ್ನು, ಗಜರಾಜನನ್ನು "ನೀವು ಕಂಡಿರಾ ನನ್ನ ಪ್ರಣಯಿನಿಯನ್ನು "ಎಂದು ಕೇಳುತ್ತ ಹೋಗುವ "ನೀವು ನೋಡಿದಿರಾ, ನೀವು ನೋಡಿದಿರಾ?" ಎಂದು ಪರ್ವತ ಮೊದಲಾದವನ್ನು



ಆತನು ಪ್ರಶ್ನಿಸಿದಾಗ ಪ್ರತಿಧ್ವನಿ ಕೂಡ ಹಾಗೆಯೇ ಆಯಿತು.

ಅವನಿಗೆ ಕೂಡಲೇ ಅದನ್ನು ತಿಳಿಯಲೂ ಆಗಲಿಲ್ಲ! ನದಿಯ ತರಂಗಗಳನ್ನು ನೋಡಿ ಉರ್ವಶಿಯ ಭ್ರೂಭಂಗಗಳನ್ನು ನೆನಪಿಸಿಕೊಂಡ ರಾಜನು ರಕ್ತಕದಂಬವನ್ನು ಚಿಗರೆಗಳನ್ನು ನೋಡಿ "ಹರಿಣಾಕ್ಷಿಯಾದ ನನ್ನ ಉರ್ವಶಿಯನ್ನು ನೋಡಿರುವಿಯಾ?" ಎಂದು ಕೇಳುವನು. ಹೀಗೆಯೇ ಮುಂದುವರಿದಾಗ ಅವನಿಗೊಂದು ವಸ್ತು ಕಾಣುವದು. ಅದನ್ನಾತ ಕೈಗೆತ್ತಿಕೊಂಡಾಗ "ಅದು ಸಂಗಮನೀಯಮಣಿ" ಎಂದು ಆಕಾಶವಾಣಿಯಾಗುತ್ತದೆ. ಅದನ್ನು ತೆಗೆದುಕೊಂಡು ಮುನ್ನಡೆದಾಗ ಬಳ್ಳಿಯೊಂದು ಅವನನ್ನು ಆಕರ್ಷಿಸುವದು. ಅದನ್ನೇ ಅಪ್ಪಿಕೊಂಡಾಗ ಅದು ಉರ್ವಶಿಯಾಗುವದು. ಪುರೂರವ ಉರ್ವಶಿಯರು ಒಂದುಗೂಡುವರು. ವಿಹಾರಾನಂತರ ಗಂಗಾ ತೀರದ ಪ್ರತಿಷ್ಠಾನ ನಗರಕ್ಕೆ ಅವರಿಬ್ಬರೂ ಮರಳುವರು.

ಒಂದು ದಿನ ಚಿನ್ನದತಟ್ಟೆಯಲ್ಲಿ ಸಂಗಮನೀಯಮಣಿಯನ್ನು ತರುತ್ತಿರುವಾಗ ಒಂದು ಹದ್ದು ಮಾಂಸದ ತುಂಡೆಂದು ತಿಳಿದು ಅದನ್ನು ಎತ್ತಿಕೊಂಡೊಯ್ಯುವದು. ರಾಜನು ಅದನ್ನು ಕೊಲ್ಲಲೆಂದು ಬಿಲ್ಲು ಬಾಣ ತರಿಸುವ. ಅಷ್ಟರಲ್ಲಿ ಅದು ಬಾಣದ ಗುರಿಯನ್ನು ದಾಟಿ ಮುಂದೆ ಹೋಗಿರುತ್ತದೆ. ಪಕ್ಷಿಯನ್ನು ಕೊಂದು "ಸಂಗಮನೀಯ ಮಣಿ" ತರಲು ಡಂಗುರ ಸಾರಲು ರಾಜನು ಆಜ್ಞಾಪಿಸುವ. ನಿರಾಶೆಯ ಹೊತ್ತಿನಲ್ಲಿ ಕಿರಾತೆಯೊಬ್ಬಳು "ಮಹಾರಾಜ, ಇದೇ ಮಣಿ ಹಾಗು ಬಾಣ"ವೆಂದು ಮಣಿಯನ್ನು ತಂದೊ-ಪ್ಪಿಸುವಳು.

"ಬಾಣದ ಮೇಲೆ ಏನೋ ಹೆಸರಿದೆ" ಎಂದು ಕಂಚುಕಿ ರಾಜನಿಗೆ ವಿಜ್ಞಾಪಿಸುವ. ಅದನ್ನು ನೋಡಿ "ಉರ್ವಶೀ ಪುರೂರವರ ಮಗ ಆಯು ಎಂದಿದೆಯಲ್ಲ" ಎಂದು ಪುರೂರವನು ಉದ್ಗರಿಸುವ!

"ಗೆಳೆಯ ಇದು ಹೇಗೆ? ನಾನು ಉರ್ವಶಿಯನ್ನು ಬಿಟ್ಟು ಅಗಲೇ ಇಲ್ಲ. ಅವಳು ಹೆತ್ತುದೇ ಗೊತ್ತಿಲ್ಲ. ಹೇಗೆ ನನಗೆ ಮಗನಾದ ?"

"ಸ್ವರ್ಗೀಯಅಪ್ಸರೆಯರು ಮನುಷ್ಯಧರ್ಮವನ್ನು ಪಾಲಿಸಲಾರರು. ಅವರು ಎಲ್ಲವನ್ನೂ ಗುಪ್ತವಾಗಿಡುವರು" ಎಂದು ವಿದೂಷಕನು



ಸಮಾಧಾನ ನೀಡುವನು.

ಅಷ್ಟರಲ್ಲಿ ತಾಪಸಿಯೊಬ್ಬಳು ಕ್ಷತ್ರಿಯಕುಮಾರನನ್ನು ಕರೆದುಕೊಂಡು ರಾಜನಲ್ಲಿಗೆ ಬರುವಳು. ರಾಜ "ಭಗವತಿ ಇಲ್ಲೆ ವಿಶ್ರಮಿಸಿರಿ."

ತಾಪಸಿ "ಮಹಾಭಾಗ, ಸೋಮವಂಶವು ನಿನ್ನಿಂದ ವಿಸ್ತಾರ ಹೊಂದಿತು. ಮಗು ನಿನ್ನ ತಂದೆಗೆ ನಮಸ್ಕರಿಸು". ಆಯುವು ಪುರೂರವನಿಗೆ ನಮಸ್ಕರಿಸಿ "ಇವನೇ ನನ್ನ ತಂದೆಯೆಂದು ತಿಳಿದು ನನಗೆಷ್ಟು ಮುದವಾಗಿದೆ. ಇನ್ನು ತಂದೆಯ ತೊಡೆಯ ಮೇಲೆ ಬೆಳೆದ ಮಕ್ಕಳಿಗೆಷ್ಟಿರಬೇಡ" ಎಂದು ಆತ ವಿಚಾರಿಸುವ, ರಾಜನು "ಭಗವತಿ ನೀವು ಬಂದಿರುವ ಉದ್ದೇಶ ಹೇಳಿ" ಎಂದು ಕೇಳುವ.

ಆಗ ತಾಪಸಿಯು "ಉರ್ವಶಿಯು ಈ ಮಗುವನ್ನು ನನ್ನ ರಕ್ಷಣೆಗೆ ಒಪ್ಪಿಸಿದ್ದಳು. ಕ್ಷತ್ರಿಯ ಕುಮಾರನಿಗೆ ಉಚಿತವಾದ ಜಾತಕರ್ಮಗಳನ್ನೆಲ್ಲ ಚ್ಯವನ ಮಹರ್ಷಿಗಳು ಮಾಡಿದ್ದಾರೆ. ಧನುರ್ವೇದವನ್ನು ಆತನು ಕಲಿತಿದ್ದಾನೆ. ಇಂದು ಆತನು ಪಕ್ಷಿಯನ್ನು ಕೊಂದು ಆಶ್ರಮಧರ್ಮ ವಿರುದ್ಧ ಕಾರ್ಯಮಾಡಿದ್ದಾನೆ. ಅಂತೆಯೆ ನಿಮ್ಮ ಮಗನನ್ನು ಒಪ್ಪಿಸಲು ಬಂದಿರುವೆ'' ಎನ್ನುತ್ತಾಳೆ.

ಆಯು ತನ್ನ ತಂದೆ ಪುರೂರವನಿಗೆ, ಮಾಣವಕನಿಗೆ ನಮಸ್ಕರಿಸುತ್ತಾನೆ. ಇಷ್ಟರಲ್ಲಿ ಉರ್ವಶಿ ಬರುತ್ತಾಳೆ. "ಇದೋ ನಿನ್ನ ತಾಯಿ ಬರುತ್ತಿದ್ದಾಳೆ'' ತಾಪಸಿ ಎನ್ನುವಳು. ಆಯುವು ತಾಯಿಯ ಅಡಿಗೆರಗುವ. ಮಗನನ್ನು ಅಪ್ಪಿಕೊಂಡು "ನಿನ್ನ ತಂದೆಯನ್ನು ಸಂಪ್ರೀತಗೊಳಿಸು" ಎನ್ನುವಳು.

"ಇವನನ್ನು ನಿಮಗೊಪ್ಪಿಸಿದೆ. ಇನ್ನು ನಾನು ಹೋಗುವೆ'' ಎನ್ನುತ್ತಾಳೆ ತಾಪಸಿ. ಉರ್ವಶಿ ಅಳತೊಡಗುತ್ತಾಳೆ. ಮಗನು ದೊರೆತ ಸಂಭ್ರಮದಲ್ಲಿ ಅಳುತ್ತಿರುವದೇಕೆಂದು ಪುರೂರವನಿಗೆ ಕಾತರ, ಆಶ್ಚರ್ಯ. ಆಗ ಉರ್ವಶಿ ಹೇಳುತ್ತಾಳೆ.

"ಕೇಳು ಪ್ರಭು, ಮಗನನ್ನು ನೋಡಿ ನಾನು ಮರೆತಿದ್ದೆ. ಇಂದ್ರನ ಆಜ್ಞೆ ನೆನಪಾಯಿತು.''

# ಬಂತು ದೀಪಾವಳಿ!

ವಿ.ಆರ್.ಸಿ.ಶೇಖರ್















# ಮಾನವ ಒಂದು ವಿಚಿತ್ರ ಪ್ರಾಣಿ



"ಮಾನವ ಒಂದು ವಿಚಿತ್ರ ಪ್ರಾಣಿ" ತಾಯಿ ಬಾವಲಿ ಹೇಳಿದಳು.

ಕಾಳು, ಬಾಳು ಮುದ್ದುಮರಿ ಕಿವಿಗೊಟ್ಟು ಕೇಳುತ್ತಿದ್ದರು. ಇದೀಗ ಪಕ್ಕ ಬಲಿತು ಹಾರಲು ಕಲಿತಿದ್ದರು. ಹೊರಗೆ ಹೋಗಿ ತಮ್ಮ ಮನೆ ಹುಡುಕಬೇಕಿತ್ತು. ತಾಯಿ ಮೊದಲ ಪಾಠ ಕಲಿಸುತ್ತಿದ್ದಳು. "ಮುದ್ದು ಮಕ್ಕಳೆ, ಮಾನವ ಒಂದು ವಿಚಿತ್ರ ಪ್ರಾಣಿ. ಅವುಗಳಿಂದ ದೂರವಿರಿ ತಿಳಿಯಿತೇ ?"

"ಹೂನವ್ವಾ" ಕಾಳು ತಲೆ ತುರಿಸುತ್ತ ಹೇಳಿದನು.

"ಹೂನವ್ವಾ" ಬಾಳು ತಲೆತೂಗಿದನು. ಕಾಳು ಹೇಳಿದಂತೆ ಬಾಳು ಹೇಳುವದು, ಮಾಡಿದಂತೆ ಮಾಡುವದು ರೂಢಿ.

"ಕತ್ತಲಾಯಿತು ಸರಿ, ನೀವಿನ್ನು ಹೊರಡಿರಿ. ನಿಮ್ಮ ಮನೆ ನೀವೇ ನೋಡಿರಿ. ನಿಮ್ಮ ಆಹಾರ ನೀವೇ ಹುಡುಕಿರಿ, ಆದರೆ ನಾನು ಹೇಳಿದ್ದು ನೆನಪಿರಲಿ, ಮರೆಯಬೇಡಿ. ಮಾನವ ಒಂದು ವಿಚಿತ್ರ ಪ್ರಾಣಿ, ಅವುಗಳಿಂದ ದೂರವಿರಿ"

ಕಾಳು, ಬಾಳು ಮನೆಯಿಂದ ಹೊರಗೆ ಹಾರಿದರು.

ಬಾವಲಿಗಳು ರಾತ್ರಿಯೆಲ್ಲಾ ತಿರುಗಾಡಿ ಆಹಾರ ಹುಡುಕುವವು. ಹಗಲು ಮೂಲೆಯಲ್ಲೋ, ಮರಗಳ ಟೊಂಗೆಯ ತುದಿಯಲ್ಲೋ ಜೋತು ಬಿದ್ದು ನಿದ್ದೆ ಮಾಡುವವಷ್ಟೆ !

ಮನೆ ಹುಡುಕುವ ಮೊದಲು ಹಸಿವನ್ನು ಹಿಂಗಿಸಿಕೊಳ್ಳಲು ನಿರ್ಧರಿಸಿದರು. ಗಿಡಗಂಟಿಗಳ ತೊಪ್ಪಲಲ್ಲಿದ್ದ ಕೀಡೆ, ಚಿಟ್ಟೆ ಪಾತರಗಿತ್ತಿಗಳನ್ನು ಹಿಡಿದು ತಿಂದು ಹೊಟ್ಟೆ ತುಂಬಿಸಿಕೊಂಡರು. ನಂತರ ಮನೆ ಹುಡುಕಲು ಹೊರಟರು.

ಮೊದಲು-ದಟ್ಟವಾಗಿ ಬೆಳೆದ, ದೂರ ದೂರದವರೆಗೆ ಕೊಂಬೆ ಚಾಚಿದ ಅರಳೆಯ ಮರದ ಹತ್ತಿರ ಬಂದರು.

"ಓ! ಸುಂದರವಾದ ಸ್ಥಳ. ಇಲ್ಲಿಯೇ ಮನೆ ಮಾಡಿದರೆ ಒಳ್ಳೆಯದು. ಎತ್ತರದ ಕೊನೆಯ ಟೊಂಗೆ ನಮಗೆ ಹೇಳಿ ಮಾಡಿಸಿದ ಮನೆ" ಎಂದ ಬಾಳು

"ಹೆ, ಇದು ಗದ್ದಲದ ಗಿಡ. ನೋಡಲ್ಲಿ ಗಿಳಿಯ ಹೊದರು, ಕಾಗೆಯ ಗೂಡು ಮರಕುಟಿಗ ಹಕ್ಕಿಯ ಪೊಳ್ಳು. ಹಗಲಿಡೀ ಮರಕುಟಿಗ ಟಕ್ ಟಕ್ ಕುಟ್ಟುವ ಸಪ್ಪಳ ನಗಾರಿ ಬಾರಿಸಿದಂತೆ. ನಿದ್ದೆ ಹಾಳು" ಎಂದ ಕಾಳು.

"ಹೌದು, ಹೌದು, ನಿದ್ದೆ ಹಾಳು" ತಲೆದೂಗಿದ ಬಾಳು ರೂಢಿಯಂತೆ.

ಇಬ್ಬರೂ ಅಲ್ಲಿಂದ ರೆಕ್ಕೆ ಬಿಚ್ಚಿದರು. ಹಾರುತ್ತ ಹಾರುತ್ತ ಹಾಳುದೇಗುಲದ ಹತ್ತಿರ ಬಂದರು.

"ಇದು ಪ್ರಶಾಂತ ಸ್ಥಳ ಬಾವಲಿಗರಿಗೆ. ಹಗಲೂ ಇಲ್ಲಿ ಕತ್ತಲು ಕವಿದಿರುತ್ತದೆ" ಎಂದ ಬಾಳು ಎತ್ತರ ಗೋಪುರದಲ್ಲಿ ಸೇರುತ್ತ—

"ಓ! ಇದೂ ಒಳ್ಳೆಯದಲ್ಲ. ಹೊತ್ತು ಹೊರಟು ಹೊತ್ತು ಮುಳುಗುವ ವರೆಗೆ ಭಕ್ತರು ಬಂದು ಗಂಟೆ - ಜಾಗಟೆಗಳನ್ನು ನುಡಿಸುತ್ತಲೇ ಇರುತ್ತಾರೆ." ಎಂದು ಕಾಳು ತಲೆ ಝಾಡಿಸಿದ.

"ಹೌದು ಹೌದು" ಬಾಳು ಕೌಲೆತ್ತಿನಂತೆ ತಲೆದೂಗಿದ.

ಗುಡಿಯಿಂದ ಹೊರ ಬಂದರು

ಹಾಗೇ ಹಾರುತ್ತ ಹಾರುತ್ತ ಊರ ಹೊರಗಿನ ತೋಟದ ಮನೆಯ ಸಮೀಪ ಬಂದರು.

"ಮಟಾಣ ಬಾವಲಿಗರಿಗೆ ಹೇಳಿ ಕಟ್ಟಿಸಿದ ಪುಟ್ಟ ಮನೆ. ಇಲ್ಲಿ ಯಾವ ಗುಲ್ಲು ಗದ್ದಲ ಇರುವದಿಲ್ಲ. ಹಾಯಾಗಿ ಇರ

# From pure, natural dairy milk.

New **Nandini**

## Instant Milk Powder




*This tin contains the equivalent of three and half litres of milk.*

# Nourishing, energy giving milk–instantly!



Made from fresh, pasteurised, standardised milk by a two-stage drying process, Nandini Milk Powder can be used to make tea, coffee, milk, beverages, breakfast cereals, curds, lassi, cakes, ice cream, kheer and pudding.

Approximate Composition: Milk fat 26%, Milk protein 28%, Milk sugar 37%, Mineral salts 6%, Moisture 3%, 500 calories per 100 gms.

**DIRECTIONS FOR USE**

To make 1 litre of milk: Add 10 heaped tablespoons of Nandini Milk Powder to a little warm water and stir till it becomes a smooth paste. Now mix the paste with 900 ml. (approx. 4 glasses) of hot water.

TO MAKE A FLUID NOT BELOW THE AVERAGE CONSISTENCY OF FRESH MILK, ADD THREE AND HALF (3½) PARTS OF WATER BY VOLUME TO ONE (1) PART BY VOLUME OF NANDINI MILK POWDER.

NITROGEN PACKED • NET WEIGHT: 500 GRAMS

KEEP IN A COOL DRY PLACE. REPLACE LID TIGHTLY.

# Pasteurised Butter

*Now in 10 and 20 gm. packs!*



KMF introduces Nandini Butter in 10 gm. and 20 gm. packs; made from fresh, pure, dairy milk. For use as table butter, Nandini Butter packs have a fat composition of 82%.

*Marketed by*

**Karnataka Co-operative Milk Producers' Federation Limited**

22. "Poornima Building", J.C. Road, 1st Cross, Bangalore 560 027

ಬಹುದು." ಎನ್ನುತ್ತ ಮನೆಯ ಕಂಬಿಯ ಹತ್ತಿರ ಚಾಚಿದ್ದ ಪೇರಲಗಿಡದ ಟೊಂಗೆಗೆ ಜೋತು ಬಿದ್ದರು.

ಎದುರಿನ ಕಿಟಕಿ ತೆರೆದಿತ್ತು. ಕಾಳು ಒಳಸೇರಿಯೇ ಬಿಟ್ಟ. ಬಾಳು ಅವನನ್ನು ಹಿಂಬಾಲಿಸಿದ.

ಒಮ್ಮೆಲೆ ತಾಯಿ ಹೇಳಿದ 'ಮಾನವ ಜಾತಿ ಒಂದು ವಿಚಿತ್ರ ಪ್ರಾಣಿ, ಅವರಿಂದ ದೂರವಿರಿ' ಮಾತು ನೆನಪಾಯಿತು. ಕಾಳು ನೆನಪು ಮಾಡಿಕೊಟ್ಟ. 'ಹೌದು ಹೌದು' ಎಂದು ಬಾಳು ತಲೆಯಾಡಿಸಿದ. ಒಬ್ಬರ ಮುಖವನ್ನೊಬ್ಬರು ನೋಡಿದರು.

ಅತ್ತಿತ್ತ ಕಣ್ಣು ಹಾಯಿಸಿದರು. ಅಲ್ಲಿ ಯಾರೂ ಕಾಣಲಿಲ್ಲ. "ನೋಡು ಇಲ್ಲಿ ಮಾನವ ವಸತಿ ಇಲ್ಲ." ಎಂದ ಕಾಳು "ಹೌದು ಹೌದು ಇದ್ದಂತಿಲ್ಲ." ಎಂದು ಬಾಳು ದನಿಗೂಡಿಸಿದ.

ಆ ಕೋಣೆಯಲ್ಲಿ ಇಬ್ಬರು ಮಕ್ಕಳು ತುಂಬ ಹೊದ್ದುಕೊಂಡು ಮಲಗಿದ್ದರು. ಗಡದ್ದು ನಿದ್ದೆ. ಹೀಗಾಗಿ ಮನುಷ್ಯರ ಸುಳಿವು ಹತ್ತಲಿಲ್ಲ, ಬಾವಲಿ ಬಂದಿವೆ ಎಂದು ಮಕ್ಕಳಿಗೆ ತಿಳಿಯಲಿಲ್ಲ. ಮಕ್ಕಳು ಮಲಗಿವೆ ಎಂದು ಬಾವಲಿಗೆ ಸುಳಿವು ಹತ್ತಲಿಲ್ಲ.

ಹೊತ್ತು ಮೂಡಿ ಸೂರ್ಯನ ಹೊಂಗಿರಣಗಳು ಕಿಟಕಿ ಸೇರಿ ಮಲಗಿದ ಮಕ್ಕಳನ್ನು ಮುದ್ದಿಸಿದನು. ಚಿಂವ್ ಚಿಂವ್ ಗುಬ್ಬಚ್ಚಿ ಗಾನ ಕೇಳಿಸಿತು. ಮಕ್ಕಳು ಪಿಸುಕು ತೆರೆದರು. ಕಣ್ಣುಜ್ಜಿ ನೋಡುತ್ತಾರೇನು! ಎದುರಿಗೆ ಮೂಲೆಯ ಛತ್ತಿನಲ್ಲಿ ಬಾವಲಿ ಜೋತು ಬಿದ್ದಿವೆ.

"ತೊಗಲ ಬಾವಲಿ! ತೊಗಲ ಬಾವಲಿ! ಎಂದು ಕೂಗಿದರು ಚಪ್ಪಾಳೆ ತಟ್ಟಿ ಕುಣಿದರು. "ಉಶ್! ಉಶ್!! ಉಶ್!!! ಎಂದು ಚೀರುತ್ತಾ ಕೈ ಎತ್ತಿ ಅವನ್ನು ಹಾರಿಸಲು ಯತ್ನಿಸಿದರು. ಮೇಲಕ್ಕೆ ಜಿಗಿದು ಅವನ್ನು ಬಡಿಯಲು ಹಾತೊರೆದರು.

ಕಾಳು, ಬಾಳು ಗಾಬರಿಯಾದರು. ಏನು ಮಾಡಬೇಕು. ಎತ್ತ ಹೊಗಬೇಕು ತಿಳಿಯದಾಯಿತು. ಹೊರಗೆ ಹೋಗಬೇಕೆಂದು ಧಾವಿಸಿ ಹಾರಿದರು. ಕಿಟಕಿ ಎಂದು ಕನ್ನಡಿಗೆ ಹಾಯ್ದರು.

ಕನ್ನಡಿ ಕಿಟಕಿಯ ಎದುರಿಗಿತ್ತು. ಕಿಟಕಿಯ ಛಾಯೆಬಿದ್ದಿತ್ತು. ಅದನ್ನೇ ಕಿಟಕಿ ಎಂದು ಭಾವಿಸಿ ಹೋಗಿ ಹಾಯ್ದರು, ಹಾಯ್ದು ತಿರುಗುವಾಗ್ಗೆ ಪಕ್ಕದ ಗೂಟಕ್ಕೆ ಸಿಕ್ಕಿಸಿದ ಹೆಣಿಕೆಯ ಚೌಕು ವಸ್ತ್ರದಲ್ಲಿ ಕಾಳುವಿನ ಕಾಲು ಸಿಕ್ಕಿತು. ವಸ್ತ್ರಗೂಟದಿಂದ ಕಡೆಗಾಗಿ ಮೇಲೆ ಬಿತ್ತು. ಕಾಳುವನ್ನು ಹಿಂಬಾಲಿಸಿದ ಬಾಳುವೂ ವಸ್ತ್ರದ ಮತ್ತೊಂದು ತುದಿಗೆ ಸಿಕ್ಕಿಕೊಂಡನು. ಮೇಲೆ ಹಾರುವಾಗ್ಗೆ ವಸ್ತ್ರದ ಚುಂಗು ಅಲ್ಲಿಟ್ಟಿದ್ದ ಎಣ್ಣೆಯ ಬಾಟಲಿ, ಪೌಡರ ಡಬ್ಬಿಗೆ ಬಡಿದು ಕೆಳಗೆ ಬಿದ್ದು ಫಳ ಫಳನೆ ಒಡೆದವು. ಸಪ್ಪಳ ಕೇಳಿ ಗಾಬರಿಯಾಗಿ ವಸ್ತ್ರದಲ್ಲಿ ಸಿಲುಕಿಕೊಂಡೇ ಆ ಗೋಡೆಯಿಂದ ಈ ಗೋಡೆಗೆ, ಈ ಗೋಡೆಯಿಂದ ಆ ಗೋಡೆಗೆ ಹಾರಾಡತೊಡಗಿದರು.

ಮಾಂತ್ರಿಕನ ಮಂತ್ರದ ಅರಿವೆ ತೇಲಾಡಿದಂತೆ ಕಾಣಿಸುತ್ತಿತ್ತು.

ಮಕ್ಕಳಿಗೆ ಮೋಜೆನಿಸಿದರೂ ಬಾಟಲಿ, ಪೌಡರ ಹಾಳುಗೆಡವಿದ್ದಕ್ಕೆ ಸಿಟ್ಟೂ ಬಂದಿತ್ತು. ಮತ್ತಷ್ಟು ಜೋರಾಗಿ ಚೀರುತ್ತ ನಗುತ್ತ 'ಉಶ್' ಎಂದು ಕೈಮಾಡುತ್ತಾ ಅತ್ತಿತ್ತಾ ಬೆನ್ನು ಹಿಂದೆ ಓಡಾಡತೊಡಗಿದರು.

ಕಾಳು-ಬಾಳು ಇಂಥ ಧ್ವನಿಯನ್ನೇ ಕೇಳಿದ್ದಿಲ್ಲ. ತಾಯಿ ಹೇಳಿದ 'ಮಾನವ ಒಂದು ವಿಚಿತ್ರ ಪ್ರಾಣಿ, ಅವರಿಂದ ದೂರವಿರಿ' ಎಂಬ ಮಾತು ಸತ್ಯವಾಗಿ ಕಂಡಿತು.

ವಸ್ತ್ರದಲ್ಲಿ ಮುಖ ಮುಚ್ಚಿದ್ದರಿಂದ ಕಣ್ಣು ಕಾಣುತ್ತಿದ್ದಿಲ್ಲ. ಕೊನೆಗೆ ಕಾಳುವಿನ ಕಾಲಲ್ಲಿಯ ವಸ್ತ್ರ ಸರಿದು ಮುಖ ಹೊರಗೆ ಬಂದಿತು. ಕೂಡಲೇ ಕಿಟಕಿಯತ್ತ ಕಾಣುವ ಗಿಡದ ಕಡೆಗೆ ಧಾವಿಸಿ ಹಾರಿದನು. ಬಾಳುವೂ ಹಿಂಬಾಲಿಸಿದನು. ಅದು ಅನಿವಾರ್ಯವೂ ಆಗಿತ್ತು. ಒಂದೇ ವಸ್ತ್ರದಲ್ಲಿ ಸಿಕ್ಕಿದ್ದರಷ್ಟೆ! ಅತ್ತೊಬ್ಬ ಇತ್ತೊಬ್ಬ ಕಿಟಕಿಯ ಸರಳುಗಳೊಳಗಿಂದ ಹೊರಗೆ ಹಾರುವಾಗ್ಗೆ ಮಧ್ಯದಲ್ಲಿ ವಸ್ತ್ರ ಸಿಕ್ಕಿತು. ಸರಳುಗಳು ತಡೆದವು.

ಇಬ್ಬರೂ ಪಾರಾದರು. ಉಸಿರು ಬಿಗಿಹಿಡಿದು ಹಿಂದೆ ನೋಡದೆ ಹಾರುತ್ತ ಅರಳೆಯ ಮರಕ್ಕೆ ಬಂದರು. ತುದಿಯ ಟೊಂಗೆಯಲ್ಲಿ ಜೋತುಬಿದ್ದರು. ಹಾಯಾಗಿ ನಿಟ್ಟುಸಿರುಬಿಟ್ಟರು.

"ನಿಜವಾಗಿ ಮನುಷ್ಯ ವಿಚಿತ್ರ ಪ್ರಾಣಿ, ವಿಚಿತ್ರ ಧ್ವನಿ ಮಾಡುತ್ತಾನೆ. ಗದ್ದಲ ಮಾಡುತ್ತಾನೆ" ಎಂದ ಕಾಳು.

"ಹೌದು. ನಾವೇ, ಬಾವಲಿಗಳೇ ಮೇಲು, ನಾವು ಶಾಂತಿಪ್ರಿಯರು" ಎಂದ ಬಾಳು.

'ಸಿಸು' ಸಂಗಮೇಶ





ಅಭಿನಂದನೆಗಳು

## ಶ್ರೀ ಯು. ಎಂ. ಮಲ್ಲಪ್ಪ ಎಂ. ಎ.

ಅಭಿವೃದ್ಧಿ ಅಧಿಕಾರಿಗಳು

ಭಾರತೀಯ ಜೀವವಿಮಾ ನಿಗಮ

ಅರಸೀಕೆರೆ-೫೭೩ ೧೦೩

ಇವರು ಕಳೆದ ಒಂಬತ್ತು ವರ್ಷಗಳಿಂದ ಒಂದು ಕೋಟಿಗೂ ಮಿಗಿಲಾದ ಹೊಸ ವ್ಯವಹಾರವನ್ನೂ ಹಾಗೂ ಕಳೆದ ಮೂರು ವರ್ಷಗಳಿಂದ ಎರಡು ಕೋಟಿಗೂ ಮಿಗಿಲಾದ ವ್ಯವಹಾರವನ್ನು ಮಾಡಿ ದಕ್ಷಿಣ ಭಾರತದಲ್ಲಿಯೇ ಯಶಸ್ವಿ ಅಭಿವೃದ್ಧಿ ಅಧಿಕಾರಿಗಳೆಂದು ಹೆಸರು ಪಡೆದಿರುತ್ತಾರೆ. ಇವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು ಹಾಗೂ ದೀಪಾವಳಿಯ ಶುಭಾಶಯಗಳನ್ನು ಬಯಸುತ್ತೇವೆ.

ಇಂತು

ಶ್ರೀಯುತ ಯು. ಎಂ. ಮಲ್ಲಪ್ಪನವರ

ಅಂಗ ಸಂಸ್ಥೆಯ ಪ್ರತಿನಿಧಿ ಬಾಂಧವರು, ಅರಸಿಕೇರೆ-೫೭೩ ೧೦೩

---

ದೀಪಾವಳಿಯ ಹಾರ್ದಿಕ ಶುಭಾಶಯಗಳು :



ಸ್ಥಾಪನೆ : ೧೯೨೫

ಸಿದ್ದೋಜಿ

ನಿಮ್ಮ ಎಲ್ಲಾ ತರಹೆಯ ಬಟ್ಟೆ ಮತ್ತು ಸೀರೆಗಳ ಅವಶ್ಯಕತೆಯನ್ನು ಪೂರೈಸುವ ಒಂದು ಸಂಪೂರ್ಣ ಜವಳಿ ಅಂಗಡಿ



ದೂರವಾಣಿ ೬೦೧೬೩೦

## ಸಿದ್ದೋಜಿ ಸಿಲ್ಕ್ ಆ್ಯಂಡ್ ಸಾರೀಸ್

ಕೆ. ಪಿ. ಸಿದ್ದೋಜಿರಾವ್ ಆ್ಯಂಡ್ ಸನ್ಸ್

೧೫೧-೨, ಡಾ.ಡಿ.ವಿ. ಗುಂಡಪ್ಪ ರಸ್ತೆ, ಬಸವನಗುಡಿ, ಬೆಂಗಳೂರು-೪



# ನರಸಮ್ಮ

ಸಂಗಮೇಶ ಹೊಸಮನಿ

'ಕುಶಲವೆ ಅಕ್ಕ, ಕ್ಷೇಮವೆ ಅಣ್ಣಾ?'
ಹಳ್ಳಿಯ ತಿರುಗುವ ನರಸಮ್ಮ!
ದಿನದಿನ ಬರುವಳು ನವನಗೆ ತರುವಳು
ಮನೆ ಮನೆ ಅಲೆಯುವ ನರಸಮ್ಮ ॥

ಬೆಳ್ಳನೆ ಹಕ್ಕಿಯ ರೆಕ್ಕೆಯ ಸೀರೆ,
ಬೆಳ್ಳಿಯ ಬಣ್ಣದ ಕುಪ್ಪಸ ಚೇರೆ,
ಊರಿನ ಅಂಗಳ ಕಂಗಳ ತಾರೆ,
ಸುಳುಸುಳು ಸುಳಿಯುವ ನರಸಮ್ಮ
ತೆಳ್ಳನೆ ಗಾತ್ರದ, ಅರಳಿದ ನೇತ್ರದ
ಮಿರಿ ಮಿರಿ ಮಿನುಗುವ ನರಸಮ್ಮ ॥

ಕಂದರ ಕಂಡರೆ ಎತ್ತುವಳೊಮ್ಮೆ,
ಕುವರರು ಬಂದರೆ ಅಪ್ಪುವಳು,
ಅಕ್ಕನ ಅಕ್ಕರೆ ಸಕ್ಕರೆಯಂತೆ,
ಅವ್ವನ ಮುದ್ದಿನ ಮಗಳಿವಳು ॥

ತಂಗಿಯು ಕಿಮ್ಮರವಳಿಗೆ ಜೊತೆ,
ಪುಕ್ಕಟೆ ಮಾತ್ರೆಯ ಕೊಡುತಿಹಳಂತೆ,
ಅವ್ವನ ಹೆರಿಗೆಯು ಇರುಳಿನೊಳಿದ್ದು.
ಬಾಣಂತಿಯನು ಸಲಹುವಳಂತೆ॥

ಅಣ್ಣಗೆ ಚಳಿಜ್ವರ, ಅಕ್ಕಗೆ ನೆಗಡಿ
ಅಜ್ಜನ ಹಿರಿಗರ ರೋಗದಲಿ,
ಔಷಧ ಕೊಡುವಳು 'ವಾಸಿ' ಎನುವಳು,
ಕಂಗಳ ಮಂಗಳ ಕಿರಣದಲಿ ॥

ಮನೆ ಮನೆ ಮಕ್ಕಳು, ಮರಿಗಳು ಎಷ್ಟು?
ಹೆರಿಗೆಯ ಮಹಿಳಾಮಣಿಗಳು ಎಷ್ಟು?
ಎಲ್ಲಾ ಲೆಕ್ಕವು ಬಾಯಿಯಲಿ,
"ಹೆಚ್ಚಿಗೆ ಮಕ್ಕಳ ಹೆತ್ತರೆ ಚಿಂತೆ
ಎರಡು ಮಕ್ಕಳಿರ ಸಾಕೇಸಂತೆ" ॥
ನುಡಿವಳು ನಗೆಯಲ್ಲಿ…॥

ಯಾರೋ ಕರೆಸಿರಬೇಕಿವಳನ್ನು
ಕರೆಯದೆ ಬರುವವಳು,
ಯಾರೂ ಕೇಳಿರಲಿಲ್ಲವಳನ್ನು
ಕಲಿಸದೆ ತೆರಳುವಳು ॥

ನಗೆ ಬಗೆ ಮಲ್ಲಿಗೆ, ನುಡಿವಳು ಮೆಲ್ಲಗೆ
ನಿಲ್ಲದೆ ಎದ್ದಡೆ ಸಾಗುವಳು,
ಬಾಳಿಗೆ ಭಾಗ್ಯದ ದೇವತೆಯಂತೆ
ಮನ ಮನಗಳ ಕದ ತೆರೆಯುವಳು
ನವಯುಗದಾರತಿ ಬೆಳಗುವಳು ॥






## ಶಾಲೆಗೆ ಹೋದವರು ಯಾರು ?

ನಮ್ಮ ಪುಟ್ಟುವಿನ ತುಂಟತನ ತಾಳಲಾರದೆ ಶಾಲೆಗೆ ಸೇರಿಸಿದೆವು. ಮೊದಲನೆ ದಿನ ಶಾಲೆಗೆ ಹೋಗುವಾಗ ಸಂಭ್ರಮದಿಂದ ಅವನ ಸ್ಕೂಲ ಬ್ಯಾಗನ್ನು ನಾನು ಹೊತ್ತುಕೊಂಡು ಹೊರಟಾಗ ಪಕ್ಕದ ಮನೆಯುವರು 'ನೀವು ಶಾಲೆಗೆ ಹೋಗುತ್ತೀರೋ ಇಲ್ಲ ಮಗನನ್ನು ಕಳಿಸುತ್ತೀರೊ' ಎಂದು ತಮಾಷೆ ಮಾಡಿದರು. ಬುದ್ಧಿವಾದಗಳನ್ನೆಲ್ಲ ಹೇಳಿ ಪುಟ್ಟುವನ್ನು ಕ್ಲಾಸಿನಲ್ಲಿ ಬಿಟ್ಟು ಉಳಿದ ಮಾಹಿತಿಗಾಗಿ ಆಫೀಸಿಗೆ ಹೋದೆನು.

ನಾನು ಹೋಗಿ ಬರುವಷ್ಟರಲ್ಲಿ ಪುಟ್ಟುವಿನ ಪ್ರತಾಪಕ್ಕೆ ಟೀಚರಿಂದ ಹೊಡೆತ ಬಿದ್ದಿತ್ತು. ಅಳುತ್ತಿದ್ದ ಪುಟ್ಟು ನನ್ನ ಹತ್ತಿರ ಬಂದಾಗ ಟೀಚರ "ಸಾಕಪ್ಪಾ ನಿಮ್ಮ ಮಗನ ಸಹವಾಸ." ಇಬ್ಬರ ಹತ್ತಿರ ಜಗಳವಾಡಿ ಪೆನ್ಸಿಲ್ ಕಸಿದುಕೊಂಡು ಅಂಗಿಯನ್ನೂ ಹರಿದಿದ್ದಾನೆ. ಇಂಥ ಮಕ್ಕಳು ಶಾಲೆಗೆ ಬಂದ್ರೆ ನಾವು ಕೆಲಸ ಕಳೆದುಕೊಳ್ಳಬೇಕು' ಎಂದು ಭಾಷಣವನ್ನೇ ಬಿಗಿದರು. ಪುಟ್ಟುವಿನಿಂದ ನಾನು ಪಾಠ ಕೇಳುವ ಪರಿಸ್ಥಿತಿ ! ನಾನು ಮನೆಗೆ ಹೊರಟಾಗ ಪುಟ್ಟು ತಾನೂ ಬರುತ್ತೇನೆಂದು ಹಟ ಮಾಡಿದ. ಮೊದಲನೇ ದಿನವೇ ಮನೆಗೆ ಕರೆದುಕೊಂಡು ಹೋಗಲು ಮನಸ್ಸಾಗದೆ ಅವನ ಪಕ್ಕದಲ್ಲಿ ಕುಳಿತುಕೊಂಡು ಪಾಠ ಕೇಳಿದೆ. ಪುಟ್ಟುವಿನಿಂದ ನಾನು ಇಪ್ಪತ್ತು ವರ್ಷಗಳ ನಂತರ ಪುನಃ ಒಂದನೇ ಕ್ಲಾಸಿನ ಪಾಠ ಕೇಳುವ ಅದೃಷ್ಟ ಒದಗಿತ್ತು. ಪಕ್ಕದ ಮನೆಯುವರು ಹೇಳಿದ ಮಾತು ನಿಜವಾಯಿತು.

ಲಲಿತಾ ಭಟ್ಟ
ಶಿರಸಿ

## ನಾನು ಮನೆಗೆ ಹೇಗೆ ಹೋಗಲಿ?

ಅಂದು ಮೊದಲನೇ ದಿನ ನನ್ನ ಮಗ ಅಜಯನನ್ನು ಶಾಲೆಗೆ ಕಳುಹಿಸಲು ಹೋದೆ. ಕ್ಲಾಸ್ ರೂಂ ತಲುಪಿದೆ. ನಾನು ಶಾಲೆ ಸೇರಿದಾಗ ನನಗೆ ಕಲಿಸಿದ್ದ ಗುರುಗಳೇ ಇದ್ದರು. ನನ್ನನ್ನು ಕಂಡು "ಬಾರಪ್ಪಾ ಶಿವಣ್ಣ," ಎಂದು ಪ್ರೀತಿಯಿಂದ ಮಾತನಾಡಿಸಿದರು.

"ಅಲ್ಲವೋ ನಮ್ಮ ಶಾಲೆ ಮೇಲಿನ ಹಂಚುಗಳು ನೀನು ಶಾಲೆ ಬಿಟ್ಟಾಗಿನಿಂದ ಇದ್ದಲ್ಲೇ ಇವೆ" ನನ್ನ ಬೆನ್ನು ತಟ್ಟುತ್ತ, ಜೋರಾಗಿ ನಗುತ್ತ ನಗೆಯಾಡಿದರು.

"ಯಾಕೆ ಮೇಷ್ಟ್ರೇ ಹೀಗೆ ಹೇಳ್ತೀರಾ" ಎಂದೆನು ನಾನು ಗಲಿಬಿಲಿಗೊಂಡು.

ಅಲ್ಲೊ, ನೀನು ನಮ್ಮ ಶಾಲೆಯಲ್ಲಿದ್ದಾಗ ಎಂದಾದರೂ ದಾರಿ ಹಿಡಿದುಕೊಂಡು ನೇರವಾಗಿ ಮನೆಗೆ ಹೋದದ್ದುಂಟೆ," ಅಂದರು.

ಮಗನ ಮುಂದೆ ಮಂಗಳಾರತಿಯಾದಂತಾಗುವದೇ ಎಂದೆನಿಸಿತು ನನಗೆ. ಗುರುಗಳ ರಹಸ್ಯಮಯ ಮಾತುಗಳಿಂದ ಮತ್ತಷ್ಟು ಗಲಿಬಿಲಿಗೊಂಡಿದ್ದೆ.

ಗುರುಗಳು ಏನು ಹೇಳುತ್ತಿದ್ದಾರೆಂದು ನನಗೆ ತಿಳಿಯಲೇ ಇಲ್ಲ.

"ಅಲ್ಲೊ, ನೀನು ನಮ್ಮಲ್ಲಿದ್ದಾಗ ಮನೆಗೆ ದಾರಿ ಹಿಡಿದು ಎಲ್ಲಿ ಹೋಗ್ತಾ ಇದ್ದಿ. ಶಾಲೆಯ ಕಂಬಏರಿ, ಮಾಳಿಗೆ ಹತ್ತಿ ಅಲ್ಲಿಂದ ಹುಣಸೇಮರ ಆಕಾಶಮಲ್ಲಿಗೆ ಮರಗಳನ್ನು ಹತ್ತಿ ಇಳಿದು ಮನೆಯ ಜಿಗಿದು, ಗಿಡಮಂಗನಂತೆ ಹಾರುತ್ತ ಮನೆ ಸೇರ್ತಾ ಇರಲಿಲ್ವಾ, ಅದಕ್ಕೆ ನಾನ್ಹೇಳಿದ್ದು, ನೀ ಹೋದನಂತರ ಶಾಲೆ ಹಂಚುಗಳು ಗಟ್ಟಿಯಾಗುಳಿದಿವೆ ಅಂತ".

ಗಟ್ಟಿಯಾಗಿ ನಗುತ್ತ ಹೇಳಿದರು ಗುರುಗಳು. ನಾನೂ ನೆನಪಿನಂಗಳದಲ್ಲಿ ಇಳಿದು ಅಂದಿನ ದಿನಗಳನ್ನು ನೆನೆಸಿಕೊಂಡು ಹೊಟ್ಟೆ ಹಿಡಿದುಕೊಂಡು ನಗತೊಡಗಿದೆ.

ಆಗ ಒಮ್ಮೆಲೇ ನನ್ನ ಮಗ ಅಜಯ್ ಅಳುವದಕ್ಕಾರಂಭಿಸಿದ. ಅಳು ಯಾಕೇಂತ ನನಗೆ ಅರ್ಥವಾಗಲೇ ಇಲ್ಲ.

ಗುರುಗಳು ಅವನನ್ನೆತ್ತಿಕೊಂಡು ರಮಿಸುತ್ತ "ಯಾಕೆ ಮರಿ, ಅಳೋದು" ಅಂದರು. "ನನಗೆ ಗಿಡ ಹತ್ತೋದಿಕ್ಕೆ ಬರೋದಿಲ್ಲ. ನಾನು ಮನೆಗೆ ಹೇಗೆ ಹೋಗಲಿ" ಅಂದ.

ಗುರುಗಳು ಮತ್ತು ನಾನು ಮತ್ತೆ ನಗತೊಡಗಿದೆವು.

ಶಿವಯೋಗಿ ಹಂ. ಕೊಪ್ಪಳ
ಮುಂಡರಗಿ

## ಮೊದಲ ದಿನದ ನೆನಹು

ನಾನು ನಮ್ಮ ಮನೆಯಿಂದ 'ಕಿಂಡರ್ ಗಾರ್ಟನ್' ಶಾಲೆಗೆ ಹೋಗಬೇಕಾಗಿತ್ತು. ನಮ್ಮ ತಾಯಿಯು ನನ್ನನ್ನು ಕರೆದುಕೊಂಡು ಹೋಗಲು ಸಿದ್ಧಳಾದಳು. ಆದರೆ 'ಬೇಡ'ವೆಂದು ಅಳುತ್ತ ಹಟ ಮಾಡಿದೆ. ಆದರೆ ತಂದೆಯ ಗರ್ಜನೆಯಿಂದ ನಾನು ಹೆದರಿದೆನು. ನನ್ನ ಮೈ-ಯೆಲ್ಲಾ ಬೆವರು ಸುರಿಯಿತು. ಹೆದರಿಕೆಯಾಯಿತು. ನಂತರ ನನ್ನ ತಾಯಿ ಮತ್ತು ನನ್ನ ಚಿಕ್ಕಮ್ಮ ಇಬ್ಬರೂ ನನ್ನನ್ನು ಕಳುಹಿಸಲು ಎಳೆದುಕೊಂಡು ಹೋಗುತ್ತಿದ್ದರು. ದಾರಿಯಲ್ಲಿ ಕೆಲವರು ನನ್ನನ್ನು ನೋಡಿ ನಗುತ್ತಹೋದರು. ನಾನು ನಮ್ಮ ತಾಯಿಯ ಕೈಯನ್ನು ಕೊಸರಿಕೊಂಡು ಮನೆಯ ಕಡೆ ಓಡಹತ್ತಿದೆ. ಆದರೆ ಎದುರು ನಮ್ಮ ತಂದೆಯವರು ಬರುವದನ್ನು ಕಂಡು ತಾಯಿಯ ಹತ್ತಿರ ಪುನಃ ಓಡಿದೆನು. ಕೊನೆಗೆ ಶಾಲೆಯನ್ನು ಮುಟ್ಟಿದೆನು. ಅಲ್ಲಿ ಟೀಚರನ್ನು ಕಂಡು ಗಡ ಗಡ ನಡುಗಿದೆನು. ಏಕೆಂದರೆ ಅವರು ನನ್ನನ್ನು ಎಳೆದುಕೊಂಡು ಒಳಗೆ ಕೂಡ್ರಿಸಿದರು. ಆ ಮೇಲೆ ನನ್ನ ತಾಯಿಯು ಮನೆಗೆ ಹೋದಳು. ನಾನು ಸ್ವಲ್ಪ ಕಿಡಿಗೇಡಿಯಾಗಿದ್ದೆ. ಮತ್ತೊಬ್ಬ ಹುಡುಗನ ಫಲಾಹಾರವನ್ನು ಕಸಿದುಕೊಂಡು ತಿಂದೆನು. ಟೀಚರರು ನನಗೆ ಬೆದರಿಸಿ ಮನೆಗೆ ಕಳಿಸಿದರು.

—ಶ್ರೀನಿವಾಸ ಪಂಢರಿ
ಹುಬ್ಬಳ್ಳಿ

## ಓ,! ಆ ದಿನ

ನಮ್ಮ ಮಗು ಶಾಲೆಗೆ ಸೇರಿದ ಮೊದಲ ದಿನ ಯಾವ ಕಿರುಚಾಟವನ್ನೂ ಪರಚಾಟವನ್ನೂ ಮಾಡಲಿಲ್ಲ. ಕಾರಣವೆಂದರೆ-ನಮ್ಮ ಪಕ್ಕದ ಮನೆಯ ಮಗು ಶಾಲೆಗೆ ಹೋಗುವಾಗ ನಿತ್ಯವೂ ಅಳುತಿದ್ದ. ಅವನ ಅಳು ಕೇಳಿದಾಕ್ಷಣವೆ ನಾವೆಲ್ಲ ಓಹೊ! ಶಾಲೆ ತಯಾರಿ ಅಂದುಕೊಳುತ್ತಿದ್ದೆವು. ಅಷ್ಟೇ ಅಲ್ಲದೆ ಆ ಮಗು ಶಾಲೆ ಮಧ್ಯಂತರದ ಸೂಟಿ ಬಿಟ್ಟಾಗ ಓಡಿಬಂದು ಬಿಡುತ್ತಿದ್ದ. ಒಮ್ಮೆಯಂತೂ ಆ ಮಗುವಿನ ತಾಯಿ ಆತನನ್ನು ಕಟ್ಟಿಹಾಕಿ ''ಎಂದಾದರೂ ಸರಿಯಾಗಿ ನಗುತ್ತ ಶಾಲೆಗೆ ಹೋಗುವಿಯೊ'' ಎಂದು ಗೋಳೋ ಎಂದು ಅತ್ತುಬಿಟ್ಟಿದ್ದಳು. ದಿನಾಲೂ ಈ ದೃಶ್ಯ ನೋಡುತ್ತಿದ್ದ ನಮ್ಮ ಹುಡುಗ ಅಮ್ಮಾ ನಾನು ಶಾಲೆಗೆ ಹೋಗುವಾಗ ಮಾತ್ರ ಅಳುವುದೇ ಇಲ್ಲ ಎಂದು ಶಾಲೆಗೆ ಸೇರುವ ಒಂದು ವರ್ಷ ಮುಂಚಿತವೇ ನುಡಿದಿದ್ದ.

ಏನೂ ರಂಪಾಟವಿಲ್ಲದೆ ಮೊದಲದಿನ ಶಾಲೆಗೆ ಹೋಗಿ ಕ್ಲಾಸಿನಲ್ಲಿ ಕುಳಿತ ನಮ್ಮ ಮಗುವಿನ ಬಗ್ಗೆ ಅವನ ಮೇಷ್ಟ್ರು "ಏನ್ರಿ, ನಿಮ್ಮ ಹುಡುಗ ಎಷ್ಟು ಸಮಾಧಾನರಿ" ಅಂದಾಗ ನಮಗೆ ಎಲ್ಲಿಲ್ಲದ ಅಭಿಮಾನ. ಆದರೆ ಶಾಲೆ ಬಿಡುವ ಹೊತ್ತಿಗೆ (ಮುಂಜಾನೆ ಶಾಲೆಯಾದ್ದರಿಂದ) ಮಗು ಹಸಿವಿನಿಂದ ಕಕ್ಕಾಂತನಾಗಿ ಕ್ಲಾಸ್ ಮೇಷ್ಟ್ರಿಗೆ ಹಸಿವು ಎಂದು ಹೇಳಲಾಗದೆ ನಾವು ಕರೆಯಲು ಹೋದಾಗ ಬಿಕ್ಕಳಿಸಿ ಅಳುತ್ತಿದ್ದ. ನಮಗೆ ಅಳುವನ್ನು ಕಂಡು ಹೃದಯ ಅಳುಕಿದರೂಅವನೆದುರು ತೋ-ರ್ಗೊಡದೆ ಅವನಿಗೆ ಬಿಸ್ಕತ್ತೊ ಬ್ರೆಡ್ಡೊ ಕೊಡಿಸಿ 'ಸಮಾಧಾನ ಮಾಡೆಡಿವು. ಒಂದು ವರ್ಷ 'ಹೀಗೆಯೇ' ನಡೆಯಿತು.

ಮಗು ಈಗ ದೊಡ್ಡವನಾಗಿದ್ದಾನೆ. ಆಗ ನಾವು ತೋರಿದ ಧೈರ್ಯದಿಂದ ಈಗ ಆತ ಶಾಲೆಯಲ್ಲಿ ಜಾಣರ ಪಂಕ್ತಿ ಹಿಡಿದು "ಶ್ಯಾಣ್ಯಾ" ಅನಿಸಿಕೊಂಡಿದ್ದಾನೆ.

– ಭಾರತಿ ಫಡಕಿ




## ಫೋನು ಕೆಟ್ಟಿತ್ತು

ನಾನಾಗ ನಮ್ಮಕ್ಕನ ಊರಿಗೆ ರಜ ಕೇಳಿಕೊಂಡು ೮-೧೦ ದಿನದ ಅವಧಿಯವರೆಗೆ ಹೋಗಿದ್ದೆ. ಹೋದ ೨ ದಿನಗಳಲ್ಲಿ ನಮ್ಮ ಅಕ್ಕನ ಮಗನನ್ನು (ರವಿ) ಶಾಲೆಗೆ ಸೇರಿಸಿದರು. ನಾನೇ ಅವನನ್ನು ಕರೆದುಕೊಂಡು ಹೊರಟೆ.

ಶಾಲೆಗೆ ಹೋಗಿ ಅವನನ್ನು ಟೀಚರಿಗೆ ಪರಿಚಯಿಸಿ ಹೊರ ಬಂದು ಮನೆ ಸೇರಿದೆ. ಇವತ್ತೊಂದು ದಿನ ಅವನನ್ನು ವಾಪಸ್ಸು ಕರೆದುಕೊಂಡು ಬಂದರಾಯಿತೆಂದು ತಿಳಿದು ನಾನೂ ಅಕ್ಕ ಇಬ್ಬರೂ ೪ ಗಂಟೆಗೆ ರೆಡಿಯಾಗಿ ಹೊರಟೆವು. ೪-೩೦ ಕ್ಕೆ ಶಾಲೆ ಬಿಟ್ಟಿತು. ಹುಡುಗರೆಲ್ಲ ಹೊರಗೆ ಬಂದರು. ರವಿ ಈಗ ಬರಬಹುದು ಎಂದು ಕಾದು ನಿಂತಿದ್ದ ನಮಗೆ ಶಾಲೆಯೆಲ್ಲ ಖಾಲಿಯಾದಾಗ ಗಾಬರಿಯಾಯಿತು. ಹೋಗಿ ಶಾಲೆಯ ಟೀಚರನ್ನು ಭೆಟ್ಟಿಯಾಗಿ ಕೇಳಿದಾಗ "ಅವನು ನೀವು ಬಿಟ್ಟು ಹೋದ ಸ್ವಲ್ಪ ಹೊತ್ತಿನಲ್ಲಿಯೇ ನೀರು ಕುಡಿದು ಬರುತ್ತೇನೆಂದು ಮನೆಗೆ ಹೋದ ನಂತರ ಬರಲೇ ಇಲ್ಲ" ಎಂದರು.

"ಅವನು ಮನೆಯಲ್ಲಿಯೇ ಇರಬಹುದೆಂದು ನಾನು ತಿಳಿದೆ" ಎಂದು ಹೇಳಿ ಅವಳು ರಿಕ್ಷಾ ಹತ್ತಿ ಹೊರಟು ಹೋದಳು.

ನನಗಂತೂ ಆ ಬೇಜವಾಬ್ದಾರಿ ಟೀಚರನ್ನು ಏನುಮಾಡಲಿ ಎನ್ನುವಷ್ಟು ಕೋಪ ಬಂತು. ಸುಮ್ಮನೇ ಕೈ ಹೊಸೆಯುತ್ತಾ ನಿಂತೆ.

ಸುತ್ತಮುತ್ತಲೆಲ್ಲಾ ಹುಡುಕಿದೆವು. ಎಲ್ಲೆಲ್ಲೂ ಕಾಣಲಿಲ್ಲ. ಅಕ್ಕನಂತೂ ಕಾಣದ ದೇವರಿಗೆಲ್ಲ ಹರಕೆ ಹೊತ್ತಳು. ನಾನಂತೂ ರಾಘವೇಂದ್ರ ರವಿ ಸಿಕ್ಕಿದರೆ ನಿನಗೊಂದು ಕಾಯಿ ಒಡೆಸುತ್ತೇನೆ ಎಂದು ಬೇಡಿಕೊಂಡೆ.

ನಮ್ಮ ಅಕ್ಕಪಕ್ಕದ ಮನೆಯವರೆನ್ನೆಲ್ಲ ಕೇಳಿ ಬಂದರಾಯಿತು ಇನ್ನೇನು ಮಾಡು-ವದು. ಕಾಲೆಳೆಯುತ್ತಾ ಇಬ್ಬರೂ ಮನೆ-ಯೊಳಗೆ ತಲೆತಗ್ಗಿಸಿ ಕಾಲಿಟ್ಟೆವು.

ಹೋದೊಡನೆ ಎದುರಿನ ದೃಶ್ಯವನ್ನು ನೋಡಿ ನಾವಿಬ್ಬರೂ ಕಣ್ ಕಣ್ ಬಿಡುವ ಹಾಗಾಯಿತು.

New

# FACIT 1740

## Facit-dedicated to quality and efficiency.

*With Best Compliments From:*



D-12 MM

*Authorised Sales and Service Dealer :*



# SRI RAGHAVENDRA TYPEWRITER SERVICE

Taluk office circle,
B. H. Road,
SHIMOGA - 577201

**Display model**

**Features:**

* Four arithmetical operations
* Percentage; add on and discounts
* Item count; change of sign
* CE/C Keys and floating & fixed decimal point
* Monetary mode of operations
* Two memories
* 5/4 and truncation
* Mains/Battery (AC/DC) operation

**Also Equipped with**

* Data memory
* Delta percentage
* MU/MD functions
* Exchange

**Power Supply**
AC 220V. 50/60 Hz
2 Dry cells of 1.5 volts each

**Weight**
1 Kg.

ಎದುರಿಗೆ ಮಂಚದ ಮೇಲೆ ಭಾವ ರವಿಯನ್ನು ಕೂಡಿಸಿಕೊಂಡು ಅವನಿಂದ ಏನನ್ನೋ ಕೇಳಿ ನಗುತ್ತಿದ್ದಾರೆ. ನನಗಂತೂ ತುಂಬಾ ಕೋಪಬಂದು ರವಿಯನ್ನು ಕೇಳಿದೆ, ಏನೋ ಶಾಲೆಗೆ ಬಿಟ್ಟು ಬಂದರೆ ಎಲ್ಲಿಯೋ ಹೋಗಿ ನಮ್ಮನ್ನೆಲ್ಲಾ ಎಷ್ಟು ಸತಾಯಿಸಿದೆ ಎಂದು ಬಯ್ದೆ. ಭಾವ ನಗುತ್ತಾ ಹೇಳಿದರು. ನಾನು ಕೆಲಸದ ಸಲುವಾಗಿ ಶಾಲೆಯಿಂದಲೇ ಹೊರಟಿದ್ದೆ, ಆಗ ಇವನು ಹೊರಗೆ ಬಂದಾಗ ಇವನನ್ನು ಕರೆದುಕೊಂಡು ಆಫೀಸಿಗೆಹೋದೆ. ನಂತರ ಫೋನು ಮಾಡಬೇಕೆಂದರೆ ಫೋನು ಕೆಟ್ಟು ಹೋಗಿತ್ತು ಎಂದರು.

ನಾವು ಪಟ್ಟ ಪಾಡನ್ನು ಭಾವನಿಗೆ ಹೇಳಿದಾಗ ಭಾವನಂತೂ ಬಿದ್ದು-ಬಿದ್ದು ನಕ್ಕ.

— ಮಾಲಾ ಪ್ಯಾಟಿ
ರಾಯಚೂರು

## ಗುಬ್ಬಚ್ಚಿ ಸತ್ತಿತ್ತು

ಅಂದು ಮನೆಯಲ್ಲಿ ಸಡಗರವೋ ಸಡಗರ. ಏಕೆಂದರೆ ನಮ್ಮ ಮೋನನ್ನ ಶಾಲೆಗೆ ಕಳಿಸುವದು. ಬೇಗ ಸ್ನಾನಮಾಡಿಸಿ ದೇವರಿಗೆ ಹೋಗಿಬಂದು ತಿಂಡಿತಿಂದು ಹೊಸ ಚೀಲ ಪಾಟಿಪುಸ್ತಕ ತೆಗೆದುಕೊಂಡು ಲೆಫ್ಟ್ ರೈಟ ಮಾಡುತ್ತ ಹೊರಟ ನನ್ನ ಮಗನನ್ನ ನೋಡುವದೇ ನನಗೊಂದು ಆನಂದ. ಮನೆಯಲ್ಲಿ ಅಷ್ಟು ತುಂಟಾಟ ಮಾಡುವ ಮಗ. ಸರ್‌ಮುಂದೆ ನಮ್ರ ವಿದ್ಯಾರ್ಥಿಯಂತೆ ಕುಳಿತುಕೊಂಡದ್ದು ನೋಡಿ ಆನಂದದಿಂದ ಮನೆ ಮುಟ್ಟುವಷ್ಟರಲ್ಲಿ ಮಗ ಮನೆಗೆ ಹಾಜರ. ಯಾಕೋ ಶಾಲೆಯಲ್ಲಿ ಏಕೆ ಕೂಡಲಿಲ್ಲ? ಇಷ್ಟುಬೇಗ ಏಕೆ ಬಂದೆ, ಶಾಲೆಬಿಟ್ಟಬಳಿಕ ಮನೆಗೆ ಬರಬೇಕು ಅಂತಾ ಹೇಳಿದರೆ, ಅಮ್ಮಾ ಶಾಲೆಯಲ್ಲಿ ಒಂದು "ಗುಬ್ಬಚ್ಚಿಮರಿ ಸತ್ತಿತ್ತು" ಅದಕ್ಕೆ ಇವತ್ತು ಶಾಲೆಸೂಟಿ ಅಂದಾಗ ಇವನೇನು ಶಾಲೆ ಕಲಿತು ಶಾಣ್ಯಾ ಆಗುತ್ತಾನೆ ಅಂತಾ ಚಿಂತಿಸುತ್ತಿದ್ದೆ. ಆದರೆ ಇಂದು ನನ್ನ ಮಗ ಎಂಜನೀಯರ ಆಗಿದ್ದಾನೆ.

ಸುನಂದಾ ಜ್ಯೋತಿ
ಬಾಗಲಕೋಟ

## ಗಡಿಯಾರ ಕಳೆಯಿತು

ಇಂಗ್ಲೀಷ ಮಾಧ್ಯಮದ ಶಾಲೆಗೆ ನನ್ನ ಮಗನನ್ನು ಸೇರಿಸಬೇಕೆಂದಾಶಿಸಿ ಅರ್ಜಿ ಸಲ್ಲಿಸಿದೆ. ಮಗುವನ್ನು ಶಾಲೆಗೆ ಕೊಂಡೊಯ್ದುದ್ದು ಶಾಲೆ ಪ್ರಾರಂಭವಾಗಿ ಒಂದು ತಿಂಗಳದ ನಂತರ. ವಿದ್ಯಾ ಸಂಸ್ಥೆಯ ಪದ್ಧತಿಯ ಪ್ರಕಾರ ಸಂಘದ ಸದಸ್ಯರೋರ್ವರ ಒಪ್ಪಿಗೆ ಪತ್ರ ಪಡೆದು ಶಾಲಾ ಮುಖ್ಯ ಅಧ್ಯಾಪಕರನ್ನು ಸಂಪರ್ಕಿಸಿದೆ. ಅವರ ಆದೇಶದಂತೆ ಮಗುವನ್ನು ವರ್ಗದ ಕೋಣೆಗೆ ಕರೆದೊಯ್ದು ಕೂಡ್ರಿಸಿದೆ. ವರ್ಗದ ಶಿಕ್ಷಕಿ 'ಸಾಧ್ಯವಾದರೆ ಹೊರಗಡೆ ಕುಳಿತಿರಿ' ಎಂದು ನನಗೆ ಹೇಳಿ ವರ್ಗದ ಕೋಣೆಯ ಬಾಗಿಲು ಹಾಕಿದಳು. ಬಿಡುವಿನ ಗಂಟೆ ಬಾರಿಸುವವರೆಗೂ ನಾನು ಹೊರಗಡೆ ಕುಳಿತೇ ಇದ್ದೆ. ಉಳಿದೆಲ್ಲ ಮಕ್ಕಳೊ ಕೂಗುತ್ತ, ಕುಣಿಯುತ್ತ ನಗುತ್ತ ಹೊರಗಡೆ ಬಂದರೆ ನನ್ನ ಮಗ 'ಅಪ್ಪಾ ಅಮ್ಮಾ' ಎನ್ನುತ್ತ ಗಂಗಾಧಾರೆಯನ್ನು ಸುರಿಸುತ್ತ ಬಂದು ನನ್ನನ್ನಪ್ಪಿದ, ಮುಂಜಾನೆ ಖರೀದಿಸಿದ ಆಟಿಗೆಯ ಕೈ ಗಡಿಯಾರವನ್ನು ಕಳೆದುಕೊಂಡಿದ್ದ. ಅವನ ಅಳು ನಿಲ್ಲಿಸುವುದಕ್ಕೋಸ್ಕರ ಅಂಗಡಿಗೆ ಕರೆದೊಯ್ದು ಆಟಿಗೆ ಗೊಂಬೆಗಳನ್ನು ಕೊಡಿಸಿದೆ.

ತಿಮ್ಮಣ್ಣ ವಿಷ್ಣು ಯಾಜಿ
ಹೊನ್ನಾವರ

## ಅರೆರೆ....ಕಳ್ಳ....

ಮಗುವಿಗೆ ತಿಳಿವಳಿಕೆ ಬಂದಾಯ್ತು ಮತ್ತು ಮಾತನಾಡಲೂ ಬಂದಂತಾಯಿತು. ಇನ್ನು ಶಾಲೆಗೆ ಕಳಿಸಬೇಕೆಂಬ ಹಂಬಲ ಮನೆಯವರಿಗೆಲ್ಲ. ನನ್ನ ತಮ್ಮ ರಾಮುವಿಗೆ ಶಾಲೆ ಎಂದರೆ ತುಂಬಾ ಭಯ, ಶಾಲೆಯೆಂದರೆ ಜೈಲು ಎಂದು ತಿಳುವಳಿಕೆ ಮೂಡಿತ್ತೋ ಏನೋ! ಅದಿರಲಿ, ಒಳ್ಳೆಯ ಮುಹೂರ್ತ ನೋಡಿ ಅಣ್ಣನಾದ ನನಗೆ ಮಗುವನ್ನು ಕರೆದೊಯ್ಯುವ ಸರದಿ ಬಂತು.

ಶಾಲೆಗೆ ಹೋಗೋಣವೇ ಎಂದಾಕ್ಷಣ ಶುರುವಾಯ್ತು ನೋಡ್ರಿ ಮನೆಯಲ್ಲಿ ರಾದ್ಧಾಂತವೇ ರಾದ್ಧಾಂತ "ಜಾತ್ರೆಯಲ್ಲಿ ಎಷ್ಟು ಗದ್ದಲವು ನಮ್ಮ ಕಿವಿಗೆಬಂದು ಅಪ್ಪಳಿಸುವದೋ ಅದರಂತೆ ನಮ್ಮ ಒಂದೇ ಮನೆಯಲ್ಲಿಯೇ ಆಯಿತು ಅಂತೂ ನಾನು ನನ್ನ ಹೆಗಲ ಮೇಲೆ ರಾಮುನನ್ನು ಹೊತ್ತುಕೊಂಡು ಹೋಗಲು ಸಿದ್ಧವಾದೆನು. ರಾಮುನನ್ನು ಗಟ್ಟಿಯಾಗಿ ಹಿಡಿಯಲಿಕ್ಕಾದರೂ ದೇವರು ಯಾಕೆ ಹತ್ತು ಕೈ ಕೊಡಲಿಲ್ಲ ಎಂದೆನಿಸಿತು. ಹೊತ್ತುಕೊಂಡು ಹೋಗುವಾಗ ಅಂದು ಮಳೆ ಬಂದಿತ್ತು. ಓಣಿಯಲ್ಲಿ ರಾಡಿ ಬೇರೆ. ರಾಮುವಿನ ಹೊಯ್ದಾಟವನ್ನು ತಡೆಹಿಡಿಯಲು ಅಸಾಧ್ಯವಾಗಿ ನಾನು ಅತ್ತಿಂದಿತ್ತ ಹೊಯ್ದಾಡಿ ನನ್ನ ಮೈಯಲ್ಲಾ ರಾಡಿಯಿಂದ Sprey ಮಾಡಿದ್ಹಂಗಾಗಿತ್ತು. ಹೇಗೋ ಕಷ್ಟಪಟ್ಟು ಶಾಲೆ ತಲುಪಿದೆ.

ಅಂತೂ ನನ್ನ ತಮ್ಮ ರಾಮು ಶಾಲೆಯಲ್ಲಿ ಕುಳಿತುಕೊಂಡ ಎಂಬ ಹೆಮ್ಮೆಯಿಂದ ನಮ್ಮ ಮನೆಯ ದಾರಿಹಿಡಿದೆ. ಮನೆಗೆ ಬಂದು ನೋಡಿದಾಗ ನನ್ನ ರಾಮು ಮನೆಯಲ್ಲಿಯೇ ಇದ್ದ. ಇದು ತುಂಬಾ ಆಶ್ಚರ್ಯವಲ್ಲವೆ?

"ರಾಮು ಹೇಗೆ ಬಂದ್ಯೋ? ಎಂದು ಕೇಳಿದಾಗ ಮಾಸ್ತರು ಶಾಲೆಬಿಟ್ಟು ಚಹಾದಂಗಡಿ ಕಡೆಗೆ ಹೋಗಿದ್ದರು ಅದನ್ನು ನೋಡಿಕೊಂಡು, ತಪ್ಪಿಸಿಕೊಂಡು ಬೇರೆ ಓಣಿಯಿಂದ ನಮ್ಮ ಮನೆಗೆ ಬಂದುಬಿಟ್ಟಿ ಎನ್ನಬೇಕೆ? ನನ್ನ ಕಷ್ಟವೆಲ್ಲಾ ಗುಡ್ಡಕ್ಕೆ ಕಲ್ಲು ಹೊತ್ತಂತಾಯಿತು-

ಶಾಂತೇಶ ಬಿ. ಪಾಟೀಲ
ಶಿರಹಟ್ಟಿ





# ಕಹಿಮಾವು

ದ.ಲ.ಕೆರೂರ

ಹೀಂಗೊಂದೂರೊಳಗೊಬ್ಬನು ರಾಜ
ಕಬ್ಬಿಗನೊಬ್ಬನು ಆವನ ಸಖ
ಹ್ಯಾಂಗಾದರು ಸರಿ ಆ ರಾಜನ ಬಣ್ಣಿಸಿ
ತೋಷಿಪುದೊಂದೆ ಕವಿಗೆ ಸುಖ ॥

ದಿನಗಳೆದಂತೆ ರಾಜನಿಗಂತೆ
ಕವಿಗೂ ಬೆಳೆಯಿತು ಒಡನಾಟ
ಕೆಳೆಯೆಂದರು ಸರಿ ಕಳೆಕಳೆಯಾಗಿಯೆ
ಹೆಚ್ಚುತಲಿದ್ದಿತು ಹುಡುಗಾಟ ॥

ಕುದುರೆಯ ಕೊಂಬನು ಕೇಳಿರೆ ರಾಜನು
ಕವಿತಂದೀವನು ಹರುಷದಲಿ
ರಾಜನಕೋರಿಕೆ ತೀರಿಸದಿರೆ ಕವಿ
ಜರೆಯುವನಾತನ ಪರುಷದಲಿ ॥

ಅರೆಚಣ ಕವಿಯನು ಕಾಣದಿದ್ದರೆ
ರಾಜನದೆಷ್ಟೋ ಗುಡುಗಾಟ
ಮರುಚಣ ನಿಂದಿರೆ ಕವಿ ಸಮ್ಮುಖದಲಿ
ತಕ್ಷಣವಾತಗೆ ರಸದೂಟ ॥

ಒಂದಿನ ರಾಜನಿಗಾಯಿತು ಬಯಕೆ
ಕಹಿ ಕಹಿ ಮಾವದು ಬೇಕೆಂದು
ಕೇಳಿ ಕವಿಗೆ ತಾನಾಯಿತು ಚಿಂತೆ
ತಾನದ ತರುವದೆ? ಎಲ್ಲಿಂದು? ॥

ಕರೆಸಿ ತೋಟಿಗನ ರಾಜಾಜ್ಞೆಯ ಕವಿ
ಸಾರಿಬಿಟ್ಟನಾ ತೋಟಿಗಗೆ
ಕಹಿಮಾವನು ನೀ ತಂದು ನೀಡದಿರೆ
ತಲೆ ದಂಡವೆ ಗತಿಯೈ ನಿನಗೆ ॥

ಬೆದರಿದ ಬೆಚ್ಚಿದನಾದರು ತೋಟಿಗ
ಕಹಿ ಮಾವನು ತಾ ತಹೆನೆಂದ
ಅಚ್ಚರಿ ಪಡದಿರಿ ಬಿಚ್ಚು ಮಾತಿದು
ಸಮಯವು ತುಸು ತನಗಿರಲೆಂದ ॥

ತೋಟಕೆ ಬಂದಿಹ ತೋಟಿಗನಾಗಲೆ
ಬೆಳೆದನಚ್ಚರಿಯ ಬೆಳೆಯೊಂದ
ಕಾಲಕೆ ಫಲ ನೀಡಿರೆ ಮರ ತೋಟಿಗ
ರಾಜಗೆ ಕಹಿಮಾವನು ತಂದ ॥

ಚಿನ್ನದ ಬಣ್ಣದ ಹಣ್ಣನು ತಿಂದು
ರಾಜನು ಮೋರೆಯ ಕಿವುಚಿದನು
ಕವಿಗಿನ್ನೊಂದನು ನೀಡಲು ಆತನು
ಸವಿದಿರೆ ಕಪಿಯಂತಾಗಿಹನು ॥

ಹೊಂಬಣ್ಣದ ಮಾವಿನ ತನಿರಸವೀ-
ಪರಿ ಕಹಿಯಾಗಿಹುದೆಂತು?
ಬಿಂಬಿಸಿ ನೀ ಪೇಳೆಂದಿರೆ ಗೆಳೆಯರು
ತೋಟಿಗನೊರೆದನು ತಾನಿಂತು ॥

ಮಾವಿನ ಮರದಾಸುತ್ತಲು ನೆಟ್ಟನು
ಬಿಡದೆ ಬೇವಿನಾಸಸಿಗಳನು
ಬೇವಿನ ಸಸಿಗಳ ಸಾರವ ಹೀರುತ
ಮಾವಾದುದು ಕಹಿ! ಬೆರಗೇನು! ॥

ಮಾವನು ಬೆಳೆವೊಡೆ ಬೇವಿನಸಸಿಗಳ
ಬಿಡದೆಕಿತ್ತು ಬಿಸಾಕಿಬಿಡಿ
ಬೇವಿನ ಸಸಿಗಳನುಳಿಸಿಕೊಂಡಿರೆ
ಮಾವಿನ ಕತ್ತನು ಹಿಸುಕಿಬಿಡಿ ॥

ದುರ್ಜನರಳಿದರೆ ಸಜ್ಜನರುಳಿವು
ಹೆಜ್ಜೇನನು ನೀವ್ ತೊರೆಯದಿರಿ
ಸಜ್ಜನರೆಂದರೆ ನಾಡಿನ ವೈಭವ
ಬೀಜಮಾತಿದು ಮರೆಯದಿರಿ॥

ರಾಜನ ಮುಖವನು ನೋಡುತ ಕವಿಯು
ನಕ್ಕನು ನಸುನಗೆ ಮೀಸೆಯಲಿ
ರಾಜನು ಕೊರಳಿನ ಮುತ್ತಿನ ಹಾರವ
ತೋಟಿಗಗಿತ್ತನು ನಲ್ಮೆಯಲಿ ॥

# ಸೀಮೆಎಣ್ಣೆ ಚಿಲುಮೆ....



"ನಾವು ಹೇಗಾದ್ರೂ ಮಾಡಿ ಮದ್ವೆಗಿಂತ ಮೊದ್ಲೇ ವರದಕ್ಷಿಣೆಯ ಪೂರ್ತಿ ಹಣವನ್ನು ಕೊಡಲೇ ಬೇಕಿದೆ.. ನಮ್ಮ ಮಗಳನ್ನು ಕೊಡ್ತೀರೋದು ಸೀಮೆಎಣ್ಣೆ ವ್ಯಾಪಾರಿ ಮಗನಿಗೇರೀ....!.."



"ಮೂರು ಸಲ ನಿನ್ನ ಮಾತು ಕೇಳಿದ್ದಾಯ್ತಲ್ಲಮ್ಮಾ.... ಈ ಸಲ ಹನಿಮೂನ್ ಮುಗಿಯೋ ವರೆಗೂ ನೀನು ಕಾಯಲು ಸಾಧ್ಯವಿಲ್ಲವೇ?....."



"ಎಲ್ಲಾ ಆ ಸೀಮೆಎಣ್ಣೆ ಮಾರುವಾತನದೇ ತಪ್ಪು, ಸಾರ್. ಆತ ಸರಿಯಾಗಿ ಅಳೆದು ಕೊಟ್ಟಿದ್ದರೆ ನನ್ನ ಸೊಸೆ ಹೇಳಿಕೆ ಕೊಡೋಕೆ....... ..... ಬದುಕುಳೀತಿರಲಿಲ್ಲ"

ನರೇಂದ್ರ



# ನೆನಪಿನ ದೋಣಿಯಲ್ಲಿ

ಎಂ. ಲೀಲಾವತಿ : ಕನ್ನಡ ಚಿತ್ರರಂಗದಲ್ಲಿ ಮರೆಯಲಾಗದ ಹೆಸರು. ಚಿತ್ರರಂಗ ಪ್ರವೇಶಿಸಿದ್ದು ೧೯೪೯ ರಲ್ಲಿ. ಆಗಿನ್ನೂ ಕನ್ನಡ ಚಿತ್ರರಂಗದ ಸಂಕ್ರಮಣ ಕಾಲ. ಪೌರಾಣಿಕ ಕಥೆಗಳ ಕಪ್ಪು ಬಿಳುಪಿನ ಚಿತ್ರಗಳು ಬರುತ್ತಿದ್ದವು. ನಗರದಲ್ಲಿ ಮಾತ್ರ ಚಿತ್ರ ಮಂದಿರಗಳಿದ್ದ ಕಾಲ. ಬೆಳ್ಳಿ ಪರದೆಯ ಗೊಂಬೆಗಳು ಹೇಗೆ ಮಾತಾಡುತ್ತಿವೆ. ಎಂದು ಜನ ಚರ್ಚಿಸುತ್ತಿದ್ದರು. ಚಲಚಿತ್ರಗಳನ್ನು ವಿಸ್ಮಯದಿಂದ ನೋಡುತ್ತಿದ್ದರು. ಲೀಲಾವತಿ ಚಿತ್ರರಂಗ ಪ್ರವೇಶಿಸಿದ್ದು ಅಂಥ ದಿನಗಳಲ್ಲಿ. ಅಲ್ಲಿಂದ ಇಲ್ಲಿಯವರೆಗೆ, ಲೀಲಾವತಿ ಚಿತ್ರರಂಗದಲ್ಲಿ ಸುಮಾರು ಇಪ್ಪತ್ತೇಳು ವರ್ಷಗಳ ಅನುಭವ ಪಡೆದಿದ್ದಾರೆ. ಕನ್ನಡ ಚಿತ್ರರಂಗ ಪೌರಾಣಿಕದಿಂದ ರಾಜಮಹಾರಾಜರ ಕಥೆಗೆ ವಾಲಿದ್ದು. ಆ ನಂತರ ಸಾಮಾಜಿಕ ಚಿತ್ರಗಳೆಡೆ ತಿರುಗಿದ್ದು. [illegible]ನಚಿತ್ರಗಳು ಬಂದಿದ್ದು ಲೀಲಾವತಿಯವರಿಗೆ ಎಲ್ಲ ಗೊತ್ತು. ರಾಜಕುಮಾರರ ಪ್ರಥಮ ನಾಯಕಿಯಾಗಿ, ಆ ನಂತರ ಅಕ್ಕ, ದಾದಿ, ಅಜ್ಜಿ ಎಲ್ಲ ಬಗೆಯ ಪಾತ್ರಗಳನ್ನು ಮಾಡಿದ ಲೀಲಾವತಿ ಅನುಭವದ ಆಗರ.

ಕಳೆದ ಆಗಸ್ಟ ತಿಂಗಳಿನಲ್ಲಿ ಬೆಂಗಳೂರಿನ ಸತ್ಕಾರ ಹೊಟೆಲ್‌ದಲ್ಲಿ ಲೀಲಾವತಿ ತಂಗಿದ್ದರು. ಚಿತ್ರರಂಗದಲ್ಲಿನ ಎರಡೂವರೆ ದಶಕದ ಅನುಭವ ತಿಳಿಯುವ ಉದ್ದೇಶದಿಂದ ಕರ್ಮವೀರ ಪ್ರತಿನಿಧಿ ಅವರು ಇಳಿದುಕೊಂಡಿದ್ದ ಹೊಟೆಲ್‌ಗೆ ಹೋದಾಗ ಲೀಲಾವತಿ ಅದೇ ನಗು ಮುಖ ಮಾತಿಗೊಮ್ಮೆ ನಗುತ್ತಲೇ ಸ್ವಾಗತಿಸಿದರು. ವೀರಕೇಸರಿ ಚಿತ್ರದ (೧೯೬೩) ತರುಣಿ ಲೀಲಾವತಿಯೆಲ್ಲಿ ? ಈಗ ನಡುವಯಸ್ಕಳಂತೆ ಕಾಣುವ ಈ ಲೀಲಾವತಿ ಎಲ್ಲಿ?

ಬಂದ ಕಾರಣ ತಿಳಿಸಿದಾಗ ಲೀಲಾವತಿ ನೆನಪಿನ ದೋಣಿಯಲ್ಲಿ ಕುಳಿತರು. ೧೯೪೯ರ ಕಾಲಘಟ್ಟಕ್ಕೆ ನಮ್ಮ[illegible]ದ್ದರು.

●

ನೋಡಿ. ನಾನು ಚಿತ್ರರಂಗ ಪ್ರವೇಶಿಸಿದ್ದು ನಾಟಕಗಳ ಮುಖಾಂತರ. ನಟ–ನಟಿಯಾಗಬೇಕಾದವರಿಗೆ ಅಭಿನಯ ಗೊತ್ತಿರಬೇಕು ಎಂದು ನಂಬಿದ ಕಾಲ ಅದು. ಮೇಲಾಗಿ ವೃತ್ತಿ ನಾಟಕದವರೇ ಸಿನೇಮಾ ಮಾಡುತ್ತಿದ್ದರು. ಅವರು ತಮ್ಮ ಕಂಪನಿಯ ನಟ ನಟಿಯರನ್ನೇ ಚಿತ್ರರಂಗಕ್ಕೆ ತೆಗೆದುಕೊಳ್ಳುತ್ತಿದ್ದರು. ಒಂದು ಚಿತ್ರ [illegible]ದರೆ ಒಂದು ಅಥವಾ ಎರಡು ವರ್ಷ [illegible]ತ್ತಿತ್ತು. ನಟ–ನಟಿಯರಿಗೆ ಹಾಡು ಬರಬೇಕೆಂ[illegible]ಕಡ್ಡಾಯವಾಗಿತ್ತು. ನಾನು ಕೂಡ ನಾಟಕ ಕಂ[illegible]ಯಲ್ಲಿದ್ದೆ. ಈಗ ಲೋಕೇಶ ಇದ್ದಾರಲ್ಲ. ಅವರ ತಂದೆಯ ಕಂಪನಿಯಲ್ಲಿದ್ದೆ. ೧೯೪೯ ರಲ್ಲಿ "ಭಕ್ತ ಪ್ರಹ್ಲಾದ" ಚಿತ್ರದಲ್ಲಿ ನನ್ನದು ಸಖಿಯ ಪಾತ್ರ. ಅಂಜಂಜುತ್ತಲೇ ಕೆಮರಾದ ಮುಂದೆ [illegible] [illegible] [illegible]ದ್ದಿಲ್ಲ. ದೂರ ಮತ್ತು ಸಮೀಪದ [illegible] ಒಂದೇ ಕ್ಯಾಮರಾ ಸೆರೆ ಹಿಡಿಯುತ್ತಿತ್ತು. [illegible]



**'ನನಗೆ ಸಹನೆಯಿದೆ. ತಾಳ್ಮೆಯಿದೆ. ಎಂಥ ಸಂದಿಗ್ಧ ಸಮಯದಲ್ಲೂ ನಾನು ತಾಳ್ಮೆಯಿಂದ ಇರುತ್ತೇನೆ. ಅಂತೆಯೇ ತಲೆಕೆಡಿಸಿಕೊಂಡಿಲ್ಲ. ಯಾವುದೇ ವಾದವಿವಾದಕ್ಕೆ ಸಿಲುಕಿಕೊಂಡಿಲ್ಲ. ನಾನು ಯಾರಿಗೂ ಕೆಟ್ಟವಳಾಗಿಲ್ಲ. ಹೀಗಾಗಿ ಚಿತ್ರರಂಗದಲ್ಲಿ ಎಲ್ಲರಿಗೂ ಬೇಕಾಗಿದ್ದೇನೆ.'**

ಗ್ರಹಣ ಕೂಡ ಕ್ಯಾಮರಾದಲ್ಲಿ ಅಡಕವಾಗಿರುತ್ತಿತ್ತು. ಮದ್ರಾಸಿನ ಸ್ಟುಡಿಯೋದಲ್ಲಿ ಮುಂಜಾನೆ ಆರಂಭವಾದ ಶೂಟಿಂಗ ರಾತ್ರಿ ಮೂರರವರೆಗೆ ಮುಂದುವರೆಯುತ್ತಿತ್ತು.

ಸಿನೇಮಾ ಪ್ರೊಡ್ಯೂಸರರ ಕಾರು ಮನೆಯ ಮುಂದೆ ಬಂದು ನಿಂತಾಗ ನಟರಾದ ನಮಗೆ ಬಹಳ ಹೆಮ್ಮೆ. ನಮ್ಮ ಮನೆಯ ಮುಂದೆ ಕಾರು ನಿಂತದ್ದನ್ನು ಅಕ್ಕಪಕ್ಕದವರು ಬೆರಗುಗಣ್ಣಿನಿಂದ ನೋಡುತ್ತಿದ್ದರು.

ಹೀಗಿರುತ್ತಿರುವಾಗ ಚಿತ್ರರಂಗ ತೀವ್ರಗತಿಯಿಂದ ಬೆಳೆಯಿತು. ನಾನು ನಾಯಕಿ ಪಟ್ಟ ಅಲಂಕರಿಸಿದೆ. ವೀರಕೇಸರಿ ಹಿಟ್ ಆದಾಗ ಅದರ ಹಿಂದೆಯೇ ನಾನು ನಾಯಕಿಯಾದ ಇಪ್ಪತ್ತು ಚಿತ್ರಗಳು ಒಂದೆರಡು ವರ್ಷಗಳ ಅವಧಿಯಲ್ಲಿಯೇ ಬಿಡುಗಡೆಯಾದವು. ನನ್ನ ಮತ್ತು ರಾಜಕುಮಾರರ ಜೋಡಿ ಅದೆಷ್ಟು ಜನಪ್ರಿಯವಾಗಿತ್ತೆಂದರೆ, ಉತ್ತರ ಕರ್ನಾಟಕದಲ್ಲಿ ನಾನು ವೃತ್ತಿ ಕಂಪನಿಗಳಲ್ಲಿ ಭಾಗವಹಿಸಲು ಹೋದಾಗ ಹಳ್ಳಿಯ ಹೆಂಗಳೆಯರು "ಏನಮ್ಮ ನಿಮ್ಮ ಯಜಮಾನ್ರು ! ಅದೇ ರಾಜಕುಮಾರ ಬಂದಿಲ್ವಾ ?" ಅಂತ ಕೇಳುತ್ತಿದ್ದರು. ಆ ದಿನಗಳೇ ಬೇರೆ. ಚಿತ್ರರಂಗದಲ್ಲಿ ಇರೋರನ್ನ ದೇವರ ಹಾಗೆ ನೋಡ್ತಿದ್ದರು.

ಮಾತು ವ್ಯವಹಾರಕ್ಕೆ ತಿರುಗಿದಾಗ ಲೀಲಾವತಿಯವರು ಯಾವುದೇ ಭಾವುಕತನವಿಲ್ಲದೆ ವಾಸ್ತವಿಕ ಸತ್ಯವನ್ನೇ ಹೇಳಿದರು. "ನೋಡಿ; ಈಗಿನಂತೆ ಆಗಲೂ ಕೂಡ ಚಿತ್ರರಂಗ ವ್ಯವಹಾರವೇ ಆಗಿತ್ತು. ನಿರ್ಮಾಪಕರು ಹಣದ ಆಸೆಗಾಗಿಯೇ ಚಿತ್ರಗಳನ್ನು ಮಾಡುತ್ತಿದ್ದರು. ನಾವು ಕೂಡ ದುಡ್ಡು ತೆಗೆದುಕೊಂಡೇ ಚಿತ್ರಗಳಲ್ಲಿ ಅಭಿನಯಿಸುತ್ತಿದ್ದೆವು. ಸೇವೆ, ಉದ್ಧಾರ, ಕಲಾಪೂಜೆ ಇವೆಲ್ಲ ಸುಮ್ಮನೇ ಹೇಳಿಕೊಳ್ಳುವ ಮಾತು. ಆಗಿನ ಕಾಲದಲ್ಲಿ ಹೆಚ್ಚು ಚಿತ್ರಮಂದಿರಗಳಿದ್ದಿಲ್ಲ. ಪ್ರೇಕ್ಷಕರ ಸಂಖ್ಯೆ ಕೂಡ ಕಮ್ಮಿಯಿತ್ತು. ಹೀಗಾಗಿ ಕಡಿಮೆ ಸಂಭಾವನೆ ಇತ್ತು. ಈಗ ಕಾಲ ಬದಲಾಗಿದೆ. ಪ್ರೇಕ್ಷಕರ ಸಂಖ್ಯೆ ಬೆಳೆದಿದೆ. ಚಿತ್ರಗಳೂ ಶತದಿನೋತ್ಸವವನ್ನು ಸಲೀಸಾಗಿ ಆಚರಿಸುತ್ತಿವೆ. ಹೀಗಾಗಿ ನಟನಟಿಯರ ಸಂಭಾವನೆಯೂ ಹೆಚ್ಚಿದೆ" ಎನ್ನುತ್ತಾರೆ ಲೀಲಾವತಿ.

ಆಗ ಕೃಷ್ಣಮೂರ್ತಿ ಪುರಾಣಿಕ, ಅ.ನ. ಕೃಷ್ಣರಾಯರು ಸೀತಾರಾಮ ಶಾಸ್ತ್ರಿಗಳು ಹುಣಸೂರು ಕೃಷ್ಣಮೂರ್ತಿ, ಎಂ.ಆರ್.ವಿಠ್ಠಲರಂತಹ ಸಾಹಿತಿಗಳು, ಸಾಹಿತ್ಯಬಲ್ಲ ನಿರ್ದೇಶಕರು ಸಿನೇಮಾ ಮಾಡುತ್ತಿದ್ದರು. ಹೀಗಾಗಿ ಸಿನೇಮಾಗಳು ಸಾಹಿತ್ಯಮಯವಾಗಿರುತ್ತಿದ್ದವು. ಆಗಿನ ಪ್ರೇಕ್ಷಕರೂ ಕೂಡ ಸಾಹಿತ್ಯಿಕವಾದ ಸಿನೇಮಾಗಳನ್ನು ನೋಡುತ್ತಿದ್ದರು. ನಾವೂ ಕೂಡ ಪಾತ್ರಗಳಲ್ಲಿ ತನ್ಮಯರಾಗಿ ಕೆಲಸ ಮಾಡುತ್ತಿದ್ದೆವು ಎನ್ನುತ್ತಾರೆ ಲೀಲಾವತಿ.

ಪ್ರಸ್ತುತ ಚಿತ್ರರಂಗದಲ್ಲಿನ ಗ್ಲಾಮರ್ ಮತ್ತು ಗಾಸಿಪ್‌ಗಳ ಕಡೆಗೆ ಮಾತು ಹೊರಟಾಗ ಲೀಲಾವತಿ ಸಹ ಯಾವುದೇ ವಿಷಯಕ್ಕೆ ತಲೆ ಕೆಡಿಸಿಕೊಳ್ಳದೆ ಹೇಳಿದರು. ಅಭಿನಯದ ಬಂಡವಾಳವಿದ್ದ ನಟ–ನಟಿ, ಚಿತ್ರರಂಗದಲ್ಲಿ ಬದುಕಿ ಉಳಿಯುತ್ತಾರೆ. ಅಬ್ಬರದ ಪ್ರಚಾರ, ಅತಿ ರಂಜಿತ ಸುದ್ದಿಯಿಂದ ಬಂದವರು ಹೇಳ ಹೆಸರಿಲ್ಲದಂತೆ ನಿರ್ಗಮಿಸುತ್ತಾರೆ. ನಾನು ಎರಡೂವರೆ ದಶಕದ ಅನುಭವದಿಂದ ಹೇಳ್ತಾ ಇದ್ದೀನಿ. ನನ್ನ ಮುಂದೆಯೇ ಅದೆಷ್ಟೋ ನಟ ನಟಿಯರು ಭವ್ಯ ಕನಸುಗಳನ್ನು ಹೊತ್ತು ಬಂದರು. ಮೇಲಕ್ಕೆ ಏರಿದರು. ನನ್ನ ಮುಂದೆಯೇ ಅವರು ನಿರ್ಗಮಿಸಿದರು ಎನ್ನುತ್ತಾರೆ ಲೀಲಾವತಿ.

ಇತ್ತೀಚಿನ ಕನ್ನಡ ಚಿತ್ರಗಳಲ್ಲಿ ನನಗೆ ನಮೂನಮೂನೆಯ ಪಾತ್ರಗಳು ಸಿಕ್ಕುತ್ತಿವೆ. ನಾನು ೨೦೦ ಕ್ಕಿಂತಲೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದೇನೆ. ಅಭಿನಯಿಸಲೇಬೇಕು ನೋಡಿ. ನಾನು ಚಿತ್ರರಂಗವನ್ನು ವೃತ್ತಿಯನ್ನಾಗಿ ಮಾಡಿಕೊಂಡಿದ್ದೇನೆ: ಜನ ಏನನ್ನಾದರೂ ತಿಳಿದುಕೊಳ್ಳಲಿ. ಚಿತ್ರ ಒಳ್ಳೆಯದಿರಲಿ, ಕೆಟ್ಟದ್ದಿರಲಿ ಪಾತ್ರ ಮುಖ್ಯ ಎಂದರು ಲೀಲಾವತಿ. ಕನ್ನಡ ಅಭಿಮಾನ ಇರಲೇಬೇಕು. ಯಾಕಿರಬಾರದು ? ಆದರೆ ಕನ್ನಡದ ಉದ್ಧಾರ ಕನ್ನಡದ ಸೇವೆ ಎಂಬುದು ತಪ್ಪು, ನಮ್ಮಂಥ ಒಬ್ಬಿಬ್ಬರಿಂದ ಕನ್ನಡದ ಉದ್ಧಾರ ಸಾಧ್ಯವಾಗುವುದಿದ್ದರೆ ಎಂದೋ

ಉದ್ಧಾರವಾಗುತ್ತಿತ್ತು ಎನ್ನುತ್ತಾರೆ ಲೀಲಾವತಿ. ಮದ್ರಾಸಿನಲ್ಲಿ ಒಂದು ಎಸ್ಟೇಟ ಮಾಡಿಕೊಂಡಿದ್ದಾರೆ. ಬೆಂಗಳೂರಿನಲ್ಲಿ ಒಂದು ಮನೆಯಿದ್ದು ಅದು ಕೂಡ ಯಾವುದೋ ಕಾನೂನಿನ ತೊಂದರೆಯಲ್ಲಿ ಸಿಕ್ಕಿಬಿದ್ದಿರುವುದನ್ನು ಲೀಲಾವತಿ ಅಂತರ್ಮುಖಿಯಾಗಿ ಗೊಣಗಿಕೊಂಡರು.

ಈಗಿನ ಸಿನೇಮಾದ ಮುಂದುವರೆದ ತಾಂತ್ರಿಕತೆಯ ಬಗ್ಗೆ ಲೀಲಾವತಿಯವರಿಗೆ ಹೆಮ್ಮೆ. ಕೆಮರಾಗಳು ನಿರ್ದೇಶಕ ನಟ ನಟಿಯರ ಹೊಣೆ ಮತ್ತು ತೊಂದರೆಯನ್ನು ಕಡಿಮೆ ಮಾಡುತ್ತಿವೆ. ಆಗಿನ ಕಾಲದಲ್ಲಿ ಮೂರು ತಿಂಗಳು ಮಾಡುವ ಕೆಲಸವನ್ನು ಈಗಿನ ಕಾಲದಲ್ಲಿ ಮೂರು ತಾಸುಗಳಲ್ಲಿ ಮಾಡಲಾಗುತ್ತಿದೆ ಎನ್ನುತ್ತಾರೆ ಲೀಲಾವತಿ.

ಲೀಲಾವತಿಯವರು ಅಭಿನಯಿಸಿದ ಚಿತ್ರಗಳ ದಾಖಲಾತಿಗಿಂತ ಅವರ ಅನುಭವಗಳನ್ನು ಸಂಗ್ರಹಿಸುವ ಉದ್ದೇಶವಾದುದರಿಂದ ಲೀಲಾವತಿಯವರನ್ನು ನೆನಪಿನ ದೋಣಿಯಲ್ಲೇ ಅಲೆಯಲು ಬಿಟ್ಟೆವು. ಆದರೆ ಚಿತ್ರರಂಗದಲ್ಲಿ ಬಣ್ಣದ ಆಗಮನ, ಅವರ ಜೊತೆಗೆ ಹೊಸಹೊಸ ನಟ ನಟಿಯರ ಪ್ರವೇಶದಿಂದಾಗಿ ಲೀಲಾವತಿ ೧೯೬೫ ರಿಂದ ೧೯೭೪ ರವರೆಗಿನ ಅವಧಿಯಲ್ಲಿ ತೆರೆಯಿಂದ ನಿರ್ಗಮಿಸಲೇಬೇಕಾಯಿತು. ಈ ಅವಧಿಯಲ್ಲಿ ಪುಟ್ಟಣ್ಣಕಣಗಾಲರು ಬಂದು ತಮ್ಮ "ಕಾಲೇಜುರಂಗ" ದಲ್ಲಿ ಮತ್ತೊಮ್ಮೆ ಛಾನ್ಸಕೊಟ್ಟರು. ತಮ್ಮನ್ನು ಜನ ಮರತೇ ಬಿಟ್ಟಿದ್ದಾರೆಂದು ಲೀಲಾವತಿ ಭಾವಿಸಿದ್ದರಂತೆ. ಆದರೆ ಅವರ ಎಣಿಕೆ ತಪ್ಪಾಗಿತ್ತು. ಆ ಚಿತ್ರವನ್ನು ನೋಡಿದ ಹಳೆಯ ಅಭಿಮಾನಿಗಳು ಹೆಚ್ಚೆಚ್ಚು ಚಿತ್ರಗಳಲ್ಲಿ ಅಭಿನಯಿಸುವಂತೆ ಕೇಳಿಕೊಂಡರಂತೆ. ನಿರ್ಮಾಪಕನಿರ್ದೇಶಕರೂ ಬಂದು ಕೇಳಿಕೊಂಡರಂತೆ ಅದಕ್ಕಾಗಿ ೧೯೭೪ ರಿಂದ ಇಲ್ಲಿವರೆಗೆ ಮತ್ತೆ ೩೭ ಚಿತ್ರಗಳಲ್ಲಿ ಅಭಿನಯಿಸಿದೆ. ಎರಡೂವರೆ ದಶಕದ ಚಿತ್ರರಂಗದ ಕೆಲಸ ಸಾಕಾಗಿದೆ. ಕೈಯಲ್ಲಿ ಇನ್ನೂ ಎರಡು ಮೂರು ಚಿತ್ರಗಳಿವೆ. ಅವನ್ನು ಮುಗಿಸಿದ ನಂತರ ವಿಶ್ರಾಂತಿ ಪಡೆಯುವೆ, ಹದಿನೆಂಟು ವರ್ಷ ವಯಸ್ಸಿನ ಮಗನ ಭವಿತವ್ಯವೂ ನನ್ನ ಮೇಲಿದೆ. ಹೀಗಾಗಿ ಸಾಂಸಾರಿಕ ಜವಾಬ್ದಾರಿಯೆಡೆ ತಿರುಗುವುದು ಅನಿವಾರ್ಯವಾಗಿದೆ ಎಂದು ಮಾತಿಗೆ ಪೂರ್ಣ ವಿರಾಮ ಹಾಕಿದರು ಲೀಲಾವತಿ.



—ಜಿ. ಎಚ್.

# ಭರವಸೆಯ ಹೊಸ ಮುಖಗಳು

ಕನ್ನಡ ಚಿತ್ರರಂಗದ ತಾರಾ ಪ್ರಪಂಚಕ್ಕೆ ಹದಿಹರೆಯದ ಕನ್ನಡಿಗರು ಬರುತ್ತಿರುವದು ಹೊಸ ಆಯಾಮವೊಂದಕ್ಕೆ ಕಾರಣವಾಗಿದೆ ಎಂದು ನಿಖರವಾಗಿ ಹೇಳಬಹುದು.

ಇದಕ್ಕೆ ಕಾರಣಗಳು ಬೇರೆ–ಬೇರೆಯಾಗಿದ್ದರೂ, ಸರಕಾರದ ಸಹಾಯಧನ ನೀತಿಯಿಂದ ಚಿತ್ರಗಳ ನಿರ್ಮಾಣ ಸಂಖ್ಯೆ ಹೆಚ್ಚಾಗಿ ತನ್ಮೂಲಕ ಹೊಸಬರು ಚಿತ್ರರಂಗವನ್ನು ಪ್ರವೇಶಿಸುವಂತಾದುದು ಬಹು ಮುಖ್ಯ ಕಾರಣವೆಂದು ಇಡೀ ಕನ್ನಡ ಚಿತ್ರವಲಯ ಈಗ ನಿಸ್ಸಂಕೋಚವಾಗಿ ಒಪ್ಪಿಕೊಳ್ಳುತ್ತಿದೆ.

ಕನ್ನಡ ಚಿತ್ರ ಜಗತ್ತಿಗೆ ಈಗ ೫೨ ವರ್ಷಗಳ ಇತಿಹಾಸ. ೧೯೩೪ರಲ್ಲಿ ನಿರ್ಮಾಣವಾದ ಮೊದಲ ಕನ್ನಡ ಚಿತ್ರ 'ಸತಿ ಸುಲೋಚನಾ', ೧೯೩೫ರಲ್ಲಿ 'ಸದಾರಮೆ' ಹಾಗೂ ೧೯೩೬ರಲ್ಲಿ ತಯಾರಾದ ಪ್ರಥಮ ಸಾಂಸಾರಿಕ ಚಿತ್ರ 'ಸಂಸಾರ ನೌಕೆ'ಯಿಂದ ಕನ್ನಡ ಚಿತ್ರರಂಗ ತನ್ನ ಅಸ್ತಿತ್ವಕ್ಕೆ ಬುನಾದಿ ಹಾಕಿಕೊಂಡಿತೆನ್ನಬಹುದು.

ಆಗ ಕನ್ನಡ ತಾರಾ ಪ್ರಪಂಚದಲ್ಲಿ ಕಾಣಿಸಿಕೊಂಡ ಎಂ. ಮಾಧವರಾವ್ ಎಂ. ಎಸ್. ಮಾಧವರಾವ್, ಬಿ. ಆರ್. ಪಂತಲು ಹಾಗೂ ಶ್ರೀಮತಿ ಎಂ. ವಿ. ರಾಜಮ್ಮ ಮುಂತಾದವರು ಈ ನೌಕೆಯನ್ನು ೧೯೫೪ರ ವರೆಗೂ ಎಳೆದುಕೊಂಡು ಬಂದರು. ಸುಮಾರು ಇಪ್ಪತ್ತು ವರ್ಷಗಳ ಈ ಅವಧಿಯಲ್ಲಿ ನಿರ್ಮಾಣಗೊಂಡ ಚಿತ್ರಗಳು ಮಾತ್ರ ಕೇವಲ ೪೦. ಇದಕ್ಕೆ ಆ ಕಾಲದ ಪರಿಸ್ಥಿತಿಯೂ ಕಾರಣವಾಗಿತ್ತು.

ಡಾ॥ ರಾಜಕುಮಾರ್, ಉದಯಕುಮಾರ್, ನರಸಿಂಹರಾಜು, ಕಲ್ಯಾಣಕುಮಾರ್, ಸಂಧ್ಯಾ, ಹರಿಣಿ, ಪಂಢರಿಬಾಯಿ, ಪ್ರತಿಮಾದೇವಿ, ಬಿ. ಸರೋಜಾದೇವಿ, ಲೀಲಾವತಿ, ಸಾಹುಕಾರ್ ಜಾನಕಿ ಮುಂತಾದವರು ೧೯೫೪ರ ಸುಮಾರಿಗೆ ಕನ್ನಡ ಚಿತ್ರರಂಗಕ್ಕೆ ಲಗ್ಗೆ ಇಟ್ಟ ಮೊದಲ ಹದಿಹರೆಯದ ತಂಡ. ಇವರಿಂದಾಗಿಯೇ ಕನ್ನಡ ಚಿತ್ರೋದ್ಯಮ ಇನ್ನಷ್ಟು ಸಶಕ್ತವಾಗಿ ಬೆಳೆಯಲು ಕಾರಣವಾಯಿತು.

ಮೊದಲ ಸಲ ಇಪ್ಪತ್ತು ವರ್ಷಗಳ ಕಾಲವನ್ನು ತೆಗೆದುಕೊಂಡಿದ್ದ ಕನ್ನಡ ಚಿತ್ರರಂಗ ಈಸಲ ಕೇವಲ ಹತ್ತು ವರ್ಷಕ್ಕೇ ಹೊಸಬರಿಗೆ ತನ್ನ ಹೆಬ್ಬಾಗಿಲನ್ನು ತೆರೆಯಿತು. ಅದೂ ನಟೀಮಣಿಯರನ್ನು ಆಮಂತ್ರಿಸುವ ಮೂಲಕ. ಕಲ್ಪನಾ, ಜಯಂತಿ, ಭಾರತಿ, ಮಂಜುಳಾ, ಆರತಿ...ಸ್ವಲ್ಪ ಹೆಚ್ಚು ಕಡಿಮೆ ಒಂದೇ ಅವಧಿಯಲ್ಲಿ ಕನ್ನಡ ಚಿತ್ರರಂಗವನ್ನು ಪುಳುಕಿತಗೊಳಿಸಲು ಕಾರಣರಾದರು.

ಅನಂತರದಲ್ಲಿ ಬಂದವರು ವಿಷ್ಣುವರ್ಧನ, ಶ್ರೀನಾಥ, ಅಂಬರೀಷ, ಪ್ರಭಾಕರ...ಆದರೆ ಇವರುಗಳು ತೀರಾಗಟ್ಟಿನೆಲೆ ಕಂಡುಕೊಂಡಿದ್ದು ಮಾತ್ರ ಇತ್ತೀಚಿನ ದಿನಗಳಲ್ಲೇ. ಈ ಹಂತದಲ್ಲೇ ಅಂದರೆ ೮೦ರ ದಶಕವೇ ಹದಿಹರೆಯದವರು ಹೆಚ್ಚು-ಹೆಚ್ಚಾಗಿ ಕಾಣಿಸಿಕೊಳ್ಳಲು ಅವಕಾಶ ಮಾಡಿಕೊಟ್ಟ ಕಾಲ.

ಒಂದೆರಡು ಚಿತ್ರ ಸಂಸ್ಥೆ ಹಾಗೂ ಒಬ್ಬಿಬ್ಬರು ನಟರು ಮಾತ್ರ ಇಂದು ಕನ್ನಡದಲ್ಲಿ ಭಾರೀ ಬಂಡವಾಳದ ಅದ್ದೂರಿ ಚಿತ್ರ ನಿರ್ಮಿಸಿ ಪರಭಾಷೆಯೊಂ



ಶಿವರಾಜ

ದಿಗೆ ಈ ನಿಟ್ಟಿನಲ್ಲಿ ಪೈಪೋಟಿ ನಡೆಸುತಿದ್ದಾರೆ. ಇವರಿಗೆ ತಾರಾಗಣದಲ್ಲಿ ಹೆಸರು ಮಾಡಿಕೊಂಡ ವರೇ ಬೇಕು.

ಕಡಿಮೆ ಬಂಡವಾಳದ ಚಿತ್ರಗಳು ಎಂದ ಕೂಡಲೇ ಹೊಸ ನಟ-ನಟಿಯರು ಹಾಗೂ ಹೊಸ ತಾಂತ್ರಿಕ ವರ್ಗದವರೇ ಕಣ್ಣಿಗೆ ಬೀಳು- ತ್ತಾರೆ. ಇವರಿಗೆ ಸಂಭಾವನೆ ಕಡಿಮೆ ಇರು ತ್ತದೆ. ಕೊಡದಿದ್ದರೂ ನಡೆಯುತ್ತದೆ. ಶೂಟಿಂಗ್ ಕಾಲದಲ್ಲಿ ಖರ್ಚು-ವೆಚ್ಚ ನೋಡಿ ಕೊಂಡರೆ ಸಾಕು. ಕಾಲ್‌ಶೀಟ್‌ಗಾಗಿ ಒದ್ದಾಡುವ ಪ್ರಮೇಯವೂ ಇಲ್ಲ. ಹೀಗಾಗಿಯೇ ಕನ್ನಡ ಚಿತ್ರರಂಗದಲ್ಲಿ ಬಹಳಷ್ಟು ಹೊಸಬರಿಗೆ ಅವಕಾಶ ಗಿಟ್ಟಿತು. ತಮ್ಮ ಮಕ್ಕಳನ್ನು, ಸಂಬಂಧಿಗಳನ್ನು ತೆರೆಯ ಮೇಲೆ ತಂದು ವಿಜೃಂಭಿಸುವ ಖಯಾಲಿ ಹಿಂದೀ ಸಿನಿಮಾಗಳಂತೆ ಕನ್ನಡದಲ್ಲಿಯೂ ಈಗ ಹಬ್ಬಿಕೊಂಡಿದೆ.

ನಟ, ನಟಿ, ನಿರ್ಮಾಪಕ, ನಿರ್ದೇಶಕ, ಛಾಯಾಗ್ರಾಹಕ......ಹೀಗೆ ಚಿತ್ರರಂಗದಲ್ಲಿ ಬೇರೂರಿಕೊಂಡು ಬಂದವರೆಲ್ಲ ತಮ್ಮ ಪುತ್ರರನ್ನು ಸಂಬಂಧಿಗಳನ್ನು ಇದೇ ವೃತ್ತಿಗೆ ಎಳೆದು ತರು ತ್ತಿರುವದು ಇನ್ನಷ್ಟು ಹದಿಹರೆಯದವರು ಚಿತ್ರೋದ್ಯಮಕ್ಕೆ ಬರಲು ಕಾರಣವಾಗಿದೆ.

ಕನ್ನಡಕ್ಕೂ ಹಬ್ಬಿರುವ ಹಿಂದೀ ಚಿತ್ರರಂಗದ ಈ ಖಯಾಲಿಯಿಂದ ಕೆಲ ಮಟ್ಟಿಗಂತೂ ಉದ್ಯ ಮಕ್ಕೆ ಬಲ ಬಂದಿರುವದು ಒಪ್ಪಿಕೊಳ್ಳಲೇ ಬೇಕಾದ ಮಾತು.



## ಶಿವರಾಜಕುಮಾರ

ಹದಿಹರೆಯದ ನಟರ ಪೈಕಿ ಈಗ ನಂಬರ್ ಒಂದರ ಸ್ಥಾನದಲ್ಲಿ ಇರುವ ಹೆಸರು ಎಂ. ಶಿವ- ರಾಜಕುಮಾರ್‌ರದು. ಇದಕ್ಕೆ ಮುಖ್ಯ ಕಾರಣ ಶಿವಣ್ಣನ ಚೊಚ್ಚಲ ಚಿತ್ರ 'ಆನಂದ' ೧೯೮೬ರ ಕನ್ನಡ ಚಿತ್ರರಂಗದ ಗಲ್ಲಾಪೆಟ್ಟಿಗೆಯಲ್ಲಿ ಅತ್ಯದ್ಭುತ ಯಶಸ್ಸು ಕಂಡಿರುವದು.

ಈ ವರೆಗೆ ಗಲ್ಲಾ ಪೆಟ್ಟಿಗೆಯಲ್ಲಿ ಡಾ॥ ರಾಜ- ಕುಮಾರ್ ಅಭಿನಯಿಸಿದ, ಅವರ ತ್ರಿಪಾತ್ರ ಚಿತ್ರ 'ಶಂಕರಗುರು' ಒಂದು ದಾಖಲೆಯಾಗಿತ್ತು. ಈಗ ಡಾ॥ ರಾಜ್‌ರ ಆ ದಾಖಲೆಯನ್ನು ಅವರ ಪುತ್ರನೇ ಮುರಿದಿರುವದು ನಿಜಕ್ಕೂ ಶಿವಣ್ಣನ ಭವಿಷ್ಯಕ್ಕೇ ಒಂದು ದಿಕ್ಸೂಚಿ ಎನ್ನಬಹುದು.

ಶಿವಣ್ಣ ಡಾ॥ ರಾಜ್‌ರ ಪುತ್ರ ಎನ್ನುವದಕ್ಕಿಂತ ಮಿಗಿಲಾಗಿ, 'ಆನಂದ' ದಲ್ಲಿನ ಆತನ ಅಭಿ ನಯವೇ ಚಿತ್ರದ ಯಶಸ್ಸಿಗೆ ಕಾರಣವಾಗಿದೆ ಎಂದು ಸಿನೀವಲಯ ಈಗಾಗಲೇ ತರ್ಕಿಸಿದೆ. ಆತನ ಎರಡನೇ ಚಿತ್ರ 'ರಥಸಪ್ತಮಿ' ಕೂಡಾ ಅದೇ ನಿಟ್ಟಿನಲ್ಲಿ ಸಾಗುವ ಲಕ್ಷಣವಿದೆ.

## ವಸಂತಕುಮಾರ್

ನಿರುಪಮಾ ಆರ್ಟ್ಸ್ ಕಂಬೈನ್ಸ್ ಲಾಂಛನದಲ್ಲಿ ನಿರೂಪಿತವಾವ ಚಿತ್ರದಲ್ಲಿ ವಸಂತಕುಮಾರ್ ನಾಯಕ. ಕಾಂಗ್ರೆ ಧುರೀಣ ಎಸ್. ಬಂಗಾರಪ್ಪ ನವರ ಪುತ್ರ ಈತ ಅನ್ನುವದಕ್ಕಿಂತ-ಪರೋಕ್ಷದಲ್ಲಿ ಡಾ॥ ರಾಜ್‌ರವರ ಸಂಸ್ಥೆಗಳೇ ಈ ಚಿತ್ರ ತಯಾರಿಸಿರುವುದು ವಸಂತ್ ಭವಿಷ್ಯಕ್ಕೆ ಆಶಾ ದಾಯಕ ಎನ್ನಬಹುದು. ದೊರೈ-ಭಗವಾನ್ ರಂಥ ಹಿರಿಯ ನಿರ್ದೇಶಕರ ಕೈಲಿ ಪಳಗುತ್ತಿರುವ ವಸಂತ್ ತನ್ನ ಭಾವ ಶಿವಣ್ಣನಂತೆ ಫಿಲ್ಮ್ ಇನ್- ಸ್ಟಿಟ್ಯೂಟನಲ್ಲಿ ತರಬೇತಿ ಪಡೆದಿರುವಾತ. ವಿಶೇಷ ವೆಂದರೆ, ಶಿವಣ್ಣನ ಚೊಚ್ಚಲ ಚಿತ್ರಕ್ಕೆ ನಾಯಕಿ ಯಾದ ಸುಧಾರಾಣಿಯೇ ವಸಂತ್ ಚಿತ್ರಕ್ಕೂ ನಾಯಕಿ. ಯಾರಿಗೆ ಗೊತ್ತು, ಮುಂಬರುವ ದಿನ ಗಳಲ್ಲಿ ಈ ಭಾವ-ಭಾವರ ನಡುವೆಯೇ ಪೈಪೋಟಿ ಉಂಟಾಗುವದೋ ಏನೋ?

## ಸುಧಾರಾಣಿ

'ಆನಂದ್' ಚಿತ್ರದಲ್ಲಿ ನಾಯಕಿ ಪಾತ್ರವಹಿಸಿ ಪ್ರೇಕ್ಷಕರ ಮನಸೂರೆಗೊಂಡ 'ಸುಧಾರಾಣಿ' ಬೆಂಗಳೂರ ಎಜ್ಯುಕೇಶನ ಸೊಸೈಟಿ ಶಾಲೆಯ ಎಂಟನೇ ವರ್ಗದಲ್ಲಿ ಓದುತ್ತಿರುವ ಪುಟ್ಟ ಬಾಲೆ. ಮೂಲ ಹೆಸರು ಜಯಶ್ರೀ. ಇದೀಗ ೧೩ ವರ್ಷ ತುಂಬುತ್ತಿರುವ ಈಕೆಗೆ ಪಾತ್ರ ಚೆನ್ನಾಗಿದ್ದರೆ ಮಾತ್ರ ಅಂಥ ಚಿತ್ರದಲ್ಲಿ ಅಭಿನಯಿಸಬೇಕೆಂಬ ಅಭಿಲಾಷೆ. 'ಭಾಗ್ಯವಂತ' ಚಿತ್ರದಲ್ಲೇ ಮೊದಲ ಸಲ ಕ್ಯಾಮರಾ ಎದುರಿಸಿದ್ದ ಈಕೆ ನಂತರ 'ಅನುಪಮ' 'ಕುಳ್ಳ-ಕುಳ್ಳಿ' ಮುಂತಾದ ಚಿತ್ರ ಗಳಲ್ಲಿ ಸಣ್ಣ ಪಾತ್ರ ಮಾಡಿದ್ದಳು.

ಶಾಲೆಯಲ್ಲಿ ಸ್ನೇಹಿತರು 'ನೀನೇ ಆ ಪಾತ್ರ ದಲ್ಲಿ ಮಾಡಿದ್ದಾ?' ಎಂದು ಕೇಳಿದರೆ ಸುಧಾ 'ಇಲ್ಲ' ಎಂದು ಉತ್ತರಿಸುತ್ತಿದ್ದಳಂತೆ, ಆಮೇಲೆ ಇಡೀ ದಿನ ಕೀಟಲೆ ಮಾಡುತ್ತಾರೆ ಎಂದು. ಆದರೆ ಗುರುತು ಹಿಡಿದವರೆಲ್ಲ 'ಚೆನ್ನಾಗಿ ಮಾಡಿದ್ದಿಯಾ' ಎಂದು ಪ್ರಶಂಸಿಸಿದ್ದಾರಂತೆ.

ಸುಧಾ ಒಂದು ರೀತಿಯಲ್ಲಿ ಅದೃಷ್ಟವಂತೆ! ವಸಂತ್ ಮೊದಲ ಚಿತ್ರಕ್ಕೂ ಅವಳೇ ನಾಯಕಿ. ಎಲ್ಲ ಆಂಟಿಯ (ಪಾರ್ವತಮ್ಮ) ಆಶೀರ್ವಾದ


ಸರ್ವರಿಗೂ ದೀಪಾವಳಿಯ ಹಾರ್ದಿಕ ಶುಭಾಶಯಗಳು :


The seal of supreme quality



ರೈತ ಬಾಂಧವರಿಗೊಂದು ಅಪೂರ್ವ ಸುಸಂಧಿ

"ಕೃಷಿಕ್ರಾಂತಿಗಾಗಿ ಎಂ.ಬಿ.ಎಚ್. ವಾಟರಮನ್ ಸಬ್‌ಮರ್ಸಿಬಲ್ ಪಂಪ್ಸ್"

# ಕರ್ನಾಟಕ ಎಂಟರ್‌ಪ್ರೈಜಿಸ್

ಹೊಟೆಲ್ ಪಿಕಾಕ್ ಬಿಲ್ಡಿಂಗ

ನ್ಯೂ ಕಾಟನ್ ಮಾರ್ಕೆಟ ಹುಬ್ಬಳ್ಳಿ-**580029**

ಫೋನ : **64390** ಪಿ. ಪಿ.

— ಅಧಿಕೃತ ಮಾರಾಟಗಾರರು —

- ಎಮ್. ಬಿ. ಎಚ್. (ವಾಟರ್‌ಮನ್) ಸಬ್‌ಮರ್ಸಿಬಲ್ ಪಂಪುಸೆಟ್ಟುಗಳು
- ಸಬ್‌ಮರ್ಸಿಬಲ್ ಪಂಪ್ಸ್
- ಜಿ. ಐ. ಪೈಪ್ಸ್
- ಪಿ. ವ್ಹಿ. ಸಿ. ರಿಜಿಡ್ ಪೈಪ್ಸ್
- ಸ್ಪ್ರಿಂಕಲರ್ಸ್ ಸೆಟ್
- ಮೊನೋಬ್ಲಾಕ್ ಪಂಪ್‌ಸೆಟ್‌ಗಳು

ನಮ್ಮಲ್ಲಿ ರಿವೈಂಡಿಂಗ್ ಹಾಗು ಪಂಪುಗಳನ್ನು ರಿಪೇರಿ ಮಾಡಿಕೊಡುತ್ತೇವೆ. ಹಾಗು ಬೋರನ್ನು ಹಾಕಿಸಿಕೊಡುತ್ತೇವೆ.

ರೈತರು ಇದರ ಸದ್‌ಲಾಭ ಪಡೆಯಿರಿ !

"ರೈತರ ಸೇವೆಯೇ ನಮ್ಮ ಗುರಿ"

ಎಮ್. ಬಿ. ಎಚ್. (ವಾಟರಮನ್) ಸಬಮರ್ಸಿಬಲ್ ಪಂಪಸೆಟ್

(GANESH ADVT. HUBLI)

ಎಂದು ಮುದ್ದಾಗಿ ಉತ್ತರಿಸುವ ಈಕೆಗೆ ಇಂಗ್ಲೀಷ್ ಪುಸ್ತಕ ಓದುವುದೊಂದೇ ಹವ್ಯಾಸವಂತೆ.

## ಆಶಾರಾಣಿ

ಹಿರಿಯ ನಟ ರಾಜೇಶರ ಪುತ್ರಿ ಈಕೆ. ರಾಜಾಜಿ ನಗರದ ಸರ್ದಾರ ಪಟೇಲ್ ಹೈಸ್ಕೂಲಿನ ಹತ್ತನೆ ವರ್ಗದಲ್ಲಿ ಓದುತ್ತಿರುವ ಆಶಾರಾಣಿಗೆ ಮೊದಲ ಸಲ ಕ್ಯಾಮರಾ ಎದುರಿಸುವಾಗಲೂ ಭಯ ಆಗಲಿಲ್ಲ ವಂತೆ. ತಂದೆ ಜೊತೆ ಹೋಗಿ ಅನೇಕ ಸಲ ಶೂಟಿಂಗ ನೋಡಿದ್ದುದೇ ನಿರ್ಭೀತಿಗೆ ಕಾರಣವಂತೆ.

ಬೆಳಗಿನ ಹೊತ್ತು ಅವಳನ್ನೇ ಹುಡುಕಿಕೊಂಡು ಸುಬ್ರಹ್ಮಣ್ಯ ನಗರದಲ್ಲಿರುವ ಅವರ ಮನೆಗೆ ಹೋದಾಗ ಈ ಬಾಲೆ ಗೆಳತಿ 'ಸುಧಾರಾಣಿ' ಜತೆ ಕೂತು ಇಡ್ಲಿ ತಿನ್ನುವ ಸಡಗರದಲ್ಲಿದ್ದಳು. ಈ ಪುಟಾಣಿ ಹಿರೋಯಿನ್‌ಗಳ ತಾಯಂದಿರಿಬ್ಬರೂ ಅಂದಿನ ಚಿತ್ರೀಕರಣ ಕುರಿತು ಚರ್ಚೆ ನಡೆಸಿದ್ದರು.

ಎಂಥದೇ ಪಾತ್ರ ಬರಲಿ, ಅಭಿನಯಿಸಬಲ್ಲೆ ಎನ್ನುವ ಆಶಾರಾಣಿಗೆ ತನ್ನ ಗೆಳತಿ ಸುಧಾರಾಣಿ ಯಂತೆ ಓದನ್ನು ಮುಂದುವರೆಸುವ ಅಭಿಲಾಷೆಯೂ ಇದೆ.

ಈ ಪುಟ್ಟ ವಯಸ್ಸಿನಲ್ಲೇ ತನಗೆ ಹಿರೋಯಿನ್ ಪಟ್ಟ ಕಟ್ಟಿದ ಶ್ರೀಮತಿ ಪಾರ್ವತಮ್ಮನವರನ್ನು ಈಕೆ ಕೃತಜ್ಞತೆಯಿಂದ ಸ್ಮರಿಸುತ್ತಾಳೆ.

ಹವ್ಯಾಸ, ಅಭ್ಯಾಸ, ಅಭಿನಯ ಎಲ್ಲದರ ಬಗೆಗೂ ಸುಧಾರಾಣಿ ಹಾಗೂ ಆಶಾರಾಣಿ ಇಬ್ಬರಿಂದಲೂ ಒಂದೇ ಬಗೆಯ ಉತ್ತರ. ಬಹುಶಃ ಇಬ್ಬರೂ ಒಟ್ಟಿಗೇ ಮಾತನಾಡಿದುದೇ ಕಾರಣವೇನೊ ?

ಸುಧಾಳ ಬೆಳ್ಳನೆಯ ಮೈಕಾಂತಿ ಎದುರು ಆಶಾ ಸ್ವಲ್ಪ ಕಪ್ಪು. ಆದರೆ ಈ ಬಾಲೆಯರಿಬ್ಬರ ನಟನೆಯ ವಿಷಯದಲ್ಲಿ – ಮುಂಬರುವ ದಿನಗಳೇ ನಿರ್ಧರಿಸಬೇಕೇನೋ ?

## ಉದಯ್ ಹುತ್ತಿನಗದ್ದೆ

ತಮ್ಮ ಚೊಚ್ಚಲ ಚಿತ್ರದ ಅಭಿನಯಕ್ಕೇ ಡಾ॥ ರಾಜಕುಮಾರರ ಪ್ರಶಂಸೆ ಪಡೆದ ಕೀರ್ತಿ ಉದಯ್ ಹುತ್ತಿನಗದ್ದೆಯವರಿಗೆ ಸಲ್ಲುತ್ತದೆ.



ಅಭಿನಯ

ಉದಯ್ ನಾಯಕನಾಗಿ ಅಭಿನಯಿಸಿದ 'ಆರಂಭ' ಚಿತ್ರದ ದೃಶ್ಯಗಳನ್ನು ವೀಕ್ಷಿಸಿದ ಡಾ॥ ರಾಜ್, ಎನ್. ಟಿ. ಆರ್. ತಮ್ಮ ಪ್ರಾರಂಭದ ದಿನಗಳಲ್ಲಿ ಅಭಿನಯಿಸುತ್ತಿದ್ದ ಹಾಗೇ ಉದಯ್ ಅಷ್ಟು ಚೆನ್ನಾಗಿ ನಟಿಸಿದ್ದಾರೆ ಎಂದು ಶ್ಲಾಘಿಸಿದ್ದಾರಂತೆ. ಈ ತರುಣನ ಅಭಿನಯದ ಬಗ್ಗೆ ಇನ್ಯಾವ ಸರ್ಟಿಫಿಕೇಟ್ ಬೇಕು ?

ಮೂಲತಃ ಚಿಕ್ಕಮಗಳೂರು ಜಿಲ್ಲೆಯವರಾದ ಉದಯ್ ಕಳೆದ ಮೂರು ವರ್ಷಗಳಿಂದ ಬೆಂಗಳೂರಲ್ಲಿ ವಾಸಿಸುತ್ತಿದ್ದಾರೆ. ಜತೆ-ಜತೆಗೆ ಕ್ಲಾರಿಟಿ ಕಲರ್‌ಲ್ಯಾಬ್ ವ್ಯವಹಾರ. ವರ್ಷದ ಹಿಂದೆ, ಮದ್ರಾಸ್ ರಸಗೊಬ್ಬರಕ್ಕಾಗಿ ಸಾಕ್ಷ್ಯಚಿತ್ರವೊಂದನ್ನು ತಯಾರಿಸಿದ ಉದಯ್ 'ಆರಂಭ'ವನ್ನು ಸ್ವತಃ ನಿರ್ಮಿಸಿದ್ದಾರೆ. ಇದೇ ನವಂಬರ್‌ನಲ್ಲಿ ಇನ್ನೊಂದು ಚಿತ್ರವನ್ನು ಸಹ ಪ್ರಾರಂಭಿಸುವ ಯೋಚನೆಯಲ್ಲಿ ಈಗ ಇದ್ದಾರೆ.

## ವಿಜಯಾ ಸೋಮಣ್ಣ

ಉದಯ್ ಕುರಿತು ಹೇಳಿದ ಮಾತನ್ನು 'ಆರಂಭ'ದ ನಾಯಕಿ ವಿಜಯಾ ಸೋಮಣ್ಣ ಬಗೆಗೆ ಹೇಳಲಾಗದಿದ್ದರೂ ಇವಳ ಅಭಿನಯ ಕೂಡಾ ಸಿನೇವಲಯದಲ್ಲಿ ಸಾಕಷ್ಟು ಗಮನ

ಉದಯ್ ಹುತ್ತಿನಗದ್ದೆ

ಸೆಳೆದಿದೆ. ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಪಿ.ಯು.ಸಿ. ಎರಡನೇ ವರ್ಷದಲ್ಲಿ ಓದುತ್ತಿರುವ ಈಕೆಗೆ ನಾಯಕಿ ಪಟ್ಟದ ಅದೃಷ್ಟ ತಾನಾಗಿಯೇ ಹುಡುಕಿಕೊಂಡು ಬಂದಿತು. ಭರತನಾಟ್ಯ, ಡಿಸ್ಕೊ ಸಹ ಬಲ್ಲ ಈಕೆಯ ಭವಿಷ್ಯ ಏನಿದೆಯೊ, ಯಾರು ಬಲ್ಲರು?

## ವಿನೋದ ಆಳ್ವ

ಅಬ್ಬಾಯಿ ನಾಯ್ಡುರವರ ಯಶಸ್ವೀ ಚಿತ್ರ 'ತವರುಮನೆ'ಯಲ್ಲಿ 'ಹೀರೊ' ಆಗಿ ಕಾಣಿಸಿಕೊಂಡ ವಿನೋದ ಆಳ್ವ ಮೂಲತಃ ದಕ್ಷಿಣಕನ್ನಡ ಜಿಲ್ಲೆಯ ಕುಂದಾಪುರದವರು.

'ಬಂಟ'ಜನಾಂಗಕ್ಕೆ ಸೇರಿದ ಈತ ಮುಂಬೈನ ಹೊರಾಯಸ್ ಹೊಟೆಲ್‌ನಲ್ಲಿ ಈ ಮೊದಲು ರಿಸಪ್ಷನಿಷ್ಟ ಆಗಿದ್ದ. ಅಲ್ಲಿಗೆ ಬರುತ್ತಿದ್ದ ಅಬ್ಬಾಯಿ ನಾಯ್ಡುರವರ ಪರಿಚಯ ಆಯಿತು. ಅದೇ ಪರಿಚಯ ಸಿನಿಮಾ ರಂಗಕ್ಕೂ ಎಳೆತಂದಿತು.

ಇದೀಗ ಬಿಡುಗಡೆಯಾಗಿರುವ 'ನಮ್ಮಊರ-ದೇವತೆ'ಯಲ್ಲೂ ಆಳ್ವ ಹೀರೋ. ಸದ್ಯ ಅಬ್ಬಾಯಿನಾಯ್ಡುರವರ ಜತೆಗೇ ವಾಸಿಸುತ್ತಿರುವ ವಿನೋದ ಈ ಕಾರಣಕ್ಕಾಗಿಯೇ ನಾಯ್ಡುರವರಿಗೆ ಕೃತಜ್ಞ. ಬೇರೆ ಬೇರೆ ಕಡೆಗಳಿಂದ ಆಹ್ವಾನ ಬಂದಿದೆ. ವೈವಿಧ್ಯಮಯ ಪಾತ್ರಗಳನ್ನು ಮಾಡುತ್ತೇನೆ ಎನ್ನುವ ಈತನಿಗೆ ಚಿತ್ರರಂಗದಲ್ಲಿ ಎತ್ತರೆತ್ತರಕ್ಕೆ ಬೆಳೆಯುವಾಸೆ. ಆ ಆಶೆ ಈಡೇರುವ ಪರಿಸರವೂ ಇದೆ.

## ತಾರಾ

ಈಗಾಗಲೇ ೧೯ ಚಿತ್ರಗಳಲ್ಲಿ ಅಭಿನಯಿಸಿರುವ 'ತಾರಾ' ಸುಂದರ ಅಂಗಸೌಷ್ಠವವನ್ನು ಪಡೆದಿರುವ ಮುಗ್ಧವಾಗಿ, ಪಟ-ಪಟನೆ ಮಾತನಾಡುವ ಆಕರ್ಷಕ ಯುವತಿ.

ಈಗಾಗಲೇ ಎಂಟು ಚಿತ್ರಗಳಲ್ಲಿ ಹೀರೋಯಿನ್ ಆಗಿರುವ ಈಕೆ ಓದಿದ್ದು ಎರಡನೆ ಪಿ.ಯು.ಸಿ. ವರೆಗೆ ಮಾತ್ರ. ವೈವಿಧ್ಯಮಯ ಪಾತ್ರಗಳಲ್ಲಿ ನಟಿಸಬೇಕೆಂಬಾಸೆ ಎನ್ನುವ ಈಕೆಯನ್ನು ದಿ. ಮುಸುರಿಕೃಷ್ಣಮೂರ್ತಿಯವರು 'ತುಳಸೀದಳ' ಮೂಲಕ ಚಿತ್ರರಂಗಕ್ಕೆ ಪರಿಚಯಿಸಿದರಂತೆ. ತಂದೆ ಎಗ್ಸಿಕ್ಯೂಟಿವ್ ಇಂಜನಿಯರ್ ವಿಜಯಾ ಕಾಲೇಜ ಬಳಿಮನೆ. ಸ್ನೇಹಮಯಿ 'ತಾರಾ' ಚಿತ್ರರಂಗದಲ್ಲಿ ಬೆಳೆಯುವ ಬಗ್ಗೆ ಯಾವ ಸಂಶಯವೂ ಇಲ್ಲ.

## ಅರವಿಂದ್

ಈಗಾಗಲೇ ೧೩ ಚಿತ್ರಗಳಲ್ಲಿ ಅಭಿನಯಿಸಿರುವ ಅರವಿಂದ್ ಶ್ರೀರಂಗಪಟ್ಟಣದ ಬಳಿಯ 'ಪಾಲಹಳ್ಳಿ' ಯವರು. ಶಿವರಾಜಕುಮಾರ್‌ರ ಎರಡನೆ ಚಿತ್ರ 'ರಥಸಪ್ತಮಿ' ಯಲ್ಲಿ ಈತ ಖಳನಾಯಕ.

ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ೧೯೮೦-



ತಾರಾ

ಬಂದ ಈತ ನಂತರ 'ಗೀತಾ', 'ಪ್ರೇಮಯುದ್ಧ', 'ತಾಯಿಯ ಹೊಣೆ', 'ಮಮತೆಯ ಮಡಿಲು' 'ಪ್ರಾಯ... ಪ್ರಾಯ... ಪ್ರಾಯ...' 'ಅಜೇಯ' 'ಶಂಖನಾದ' ಮುಂತಾದ ಚಿತ್ರಗಳ ಮೂಲಕ ಗಮನಾರ್ಹ ಅಭಿನಯ ನೀಡಿದ್ದಾರೆ, 'ಹೀರೊ' ಆಗಬಲ್ಲಂಥ 'ಮೈ-ಮುಖ' ಇರುವ ಈತ ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಒಂದು ವರ್ಷ ತರಬೇತಿ ಸಹ ಮುಗಿಸಿದ್ದಾರೆ.

## ಅಭಿನಯಾ

ನಿಜ; ಅಭಿನಯಾ ಚಿತ್ರ ಪ್ರೇಕ್ಷಕರ ಕಣ್ಸೆಳೆದು ಆಗಲೇ ಮೂರು ವರ್ಷಗಳು ಕಳೆಯುತ್ತ ಬಂದವು. ಕಳೆದ ವರ್ಷ ಸುಪರಹಿಟ್ ಚಿತ್ರ 'ಅನುಭವ'ದ ಖ್ಯಾತಿ ಇದ್ದರೂ ಯಾಕೊ ಅಭಿನಯಾಳಿಗೆ ನಿರೀಕ್ಷಿಸಿದಷ್ಟು ಅವಕಾಶಗಳು ಬರಲಿಲ್ಲ.

'ಅಭಿನಯಾ' ಳ ಪಾತ್ರ, ಮಾತು ವ್ಯವಹಾರ ಕುರಿತೆಲ್ಲ ಅವಳ ತಾಯಿಯೇ ನಿರ್ಧರಿಸಬೇಕಾದುದರಿಂದ ಹೀಗಾಗಿದೆ ಎಂದು ಕುಹಕವಾಡುವವರೂ ಇದ್ದಾರೆ.

ಸುಂದರ ಮೈಕಟ್ಟು ಇರುವ ಅಭಿನಯಾ ಇನ್ನೂ ಮುಗ್ಧೆ, ಶಾಲೆಗೆ ಹೋಗುವ ವಯಸ್ಸಿನಲ್ಲಿ ಅತ್ತ ಶಾಲೆಗೂ ಹೋಗದೆ, ಇತ್ತ ಚಿತ್ರರಂಗದಲ್ಲೂ ಹೆಚ್ಚು ಬೆಳೆಯದೆ ಭವಿಷ್ಯದ ದಿನಗಳಿಗಾಗಿ ಕಾತರಿಸುತ್ತಿರುವ ಕಿಶೋರಿ. ಅಭಿನಯಾಳ ಗಾಡಫಾದರ್ ಕಾಶೀನಾಥರ 'ಅನಾಮಿಕಾ' ಹಾಗೂ ಪ್ರತಿಭಾನ್ವಿತ ನಿರ್ದೇಶಕ ಉಮೇಶ ಕುಲಕರ್ಣಿಯವರ 'ಶಂಖನಾದ' ಬಿಡುಗಡೆಯಾದಾಗ ಈ ಎರು ಜವ್ವನೆಯ ಭವಿಷ್ಯ ನಿರ್ಧಾರವಾದೀತು,

ಇದಲ್ಲದೆ ಇನ್ನೂ ಅನೇಕ ಹದಿ ಹರೆಯದವರ ಹೆಸರುಗಳು ಕಣ್ಮುಂದೆ ಬರುತ್ತವೆ. ನಾಗೇಶ ಕಶ್ಯಪ್, ಚಂದ್ರಲೇಖಾ, ಅವಿನಾಶ, ಗುರುದತ್. (ದಿ.ಉದಯ ಕುಮಾರರ ಪುತ್ರ) ಶಂಕರ ಪಾಟೀಲ, ವಿಜಯಕಾಶಿ, ಶ್ರೀಧರ್, ಅಪರ್ಣ, ವಿಜಯ ರಂಜಿನಿ, ಮೈಸೂರ ಪಾರ್ವತಿ. ಪದ್ಮಶ್ರೀ...ಹೀಗೆ ಹೆಸರುಗಳ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ.

ಬಣ್ಣದ ಬದುಕಿನ ಈ ಬಿರುಗಾಳಿಯಲ್ಲಿ ಉಳಿಯುವವರೆಷ್ಟೋ? ತೂರಿ ಹೋಗುವವರೆಷ್ಟೋ?

ಎನ್. ಮಂಜುನಾಥಭಟ.

# ಯಾರು ನಂಬರ್ ಒನ್ ?

ಚಿತ್ರರಂಗದಲ್ಲಿ ತಾರೆಯರಿಗೆ 'ಒನ್, ಟೂ, ಥ್ರಿ' ಎಂದು ನಂಬರ ಕೊಡುವ ಪದ್ಧತಿ ಈಗ ಬಂದಿದೆ. ಇದನ್ನು ಪ್ರೇಕ್ಷಕ ಗುಂಪುಗಳೇ ನಿರ್ಧರಿಸುತ್ತವೆ. ಒಂದು ವಲಯದಲ್ಲಿ ಒಬ್ಬ ನಟ ನಂಬರ ಒನ್ ಆಗಿದ್ದರೆ ಇನ್ನೊಂದು ವಲಯದಲ್ಲಿ ಎರಡನೆಯ ಸ್ಥಾನವನ್ನು ಪಡೆದಿರುತ್ತಾನೆ. ಆದರೆ ಗಲ್ಲಾ ಪೆಟ್ಟಿಗೆ, ಆತನ ಜನಪ್ರಿಯತೆ, ಆತ ನಟಿಸಿದ ಚಿತ್ರಗಳ ಸಂಖ್ಯೆ, ಯಶಸ್ವಿಯಾದ ಚಿತ್ರಗಳ ಸಂಖ್ಯೆಯಿಂದ ಮಾತ್ರ ಆತನಿಗೆ ಸುಪರ ಸ್ಟಾರ ಲಭಿಸುತ್ತದೆ.

ಲೇಖನ :
**ವಸಂತ ಕಲಕೋಟಿ**

ಚಿತ್ರಗಳು :
**ಬಿ. ಕೆ. ಸನಿಲ**

ಸುಪರ್ ಸ್ಟಾರ್ ಪದವಿ ಮೊಟ್ಟಮೊದಲು ದೊರೆಕಿಸಿದವ ಏಳನೆಯ ದಶಕದಲ್ಲಿ ರಾಜೇಶ ಖನ್ನಾ. ಆದರೆ ಅದಕ್ಕೆ ಹೊಸ ಆಯಾಮ ತಂದು ಕೊಟ್ಟಾತ-ಅಮಿತಾಭ ಬಚ್ಚನ್. ಆತನ ಆಕಸ್ಮಿಕ ಅನಾರೋಗ್ಯ ನಂತರ ಆತನ ರಾಜಕೀಯ ಪ್ರವೇಶ ಆತನನ್ನು ಮತ್ತಷ್ಟು ಮೇಲೇರಿಸಿದವು. ಈ ಘಟನೆಗಳಿಂದ ಅಮಿತಾಭ ಹಿಂದಿ ಚಿತ್ರರಂಗಕ್ಕೆ ವಿದಾಯ ಹೇಳಬಹುದೆಂದು ಆತನ ವಿರೋಧಿಗಳಿಗೆ ಸಂತೋಷವನ್ನುಂಟು ಮಾಡಿತ್ತು. ಆದರೆ ಅರ್ಧ ಪೂರ್ಣಸಿದ ಚಿತ್ರಗಳನ್ನು ಮುಗಿಸ ಬೇಕೆಂದು ಅಮಿತಾಭ ಹಿಂದೀ ಚಿತ್ರರಂಗದಲ್ಲಿ ಮುಂದೊರೆದ. ಆದರೊಂದಿಗೆ ಹೊಸ ಚಿತ್ರಗಳಿಗೂ ಸಹಿ ಹಾಕಿದ. ನಂಬರ್ ಒಂದು ಸುಪರ್ ಸ್ಟಾರ್ ಸಾಕಿಸ ಹಿಂದೀ ಚಿತ್ರರಂಗದಲ್ಲಿ ತನಗೆ ಇದ್ದಂತೆ ಪಕ್ಷದ ಅಥವಾ ರಾಷ್ಟ್ರದ ರಾಜಕೀಯದಲ್ಲಿ ಶೀಘ್ರದಲ್ಲಿ ತನಗೆ ದೊರಕಲಾರದೆಂಬುದನ್ನು ತಿಳಿಯಲು ಅಮಿತಾಭಗೆ ಬಹು ಸಮಯ ಬೇಕಾಗಲಿಲ್ಲ. ಅಂತೆಯೇ ಆತನ ಚಟುವಟಿಕೆಗಳು ಅಲಹಾಬಾದ-ದಿಲ್ಲಿ-ಮುಂಬಯಿ ಹೀಗೆ ತ್ರಿಕೋನ ದೃಷ್ಟಿಯಲ್ಲಿ ಸಾಗಿವೆ. ಸುಪರ್ ಸ್ಟಾರ್ ಶ್ರೀದೇವಿ ಜೊತೆಗೆ ಅಭಿನಯಿಸಿದ 'ಇನ್ಕ್ವಿಲಾಬ್' ಬಾಕ್ಸ ಆಫೀಸನಲ್ಲಿ ಸೋತರೂ. ನಂತರ ಅಮಿತಾಭ ಅಭಿನಯಿಸಿದ "ಅಂಧಾಕಾನೂನ" "ಶರಾಬಿ" ಯಶಸ್ವಿಯಾದವು. ಈ ವರುಷ ತೆರೆ ಕಂಡ ಆತನ ಏಕಮೇವ ಚಿತ್ರ "ಆಖಿರೀರಾಸ್ತಾ" ಗಲ್ಲಾಪೆಟ್ಟಿಗೆ ಯಲ್ಲಿ ತುಂಬಾ ಹೆಸರು ಮಾಡಿತು. ಆದರೆ ಮೊದಲಿನ ಹಾಗೆ ಹಿಂದೀ ಚಿತ್ರರಂಗದಲ್ಲಿ ನಿರ್ಮಾಪಕರು ಅಮಿತಾಭನಿಗೆ ಕಾಲು ಬಿದ್ದು ಆತನ ಕೃಪಾಕಟಾಕ್ಷ ಬೇಡುತ್ತಿಲ್ಲ. ಆತನು ಅಭಿನಯಿಸಿದ "ಲಾಡಲಾ" "ಶಹಾನ್‌ಶಹಾ" ಪೂರ್ತಿಗೊಂಡು ಬಿಡುಗಡೆಯಾಗಬೇಕಿದೆ. ಆದರೆ ಆತನು ಅಭಿನಯಿಸಿದ ಚಿತ್ರಗಳ ಸಂಖ್ಯೆ ಇತ್ತೀಚೆಗೆ ತುಂಬ ಕಡಿಮೆ ಎನಿಸಿದರೂ ಇಂದಿಗೂ ಸಹ ಆತ ತನ್ನ ನಂಬರ ಒಂದು ಸುಪರ್ ಸ್ಟಾರ್ ಸ್ಥಾನ ಬಿಟ್ಟು ಕೊಟ್ಟಿಲ್ಲವೆಂಬುದು ವಿಶೇಷ.



"ರಾಜಕೀಯದೊಂದಿಗೆ ಖುಷಿ ಕೊಡಲಿಲ್ಲ. ಮತ್ತೆ ಚಿತ್ರರಂಗಕ್ಕೆ ಶರಣೆಂದೆ."
—ಅಮಿತಾಭ

ಸಮಸ್ತ ಕನ್ನಡ ಕುಲಕೋಟಿಗೆ ದೀಪಾವಳಿಯ ಹಾರ್ದಿಕ ಶುಭಾಶಯಗಳು 



ಉತ್ತಮ ಗುಣಮಟ್ಟದ ಗಜಿಂ ಕ್ರೂ ಪೆಚ್ಚು
ತಿಂಡಿ ತಿನಿಸು, ಮತ್ತು ಉತ್ತರ ಭಾರತೀಯ
ಚೈನೀಜ ಖಾದ್ಯಗಳಿಗೆ ತಪ್ಪದೇ
ಸಂದರ್ಶಿಸುವ ಸ್ಥಳ

# ಕಾಮತ ಭವನ

## ದುರ್ಗದಬೈಲ ಹುಬ್ಬಳ್ಳಿ

---

 ಸರ್ವರಿಗೂ ದೀಪಾವಳಿಯ ಹಾರ್ದಿಕ ಶುಭಾಶಯಗಳು 

ಭಟಕಳ (ಉ.ಕ.) ತಾಲೂಕಿನ ಚಿತ್ರಪ್ರೇಮಿಗಳಿಗೊಂದು ಭವ್ಯ ಕೊಡುಗೆ!

# ಪುಷ್ಪಾಂಜಲಿ ಚಿತ್ರಮಂದಿರ

ಭಟಕಳ

ಫೋನ: 284

ಫೋಟೋಫೋನ, ಆರ್.ಸಿ.ಎ. ಸೌಂಡ-
ಸಿಸ್ಟಂವನ್ನೊಳಗೊಂಡ ಸಿನೇಮಾಸ್ಕೋಪವುಳ್ಳ,
ಅತ್ಯಾಧುನಿಕ ಚಿತ್ರಮಂದಿರ.



ಶುಭಾಶಯಗಳೊಂದಿಗೆ

ಬಿ. ಗೋಪಾಲಕೃಷ್ಣ ಭಟಕಳ ಮಾಲಕರು. ಲಕ್ಷ್ಮೀ ಚಿತ್ರಮಂದಿರ ಭಟಕಳ ವೆಂಕಟೇಶ ಚಿತ್ರಮಂದಿರ ಶಿರಾಲಿ (ಉ.ಕ.)

GANESH ADVT. HUBLI

# 'ಹೇಮಾಳೊಡನೆ ನನ್ನ ಮದುವೆ; ಚಿತ್ರರಂಗದಲ್ಲಿನ ನನ್ನ ಯಶಸ್ಸಿನ ಗುಟ್ಟು'
## -ಧರ್ಮೇಂದ್ರ



ನ್ಯಾಸೀರುದ್ದೀನ ಶಾ

ಅಮಿತಾಬ್ ನಂತರ ಧರ್ಮೇಂದ್ರ, ಸಂಜೀವ ಕುಮಾರ, ಜೀತೇಂದ್ರ, ಸುಪರ್‌ಸ್ಟಾರ್ ಆಗ ಬಹುದೆಂದು ಅವರ ಅಭಿಮಾನಿಗಳು ಹೇಳುತ್ತಿದ್ದರೂ ಆ ಸ್ಥಾನಕ್ಕೆ ಅವರು ಏರಲಿಲ್ಲ. ಸಾಧಾರಣ ನಟನೆಂದು ಖ್ಯಾತಿ ಪಡೆದ ಜಿತೇಂದ್ರ ದಕ್ಷಿಣದ ಮಾದಕ ನಟಿ ಶ್ರೀದೇವಿಯೊಂದಿಗೆ ಅಭಿನಯಿಸಿದ ''ಹಿಮ್ಮತವಾಲಾ'' ಗಲ್ಲಾಪೆಟ್ಟಿಗೆಯಲ್ಲಿ ಅದ್ಭುತ ಯಶಸ್ಸು ಪಡೆಯಿತು. ಅವಳೊಂದಿಗೆ ಆತ ಅಭಿನಯಿಸಿದ ''ಜಾನಿ ದೋಸ್ತ'' ''ಜಸ್ಟಿಸ್ ಚೌಧರಿ'' ''ಮವಾಲಿ'' ''ತೋಫಾ'' ''ಮಕ್ಸದ'' ''ಅಕಲಮಂದ'' ಚಿತ್ರಗಳು ತುಂಬ ಯಶಸ್ಸು ಪಡೆದು ಶ್ರೀದೇವಿ ಜಿತೇಂದ್ರ ಜೋಡಿ ಬಾಕ್ಸ ಆಫೀಸಿನ ಯಶಸ್ವಿ ಜೋಡಿಯೆನಿಸಿತು. ಅದು ನಿಜವೂ ಅಹುದು. ಕಾರಣ ಶ್ರೀದೇವಿ ಕುಣಾಲ ಗೋಸ್ವಾಮಿಯೊಂದಿಗೆ ಅಭಿನಯಿಸಿದ 'ಕಲಾಕಾರ' ಅಮಿತಾಭನೊಂದಿಗೆ ಅಭಿನಯಿಸಿದ ''ಇನಕ್ವಿಲಾಬ'' ಕಮಲ್‌ಹಾಸನನೊಂದಿಗೆ ಅವಳು ಅಭಿನಯಿಸಿದ ''ಸದಮಾ'' ''ರಾಜೇಶಖನ್ನಾನೊಂದಿಗೆ ಅಭಿನಯಿಸಿದ ''ಮಾಸ್ಟರಜೀ'' ''ನಯಾ ಕದಂ'' ಚಿತ್ರಗಳು ಸೋತವು. ಅದರಂತೆ ಜಿತೇಂದ್ರ ಉಳಿದ ನಟಿಯರೊಂದಿಗೆ ಅಭಿನಯಿಸಿದ ಚಿತ್ರಗಳು ಸಹಾ ಯಶಸ್ವಿಯಾಗಲಿಲ್ಲ. ಆತನು ಅಭಿನಯಿಸಿದ ''ಧರಮ ಅಧಿಕಾರಿ'' ಮತ್ತು ರೇಖಾಳೊಂದಿಗೆ ಅಭಿನಯಿಸಿದ ''ಸದಾ ಸುಹಾಗನ'' ಯಶಸ್ವಿ ಚಿತ್ರಗಳೆನಿಸಿದರೂ ಜಿತೇಂದ್ರ ವೈಯಕ್ತಿಕ ಪ್ರತಿಭೆಯ ಚಿತ್ರಗಳಲ್ಲ. ಸುಪರಸ್ಟಾರ ಹೋಗಲಿ ಸ್ಟಾರ ಇಮೇಜ್ ಸಹ ಕಳೆದುಕೊಂಡಿದ್ದ ರಾಜೇಶ ಖನ್ನಾ ಚಿತ್ರರಂಗದಲ್ಲಿ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಶ್ರಮಿಸುತ್ತಿರುವಾಗ ''ಅಮರದೀಪ''ದ ಯಶಸ್ಸು ರಾಜೇಶಖನ್ನಾನಿಗೆ ಮತ್ತೆ ಭರವಸೆ ಹುಟ್ಟಿಸಿತು. ಹೇಮಾಮಾಲಿನಿ, ರೇಖಾ ಶ್ರೀದೇವಿ, ಮೀನಾಕ್ಷಿ ಶೇಷಾದ್ರಿ, ಜಯಪ್ರದಾ, ಟೀನಾಮುನಿಮ ಹೀಗೆ ಖ್ಯಾತ ತಾರೆಯರೊಂದಿಗೆ ಅಭಿನಯಿಸಿದರೂ ರಾಜೇಶಖನ್ನಾ ಯಶಸ್ವಿಯೆನಿಸಲಿಲ್ಲ. ಈ ವರುಷ ಆತನು ಅಭಿನಯಿಸಿದ ಎಂಟು ಚಿತ್ರಗಳು ಬಿಡುಗಡೆಯಾದರೂ, ಸ್ಮಿತಾ ಪಾಟೀಲಳೊಂದಿಗೆ ಅಭಿನಯಿಸಿದ ''ಆಖೀರ್ ಕ್ಯೊಂ'' ''ಅಮೃತ್'' ಚಿತ್ರಗಳು ಮಾತ್ರ ತುಸು ಮಟ್ಟಿಗೆ ಬಾಕ್ಸ ಆಫೀಸಿನಲ್ಲಿ ಸುದ್ದಿ ಮಾಡಿದವು ''ಥೋಡಿಸಿ ಬೇವಫಾಯಿ'' ''ಅವತಾರ'' ಚಿತ್ರದ ತಾರಾಪುತ್ರರೆಲ್ಲ ಒಬ್ಬರ ಹಿಂದೆ ಒಬ್ಬರಾಗಿ ವಿಫಲರಾದಾಗ ಗಟ್ಟಿನಿಂತು ಯಶಸ್ವಿಯಾಗಿ ಬಂದಾತ ದರ್ಮೇಂದ್ರನ ಚಿರಂಜೀವ ಸನ್ನಿದೇವಲ. ''ಬೇತಾಬ'' ಅದ್ಬುತ-ಯಶಸ್ಸಿನ ನಂತರ ಸನ್ನಿಯ ''ಮಂಜಿಲ್ ಮಂಜಿಲ್'' ತೀರಸೋತ ಚಿತ್ರ. ಡಿಂಪಲ್ ಕಪಾಡಿಯಾಳೊಂದಿಗೆ ಅಭಿನಯಿಸಿದ 'ಸನ್ನಿಗೆ ಅವಳ ಗೆಳೆತನ ದೊರೆತು ಚಿತ್ರರಂಗದಲ್ಲಿ ಆತನಿಗೆ ಕೆಟ್ಟ ಹೆಸರು ತಂದು ಕೊಟ್ಟ ಚಿತ್ರವೆನಿಸಿತು, ಆದರೆ ನಂತರ ಆತನು ಅಭಿನಯಿಸಿದ 'ಅರ್ಜುನ್' ಹಿಟ್ ಎನಿಸದಿದ್ದರೂ ಅಪ್ಪ ದರ್ಮೇಂದ್ರ ಹಾಗೂ ಸನ್ನಿಗೆ ಅಶುಭವೆನಿಸಲಿಲ್ಲ. ಚಿತ್ರರಂಗದಲ್ಲಿ ತನ್ನ ಸ್ಥಾನ ಭದ್ರಗೊಳಿಸಲು ಹೋರಾಡುತ್ತಿರುವ ಸನ್ನಿಗೆ ಸುಪರ್ ಸ್ಟಾರ್ ಆಗುವ ಆಸೆ ತುಂಬ ದೂರ, ರಾಜಕಪೂರನ ಮೂರನೆಯ ಚಿರಂಜೀವ ರಾಜೀವ ಕಪೂರ ಹಲವು ಚಿತ್ರಗಳಲ್ಲಿ ಅಭಿನಯಿಸಿ ಸೋತ ನಂತರ ಆತನ ತಂದೆ ರಾಜಕಪೂರ ರಾಜೀವಗಾಗಿಯೇ "ರಾಮ್ ತೇರಿ ಗಂಗಾ ಮೈಲೀ" ನಿರ್ಮಿಸಿದರು. ಆದರೆ ಯಶಸ್ಸು, ಹೆಸರು ತಂದುದು ಅವರಲ್ಲಿ ಮೊತ್ತ

# 'ಸುಪರ ಸ್ಟಾರ್ ಪಟ್ಟ ಹೋಗುವ ಹಂತದಲ್ಲಿದ್ದಾಗ ನಿರ್ಮಾಪಕನಾದೆ'
## -ಜಿತೇಂದ್ರ

ಮೊದಲು ಅಭಿನಯಿಸಿದ ಮಂದಾಕಿನಿಗೆ. ರಾಜೀವ ಮತ್ತೆ ಹಿಂದುಳಿದ.

ತಾರಾಪುತ್ರರ ವಿಚಿತ್ರ ವರ್ತನೆಯಿಂದ ರೋಚ್ಚಿಗೆದ್ದ ಸುಭಾಸ ಘಾಯಿ ಅವರಿಗೆ ಪಾಠ ಕಲಿಸಲೆಂಬಂತೆ ಜಾಕಿ ಶ್ರಾಫ್‌ನನ್ನು ಅಕ್ಷರಶಃ ಬೀದಿಯಿಂದ ಎತ್ತಿ ತಂದು "ಹೀರೊ" ಮೂಲಕ ಹೀರೊ ಮಾಡಿದ. ಆತನು ಅಭಿನಯಿಸಿದ 'ಅಂದರ್ ಬಾಹರ್" "ಮೇರಿ ಜವಾಬ್" "ತೇರೀ ಮೆಹರಬಾನಿಯಾ" ಯಶಸ್ವಿ ಚಿತ್ರಗಳೆನಿಸಿದರೂ ಸುಪರ್ ಹಿಟ್ ಆಗಲಿಲ್ಲ, ಆತನು ಪ್ರಪ್ರಥಮವಾಗಿ ಅಭಿನಯಿಸಿದ ೩D ಚಿತ್ರ "ಶಿವಾಕಾ ಇನ್ಸಾಫ್" ಹಿಂದಿ ಚಿತ್ರರಂಗದಲ್ಲಿ ವಿಫಲಗೊಂಡು ಭಾರತದಲ್ಲಿ ೩D ಚಿತ್ರಗಳ ನಿರ್ಮಾಣ ಸಾಹಸ ಅಸಾಧ್ಯವೆನಿಸಿತು, ಗುಲಶನ್ ರಾಯ್ ನಂತರ ಖ್ಯಾತ ನಿರ್ಮಾಪಕರ ಚಿತ್ರ 'ಯುದ್ಧ'ದಲ್ಲಿ ಅಭಿನಯಿಸಿದ್ದರೂ ಜಾಕಿಯ ಈ ಚಿತ್ರ ಭಾರೀ ಪೆಟ್ಟು ತಂದಿತು. ಸುಭಾಷ ಘಾಯಿ ಅವರ 'ಕರ್ಮಾ'ದಲ್ಲಿ ಪುನಃ ಜಾಕೀ ಅಭಿನಯಿಸಿದ್ದಾನೆ. ಗಲ್ಲಾಪೆಟ್ಟಿಗೆಯಲ್ಲಿ ಈ ಚಿತ್ರ ಹೆಸರು ಮಾಡುತ್ತಿದ್ದರೂ ಅದರ ಯಶಸ್ಸಿನಲ್ಲಿ ಅನಿಲ ಕಪೂರ,



## 'ಕಲಕತ್ತೆಯಿಂದ ಬಂದವ ನಾನು. ಮುಂಬಯಿಗೆ ಹೆದರುವುದಿಲ್ಲ'

### -ಮಿಥುನ ಚಕ್ರವರ್ತಿ

ನಾಸಿರುದ್ದೀನಶಹಾ ಹಾಗೂ ಸ್ವತಃ ಸುಭಾಸ ಘಾಯಿ ಅವರ ದಿಗ್ದರ್ಶನದ ಪಾಲೂ ಇದೆ ಎಂಬುದನ್ನು ಮರೆಯುವಂತಿಲ್ಲ. ಅಮಿತಾಭಗೆಂದು ಕತೆ ಸಂಭಾಷಣೆ ಚಿತ್ರಸಾಹಿತ್ಯ ಬರೆದು, ಆತನ ಅನಾರೋಗ್ಯ ಹಾಗೂ ರಾಜಕೀಯ ಚಟುವಟಿಕೆಗಳ ಒತ್ತಡ ಹೆಚ್ಚಾಗಿ ಆತನ ಬದಲು ಜಾಕೀಶ್ರಾಫನಿಗೆ ನಾಯಕಪಟ್ಟ ನೀಡಿ ತಯಾರಿಸಿದ ಮನಮೋಹನ ದೇಸಾಯಿ ಅವರ ಮಗ ಕೇತನ ದಿಗ್ದರ್ಶಿಸಿದ 'ಅಲ್ಲಾ ರಖಾ' ಇತ್ತೀಚೆಗೆ ಬಿಡುಗಡೆಯಾಗಿ ಎಲ್ಲಡೆ ಸುದ್ದಿ ಮಾಡುತ್ತಿದೆ. ಇಂದು ಹಿಂದೀ ಚಿತ್ರರಂಗದಲ್ಲಿ ಅತ್ಯಂತ ಸಮರ್ಥ ದಿಗ್ದರ್ಶಕರೆನಿಸಿದ ಮಹೇಶ ಭಟ್ಟರ ಮುಂದಿನ ಚಿತ್ರ 'ಕಾಶ್'ನಲ್ಲಿ ಡಿಂಪಲ್‌ನೊಂದಿಗೆ ಜಾಕೀ ಅಭಿನಯಿಸುತ್ತಿದ್ದಾನೆ. ಈ ಚಿತ್ರದ ಯಶಸ್ಸು ಆತನ ಭವಿಷ್ಯವನ್ನು ನಿರ್ಧರಿಸಲಿದೆ.

ಅಮಿತಾಭನ ಉತ್ತರಾಧಿಕಾರಿಯಾಗಲಿರುವವರಲ್ಲಿ ಕೇಳಿ ಬರುತ್ತಿರುವ ಇನ್ನೊಬ್ಬ ಯುವಕ ಕಲಾವಿದ ಅನಿಲಕಪೂರ. 'ಓ ಸಾತ್ ದಿನ್' ಸಾಧಾರಣ ಚಿತ್ರವಾಗಿದ್ದರೂ ಬಾಕ್ಸ ಆಫೀಸಿನಲ್ಲಿ ಯಶಸ್ಸು ಪಡೆದು ಅನೀಲಕಪೂರನಿಗೆ ಸ್ಟಾರ್ ಇಮೇಜ್ ನೀಡಿತು. ಆತನು "ಪಲ್ಲವಿ ಅನು ಪಲ್ಲವಿ" ಕನ್ನಡ ಚಿತ್ರದಲ್ಲಿಯೂ ಅಭಿನಯಿಸಿದ್ದ. ಆದರೆ ಆತನಿಗೆ ಉತ್ತಮ ಅಭಿನಯಕ್ಕಾಗಿ ಸಿನೇಪ್ರೇಕ್ಷಕರ ಹಾಗೂ ವಿಮರ್ಶಕರ ಮೆಚ್ಚುಗೆ ನೀಡಿದ ಚಿತ್ರ "ಮಶಾಲ್" ದಿಲೀಪಕುಮಾರ ನಂತರ ಶ್ರೇಷ್ಠ ಹಾಗೂ ಅನುಭವೀ ಕಲಾವಿದನೊಂದಿಗೆ ಈ ಚಿತ್ರದಲ್ಲಿ ಅಭಿನಯಿಸಿದ್ದರೂ, ತನ್ನ ಸ್ವಂತ-ಪ್ರತಿಭೆಯಿಂದ ಅನಿಲ್‌ಕಪೂರ ಹಿಂದೀ ಚಿತ್ರರಂಗದಲ್ಲಿ ತನ್ನ ಸ್ಥಾನ ಭದ್ರ ಪಡಿಸಿಕೊಂಡ. ಜಾಕೀಶ್ರಾಫ್‌ನೊಂದಿಗೆ ಆತನು ಅಭಿನಯಿಸಿದ 'ಅಂದರ್ ಬಾಹರ್' ಯಶಸ್ವಿ ಚಿತ್ರವೆನಿಸಿದರೂ ಬಾಸು ಚಟರ್ಜಿ ಅವರು ನಿರ್ಮಿಸಿ ದಿಗ್ದರ್ಶಿಸಿದ "ಚಮೇಲೀಕೀ ಶಾದೀ" ಚಿತ್ರದಲ್ಲಿ ಅನಿಲ್ ಅಭಿನಯಿಸಿ ಸೋಲು ಕಂಡ. ಸರಳತೆ, ಪ್ರಯತ್ನ, ಶ್ರಮ ಗುಣಗಳಿಂದಾಗಿ ಅನಿಲ್ ಹಿಂದೀ ಚಿತ್ರ ನಿರ್ಮಾಪಕರ ಅಚ್ಚುಮೆಚ್ಚಿನ ಕಲಾವಿದ. ಅನೀಲ್-ಬಿಶ್ವಾಸ ದಿಗ್ದರ್ಶಿತ-'ಸಾಹೇಬ' ಚಿತ್ರದಲ್ಲಿ ಅನಿಲ್‌ಕಪೂರ ಅಭಿನಯಿಸಿ ಆ ಚಿತ್ರಕ್ಕೆ ಅಪೂರ್ವ ಯಶಸ್ಸು ತಂದು ಕೊಟ್ಟ. 'ಲವ್‌ಸ್ಟೋರಿ' ಯಶಸ್ಸಿನ ನಾಯಕಿ ವಿಜೇತಾ ಪಂಡಿತಗೆ ಪುನಃ ಅವಕಾಶ ಮಾಡಿಕೊಟ್ಟ 'ಮೊಹಬ್ಬತ್' ಪ್ರಣಯ ಚಿತ್ರದಲ್ಲಿ ಅನೀಲ್ ಅಭಿನಯಿಸಿ ಸಾಕಷ್ಟು ಜನಪ್ರಿಯತೆ-ಯಶಸ್ಸು ದಕ್ಕಿಸಿದ. ಸುಭಾಷ್ ಘಾಯಿ ಅವರ "ಮೇರೀ ಜಂಗ್" ಮತ್ತು ಇತ್ತೀಚೆಗೆ ಬಿಡುಗಡೆ ಹೊಂದಿದ "ಕರ್ಮಾ" ಚಿತ್ರಗಳ ಅದ್ಭುತ ಯಶಸ್ಸು ಅನೀಲ್ ಕಪೂರನ ಸ್ಥಾನವನ್ನು ಮೇಲಕ್ಕೆತ್ತಿದೆ. ಫಿರೋಜ ಖಾನ ನಿರ್ಮಿಸಿ ದಿಗ್ದರ್ಶಿಸಿದ "ಜಾನಬಾಜ್" ಚಿತ್ರದಲ್ಲಿ ಅನಿಲ್ ಕಪೂರ ಅಭಿನಯಿಸಿ ಹೆಸರು ಮಾಡಿದ್ದಾನೆ. ಒಂದರ ಹಿಂದೆ ಒಂದರಂತೆ



ಮಿಥುನ ಚಕ್ರವರ್ತಿ

ಯಶಸ್ಸು ಪಡೆಯುತ್ತಿರುವ ಅನಿಲ್‌ಕಪೂರ ಅಭಿನಯಿಸಿದ ಚಿತ್ರಗಳು ಆತನನ್ನು ಚಿತ್ರರಂಗದಲ್ಲಿ ವಿಶೇಷ ಸ್ಥಾನದಲ್ಲಿಟ್ಟಿವೆ.

'ಮಿಸ್ಟರ್ ಇಂಡಿಯಾ', "ಜೋಶಿಲೇ", "ಅಕಾನಾ" ಹಾಗೂ ಪೂನಂ ಧಿಲನ್‌ಳೊಂದಿಗೆ ಅಭಿನಯಿಸಿದ "ಕಸಂ" ಅನಿಲ್ ಕಪೂರನ ಬರಲಿರುವ ಚಿತ್ರಗಳು.

ಮೃಣಾಳಸೇನ ದಿಗ್ದರ್ಶಿಸಿದ "ಮೃಗಯಾ" ಚಿತ್ರದಲ್ಲಿ ಪ್ರಥಮಸಲ ಅಭಿನಯಿಸಿ ತನ್ನ

## 'ನನ್ನ ತಂದೆ ಗಂಗಾಮೈಲಿ ತೆಗೆದದ್ದು ನನಗಾಗಿ. ಆದರೆ ಕೀರ್ತಿ ಬಂದದ್ದು ಆಕೆಗೆ'

### -ರಾಜೀವ ಕಪೂರ

# ‘ಅಮಿತಾಭ ರಾಜಕೀಯದಲ್ಲಿದ್ದರೆ, ನನಗೆ ನಂಬರ್ ಒನ್ ಪಟ್ಟ ದಕ್ಕುತ್ತಿತ್ತು’

**–ಅನಿಲ ಕಪೂರ**

ಉತ್ತಮ ಅಭಿನಯಕ್ಕಾಗಿ ಶ್ರೇಷ್ಠ ಕಲಾವಿದನೆಂದು ಪ್ರಶಸ್ತಿ ದೊರಕಿಸಿದ ಮಿಥುನ ಚಕ್ರವರ್ತಿ “ಬಾಕ್ಸರ್” ಚಿತ್ರವನ್ನು ನಿರ್ಮಿಸಿ ಅದರಲ್ಲಿ ಅಭಿನಯಿಸಿದ ಆತನ ಅಭಿನಯ ಚೆನ್ನಾಗಿದ್ದರೂ “ಬಾಕ್ಸರ್” ಚಿತ್ರರಂಗದಲ್ಲಿ ಭಾರೀ ಸೋಲು ಕಂಡ ಚಿತ್ರ. ಮಿಥುನ್ ಪ್ರತಿಭಾವಂತ ಕಲಾವಿದ ಸರಳ ಹೃದಯಿ. ಉತ್ತಮ ನೃತ್ಯಕಲಾವಿದ. ಬಡಜನರ “ಅಮಿತಾಭ” ಎಂದು ಖ್ಯಾತಿ ಗಳಿಸಿದ ಮಿಥುನ್ ಶ್ರಮಜೀವಿ. ಪ್ರಯತ್ನವಾದಿ ‘ಬಾಕ್ಸರ್’ ಅಸಫಲತೆಯಿಂದ ನಿರಾಶೆ ಹೊಂದಲಿಲ್ಲ. ಕೆ. ಸಿ. ಬೊಕಾಡಿಯಾ ಅವರು ನಿರ್ಮಿಸಿದ ಪ್ರಥಮ ಚಿತ್ರ “ಪ್ಯಾರ ಝುಕತಾ ನಹೀ”ನಲ್ಲಿ ಪದ್ಮಿನಿ ಕೊಲ್ಲಾಪುರೆಯೊಂದಿಗೆ ಅಭಿನಯಿಸಿದ. ಈ ಚಿತ್ರ ಗಲ್ಲಾ ಪೆಟ್ಟಿಗೆಯಲ್ಲಿ ಅಪೂರ್ವ ಯಶಸ್ಸು ಮಾಡಿತು. ಮಿಥುನಗೆ ಅಮಿತಾಭನ ಶರೀರ ಸಂಪತ್ತಾಗಲೀ ಸ್ಟಾರ್ ಇಮೇಜ್ ಆಗಲೀ ಇಲ್ಲ. ಅದರೆ ಆತ ಯಾರನ್ನೂ ಅನುಕರಣೆ ಮಾಡಲು ಯತ್ನಿಸಿಲ್ಲ. ಆತನ ಸರಳ ಸಹಜ ಅಭಿನಯ ಲಕ್ಷಾವಧಿ ಯುವಕ ಯುವತಿಯರ ಮನಸ್ಸು ಸೆಳೆದಿದೆ. ನಂತರ ಆತನು ಅಭಿನಯಿಸಿದ “ಡಿಸ್ಕೋ ಡಾನ್ಸರ್” ಅತ್ಯಂತ ಯಶಸ್ವೀ ಚಿತ್ರವೆನಿಸಿತು. ಇದು ಹಿಂದಿ ಚಿತ್ರರಂಗದಲ್ಲಿ ಅತಿ ಹೆಚ್ಚು ಬೇಡಿಕೆಯುಳ್ಳಿರುವ ನಾಯಕ ನಟನೆಂದರೆ ಮಿಥುನ. ಪ್ರತಿ ಚಿತ್ರಕ್ಕೆ ಆತನು ಇಪ್ಪತ್ತು ಲಕ್ಷಕ್ಕೂ ಮಿಕ್ಕಿ ಸಂಪಾದಿಸುತ್ತಿದ್ದಾನಂತೆ.

ಮಂದಾಕಿನಿಯೊಂದಿಗೆ “ಜೀತೆ ಹೈಂ ಶಾನಸೆ” ಫರಾಳೊಂದಿಗೆ “ಜುಬಾನ್” ಮೀನಾಕ್ಷಿ ಶೇಷಾದ್ರಿಯೊಂದಿಗೆ ಕೇತನ ದೇಸಾಯಿ ದಿಗ್ದರ್ಶಿತ— “ರೋಜೀ ರೋಟಿ” ಶ್ರೀದೇವಿಯೊಂದಿಗೆ “ಗುರು” ಹಾಗೂ "ಮೈ ಭಗವಾನ್" ಹೀಗೆ ಆತನು ಅಭಿನಯಿಸಿದ ಚಿತ್ರಗಳ ಸುರಿಮಳೆ ಬರಲಿದೆ. ಮಿಥುನ ಒಳ್ಳೆಯ ಡಾನ್ಸರ್, ಫಾಯಿಟರ್ ಹಾಗೂ ಪ್ರತಿಭಾವಂತ ಕಲಾವಿದ. ಆರಂಭದಲ್ಲಿ ತಾನು ಅನುಭವಿಸಿದ ಕಷ್ಟದ ದಿನಗಳನ್ನು ಆತನಿಗೆ ಆಗ ನೆರವು ನೀಡಿದ ಸ್ನೇಹಿತರನ್ನು ಮಿಥುನ್ ಇಂದಿಗೂ ಮರೆತಿಲ್ಲ. ದಕ್ಷಿಣದಲ್ಲಿ ತಯಾರಾದ ಹಿಂದಿ ಚಿತ್ರಗಳ ನಿರ್ಮಾಪಕರಿಗೆ ಜಿತೇಂದ್ರ ಅಚ್ಚುಮೆಚ್ಚಿನ ನಾಯಕ ನಟನಾಗಿದ್ದ. ಈಗ ಅವರು ಮಿಥುನ ಚಕ್ರವರ್ತಿಗೆ ಬೆನ್ನು ಹತ್ತಿದ್ದಾರೆ. ಹಿಂದೀ ಚಿತ್ರರಂಗದಲ್ಲಿ ಮಿಥುನ್‌ಗೆ ಒಳ್ಳೆಯ ಹೆಸರಿದೆ, ಮರ್ಯಾದೆಯಿದೆ. ಅದರಂತೆ ಉಜ್ವಲ ಭವಿಷ್ಯವೂ ಇದೆ. ಮಿಥುನ್‌ನ ಈ ಅಪೂರ್ವ ಯಶಸ್ಸಿನ ಹಿಂದೆ ಶ್ರೀದೇವಿಯೊಂದಿಗೆ ಅವನು ಹುಟ್ಟಿಸಿಕೊಂಡ ‘ಸಂಬಂಧ’ ಕಾರಣವೆಂದು ಹಲವರ ಅಭಿಪ್ರಾಯ.

ಮಹೇಶ ಭಟ್ ದಿಗ್ದರ್ಶಿಸಿದ ಹಾಗೂ ರಾಜೇಂದ್ರಕುಮಾರ ನಿರ್ಮಿಸಿದ ‘ನಾಮ್’ ಚಿತ್ರದಲ್ಲಿ ರಾಜೇಂದ್ರಕುಮಾರನ ಪುತ್ರ ಕುಮಾರ-ಗೌರವ ಹಾಗೂ ಸುನೀಲದತ್ ಚಿರಂಜೀವ ಸಂಜಯದತ್ ಅವರ ಅಭಿನಯ ತುಂಬಾ ಚೆನ್ನಾಗಿದೆ. ಅದಕ್ಕೆ ಕಾರಣ ಮಹೇಶ ಭಟ್ ಅವರ ಸಮರ್ಥ ದಿಗ್ದರ್ಶನ. ಪ್ರಥಮ ಚಿತ್ರ ‘ಲವ್ಹ-ಸ್ಟೋರಿ’ ಅಭಿನಯದಿಂದ ಮೇಲಕ್ಕೆ ಬಂದ ಕುಮಾರಗೌರವ ಮಹೇಶ ಭಟ್ಟರ ಟಿ.ವ್ಹಿ. ಚಿತ್ರ ‘ಜನಮ್’ನಲ್ಲಿ ಆತ ಪ್ರತಿಭಾವಂತ ಕಲಾವಿದ-ನೆಂಬುದನ್ನು ಸಿದ್ಧಮಾಡಿತು. ಕುಮಾರಗೌರವ, ಸಂಜಯದತ್ತರ ಉಳಿದ ಚಿತ್ರಗಳು ಅಷ್ಟು ಯಶಸ್ಸು ಪಡೆಯದಿದ್ದರೂ, ‘ನಾಮ್’ ಅವರಲ್ಲಿ ಹೊಸ ಭರವಸೆ ಮೂಡಿಸಿದೆ.

ಸುಪರಸ್ಟಾರ್ ಅಮಿತಾಬ್ ಉತ್ತರಾಧಿಕಾರಿಯಾಗಲೂ ಮಿಥುನ್ ಚಕ್ರವರ್ತಿ, ಅನಿಲ-ಕಪೂರ ಹಾಗೂ ಜಾಕೀ ಶ್ರಾಫ್ ಅವರಲ್ಲಿ ತೀವ್ರ ಸ್ಪರ್ಧೆ ನಡೆದಿರುವದು ಸುಳ್ಳಲ್ಲ. ಆರ್ಟ ಫಿಲಂಗಳಲ್ಲಿ ತನ್ನ ಉತ್ತಮ ಅಭಿನಯದಿಂದ ಪ್ರತಿಭೆಯಿಂದ ಹೆಸರು ಗಳಿಸಿದ ನಾಸಿರುದ್ದೀನ ಶಹಾ ಈಗೀಗ ಕಮರ್ಶಿಯಲ್ ಚಿತ್ರಗಳಲ್ಲಿಯೂ ಅಭಿನಯಿಸಿ ಯಶಸ್ಸು ಪಡೆಯುತ್ತಿದ್ದಾನೆ.

ಕಲಾತ್ಮಕ ಚಿತ್ರಗಳಲ್ಲಿ ಆತನು ಗಳಿಸಿದ ಕೀರ್ತಿ ಸಾಧನೆ. ಕಮರ್ಶಿಯಲ್ ಚಿತ್ರಗಳಲ್ಲಿ ಸಫಲತೆ ಪಡೆದರೆ ಆತನೂ ಸಹ ಅಮಿತಾಬ್ ಉತ್ತರಾಧಿಕಾರಿಯಾಗಲು ಮಿಥುನ್. ಅನಿಲ್, ಜಾಕೀ ಅವರಿಗಿಂತ ಹೆಚ್ಚು ಅರ್ಹತೆ ಪಡೆದಿರುವ ಕಲಾವಿದ. ●



ಅನಿಲ ಕಪೂರ

ನಂಬರ್ ಒನ್‌ಗಾಗಿ ಸ್ಪರ್ಧೆ

# ಹೇಮಮಾಲಿನಿ ನಂತರ ಯಾರು?



ರೇಖಾ

ಒಮ್ಮೆ ತಾರಾ ಪದವಿ ಬಂದಿತೆಂದರೆ ಪ್ರತಿಯೊಬ್ಬ ನಟ ನಟಿಗೆ ಚಿತ್ರರಂಗದ ತುತ್ತ ತುದಿಗೇರುವ ಆತುರ. ದಶಕಕ್ಕೂ ಹೆಚ್ಚು ಕಾಲ ಹಿಂದಿ ಚಿತ್ರರಂಗದ ನಂಬರ್ ಒನ್ ನಾಯಕಿಯಾಗಿ ಮೆರೆದ ಹೇಮಾಮಾಲಿನಿ ಧರ್ಮೇಂದ್ರನೊಂದಿಗೆ ಅನಧಿಕೃತ ರೀತಿಯಲ್ಲಿ ವಿವಾಹವಾಗಿ ತಾಯಿಯಾಗುವರೆಗೂ ಆಕೆಯನ್ನು ಈ ಸ್ಥಾನದಿಂದ ಕೆಳಗಿಳಿಸುವದು ಯಾವ ನಟಿಗೂ ಸಾಧ್ಯವಾಗಲಿಲ್ಲ. ಇಂದಿಗೂ ಹಿಂದಿ ಚಿತ್ರಪ್ರಪಂಚದಲ್ಲಿ ಅವಳಿಗೆ ವಿಶೇಷ ಆದರವಿದೆ. 'ಸೀತಾ ಗೀತಾ' 'ಶೋಲೆ' ಚಿತ್ರಗಳಲ್ಲಿ ತುಂಟಿಯ ಪಾತ್ರವಹಿಸಿ ಕೋಟ್ಯಾವಧಿ ಯುವಮನಸ್ಸುಗಳನ್ನು ಸೂರೆಗೊಂಡು 'ಅಂಧಾ ಕಾನೂನ' ನಲ್ಲಿ ಪೋಲೀಸ ಇನ್ಸ್‌ಪೆಕ್ಟರ್ ಪಾತ್ರವಹಿಸಿದ ಪ್ರಥಮ ತಾರೆಯೆನಿಸಿದಳು. ಧರ್ಮೇಂದ್ರ ಜಿತೇಂದ್ರರ ಒಟ್ಟಿಗೆ ಈಗ ಅವಳು 'ಜಾನ ಹತೇಲಿ" ಚಿತ್ರದಲ್ಲಿ ಅಭಿನಯಿಸುತ್ತಿದ್ದಾಳೆ. ಇತ್ತೀಚೆಗೆ ಅವಳು ಅಭಿನಯಿಸಿದ ರಾಜೇಂದ್ರ ಸಿಂಗ್ ಬೇಡಿ ಕಥೆಯ 'ಏಕ ಚಾದರ ಮೈಲಿಸೀ' ಬಿಡುಗಡೆಯಾದ ಚಿತ್ರದಲ್ಲಿ ಅವಳು ಭಾವನಾಪೂರ್ಣ ಪಾತ್ರವಹಿಸಿದ್ದಾಳೆ. ಅವಳೊಂದಿಗೆ ರಿಷಿಕಪೂರ ಅಭಿನಯಿಸಿದ್ದಾನೆ. ಅವಳ ಇನ್ನೊಂದು ಚಿತ್ರ 'ಹೀರಾ ಸಾತ' ಬರಲಿದೆ. ಎರಡು ಹೊಸಚಿತ್ರಗಳನ್ನು ಅವಳು ನಿರ್ಮಿಸಲಿದ್ದಾಳೆ. ಇನ್ನು ಮುಂದೆ ವಯಸ್ಸಿಗೆ ತಕ್ಕಂತೆ ಭಾವನಾಪೂರ್ಣ ಚಿತ್ರಗಳನ್ನು ಆಯ್ಕೆ ಮಾಡಲಿದ್ದಾಳೆ.

ಹೇಮಾಮಾಲಿನಿಯ ನಂತರ ರೇಖಾ ಹಿಂದಿ ಚಿತ್ರರಂಗದಲ್ಲಿ ನಂಬರ್ ಒನ್ ಸ್ಥಾನಗಿಟ್ಟಿಸಲು ಪ್ರಯತ್ನಿಸಿದಳು, ಆರಂಭದಲ್ಲಿ ದ್ವಿತೀಯ ದರ್ಜೆಯ ಚಿತ್ರಗಳಲ್ಲಿ ಅಭಿನಯಿಸಿದ ರೇಖಾ ಸುಪರಸ್ಟಾರ ಅಮಿತಾಭನೊಂದಿಗೆ 'ಮುಕದ್ದರ್ ಕಾ ಸಿಕಂದರ' 'ಸಿಲ್‌ಸಿಲಾ' ಮುಂದೆ ವಿಶೇಷ ಖ್ಯಾತ ನಟರೊಂದಿಗೆ ಅಭಿನಯಿಸಿದರೂ, ಅಮಿತಾಭ್‌ನ ಪ್ರೇಯಸಿಯಾಗುವದರಲ್ಲಿಯೇ ಹೆಚ್ಚು ಸುಖ ಕಂಡವಳು ರೇಖಾ. 'ಉಮರಾವ್' ಜಾನ ಅಭಿನಯಕ್ಕಾಗಿ ರಾಷ್ಟ್ರಪ್ರಶಸ್ತಿ ದೊರಕಿದ ನಂತರ ರೇಖಾ

# ದಿ. ಅಗ್ರಿಕಲ್ಚರಲ್ ಪ್ರೊಡ್ಯೂಸ ಮಾರ್ಕೆಟ ಕಮೀಟಿ

## — ಅಣ್ಣಿಗೇರಿ —

ಸ್ಥಾಪನೆ ; ೧೯೪೮ ಜಿಲ್ಲಾ : ಧಾರವಾಡ ಮುಖ್ಯ ಕಚೇರಿ ದೂರವಾಣಿ : ೨೭

## ಕಲ್ಪಿಸಿದ ಸೌಲಭ್ಯಗಳು

೧. ಸಮರ್ಪಕ ತೂಕದ ವ್ಯವಸ್ಥೆ, ೨. ಹುಟ್ಟುವಳಿ ಹಣದ ಸೂಕ್ತ ಬಟವಡೆ, ೩. ಪೇಟೆ ಜ್ಞಾನಪ್ರಸಾರ, ೪. ಕೃಷಿ ಹುಟ್ಟುವಳಿಗಳನ್ನು ಟೆಂಡರ ಪದ್ಧತಿಯ ವ ಹರಾಜು ಮಾರಾಟದ ಮೂಲಕ ಸ್ಪರ್ಧಾತ್ಮಕ ಬೆಲೆ, ೫. ತಂಟೆ-ತಕರಾರುಗಳ ತೀವ್ರ ವಿಲೇವಾರಿ ಮತ್ತು ನಿವಾರಣೆ, ೬. ಸಕಲ ಸೌಕರ್ಯಗಳನ್ನೊಳಗೊಂಡ ಮಾರುಕಟ್ಟೆ ಪ್ರಾಂಗಣ, ೭. ಉಚಿತ ವರ್ಗೀಕರಣ, ೮. ಕಾನೂನಬದ್ಧ ರಿವಾಜಗಳು.

## ಅಭಿವೃದ್ಧಿ ಯೋಜನೆಯ ಪಕ್ಷಿನೋಟ

### ಮುಖ್ಯ ಮಾರುಕಟ್ಟೆ ಪ್ರಾಂಗಣ, ಅಣ್ಣಿಗೇರಿ

೧. ವಿಶ್ವಬ್ಯಾಂಕಿನ ಸಹಾಯ ಯೋಜನೆಯಡಿಯಲ್ಲಿ ರೂ.೫.೨೨ ಲಕ್ಷಗಳ ವೆಚ್ಚದಲ್ಲಿ ಆಫೀಸ ಬಿಲ್ಡಿಂಗ, ಗೋದಾಮುಗಳ ನಿರ್ಮಾಣ, ಸಂಡ್ರಿ ಶ್ಯಾಪ್ಸ್, ಉಪಹಾರ ಗೃಹನಿರ್ಮಾಣ.

೨. ಸಮಿತಿ ಫಂಡಿನಿಂದ ರೈತಭವನ, ಒಳರಸ್ತೆ, ಬೀದಿ ದೀಪದ ವ್ಯವಸ್ಥೆ, ಒಳಚರಂಡಿ ನಿರ್ಮಾಣ, ಯಾರ್ಡಿನ ಮುಂಭಾಗಕ್ಕೆ ಕಂಪೌಂಡ ಗೋಡೆ, ಜೀಪ್ ಗ್ಯಾರೇಜ ಮುಂತಾದವುಗಳನ್ನೂ ಕಟ್ಟಿಸಿದೆ.

೩. ಕೇಂದ್ರಸರಕಾರದ ಧನಸಹಾಯಯೋಜನೆ ಅಡಿಯಲ್ಲಿ ಜಾನುವಾರ ಕೊಟ್ಟಿಗೆ, ಗೋದಾಮು ನಿರ್ಮಾಣ, ಹರಾಜು ಕಟ್ಟೆ. ೨ ಎನ್.ಜಿ.ಆರ್.ಜಿ. ಗೋದಾಮುಗಳ ನಿರ್ಮಾಣ ಇತ್ಯಾದಿ.

### ಉಪ ಮಾರುಕಟ್ಟೆ ಪ್ರಾಂಗಣ ನವಲಗುಂದ

೧. ಮಲಪ್ರಭಾ ಅಚ್ಚುಕಟ್ಟು ಪ್ರದೇಶ (ಕಾಡಾ) ಯೋಜನೆಯಲ್ಲಿ ರೂ. ೨.೦೮ ಲಕ್ಷ ವೆಚ್ಚದಲ್ಲಿ ಗೋದಾಮು ನಿರ್ಮಾಣ.

೨. ಸಮಿತಿ ನಿಧಿಯಿಂದ ಸಬ್‌ಯಾರ್ಡ ಆಫೀಸ ಕಟ್ಟಡ.

೩. ಕೇಂದ್ರ ಸರಕಾರದ ಧನಸಹಾಯ ಯೋಜನೆ ಅಡಿಯಲ್ಲಿ ಒಳರಸ್ತೆ ನಿರ್ಮಾಣ. ಆಫೀಸ ಕಂಪೌಂಡ, ಗೋದಾಮು, ಸ್ಯಾನೆಟರಿ ಬ್ಲಾಕ ೨ ಎನ್.ಜಿ.ಆರ್.ಜಿ. ಗೋದಾಮು ನಿರ್ಮಾಣ ಇತ್ಯಾದಿ.

೪. ಸಮಿತಿ ನಿಧಿಯಿಂದ ರೂ. ೨.೦೦ ಲಕ್ಷ ವೆಚ್ಚದಲ್ಲಿ ರೈತಭವನ ನಿರ್ಮಾಣದ ಯೊಜನೆಯನ್ನೂ ಹಾಕಿಕೊಂಡಿದೆ.

## ಸಮಿತಿ ಸದಸ್ಯರುಗಳು

(೧) ಶ್ರೀ ಜೆ. ಎಚ್. ಭೋವಿ, ಉಪಾಧ್ಯಕ್ಷರು ಹಾಗೂ ಅಧ್ಯಕ್ಷರು

(೨) ಶ್ರೀ ಆರ್. ಎಚ್. ಈರಡ್ಡಿ, ಸದಸ್ಯರು

(೩) ಶ್ರೀ ಸಿ. ಎಮ್. ಹಿರೇಣ್ಣವರ ,,

(೪) ಶ್ರೀ ಬಿ. ವ್ಹಿ. ದೇಸಾಯಿ ,,

(೫) ಶ್ರೀ ಕೆ. ಕೆ. ಅಮುಡ್ಲ ,,

(೬) ಶ್ರೀ ಎಸ್. ಬಿ. ದೇಶಪಾಂಡೆ ,,

(೭) ಶ್ರೀ ಎಸ್. ಸಿ. ಸಿಕ್ಕೇದೇಸಾಯಿ ,,

(೮) ಶ್ರೀ ಜಿ. ಎಸ್. ಜೇಡರ ಸದಸ್ಯರು

(೯) ಶ್ರೀ ಎಸ್. ವ್ಹಿ. ಜಿನಗಾ ,,

(೧೦) ಶ್ರೀ ಸಿ. ಎಂ. ಹುಬ್ಬಳ್ಳಿ ,,

(೧೧) ಶ್ರೀ ವ್ಹಿ. ಬಿ. ಭರಮುಗೌಡ್ರ ,,

(೧೨) ಶ್ರೀ ಎಂ. ಬಿ. ಹಳ್ಳದ ,,

(೧೩) ಶ್ರೀ ಜಿ. ಜಿ. ವೈದ್ಯ ,,

(೧೪) ಶ್ರೀ ಎಸ್. ಟಿ. ದೊಡ್ಡಮನಿ, ,, ಮಾರ್ಕೆಟಿಂಗ ಇನಸ್ಪೆಕ್ಟರ, ಧಾರವಾಡ ಸದಸ್ಯರು

**ಶ್ರೀ ಎಸ್. ಡಿ. ಲಕಮನಹಳ್ಳಿ**
ಕಾರ್ಯದರ್ಶಿ

**ಶ್ರೀ ಜೆ. ಎಚ್. ಭೋವಿ**
ಅಧ್ಯಕ್ಷರು

ಸೂಚನೆ : ದಲಾಲಿಯನ್ನು ರೈತರು ಕೊಡಬೇಕಾಗಿಲ್ಲ. ಎ. ಪಿ. ಎಂ. ಸಿ. ಕಾಯ್ದೆಯನ್ನು ತಿದ್ದುಪಡಿ ಮಾಡಿ ೧೩-೬-೮೬ ರಿಂದ ಅಮಲಿನಲ್ಲಿ ತಂದಿರುತ್ತದೆ.

ಪಾತ್ರಗಳ ಆಯ್ಕೆಗೆ ಆರಂಭಿಸಿದಳು. ಗಿರೀಶ ಕಾರ್ನಾಡ ದಿಗ್ದರ್ಶಿತ ಹಾಗೂ ಶಶಿಕಪೂರ ನಿರ್ಮಿತ ''ಉತ್ಸವ"ದಲ್ಲಿ ತನ್ನ ಅಂಗಾಂಗಳ ವಿಶಿಷ್ಟ ಪ್ರದರ್ಶನದಿಂದ ಆ ಚಿತ್ರಕ್ಕೆ ಯಶಸ್ಸು ತಂದು ಕೊಟ್ಟಳು; ಮಿಥುನಚಕ್ರವರ್ತಿಯೊಂದಿಗೆ ಅವಳು ಅಭಿನಯಿಸಿದ ಎಫ್. ಸಿ. ಮೆಹರಾ ನಿರ್ಮಿತ 'ಜಾಲ್' ಹಿಟ್ ಆಯಿತು. ಅವಳು ಅಭಿನಯಿಸಿದ 'ರ್ಝೂಟ" ಇತ್ತೀಚೆಗೆ ಬಿಡುಗಡೆಯಾಗಿ ಪ್ಲಾಪ್ ಆಯಿತು. ಮನೋಜಕುಮಾರನ

---

**ದೇಶ ವಿದೇಶಗಳಲ್ಲಿ ಕೀರ್ತಿ ಪಡೆದ ತಾರೆ ಹೇಮಾಮಾಲಿನಿ. ಹಿಂದೀ ಚಿತ್ರರಂಗದಲ್ಲಿ ನಟನಿಗಿರುವಷ್ಟೇ ಸ್ವಂತಿಕೆಯ ಇಮೇಜನ್ನು ಪಡೆದ ಈ ತಾರೆ, ಅತ್ಯಂತ ಕಡಿಮೆ ಅವಧಿಯಲ್ಲಿಯೇ ಜನಪ್ರಿಯ ತಾರೆಯಾದಳು. ಧರ್ಮೇಂದ್ರನನ್ನು ಮದುವೆಯಾದರೂ ಆಕೆಯ ತಾರಾಪಟ್ಟ ಕುಗ್ಗಲಿಲ್ಲ. ಎರಡು ಮಕ್ಕಳ ತಾಯಿಯಾದರೂ ನವ ತರುಣಿಯ ಇಮೇಜ ಆಕೆಗಿದೆ.**

---

"ಕ್ಲಾರ್ಕ' ರಾಜೇಶ ಖನ್ನಾನೊಂದಿಗೆ ಅಭಿನಯಿಸಿದ "ಸನಮ ಬೇವಫಾ" ಇವು ಅವಳ ಬರಲಿರುವ ಚಿತ್ರಗಳು. ಹೇಮಾಮಾಲಿನಿಯ ಹಾಗೆ ಈಗ ರೇಖಾಳಿಗೆ ಹಣ ಬೇಕಿಲ್ಲ, ಬಹಳಷ್ಟು ಚಿತ್ರಗಳಲ್ಲಿ ಅಭಿನಯಿಸುವ ಆಶೆಯೂ ಇಲ್ಲ. ಭಾವನಾ ಪ್ರಧಾನ ಪಾತ್ರಗಳಿದ್ದರೆ ಮಾತ್ರ ಅವಳು ಚಿತ್ರಕ್ಕೆ ಸಹಿ ಹಾಕುತ್ತಾಳಂತೆ.



ರೇಖಾ

ತಮಿಳು ತೆಲಗು ಚಿತ್ರರಂಗದಲ್ಲಿ ತನ್ನ ಅಂಗ ಸೌಂದರ್ಯದಿಂದ ಯೌವನದಿಂದ ಜನಪ್ರಿಯ ತಾರೆಯೆನಿಸಿದ್ದ ಶ್ರೀದೇವಿ ತಮಿಳಿನಲ್ಲಿ ಜಯ ಭೇರಿಗಳಿಸಿದ್ದ "ಪದಿನಾರರ ವಯದಿನಿಲೆ ಹಿಂದಿಯ ಅವತರಣಿಕೆ 'ಸೋಲಾ ಸಾವನ್' ದಲ್ಲಿ ಪ್ರಪ್ರಥಮವಾಗಿ ಹಿಂದೀ ಚಿತ್ರರಂಗ ಪ್ರವೇಶಿಸಿದಳು, ಅವಳೊಂದಿಗೆ ಅಮೋಲ ಪಾಲೇಕರ ನಾಯಕನಾಗಿದ್ದ. ಈ ಚಿತ್ರದಲ್ಲಿ ಅವಳ ಅಭಿನಯ ಸಹಜ ಹಾಗೂ ಚನ್ನಾಗಿದ್ದರೂ ಚಿತ್ರ ಸೋತಿತು. ಶ್ರೀದೇವಿ ಈ ಸೋಲಿನಿಂದ ಬೇಸತ್ತು ಪುನಃ ಮದ್ರಾಸ ಸೇರಿದಳು. ಆದರೆ ಪದ್ಮಾಲಯ ಲಾಂಛನದ ಶ್ರೀ ರಾಘವೇಂದ್ರರಾವ್ ದಿಗ್ದರ್ಶಿತ 'ಹಿಮ್ಮತ್‌ವಾಲಾ' ಚಿತ್ರದಲ್ಲಿ ಪುನಃ ಅಭಿನಯಿಸುವ ಅವಕಾಶ ದೊರಕಿತು. ಜಿತೇಂದ್ರ ಅವಳ ನಾಯಕ. ನಿರ್ಮಾಪಕರು ಹಣಹಾಕಲು ಹಿಂಜರಿದಿದ್ದ ಈ ಚಿತ್ರ ನಿರೀಕ್ಷೆ ಮೀರಿ ಸುಪರ್ ಹಿಟ್ ಆಯಿತು. ಮುಂದೆ ಶ್ರೀದೇವಿ ಕುಣಿಯುತ್ತಲೇ ಯಶಸ್ಸಿನ ಮೆಟ್ಟಲೇರಿದರೆ ರಸಿಕ ಪ್ರೇಕ್ಷಕರು ತಮಗೆ ಅರಿವಿಲ್ಲದಂತೆಯೇ ಆಕೆಯ ಬೆನ್ನು ಹತ್ತಿದರು. ಯಶಸ್ಸಿನ ಹಿಂದೆ ಯಶಸ್ಸು 'ಹಿಮ್ಮತವಾಲಾ' 'ಜಾನಿ ದೋಸ್ತ' 'ಜಸ್ಟೀಸ್ ಚೌಧರಿ' 'ಮವಾಲಿ' 'ತೋಫಾ' 'ಅಕಲಮಂದ' ಹೀಗೆ ಯಶಸ್ಸಿನ ಸರಮಾಲೆ ಸಾಗಿತ್ತು. ಹದಿನೆಂಟು ತಿಂಗಳ ಅವಧಿಯಲ್ಲಿ ಹೇಮಾ, ರೇಖಾರನ್ನೂ, ತಳ್ಳಿಹಾಕಿ 'ನಂಬರ ಒನ್' ಸ್ಥಾನ ಗಿಟ್ಟಿಸಿದಳು ಶ್ರೀದೇವಿ. ಕುನಾಲ ಕಪೂರನೊಂದಿಗೆ ಅಭಿನಯಿಸಿದ ಕಲಾಕಾರ, ಅಮಿತಾಬ್‌ನೊಂದಿಗೆ ಅಭಿನಯಿಸಿದ 'ಇನ್‌ಕ್ವಿಲಾಬ' ಬಾಕ್ಸ ಆಫೀಸಿನಲ್ಲಿ ಸೋತವು, ರಾಜೇಶ ಖನ್ನಾ ಒಟ್ಟಿಗೆ ಅಭಿನಯಿಸಿದ 'ನಯಾ ಕದಂ' 'ಮಕ್ಸದ್' ;'ಮಾಸ್ಟರಜೀ' ಅಷ್ಟು ಯಶಸ್ಸು ಪಡೆಯಲಿಲ್ಲ. ಆದರೆ ಜಿತೇಂದ್ರ-ಶ್ರೀದೇವಿ ಒಟ್ಟಿಗೆ ಅಭಿನಯಿಸಿದ ಎಲ್ಲ ಚಿತ್ರಗಳು ಹಿಟ್ ಆಗಿರುವದು ವಿಶೇಷ. ಇತ್ತೀಚೆಗೆ ಬಿಡುಗಡೆಯಾದ 'ಭಗವಾನ್ ದಾದಾ' ಅವಳ ಮತ್ತೊಂದು ಸೋಲು. ಆದರೆ ಅಮಿತಾಭನೊಂದಿಗೆ ಅಭಿನಯಿಸಿ ಈಗ ಬಿಡುಗಡೆಯಾದ 'ಆಖರೀ ರಾಸ್ತಾ' ಹಿಟ್ ಆಗಿದೆ. ಜಿತೇಂದ್ರನೊಂದಿಗೆ ಅಭಿನಯಿಸಿದ 'ಘರಸಂಸಾರ' 'ಸುಹಾಗನ್', ಪರವಾಗಿಲ್ಲ. 'ಐಸಾ ಪ್ಯಾರ ಕಹಾ' 'ಜೋಶಿಲೆ' 'ಮಿಸ್ಟರ್ ಇಂಡಿಯಾ' 'ಜವಾಬ ಹಂ ದೇಂಗೆ' 'ನಗೀನಾ' 'ಗುರು' ಶ್ರೀದೇವಿ ಅಭಿನಯುಸುತ್ತಿರುವ ಹಾಗೂ ಬರಲಿರುವ ಚಿತ್ರಗಳು, ಇನ್ನೂ ಹೆಸರಿಡದ ಫಿರೋಜನಾಡಿಯಾಡ್‌ವಾಲಾ ಹಾಗೂ ಬೋಕಾಡಿಯಾ ಚಿತ್ರಗಳಲ್ಲಿ ಸಹ ಅವಳು ನಾಯಕಿ. ನೃತ್ಯ, ಸೆಕ್ಸ ಅಪೀಲ್ ಅಂಗ ಪ್ರದರ್ಶನಗಳಿಗೆ ಮಹತ್ವವಿರುವ ಚಿತ್ರಗಳಲ್ಲಿ ಶ್ರೀದೇವಿ ಯಶಸ್ಸು ಸಂಪಾದಿಸಿದ್ದಾಳೆ. ಅವಳು ಒಳ್ಳೆಯ ಅಭಿನಯ ಸಾಮರ್ಥ್ಯ ತೋರಿದ 'ಸೋಲಾ ಸಾವನ್' 'ಸದಮಾ' ದಂತಹ ಚಿತ್ರಗಳು ಬಾಕ್ಸ ಆಫೀಸಿನಲ್ಲಿ ಸೋತಿವೆ. ಆದರೂ ಸಹ ಇಂದಿಗೂ ಅವಳು 'ನಂಬರ ವನ್' ಸ್ಥಾನವನ್ನು ಭದ್ರವಾಗಿ ಹಿಡಿದಿಟ್ಟಿರುದದು ವಿಶೇಷ.

ಶಾಸ್ತ್ರೋಕ್ತ ನೃತ್ಯ, ಭಾರತೀಯ ನಾರೀ ಮಣಿಯ ಪಾತ್ರಗಳನ್ನು ತನ್ನ ಸಹಜ ಅಭಿನಯದಿಂದ ಅಂಗಪ್ರದರ್ಶನಕ್ಕೆ ಅವಕಾಶ ಕೊಡದೇ

ಪ್ರೇಕ್ಷಕರ ಮನಸ್ಸನ್ನು, ವಿಮರ್ಶಕರ ಮೆಚ್ಚಿಗೆಯನ್ನು ಪಡೆದ ಇನ್ನೊಬ್ಬ ದಕ್ಷಿಣದ ತಾರೆ ಜಯಪ್ರದಾ ಹಿಂದೀ ಚಿತ್ರರಂಗದಲ್ಲಿ ಮೊದಲ ಸ್ಥಾನಕ್ಕೆ ಸ್ಪರ್ಧಿಸುತ್ತಿದ್ದಾಳೆ. 'ಸರಗಮ್' ಸುಪರ್ ಹಿಟ್ ಚಿತ್ರದ ನಂತರ ಅವಳಿಗೆ ಒಮ್ಮೆಲೇ ಬೇಡಿಕೆ ಹೆಚ್ಚಾಯಿತು. ತೆಲುಗಿನಲ್ಲಿ ತಯಾರಾದ ಶಂಕರಾಭರಣಂ' ರಾಷ್ಟ್ರಪ್ರಶಸ್ತಿ ದೊರಕಿಸಿ ಎಲ್ಲರ ಮೆಚ್ಚಿಗೆ ಪಡೆಯಿತಾದರೂ ನಂತರ ಗಿರೀಶ ಕಾರ್ನಾಡ ದಿಗ್ದರ್ಶಿತ ಹಿಂದೀ ಅವತರಣಿಕೆ 'ಸುರಸಂಗಮ್' ಅಷ್ಟು ಯಶಸ್ವಿಪಡೆಯಲಿಲ್ಲ. ಇದರಲ್ಲಿ ಜಯಪ್ರದಳ ಅಭಿನಯ ನಿಜವಾಗಿಯೂ ಅಭಿನಂದನೀಯವಾಗಿದೆ. ರಾಜೇಶ ಖನ್ನಾ, ಜಿತೇಂದ್ರ, ಮಿಥುನ ಚಕ್ರವರ್ತಿ, ಜಾಕೀಶ್ರಾಫ್, ಅನಿಲ ಕಪೂರ, ಅಮಿತಾಬ, ಹೀಗೆ ಎಲ್ಲ ಪ್ರಥಮ ರ್‍ಯಾಂಕಿನ ನಟರೊಂದಿಗೆ ಅವಳು ಅಭಿನಯಿಸಿದ್ದಾಳೆ. ಅವಳು ಅಭಿನಯಿಸಿದ 'ಶರಾಬಿ' ಸುಪರ್ ಹಿಟ್ ಆಯಿತು. ಈಗ ಬಿಡುಗಡೆಯಾಗಿರುವ 'ಪ್ಯಾರ ಕೇ ದೋ ಪಲ್' ನಲ್ಲಿ ಅವಳು ಮಿಥುನ ಚಕ್ರವರ್ತಿಯ

→

ಮಂದಾಕಿನಿ





ಸ್ಮಿತಾ ಪಾಟೀಲ

**ಬರೀ ಸೌಂದರ್ಯದಿಂದಲೂ ಹಿಂದೀ ಚಿತ್ರರಂಗದಲ್ಲಿ ಬಾಳಬಹುದೆಂಬುದನ್ನು ದಕ್ಷಿಣದತಾರೆ ಶ್ರೀದೇವಿ ತೋರಿಸಿಕೊಟ್ಟಿದ್ದಾಳೆ. ತೆಲಗು ತಮಿಳು ಚಿತ್ರರಂಗದಿಂದ ಮುಂಬಯಿಗೆ ಹೋದ ಈ ತಾರೆ, ಹಿಂದೀ ತಾರೆಯರಿಗೆ ಹೊಟ್ಟೆಕಿಚ್ಚನ್ನೂ ಭಯವನ್ನು ಏಕಕಾಲದಲ್ಲಿ ಹುಟ್ಟಿಸಿದಳು. ನಂಬರ ವನ್ ಎಂದು ಹೆಸರಾದ ಎಲ್ಲಾ ತಾರೆಯರೊಂದಿಗೂ ಆಕೆ ನಟಿಸಿದ್ದಾಳೆ.**

ನಾಯಕಿ. ಅಮಿತಾಭನೊಂದಿಗೆ ಅಭಿನಯಿಸಿದ 'ಗಂಗಾಜಮುನಾ' ರಾಜೇಶ ಖನ್ನಾನೊಂದಿಗೆ ಅಭಿನಯಿಸಿದ 'ಸೌತನ್ ಕೀ ಬೇಟಿ', 'ಸನಮ್ ಬೇವಫಾ', 'ಘರ ಘರ ಕೀ ಕಹಾನಿ' ಹಾಗೂ ಐಸಾ ಪ್ಯಾರ ಕಹಾ' ಇವು ಅವಳ ಬರಲಿರುವ ಚಿತ್ರಗಳು. ಈ ವರ್ಷದ ಆರಂಭದಲ್ಲಿ ಮಿಥುನ ಚಕ್ರವರ್ತಿಯೊಂದಿಗೆ ಅಭಿನಯಿಸಿ ಬಿಡುಗಡೆಯಾದ ಅವಳ ಚಿತ್ರ 'ಜಾಲ್' ರಜತೋತ್ಸವ ಆಚರಿಸಿತು ಆದರೆ ಅವಳು ಅಭಿನಯಿಸಿದ 'ಸಂಜೋಗ' 'ಸಿಂಘಾಸನ', ದಿಲ್‌ವಾಲಾ' ಅಷ್ಟು ಯಶಸ್ಸು ಪಡೆಯಲಿಲ್ಲ. ಅವಳಿಗೆ ಹಿಂದೀ ಬರುವದಿಲ್ಲ. ಹೀಗಾಗಿ ಅವಳ ಪಾತ್ರಗಳಿಗೆ ನಾಜ್ ಕಂಠದಾನ ಮಾಡಿದ್ದಾಳೆ. ಯಶಸ್ಸು-ಅಪಯಶಸ್ಸುಗಳ ಮಧ್ಯೆ ತೊಳಲಾಡುತ್ತಿರುವ ಜಯಪ್ರದಾ ಹಿಂದೀ ಚಿತ್ರರಂಗದಲ್ಲಿ ತುತ್ತತುದಿಗೆ ಏರುವ ಆಶೆಯನ್ನು ಬಿಟ್ಟುಕೊಟ್ಟಿಲ್ಲ.

ಶ್ರೀದೇವಿ, ಜಯಪ್ರದಾಳೊಂದಿಗೆ ಸ್ಪರ್ಧೆಗೆ ಇಳಿದವಳು ಶಶಿಕಲಾ ಉರ್ಫ ಮೀನಾಕ್ಷಿ ಶೇಷಾದ್ರಿ. ಮೂರು ವರ್ಷಗಳ ಹಿಂದೆ ಭಾರತ ಸುಂದರಿ ಪ್ರಶಸ್ತಿ ದೊರಕಿಸಿದ ಅವಳಿಗೆ ಹಿಂದೀ ಚಿತ್ರರಂಗದಲ್ಲಿ ಅನಾಯಾಸವಾಗಿ ಪ್ರವೇಶ. ಮನೋಜಕುಮಾರನ 'ಪೇಂಟರ್ ಬಾಬು' ಚಿತ್ರದಲ್ಲಿ ಅವಳಿಗೆ ನಾಯಕಿಯ ಪಾತ್ರ. ಅವಳ ಅಭಿನಯ ಚೆನ್ನಾಗಿದ್ದರೂ ಬಾಕ್ಸ್ ಆಫೀಸಿನಲ್ಲಿ ಈ ಚಿತ್ರ ಪೂರ್ಣ ಸೋತು ಅವಳಿಗೆ ದೊಡ್ಡ ಆಘಾತ. ಆದರೆ ಸುಭಾಷ್ ಘಾಯಿ ಅವರ ಕೃಪಾಕಟಾಕ್ಷ ಇವಳ ಮೇಲೆ ಬಿದ್ದು 'ಹೀರೋ' ನಲ್ಲಿ ಜಾಕೀಶ್ರಾಫ್ ಹೊಸ ನಟನೊಂದಿಗೆ ನಾಯ್ಕಿಕೆಯ ಪಾತ್ರ 'ಹೀರೋ' ಸುಪರ್ ಹಿಟ್ ನಂತರ ಮೀನಾಕ್ಷಿಗೆ ಒಮ್ಮೆಲೆ ವಿಪರೀತ ಬೇಡಿಕೆ. ಜಿತೇಂದ್ರನೊಂದಿಗೆ ಅವಳು ಅಭಿನಯಿಸಿದ 'ಹೋಶಿಯಾರ್' ಹಿಟ್ ಆಗದಿದ್ದರೂ ಯಶಸ್ಸು ಪಡೆಯಿತು. ಪದ್ಮಾಲಯ ಲಾಂಛನದ 'ಮಹಾ ಶಕ್ತಿಮಾನ್'ದಲ್ಲಿ ಅಭಿನಯಿಸಿ ಈ ಚಿತ್ರ ಸಾಧಾರಣವೆನಿಸಿತು. ಮಿಥುನ ಚಕ್ರವರ್ತಿಯೊಂದಿಗೆ ಅಭಿನಯಿಸಿದ ಅವಳ 'ಪರಿವಾರ' ಇನ್ನು ಬಿಡುಗಡೆಯಾಗಬೇಕಿದೆ. ಆದರೆ ಮನಮೋಹನ ದೇಸಾಯಿ ಮಗ ಕೇತನ ದಿಗ್ದರ್ಶಿಸಿದ ಹಾಗೂ ಜಾಕೀಶ್ರಾಫ್ ಅಭಿನಯಿಸಿದ 'ಅಲ್ಲಾರಖಾ' ಚಿತ್ರದಲ್ಲಿ ಇವಳು ನಾಯಕಿ. ಈಗಾಗಲೇ ಈ ಚಿತ್ರ ಹಿಟ್ ಆಗಿದೆ. ಅನಿಲ್ ಕಪೂರನೊಂದಿಗೆ ಅಭಿನಯಿಸಿದ ಸುಭಾಷ್ ಘಾಯಿ ಅವರ 'ಮೇರಿ ಜಂಗ್' ಸಹ ತುಂಬ ಯಶಸ್ವಿ ಚಿತ್ರವೆನಿಸಿತು. ಪ್ರಕಾಶ ಮೆಹರಾ ಅವರ 'ಮುಕದ್ದರ್ ಕಾ ಫೈಸ್ಲಾ' ಜಾಕೀಶ್ರಾಫ್‌ನೊಂದಿಗೆ ಅಭಿನಯಿಸಿದ 'ಇಜಾದತ್' ಪ್ರಸಾದ ಪ್ರೊಡಕ್ಷನ್ಸದವರ 'ಸ್ವಾತಿ' ಹೀಗೆ ಸುಮಾರು ಮೂವತ್ತಕ್ಕೂ ಹೆಚ್ಚು ಚಿತ್ರಗಳಲ್ಲಿ ಮೀನಾಕ್ಷಿ ಅಭಿನಯಿಸುತ್ತಿದ್ದು ಎಲ್ಲ ಬಗೆಯ ಪಾತ್ರಗಳನ್ನು ಸ್ವೀಕರಿಸಿ ತುಂಬ ಬಿಜೀ ಸ್ಟಾರ್ ಎನಿಸಿದ್ದಾಳೆ. ಅವಕಾಶ, ಸುಸಂಧಿ ದೊರೆತರೆ ಅವಳಿಗೂ ಸಹ ಹಿಂದೀ ಚಿತ್ರರಂಗದಲ್ಲಿ ಮೊದಲನೆಯ ಸ್ಥಾನದ ಮೇಲೆ ಕಣ್ಣದೆ.

ಯಾಸ್ಮಿನ್ ಜೊಸೆಫ್ ಹೆಸರು ಬದಲಿಸಿ ಮಂದಾಕಿನಿಯಾಗಿ ರಾಜಕಪೂರರ 'ರಾಮ ತೇರೀ ಗಂಗಾ ಮೈಲೀ'ನಲ್ಲಿ ತನ್ನ ಮುದ್ದಾದ ಮೊಲೆಗಳನ್ನು ಪ್ರದರ್ಶಿಸಿ ಚಿತ್ರಕ್ಕೆ ಅದ್ಭುತ ಯಶಸ್ಸು ತಂದ ಈ ತಾರೆಗೆ ಒಮ್ಮೆಲೇ ಐವತ್ತಕ್ಕೂ ಮಿಕ್ಕಿ ಚಿತ್ರಗಳಿಗೆ ಬೇಡಿಕೆ ಬಂತು. ಮಂದಾಕಿನಿಯ ಅಭಿನಯದ ಪ್ರತಿಭೆ ಇನ್ನೂ ಬೆಳಕಿಗೆ ಬರಬೇಕಿದೆ. ಮಿಥುನ ಚಕ್ರವರ್ತಿಯೊಂದಿಗೆ 'Dance Dance' ಗೋವಿಂದಾನೊಂದಿಗೆ 'ಮೇರಾ ಈಮಾನ್' ಶಿವಮ್ ರಲ್ಬನ್ ದಿಗ್ದರ್ಶಿಸಿದ

**ತನ್ನ ಸೌಂದರ್ಯವನ್ನು ಮೈಕಟ್ಟನ್ನು ಉಳಿಸಿಕೊಂಡು ಬಂದ ರೇಖಾಳಿಗೆ ವಯಸ್ಸಾದಂತೆ ಹೆಚ್ಚು ಹೆಚ್ಚಾಗಿ ತರುಣಿಯ ಪಾತ್ರಗಳನ್ನೇ ಮಾಡುವ ಹುಚ್ಚು ಈ ತಾರೆಯದು. ತನ್ನ ಜನಪ್ರಿಯತೆ ಕುಸಿಯುವ ಹಂತದಲ್ಲಿದ್ದಾಗ ಅಮಿತಾಭನೊಂದಿಗೆ ಪ್ರೀತಿಪ್ರಕರಣ ಮಾಡಿ ಸುದ್ದಿಯಲ್ಲಿದ್ದಳಲ್ಲದೆ ಜಯಾಬಚ್ಚನ್‌ಳಿಗೆ ನಿದ್ರಾರಹಿತ ರಾತ್ರಿಗಳನ್ನು ಈಕೆ ಒದಗಿಸಿದ್ದೂಉಂಟು. ಆಕೆಯ ಭಾವೀಜೀವನ ಕಾದುನೋಡಬೇಕಷ್ಟೇ.**

'ಶೂರವೀರ' ಸಂಜಯದತ್‌ನೊಂದಿಗೆ 'ಜೀವಾ' ಕರಣಶಾಹಾನೊಂದಿಗೆ 'ಅಪನೆ ಅಪನೆ' ಕಿರಣ ಕಪೂರನೊಂದಿಗೆ 'ಲೋಹಾ' ರಾಜೀವ ಗೋ-ಸ್ವಾಮಿಯೊಂದಿಗೆ 'ದೇಶವಾಸಿ' ಹೀಗೆ ಹಲವು ಚಿತ್ರಗಳಲ್ಲಿ ಅವಳು ಅಭಿನಯಿಸುತ್ತಿದ್ದು ಇನ್ನೂ ಬಿಡುಗಡೆಯಾಗಬೇಕಿದೆ. ಈ ಚಿತ್ರಗಳ ಬಾಕ್ಸ್ ಆಫೀಸ್ ಸಫಲತೆ ಅವಳ ಭವಿಷ್ಯ ನಿರ್ಧರಿಸಲಿದೆ. ಈಗಂತೂ ಅವಳು ತುಂಬ ಬಿಜೀ ಸ್ಟಾರ್. ರಾಜಶ್ರೀ ಲಾಂಛನದಲ್ಲಿ ತಯಾರಾದ 'ಅಬೋಧ' ಚಿತ್ರದಲ್ಲಿ ಅಭಿನಯಿಸಿ ಪರಾಜಯ ಹೊಂದಿದ ಮಾಧುರಿ ದೀಕ್ಷಿತ ಈಗ ರಜನೀ-ಕಾಂತನೊಂದಿಗೆ 'ಉತ್ತರ-ದಕ್ಷಿಣ' ಚಿತ್ರದಲ್ಲಿ ಅಭಿನಯಿಸುತ್ತಿದ್ದಾಳೆ. ಸುಭಾಷ್ ಘಾಯಿ, ಯಶ್‌ಚೋಪ್ರಾ, ಶಶಿಕಪೂರ, ಬೋಕಾಡಿಯಾ, ಎನ್. ಎನ್. ಸಿಪ್ಪಿ, ಶೇಖರ ಕಪೂರರಂತಹ ಮಹಾನ್ ದಿಗ್ದರ್ಶಕರ ಚಿತ್ರಗಳಿಗೆ ಸಹಿ ಹಾಕಿದ ಈ ತಾರೆಗೆ ಈಗಲೇ ತುಂಬಾ ಬೇಡಿಕೆಯಿದ್ದು ಗ್ಲಾಮರ ಯಶಸ್ವೀ ತಾರೆಯೆನಿಸಲಿದ್ದಾಳೆ.

ಆರ್ಟ ಫಿಲಂಗಳಲ್ಲಿಯ ಅಭಿನಯದಿಂದ ತುಂಬ ಹೆಸರು ಗಳಿಸಿದ ಶಬನಾ ಆಜ್ಮಿ ಕಮರ್ಷಿಯಲ್ ಚಿತ್ರಗಳಲ್ಲಿಯೂ ತನ್ನ ಸಹಜ ಹಾಗೂ ಶ್ರೇಷ್ಠ ಅಭಿನಯದಿಂದ ಸಾಕಷ್ಟು ಜನಪ್ರಿಯತೆ ಪಡೆದಿದ್ದಾಳೆ. ಎಲ್ಲ ಸುಪರ್‌ಸ್ಟಾರಗಳೊಂದಿಗೆ ಅವಳು ಈಗಾಗಲೇ ನಾಯಕಿಯಾಗಿ ಅಭಿನಯಿಸಿ ಶ್ರೇಷ್ಠ ಕಲಾವಿದೆಯೆನಿಸಿದ್ದಾಳೆ. ಆದರೆ ಅನವಶ್ಯಕ ಅಂಗಪ್ರದರ್ಶನ, ಥಳಕು ಬೆಡಗಿನ ರೂಪು ಅಸಹ್ಯ ನೃತ್ಯಗಳಿಂದ ದೂರವಿರುವ ಶಬನಾ ಅಭಿನಯಿಸಿದ ಚಿತ್ರಗಳು ಸುಪರ್‌ಹಿಟ್ ಆಗುವದಿಲ್ಲ. ಆದರೆ ಅವಳು ಅಭಿನಯಿಸಿದ ಚಿತ್ರಗಳು ಅಸಫಲತೆಯನ್ನು ಕಂಡಿಲ್ಲ. ರಾಜೇಶ ಖನ್ನಾನೊಂದಿಗೆ ಅವಳು ಅಭಿನಯಿಸಿದ 'ಅಮರದೀಪ', 'ಥೋಡೀಸಿ ಬೇವಫಾಯಿ', 'ಅವತಾರ್' ಚಿತ್ರಗಳು ರಜತ ಮಹೋತ್ಸವ ಕಂಡವು. ರಾಜೇಶನಿಗೆ ಚಿತ್ರರಂಗದಲ್ಲಿ ಪುನರುಜ್ಜೀವನ ದೊರಕಿಸಿದ ಶ್ರೇಯಸ್ಸು ಶಬನಾಳಿಗೆ ಇದೆ. ಸಂಖ್ಯಾ ದೃಷ್ಟಿಯಿಂದ ಅವಳ ಚಿತ್ರಗಳ ಸಂಖ್ಯೆ ಕಿರಿದಾದರೂ ಗುಣಮಟ್ಟದಲ್ಲಿ, ಪ್ರತಿಭೆಯಲ್ಲಿ ಅವು ವೈಶಿಷ್ಟ್ಯ ಪೂರ್ಣ. ಅವಳು ಮದುವೆಯಾದ ನಂತರ ಅವಳಿಗೆ ಬೇಡಿಕೆ ಕಡಿಮೆಯಾಗುತ್ತಿದೆ.

ಶಬಾನಾ ಆಜ್ಮಿ

ಆರ್ಟ್ ಫಿಲಂಗಳ ಅಭಿನಯದ ಪ್ರತಿಭೆಯಿಂದ ಕಮರ್ಶಿಯಲ್ ಚಿತ್ರಗಳಿಗೆ ಪ್ರವೇಶಿಸಿದ ಇನ್ನೊಬ್ಬ ತಾರೆ ಸ್ಮಿತಾ ಪಾಟೀಲ, ಪ್ರಕಾಶ ಮೆಹರಾ ನಿರ್ಮಿಸಿ ದಿಗ್ದರ್ಶಿಸಿದ ಹಾಗೂ ಅಮಿತಾಬನೊಂದಿಗೆ ಅವಳು ಅಭಿನಯಿಸಿದ 'ನಮಕ್ ಹಲಾಲ್' ಹಿಟ್ ಆದರೆ ನಂತರ ಅವಳು ಅಭಿನಯಿಸಿದ'ಅರ್ಧಸತ್ಯ'ಸುಪರ್‌ಹಿಟ್‌ಆಯಿತು. ರಾಜಬಬ್ಬರನೊಂದಿಗೆ ಅಭಿನಯಿಸಿದ 'ಮೇರಿ ಆವಾಜ' ಸಹ ಯಶಸ್ಸು ಪಡೆಯಿತು. ರಾಜೇಶ ಖನ್ನನೊಂದಿಗೆ ಅಭಿನಯಿಸಿದ 'ಆಖೀರ್ ಕ್ಯೊಂ?' ಮತ್ತು 'ಅಮೃತ' ಚಿತ್ರಗಳು ಯಶಸ್ಸು ಪಡೆದವು. ರಾಜಬಬ್ಬರ್‌ನೊಂದಿಗೆ ಅವಳು ಅಭಿನಯಿಸುತ್ತಿರುವ 'ತೀಸರಾ ಕಿನಾರಾ' 'ಅಂಗಾರೆ' ಮಿಥುನ ಚಕ್ರವರ್ತಿಯೊಂದಿಗೆ ಅಭಿನಯಿಸಿದ 'ಡ್ಯಾನ್ಸ ಡ್ಯಾನ್ಸ' ಚಿತ್ರಗಳು ಅವಳ ಬರಲಿರುವ ಚಿತ್ರಗಳು. ಸ್ಮಿತಾ ಸಮರ್ಥ ಕಲಾವಿದೆ. ಸಹಜ ಅಭಿನಯ ಅವಳ ಪ್ರತಿಭೆ. ಶಬನಾಳಂತೆ ಅವಳೂ ಸಹ ಸೆಕ್ಸ್ ಅಪೀಲ್‌ನ ಥಳಕು ಬೆಡಗಿನಿಂದ ದೂರ ಓಡುವವಳು. ರಾಜಬಬ್ಬರನೊಂದಿಗೆ ಅವಳ ಅನಧಿಕೃತ ಮದುವೆ ಅವಳ ಅಭಿಮಾನಿಗಳಿಗೆ ನುಂಗಲಾರದ ತುತ್ತು. ಅದು ಅವಳ ಪ್ರಗತಿಗೂ ಮಾರಕವೆನಿಸುತ್ತಿದೆ. 'ಸಾಗರ' ಡಿಂಪಲ್ ಕಪಾಡಿಯಾ ಅಭಿನಯಿಸಿದ ಸುಪರ್ ಹಿಟ್ ಚಿತ್ರ. ಆದರೆ ಅವಳು ಮರಳಿ ಚಿತ್ರರಂಗಕ್ಕೆ ಬಂದ ನಂತರ ಹಲವು ಚಿತ್ರಗಳು ಬಾಕ್ಸ್ ಆಫೀಸಿನಲ್ಲಿ ಸೋತವು. ಹೀಗಾಗಿ ಅವಳು ಸ್ಪರ್ಧೆಯಿಂದ ಹಿಂದೆ ಸರಿಯಬೇಕಾಯ್ತು.



---

**ತಮ್ಮ ಸೌಂದರ್ಯ ಪಶೀಲಿ ಮುಂತಾದವುಗಳನ್ನು ಬಳಸಿಕೊಂಡು ಹಿಂದಿಯಲ್ಲಿ ಪಟ್ಟಭದ್ರರಾಗಿ ಕುಳಿತ ತಾರೆಯರಿಗೆ ತಲೆನೋವಾದವರೆಂದರೆ ಶಬನಾ ಅಜ್ಮಿ ಮತ್ತು ಸ್ಮಿತಾ ಪಾಟೀಲ. ಮೂಲತಃ ಬೌದ್ಧಿಕ ವಲಯದಿಂದ ಬಂದ ಈ ತಾರೆಯರಿಗೆ ಸಿನೇಮಾ ವ್ಯವಸ್ಥೆ ಅರ್ಥವಾಗಿತ್ತು. ಆದರೆ ಸ್ಮಿತಾಳು ಬಬ್ಬರನನ್ನು ಪ್ರೀತಿಸಿ, ಶಬನಾ ಜಾವೇದನನ್ನು ಪ್ರೀತಿಸಿ ತಮ್ಮ ವ್ಯಕ್ತಿತ್ವವನ್ನು ಹಗುರು ಮಾಡಿಕೊಂಡರು. ಇದೇ ಇವರಿಬ್ಬರ ದೌರ್ಬಲ್ಯ.**

---


ಈಕ್ವಿಟಿ ಟೋಸ್ಟರ್‌ಸಂತರ, ಈಕ್ವಿಟಿ ಇಸ್ತ್ರಿಪೆಟ್ಟಿಗೆಗಳು, ಈಕ್ವಿಟಿ ಆಹಾರ ಪ್ರೊಸೆಸರ್‌ಗಳು, ಈಕ್ವಿಟಿ ಪ್ರೆಷರ್ ಪಾನ್‌ಗಳು, ಈಕ್ವಿಟಿ ಒಗೆಯುವ ಯಂತ್ರಗಳು
ಇದೀಗ ನಾವು ಹೆಮ್ಮೆಯಿಂದ ಸಮರ್ಪಿಸುತ್ತಿದ್ದೇವೆ ಈಕ್ವಿಟಿ ಪ್ರೆಷರ್ ಕುಕ್ಕರ್
EQUITY
PRESSURE COOKER
ಜಿ.ಆರ್.ಎಸ್ ನೊಂದಿಗೆ
2 ಲೀಟರ್ ನಿಂದ 12 ಲೀಟರ್ ವರೆಗಿನ ಅಳತೆಗಳಲ್ಲಿ ದೊರೆಯುತ್ತದೆ
ಉಚಿತ !
ಹೆಚ್ಚಿನ ಗ್ಯಾಸ್ಕೆಟ್
ಹೆಚ್ಚಿನ ಸುರಕ್ಷಿತ ವಾಲ್ವ್
ಸ್ಪ್ಯಾನರ್ ಹಾಗೂ
ಪಾಕ ಪುಸ್ತಕ
ಆಧಾರವೆಂದರೆ ಅದು
ಈಕ್ವಿಟಿಯಿಂದ ಆಗಮಿಸುತ್ತದೆ












EQUITY
For every home
ಕರ್ನಾಟಕದಲ್ಲಿ ನಮ್ಮ ಹಂಚಿಕೆದಾರರು : ಮಹಾವೀರ್ ಡಿಸ್ಟ್ರಿಬ್ಯೂಟರ್ಸ್, 8, ಎ.ಎಂ. ರಸ್ತೆ, ಕಲಾಸಿಪಾಳ್ಯಂ ಹೊಸ ಬಡಾವಣೆ, ಬೆಂಗಳೂರು-560 002



# J. A. CHAVAN

ಆದಾಯಕರ ವಕೀಲರು,

ನಾರಾಯಣಪೇಟ, ಹಳೇ-ಹುಬ್ಬಳ್ಳಿ, ಹುಬ್ಬಳ್ಳಿ.

ಉಪಾಧ್ಯಕ್ಷರು : ಹುಬ್ಬಳ್ಳಿ ಗ್ರಾಮೀಣ ಜನತಾ ಪಕ್ಷ

Jt. ಚೀಫ್ ಟ್ರಸ್ಟಿ: S.S.K. ಸಮಾಜ ಹುಬ್ಬಳ್ಳಿ, ಚನ್ನಪೇಟೆ-ಹಳೇಹುಬ್ಬಳ್ಳಿ

**ದೀಪಾವಳಿಯ ಹಾರ್ದಿಕ ಶುಭಾಶಯಗಳು**

ಅಧ್ಯಕ್ಷರು

ಚಿಮಣಿ ಎಣ್ಣೆ ಚಿಕ್ಕವರ್ತಕರ ಸಂಘ (ರ.)

ನಿವೇಶನ ರಹಿತರ ಸೇವಾ ಸಂಘ (ರ)

ಹಳೇ ಹುಬ್ಬಳ್ಳಿ ಮಾರ್ಕೆಟ್ ಚಿಕ್ಕಪುಟ್ಟ ವರ್ತಕರ ಸಂಘ

ನೇಕಾರರ ಅಭಿವೃದ್ಧಿ ಸಂಘ (ರ.) ಹುಬ್ಬಳ್ಳಿ

ಕರ್ನಾಟಕ ಜವಳಿ ಗಿರಣಿ ಕಾರ್ಮಿಕರ ಸಂಘ (ರ.)

ಹಿಂದುಳಿದ ಜನಾಂಗದ ಅಭಿವೃದ್ಧಿ ಸಂಘ (ರ.)
ಸಿದ್ದೇಶ್ವರನಗರ

ಧಾರವಾಡ ಜಿಲ್ಲಾ ಬಾಲವಾಡಿಗಳ ಒಕ್ಕೂಟ.

ಸರ್ವೋದಯ ಎಜ್ಯುಕೇಶನ್ ಸೊಸಾಯಿಟಿ (ರ.)

**ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಸಾಗಾಣಿಕೆದಾರರು**

---



*With Best Compliments From :*

## KARNATAK MOTOR REPAIRING WORKS

Specialists in all Kinds of
Housing Disc Repairing Works

P. B. Road, Bankapur Chowk
HUBLI-580028, Phone: 62839

## KARNATAK DIESELS

Specialists in all types of
Fuel Injection Pumps Services

P. B. Road, Bankapur Chowk
HUBLI-24 Phone : 62839

---

*Wish You Happy Deepavali :*



*Gram :* TILESKING

*Phone :* 66465
*Res :* 66425

## M/s. SUDHAKAR TRADERS

*Dealers in*

Superior Quality of
MANGALORE ROOFING
TILES & DECORATIVE
TILES for R. C. C. ROOF

*Proprietor :*
SUDHAKAR NAIK BENGRE
24, Club Road HUBLI-580029



ಹಾರ್ದಿಕ ಶುಭಾಶಯಗಳೊಂದಿಗೆ



# ವಿಧಾನ ಸಭೆಯಿಂದ ಗ್ರಾಮ ಸಭೆಗೆ

# ಜಿಲ್ಲಾ ಪರಿಷತ್ ವಿಧೇಯಕ

ರಾಜ್ಯ ಸರಕಾರದ ಜಿಲ್ಲಾ ಪರಿಷದ್ ವಿಧೇಯಕ ರಾಷ್ಟ್ರಪತಿಯವರ ಅಂಗೀಕಾರ ಪಡೆದ ಮೇಲೆ ದಿನಾಂಕ ೧೪-೮-೧೯೮೫ ರಂದು ಜಾರಿಗೆ ಬಂದಿತು.

ಸಮಗ್ರ ಭಾರತದಲ್ಲಿಯೇ ಕೈಗೊಂಡಿರುವ ಅಧಿಕಾರ ವಿಕೇಂದ್ರೀಕರಣ ಜಿಲ್ಲಾ ಪರಿಷಥ್ ವಿಧೇಯಕ ಒಂದು ದಿಟ್ಟ ಕಾರ್ಯಕ್ರಮ. ರಾಜ್ಯದ ಸರ್ವತೊಮುಖ ಏಳಿಗೆಗೆ ಗ್ರಾಮರಾಜ್ಯದಿಂದ ರಾಮರಾಜ್ಯವನ್ನು ಕಟ್ಟುವ ಯತ್ನವಿದು. ಇನ್ನು ಆಡಳಿತ ವಿಧಾನ ಸೌಧದಿಂದಲ್ಲ. ಅದು ಗ್ರಾಮದಿಂದ ಆಗಬೇಕು. ಸ್ವಾತಂತ್ರ್ಯಪೂರ್ವದಲ್ಲಿಯೇ ಇಂತಹ ಅಪೂರ್ವ ಕನಸು ಬಾಪೂಜಿಕಂಡಿದ್ದರು. ಅಂತಹ ಕನಸು ಈಗ ನನಸಾಗಿದೆ.

ರಾಜ್ಯದ ಸರ್ವತೋಮುಖ ಏಳಿಗೆ ಸಾಧನೆ ಮತ್ತು ಯಾವ ಕಾರ್ಯಕ್ರಮ ಹಾಗೂ ಕೆಲಸ ಕಾರ್ಯಗಳು ಎಲ್ಲಿ ನಡೆಯ ಬೇಕೆಂಬ ನಿರ್ಧಾರ ಇನ್ನು ರಾಜಧಾನಿಯಿಂದಲ್ಲ. ಬಡತನ ನಿರ್ಮೂಲನಾ ಕ್ರಮ, ಅಭಿವೃದ್ಧಿ ಕಾರ್ಯಕ್ರಮಗಳ ಕೆಲಸ ಹೇಗೆ ನಡೆಯಬೇಕೆಂಬ ಎಲ್ಲ ನಿರ್ಣಯ ಹಾಗೂ ಕಾರ್ಯ ನಿರ್ವಹಣೆ ನಿಮ್ಮಿಂದ. ನೀವು ಸರಕಾರದ ಬಳಿ ಹೋಗಬೇಕಿಲ್ಲ. ಸರಕಾರವೇ ನಿಮ್ಮ ಹತ್ತಿರ ಬಂದು ಕಾರ್ಯ ನಿರ್ವಹಣೆ ಮತ್ತು ಅಭಿವೃದ್ಧಿಯನ್ನು ವೀಕ್ಷಿಸುವುದು.

ಗ್ರಾಮಸಭೆಯನ್ನೇ ಈ ವ್ಯವಸ್ಥೆಯ ಮೂಲ ಘಟಕವನ್ನಾಗಿ ಪರಿಗಣಿಸಲಾಗುತ್ತದೆ. ಅಲ್ಲದೆ ಮಂಡಲ ಪಂಚಾಯತಿಗಳ ಒಕ್ಕೂಟವೇ ಕೇಂದ್ರ ವ್ಯವಸ್ಥೆಯಾಗುವುದು.

**ಅಂಗರಚನೆ :**

೧. ಎಲ್ಲ ಮತದಾರರು ಆ ಗ್ರಾಮದ ಗ್ರಾಮಸಭೆಯ ಸದಸ್ಯರಾಗಿರುವರು. ಅಲ್ಲದೆ ಜಿಲ್ಲಾ ಪರಿಷತ್ತಿಗೆ ನಡೆಯುವ ಚುನಾವಣೆಯಲ್ಲಿ ಮತದಾನದ ಹಕ್ಕನ್ನು ಪಡೆದಿರುತ್ತಾರೆ.

೨. ಪ್ರತಿ ೪೦೦ ಗ್ರಾಮಸದಸ್ಯರಿಗೆ ಒಬ್ಬರಂತೆ ಮಂಡಲ ಪಂಚಾಯತಿಗೆ ಒಬ್ಬ ಸದಸ್ಯನನ್ನು ಚುನಾಯಿಸುವರು.

೩. ಹೀಗೆ ಚುನಾಯಿಸಲ್ಪಟ್ಟ ಸದಸ್ಯರಲ್ಲಿ ಸದಸ್ಯರು ಚುನಾಯಿತ ಒಬ್ಬ ಪ್ರಧಾನ ಮತ್ತು ಉಪ-ಪ್ರಧಾನರನ್ನು ಮಂಡಲ ಪಂಚಾಯತಿಗೆ ಚುನಾಯಿಸುವರು.

೪. ಎಲ್ಲಾ ತಾಲೂಕಿನಿಂದ ಪ್ರತಿ ೨೮ ಸಾವಿರ ಜನ ಸಂಖ್ಯೆಗೆ ಮತ್ತು ಕೊಡಗು ಜಿಲ್ಲೆಯಲ್ಲಿ ಪ್ರತಿ ೧೨ ಸಾವಿರ ಜನಸಂಖ್ಯೆಗೆ ಒಬ್ಬರಂತೆ ಜಿಲ್ಲಾ ಪರಿಷತ್ತಿಗೆ ಒಬ್ಬ ಸದಸ್ಯನನ್ನು ಚುನಾಯಿಸುವರು.

೫. ಮಂಡಲ ಪಂಚಾಯತಿಯಲ್ಲಿ ಕೂಡ ದುರ್ಬಲ ಮತ್ತು ಅನುಸೂಚಿತ ಜಾತಿ-ಪಂಗಡಗಳಿಗೆ ಮತ್ತು ಮಹಿಳೆಯರಿಗೆ ಮೀಸಲಾತಿ ಉಂಟು. (ತಾಲೂಕಿಗೆ ಒಬ್ಬರಂತೆಯಾದರೂ ಮಹಿಳಾ ಸದಸ್ಯರು ಇರುವರು.

೬. ಚುನಾಯಿಸಲ್ಪಟ್ಟ ಸದಸ್ಯರಲ್ಲದೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಅಧ್ಯಕ್ಷ ಜಿಲ್ಲೆಯ ಶಾಸಕರು ಜಿಲ್ಲಾ ಪರಿಷತ್ತಿನ ಸದಸ್ಯರಾಗಿರುವರು.

೭. ೧೮ ವರ್ಷ ವಯಸ್ಸಿನ ಪ್ರತಿಯೊಬ್ಬ ಗ್ರಾಮ-ನಿವಾಸಿಗೆ ಮತದಾನದ ಹಕ್ಕು ಇರುತ್ತದೆ. ಚುನಾವಣೆಗೆ ಅಭ್ಯರ್ಥಿಯಾಗಿ ನಿಲ್ಲುವವರಿಗೆ ೨೫ ವರ್ಷ ತುಂಬಿರಬೇಕು.

೮. ಜನರಿಂದ ನೇರವಾಗಿ ಚುನಾಯಿತರಾದ ಸದಸ್ಯರು ಮಾತ್ರ ಅಧ್ಯಕ್ಷ ಹಾಗೂ ಉಪಾಧ್ಯಕ್ಷರಾಗಿ ಆಯ್ಕೆಯಾಗಬಲ್ಲರು.

ಕರ್ನಾಟಕ ವಾರ್ತೆ

**ಅಭಿವೃದ್ಧಿಯ ಅಧಿಕಾರ ನಿಮ್ಮದು**








ರಜಿಸ್ಟರ್ಡ್ ನಂ. ೬೭/೮೬-೮೭

**ವಿಕ್ಟೋರಿಯಾ ರೋಡ, ಸೊರಬದಮಠ ಓಣಿ, ಹುಬ್ಬಳ್ಳಿ-೫೮೦ ೦೨೮.**

ಭಾರತ ಸ್ವತಂತ್ರವಾದಾಗಿನಿಂದ ಈ ವರೆಗಿನ ಪ್ರತಿಯೊಂದೂ ಆಡಳಿತಾತ್ಮಕ ಕಾರ್ಯಾಚರಣೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಭಾರತೀಯ ಸಂಸ್ಕೃತಿ ಮತ್ತು ಕಲೆಗಳಿಗೆ ಸಾಕಷ್ಟು ರೀತಿಯಿಂದ ಪ್ರೋತ್ಸಾಹನೆ ಕೊಟ್ಟ ಕಾರಣ ಇಂದು ಭಾರತೀಯ ಸಂಸ್ಕೃತಿಕ ಕಲೆಗಳು ಭಾರತದಲ್ಲಿ ಅಷ್ಟೇ ಅಲ್ಲದೇ ಜಗತ್ತಿನಲ್ಲಿ ಸಹ ಸಾಕಷ್ಟು ಪ್ರಭಾವ ಬೀರಿ ಪ್ರಸಿದ್ಧಿಯಾಗಿ ಸಂಸ್ಕೃತಿ ಮತ್ತು ಇತಿಹಾಸಗಳ ಮೇಲೆ ಸಹಿತ ಪರಿಣಾಮ ಬೀರಿವೆ.

ಭಾರತೀಯ ಕಲಾತ್ಮಕ ಆಚಾರ ವಿಚಾರಗಳನ್ನು ಸಹಿತ ಜಗತ್ತಿನಾದ್ಯಂತ ಸಾಕಷ್ಟು ಜನರು ಕಲಿತು ಇದರಿಂದ ಪ್ರತಿಯೊಂದು ಸಂಸ್ಕೃತಿಕ ಕಲೆಗಳು ಸಾಕಷ್ಟು ಅಭಿವೃದ್ಧಿ ಹೊಂದುತ್ತಾ ಮುಂದುವರೆದಿರುತ್ತವೆ.

ಈ ಭಾರತೀಯ ಸಂಸ್ಕೃತಿ ಹಾಗೂ ಕಲೆಗಳ ಅಭಿವೃದ್ಧಿಗೆ ನಿರತರಾದ ಹಸ್ತಕಲಾವಿದರು ಶಿಲ್ಪಿಗಳು, ಬಡಿಗರು, ಕಮ್ಮಾರರು ಚರ್ಮಕಾರರು, ಮೇದಾರರು, ಅಕ್ಕಸಾಲಿಗರು, ನೇಕಾರರು, ಚಿತ್ರ ಕಲಾವಿದರೂ, ಚಿತ್ರಕಾರರು, ಕಾರ್ಮಿಕರು, ನಾಟಕಕಾರರು, ವಾದನ ಕಾರರು, ಸಂಗೀತಗಾರರು, ವಾದನ ಸಾಮುಗ್ರಿ ತಯಾರಿಕೆಗಾರರು, ಎಂಜನಿಯರರು ಅಲ್ಲದೇ ಕಲೋಪಾಸನೆಯೇ ಜೀವನಾಧಾರವಾಗಿಸಿಕೊಂಡಿರುವವರಿಗೆ ವಾಸಿಸಲು ನಿವೇಶನ ಮತ್ತು ತಮ್ಮಲ್ಲಿಯ ವಿದ್ಯೆಗಳನ್ನು ಇತರರಿಗೆ ಕಲಿಸಲು ಸ್ಥಳಾವಕಾಶ ಕಲ್ಪಿಸಿ ಕಲಾ ವಸ್ತುಗಳನ್ನು ಒಂದೇ ಮಾರುಕಟ್ಟೆಯಲ್ಲಿ ಸಂಗ್ರಹಿಸಿ ಪ್ರದರ್ಶಿಸಿ, ಮಾರಾಟ ಮಾಡಲು ಕೈಗಾರಿಕೆ ಕಲಾ ಹಾಗೂ ವಾಣಿಜ್ಯ ಕ್ಷೇತ್ರದ ಜಾಗತಿಕ ರಂಗದಲ್ಲಿ ಭಾರತೀಯ ಕಲೆಗಳನ್ನು ಪ್ರಭಾವಿಸಿ ಇನ್ನೂ ಉನ್ನತಮಟ್ಟಕ್ಕೆರಿಸಲೆಂದೇ ಸ್ಥಾಪಿತರಾಗಿರುವ **ಏಕೈಕ ಭಾರತೀಯ ಸಂಸ್ಕೃತಿ ಕಲಾಭಿವೃದಿ ಸಂಘ** ಇದಾಗಿದ್ದು ಸುಮಾರು ೨೦೦ ಎಕರೆ ಜಮೀನಿನಲ್ಲಿ ಯೋಜಿತ ಈ ಸಂಘದಲ್ಲಿ ನಿವೇಶನ ವಿವಿಧ ಸೌಕರ್ಯಗಳನ್ನು ಪಡೆಯಲಿಚ್ಛಿಸುವವರು ಈ ಸಂಘದ ಸದಸ್ಯತ್ವಕ್ಕೆ ಅರ್ಜಿ ಸಲ್ಲಿಸಿ ಸಂಘದ ಸದಸ್ಯರಾಗಬೇಕೆಂದು ಕೋರುವ,

**ಡಿ. ಎನ್. ಶಿವಾಜಿರಾವ ಅಧ್ಯಕ್ಷರು**
ವಿಕ್ಟೋರಿಯಾ ರೋಡ,
ಸೊರಬದಮಠ ಓಣಿ ಹುಬ್ಬಳ್ಳಿ.

**ವ್ಹಿ. ಎಮ್. ಪಾಟೀಲ ಉಪಾಧ್ಯಕ್ಷರು**
(ಕುಸೂಗಲ್ಲ) ಜೆ. ಸಿ. ನಗರ
ಹುಬ್ಬಳ್ಳಿ.

**ಪಿ. ವ್ಹಿ. ಪಂಡಿತ ಗೌರವಕಾರ್ಯದರ್ಶಿ**
ತಬೀಬಲ್ಯಾಂಡ
ಹುಬ್ಬಳ್ಳಿ.

**— ನಿರ್ದೇಶಕರ ಮಂಡಳಿ —**

**ಬಿ. ಎನ್. ಪಾಟೀಲ**
ಪೋಲಿಸ-ಪಾಟೀಲ ಉಣಕಲ್ಲ-ಹುಬ್ಬಳ್ಳಿ.

**ಶರಣಪ್ಪ ಬಿಜಕಲ್ಲ**
ಜನತಾ ಟೇಲರ್ಸ ಚೆನ ಪೇಟ ಹಳೇಹುಬ್ಬಳ್ಳಿ.

**ರಾಮಕೃಷ್ಣಪ್ಪ ನೀಲಣ್ಣವರ**
ಅಕ್ಕಿಪೇಟ, ಬನ್ನೂರಮಠ ರೋಡ
ಹಳೆ-ಹುಬ್ಬಳ್ಳಿ

**ಬಿ. ಕೆ. ರಾಯನಗೌಡರ.**
ಕೇಶ್ವಾಪೂರ, ಹುಬ್ಬಳ್ಳಿ.

**ಎಂ. ಎನ್. ವದ್ದಿ.**
ಚನ್ನಪೇಟ, ಹಳೇ-ಹುಬ್ಬಳ್ಳಿ.

**ಬಿ. ಎಚ್. ಎಡಗೈಯವರ.**
ಜಂಗಲಿಪೇಟ, ಹಳೇ-ಹುಬ್ಬಳ್ಳಿ.

**— ನಿವೇಶನ ರಹಿತ ಸಾರ್ವಜನಿಕರಿಗೆ ಸುಸಂಧಿ —**

ಹುಬ್ಬಳ್ಳಿ ಧಾರವಾಡ ಮಹಾನಗರ ಸಭೆಯ ಹದ್ದಿಯಲ್ಲಿರುವ ನೇಕಾರನಗರ, ಟೀಪೂನಗರ ಮತ್ತು ಆನಂದನಗರ ಗಳಲ್ಲಿ ಅಭಿವೃದ್ಧಿಪಡಿಸಲಾಗುವ ಪ್ಲಾಟುಗಳನ್ನು ಬೇಡಲಿಚ್ಛಿಸುವದರಿಂದ ಕೂಡಲೇ ಸದಸ್ಯತ್ವಕ್ಕಾಗಿ ಅರ್ಜಿ ಅಹ್ವಾನಿಸಲಾಗಿದ್ದು ಆಸ್ತೆಯುಳ್ಳವರು ಕೂಡಲೆ ಸಂಪರ್ಕಿಸಿರಿ. ಅಥವಾ ಅಧ್ಯಕ್ಷರ ವಿಳಾಸಕ್ಕೆ ಬರೆಯಿರಿ.

ನಾವು ಮಾಡಿಕೊಡುವ ಪ್ಲಾಟುಗಳು ನಗರ ಭೂಮಿತಿ ಕಾಯ್ದೆ ೧೯೭೬ರ ಮೇರೆಗೆ ರಿಯಾಯತಿ ಪಡಕೊಂಡು ಬಿನ್‌ಶೆತ್ಕಿ ಮಾಡಿಸಿ ನಗರ ಯೋಜನಾ ಪ್ರಾಧಿಕಾರ ಮತ್ತು ನಗರಾಭಿವೃದ್ಧಿ ಮಂಡಳಿ ಅವರಿಂದ ಮಂಜೂರಾತಿಗೊಳಪಟ್ಟು ಮೆ: ವಿಶೇಷ ಜಿಲ್ಲಾಧಿಕಾರಿಗಳು ಧಾರವಾಡ ರವರಿಂದ ಮಾರಾಟದ ಬಗ್ಗೆ ಪರವಾನಗಿ ಪಡಕೊಂಡು ಮೆ: ಸಬ್ ರಜಿಸ್ಟ್ರಾರರವರ ಸಮಕ್ಷಮ ಕಾಯ್ದೆಶೀರ ನೊಂದಾಯಿಸಿ ಕೊಡಲಾಗುವದು. ನಮ್ಮಲ್ಲಿ ಯಾವದೇ ವಿಧದ ಬೇಕಾಯ್ದೆಶೀರ ಕಾರ್ಯಾಚರಣೆಗಳಿಗೆ ಅವಕಾಶ ಇಲ್ಲಾ.

Printed and published by V. G. Vaidya on behalf of Loka Shikshana Trust. Hubli-Bangalore
at Samyukta Karnataka press, Koppikar Road Hubli-580 020. Pages 304 + IV

COVER PRINTED AT BHARAT PHOTO OFFSET WORK[illegible]HARWA[illegible] 80545